# ಸ್ವಾತಂತ್ರ್ಯೋತ್ತರ ಸಣ್ಣ ಕತೆಗಳಲ್ಲಿ ಗ್ರಾಮೀಣ ಸಂಸ್ಕೃತಿ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕಿ

ಲಕ್ಷ್ಮೀದೇವಿ. ಎಸ್.



ಮಾರ್ಗದರ್ಶಕರು

ಠಲರಾವ್ ಗಾಯಕ್ವಾಡ್

ಪ್ರವಾಚಕರು

ಭಾಷಾಂತರ ಅಧ್ಯಯನ ವಿಭಾಗ



ಭಾಷಾಂತರ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩.೨೭೬

೨೦೦೬

195

# ಸ್ವಾತಂತ್ರ್ಯೋತ್ತರ ಸಣ್ಣಕತೆಗಳಲ್ಲಿ ಗ್ರಾಮೀಣ ಸಂಸ್ಕೃತಿ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕಿ
ಲಕ್ಷ್ಮೀದೇವಿ. ಎಸ್.



ಮಾರ್ಗದರ್ಶಕರು
ಡಾ. ವಿಠಲರಾವ್ ಗಾಯಕ್ವಾಡ್
ಪ್ರವಾಚಕರು
ಭಾಷಾಂತರ ಅಧ್ಯಯನ ವಿಭಾಗ



ಭಾಷಾಂತರ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬
೨೦೦೬

# ದೃಢೀಕರಣ ಪತ್ರ

ಕುಮಾರಿ ಲಕ್ಷ್ಮೀದೇವಿ. ಎಸ್. ಇವರು 'ಸ್ವಾತಂತ್ರ್ಯೋತ್ತರ ಸಣ್ಣ ಕತೆಗಳಲ್ಲಿ ಗ್ರಾಮೀಣ ಸಂಸ್ಕೃತಿ' ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಭಾಷಾಂತರ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಪ್ರಸ್ತುತ ಮಹಾಪ್ರಬಂಧವನ್ನು ಸಲ್ಲಿಸಲಾಗಿದೆ. ಈ ಮಹಾಪ್ರಬಂಧದ ವಿಷಯವನ್ನು ಈ ಮೊದಲು ಯಾವುದೇ ಪದವಿಗಾಗಿ ಇವರು ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : ೦೩-೦೨-೨೦೦೬

(ಡಾ.ವಿಠಲರಾವ್ ಗಾಯಕ್ವಾಡ್)
ಮಾರ್ಗದರ್ಶಕರು
ಪ್ರವಾಚಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪ್ರಮಾಣ ಪತ್ರ

'ಸ್ವಾತಂತ್ರ್ಯೋತ್ತರ ಸಣ್ಣಕತೆಗಳಲ್ಲಿ ಗ್ರಾಮೀಣ ಸಂಸ್ಕೃತಿ' ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಡಾ.ವಿಠಲರಾವ್ ಗಾಯಕ್ವಾಡ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಭಾಷಾಂತರ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಮಹಾಪ್ರಬಂಧದ ವಿಷಯವನ್ನು ಈ ಮೊದಲು ಯಾವುದೇ ಪದವಿಗಾಗಿ ಬಳಸಿ ಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Lakshmidevi.S.

ಸ್ಥಳ : ವಿದ್ಯಾರಣ್ಯ
ದಿನಾಂಕ : ೦೩-೦೨-೨೦೦೬

(ಲಕ್ಷ್ಮೀದೇವಿ. ಎಸ್.)
ಸಂಶೋಧಕಿ

# ಕೃತಜ್ಞತೆಗಳು

'ಸ್ವಾತಂತ್ರ್ಯೋತ್ತರ ಸಣ್ಣಕತೆಗಳಲ್ಲಿ ಗ್ರಾಮೀಣ ಸಂಸ್ಕೃತಿ' ಎಂಬ ಪ್ರೌಢ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಮರ್ಪಿಸುವುದು ನನಗೆ ಅತ್ಯಂತ ಹರ್ಷವೆನಿಸುತ್ತದೆ. ಈ ಸಂದರ್ಭದಲ್ಲಿ ನನ್ನ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಅಂದಿನ ಕುಲಪತಿಗಳಾದ ಡಾ.ಎಂ.ಎಂ.ಕಲಬುರ್ಗಿ ಹಾಗೂ ಡಾ.ಎಚ್.ಜೆ.ಲಕ್ಕಪ್ಪಗೌಡ ಇಂದಿನ ಕುಲಪತಿಗಳಾದ ಡಾ.ವಿವೇಕ ರೈ ಇವರುಗಳಿಗೆ,

ಅಧ್ಯಯನ ಕೈಗೊಳ್ಳಲು ಆಡಳಿತಾತ್ಮಕ ಅನುಮತಿ ನೀಡಿ ಸೂಕ್ತಸಲಹೆ, ಮಾರ್ಗದರ್ಶನ, ಸಹಕಾರ ನೀಡಿದ ಹಿಂದಿನ ಕುಲಸಚಿವರಾಗಿದ್ದ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ, ಅಧ್ಯಯನಾಂಗದ ನಿರ್ದೇಶಕರಾದ ಡಾ.ಕರಿಗೌಡ ಬೀಚನಹಳ್ಳಿಯವರಿಗೆ,

ಪಿಎಚ್.ಡಿ. ಅಧ್ಯಯನ ಪ್ರಾರಂಭಿಸಬೇಕು ಎಂಬ ಸಮಯದಲ್ಲಿ, ವಿಷಯದ ಆಯ್ಕೆಯಿಂದ ಹಿಡಿದು ಮಹಾಪ್ರಬಂಧದ ರಚನೆಯ ಪ್ರತಿಯೊಂದು ಹಂತದಲ್ಲಿ ನನಗೆ ಸಲಹೆ, ಸೂಚನೆಗಳನ್ನು ನೀಡಿ ಸಹಕರಿಸಿದ ಡಾ. ಹಿ.ಚಿ.ಬೋರಲಿಂಗಯ್ಯನವರಿಗೆ,

ಈ ಮಹಾಪ್ರಬಂಧವನ್ನು ಸಿದ್ಧಪಡಿಸಲು ಮಾರ್ಗದರ್ಶಕರಾಗಿ ಪ್ರತಿಯೊಂದು ಹಂತದಲ್ಲಿಯೂ ಸಲಹೆ, ಮಾರ್ಗದರ್ಶನ, ಸಹಕಾರಗಳನ್ನು ನೀಡಿದ ಮಾರ್ಗದರ್ಶಕರಾದ ಡಾ ವಿಠಲರಾವ್ ಗಾಯಕ್ವಾಡ್ ಅವರಿಗೆ,

ಪ್ರಬಂಧದ ರಚನೆಯ ಸಂದರ್ಭದಲ್ಲಿ ಹಲವು ಸಲಹೆ ಸೂಚನೆಗಳನ್ನು ಕೊಟ್ಟು ಸಹಕರಿಸಿದ ಗುರುಗಳಾದ ರಾಜಪ್ಪ ದಳವಾಯಿ, ಎಸ್.ಜಿ.ಸಿದ್ಧರಾಮಯ್ಯರವರಿಗೆ,

ಪಿಎಚ್.ಡಿ. ಅಧ್ಯಯನಕ್ಕೆ ಪ್ರೋತ್ಸಾಹಿಸಿ, ಈ ಮಹಾಪ್ರಬಂಧದ ಅವಧಿಯಲ್ಲಿ ಎಲ್ಲ ರೀತಿಯ ನೆರವು, ಸಹಕಾರ, ಅನುಕೂಲತೆಗಳನ್ನು ಒದಗಿಸಿಕೊಟ್ಟ ನನ್ನ ತಂದೆ ಶ್ರೀ ಶಿವಣ್ಣ ಮತ್ತು ನನ್ನ ತಾಯಿ ಮಹಾದೇವಮ್ಮರವರಿಗೆ,

ಯಾವಾಗಲೂ ನನ್ನ ಯಶಸ್ಸು ಕೋರುವ ನನ್ನ ಅಣ್ಣ ಚಿದಾನಂದ, ಅಕ್ಕ ಗಾಯತ್ರಿ, ಮಾವ ಪ್ರಭು ತಮ್ಮ ಮಂಜುನಾಥ ವೈಮೋಂತಿ, ಚಿಕ್ಕಪ್ಪ ಬಸವರಾಜ, ಚಿಕ್ಕಮ್ಮ ಗಿರಿಜ, ಮಾವಂದಿರುಗಳಾದ ಚಿದಂಬರ, ದೇವೇಂದ್ರಪ್ಪ, ಅಕ್ಕನವರಾದ ಶಕುಂತಲ, ಪುಟ್ಟನರಸಮ್ಮ ಮನೆಯವರೆಲ್ಲರಿಗೆ,

ಅಧ್ಯಯನದ ಅವಧಿಯಲ್ಲಿ ಒತ್ತಾಸೆಯಾಗಿ ನಿಂತ ಗೆಳತಿಯರಾದ ಡಾ.ಟಿ.ಆರ್.ಹೇಮಾವತಿ, ಲತಾ, ಎನ್.ನಳಿನ, ಪಂಕಜ, ಅನಿತಾ, ಸುಜಾತ, ಅನು, ಶ್ವೇತಾ, ಡಾ.ನಾಗಭೂಷಣ, ವೀರಣ್ಣ, ವಾಸು ಹಾಗೂ ಗೆಳೆಯರಿಗೆ,

ಮಹಾಪ್ರಬಂಧವನ್ನು ಅಂದವಾಗಿ ಡಿ.ಟಿ.ಪಿ. ಮಾಡಿದ ಹೊಸಪೇಟೆಯ ಯಾಜಿ ಗ್ರಾಫಿಕ್ಸ್‌ನ ಶ್ರೀಮತಿ ಸವಿತ ಯಾಜಿ ಹಾಗೂ ಗಣೇಶ್ ಯಾಜಿಯವರಿಗೆ ಹಾಗೂ ನನ್ನ ಎಲ್ಲಾ ಬಂಧುಗಳಿಗೆ,

ನನ್ನ ಹೃದಯಪೂರ್ವಕ ಕೃತಜ್ಞತೆಗಳು ಸಲ್ಲುತ್ತವೆ.

ಲಕ್ಷ್ಮೀದೇವಿ. ಎಸ್.

# ಪರಿವಿಡಿ

# ಅಧ್ಯಾಯ ೧

# ಗ್ರಾಮೀಣ ಅಧ್ಯಯನ

೧.೧. ಗ್ರಾಮೀಣ ಬದುಕಿನ ಸ್ವರೂಪ

೧.೨. ಅಧ್ಯಯನದ ಉದ್ದೇಶ

೧.೩. ವ್ಯಾಪ್ತಿ

೧.೪. ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

# ಅಧ್ಯಾಯ ೧

# ಗ್ರಾಮೀಣ ಅಧ್ಯಯನ

## ೧.೧. ಗ್ರಾಮೀಣ ಬದುಕಿನ ಸ್ವರೂಪ

ನನ್ನ ಅಧ್ಯಯನಕ್ಕೆ ಸಂಬಂಧಿಸಿದಂತೆ ಸ್ವಾತಂತ್ರ್ಯ ಪೂರ್ವದಲ್ಲಿ ಗ್ರಾಮೀಣ ಬದುಕಿನ ಸ್ವರೂಪ, ಗ್ರಾಮಗಳು ಹೇಗೆ ಜನ್ಮ ತಾಳಿದವು? ಗ್ರಾಮಗಳಲ್ಲಿದ್ದಂಥ ಪರಿಸರ ಮತ್ತು ಅದರಲ್ಲಿನ ಜೀವನಕ್ರಮಗಳನ್ನು ಒಟ್ಟಾರೆ ಗ್ರಾಮೀಣ ಸಂಸ್ಕೃತಿಯ ಹಿನ್ನೆಲೆಯಲ್ಲಿ ವಿವರಿಸುವುದೇ ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಪ್ರಾಚೀನ ಕಾಲದ ಮನುಷ್ಯ ಬದುಕಿನ ಬಗ್ಗೆ ಒಂದೆರಡು ಮಾತುಗಳನ್ನು ಹೇಳಬಹುದಾದರೆ ಪ್ರಾರಂಭದಲ್ಲಿ ಗ್ರಾಮವೆಂಬ ಘಟಕ ಇಲ್ಲದೆ ಇರುವುದು ಕಂಡುಬರುತ್ತದೆ. ಮನುಷ್ಯ ಮೂಲತಃ ಕಾಡಿನಲ್ಲಿ ಜನ್ಮ ತಳೆದು ವಾಸಿಸಲು ಪ್ರಾರಂಭಿಸಿದ. 'ಮಂಗನಿಂದ ಮಾನವ' ಎಂಬ ಮಾತು ಈ ವಿಚಾರದಲ್ಲಿ ಅವಶ್ಯ ಜ್ಞಾಪಿಸಿಕೊಳ್ಳುವಂಥದು. ಇವನು ಪ್ರಾಣಿಗಳನ್ನು ಬೇಟೆಯಾಡಿ ತನಗೆ ಆಹಾರವಾಗಿ ತಿನ್ನುತ್ತಿದ್ದನು. ಬರಬರುತ್ತ ಈ ಕ್ರಮಗಳಲ್ಲಿ ಬದಲಾವಣೆ ಕಂಡು ಬಂದಿತು. ವ್ಯವಸಾಯ, ಪಶುಪಾಲನೆಗಳಿಂದಾಗಿ ಗುಡಿಸಲುಗಳನ್ನು ಕಟ್ಟಿಕೊಂಡು ವಾಸಿಸುವ ಬಗೆಯು ಪ್ರಾರಂಭವಾಗಿ ಜನರೆಲ್ಲ ಒಂದು ಕಡೆ ಗುಂಪಾಗಿ ನೆಲೆಸಲು ತೊಡಗಿದರು. ಆದಿಮಾನವ ಸಮಾಜದಲ್ಲಿ ಪ್ರಾಣಿಗಳ ಭಯ, ಅನ್ಯ ಗುಂಪಿನವರ ಭಯದಿಂದ ಒಂದು ಕಡೆಯಲ್ಲಿ ವಾಸಿಸುತ್ತಿದ್ದರು. ಪಶುಪಾಲನೆ ಮತ್ತು ಮುಖ್ಯವಾಗಿ ವ್ಯವಸಾಯವನ್ನು ಕಲಿತ ಅನಂತರ ಅದಕ್ಕೆ ಒಂದು ಖಚಿತ ಸ್ವರೂಪ ಪ್ರಾಪ್ತವಾಯಿತು. ಅದನ್ನೇ ಗ್ರಾಮೀಣ ಬದುಕು ಎನ್ನಬಹುದಾಗಿದೆ.

ಮುಂದಿನ ಹಂತದಲ್ಲಿ ಈ ಬದುಕು ಒಂದು ಸಾಂಸ್ಕೃತಿಕ ಸ್ವರೂಪವನ್ನು ಪಡೆಯಿತು. ಬದುಕಿನ ಗತಿಗೆ ವಿಕಾಸಶೀಲ ಮತ್ತು ಚಲನಶೀಲ ಸ್ವರೂಪದವೂ ಆದ ಕೆಲವು ವಿಶಿಷ್ಟ ಅಂಶಗಳು ಸೇರಿಕೊಂಡವು. ಸಹಬಾಳ್ವೆ, ಪ್ರಾಣಿಯೇತರ ನೆಲೆಯ ವಿಶಿಷ್ಟ ಸಂಬಂಧಗಳು, ಭಾಷೆ, ವೃತ್ತಿ, ಜಾತಿ, ಧರ್ಮ ಇಂಥ ಕೆಲವನ್ನು ನಾವು ಇಲ್ಲಿ ಗಂಭೀರವಾದ ಅಂಶಗಳೆಂದು ಗುರುತಿಸಬಹುದು. ಭಾಷೆ, ಸಂಸ್ಕೃತಿ ಮತ್ತು ವ್ಯವಸಾಯ ಈ ಮೂರೂ ಮನುಷ್ಯ ಬದುಕಿನ ಉತ್ಕ್ರಾಂತಿಯಲ್ಲಿ ಬಹುಮುಖ್ಯ ಪಾತ್ರ ವಹಿಸಿದ ಅಂಶಗಳೆಂದು ಉಲ್ಲೇಖಿಸಲ್ಪಟ್ಟಿವೆ.

ಗ್ರಾಮೀಣ ಸಂಸ್ಕೃತಿಯ ಬಗ್ಗೆ ಹೇಳುವುದಾದರೆ ಗ್ರಾಮೀಣ ಪ್ರದೇಶದ ಜನತೆ ಹೆಚ್ಚಾಗಿ ವ್ಯವಸಾಯವನ್ನು ಅವಲಂಬಿಸಿರುವುದನ್ನು ನಾವು ಕಾಣುತ್ತೇವೆ. ಈ ವ್ಯವಸಾಯದ ಮೂಲದಿಂದಲೇ ಅನೇಕ ಕಸುಬುಗಳು ಹುಟ್ಟಿಕೊಂಡಿರುವುದನ್ನು ಕಾಣಬಹುದು. ಇವುಗಳನ್ನು ಗಂಭೀರವಾಗಿ ಪರಿಶೀಲಿಸುವುದೇ ಈ ಅಧ್ಯಯನದ ಉದ್ದೇಶವಾಗಿದೆ. ವ್ಯವಸಾಯಕ್ಕೆ ಬೇಕಾದ ನೇಗಿಲನ್ನು ತಯಾರಿಸುವುದನ್ನು ಕಲಿತುಕೊಂಡುದು ಒಂದು ಮುಖ್ಯ ಘಟ್ಟ. ಅನಂತರ ಉಳುಮೆ ಮಾಡಬೇಕಾದ ಉಪಕರಣವನ್ನು ತಯಾರಿಸಲು ಕಮ್ಮಾರ ಎಂಬುವನು ಹುಟ್ಟಿಕೊಂಡನು. ಕುಳ, ಕೊಡಲಿ, ಮಚ್ಚು ಮುಂತಾದವು ವ್ಯವಸಾಯಕ್ಕೆ ಮುಖ್ಯವಾದ ಪರಿಕರಗಳು. ಇವನ್ನು ಈತ ತಯಾರಿಸಿ ಕೊಡಲು ಆರಂಭಿಸಿದನು. ಚಮ್ಮಾರನೂ ಇದರ ಜೊತೆಗೆ ಹುಟ್ಟಿಕೊಂಡನು. ಚಮ್ಮಾರಿಕೆ ಕಸುಬು, ಬಟ್ಟೆಯನ್ನು ಒಗೆಯಲು ಅಗಸನ ಕಸುಬು ಅತ್ಯಾವಶ್ಯಕವಾಯಿತು. ಈ ಎಲ್ಲಾ ಮುಖ್ಯ ಕಾರಣಗಳಿಂದ ಗ್ರಾಮೀಣ ಸಂಸ್ಕೃತಿ ಪ್ರಾರಂಭವಾಯಿತು. ನಂತರ ಗ್ರಾಮೀಣ ಸಂಸ್ಕೃತಿಯಲ್ಲಿ ಅನೇಕ ಬದಲಾವಣೆಗಳಾದವು. ಸ್ವಾತಂತ್ರ್ಯಾನಂತರ ಗ್ರಾಮೀಣ ಪ್ರದೇಶಗಳಲ್ಲಿ ಆಧುನಿಕವಾಗಿ ತುಂಬಾ ಬದಲಾವಣೆಯಾಯಿತು. ವಿದ್ಯುತ್‌ಚ್ಛಕ್ತಿ, ಪಂಪು ಸೆಟ್ಟುಗಳು, ಟ್ರಾಕ್ಟರು ಬಂದವು. ಮೊದಮೊದಲು ಗ್ರಾಮೀಣ ಪ್ರದೇಶಗಳಲ್ಲಿ ಬರೀ ಆಹಾರ ಧಾನ್ಯಗಳನ್ನು ಮಾತ್ರ ಬೆಳೆಯುತ್ತಿದ್ದು, ಬರುಬರುತ್ತ ಅದು ವಾಣಿಜ್ಯ ಬೆಳೆಗಳನ್ನು ಬೆಳೆದು ಆರ್ಥಿಕ ಸ್ಥಿತಿಯನ್ನು ಉತ್ತಮ ಪಡಿಸಿಕೊಂಡಿರುವುದನ್ನು ಕಾಣಬಹುದು. ಸ್ವಾತಂತ್ರ್ಯ ಪೂರ್ವದ ಗ್ರಾಮೀಣ ಪ್ರದೇಶದ ಜೀವನದ ಬಗ್ಗೆ ಒಂದೆರಡು ಮಾತುಗಳನ್ನು ಹೇಳಬೇಕೆನಿಸುತ್ತದೆ. ಗ್ರಾಮ ಎಂದರೆ ಇಲ್ಲಿ ಹಲವಾರು ಕುಟುಂಬಗಳನ್ನು ಕಾಣಬಹುದು. ಈ ಕುಟುಂಬಗಳಲ್ಲಿ ಮುಕ್ಕಾಲು ಪಾಲು ಅವಿಭಕ್ತ ಕುಟುಂಬಗಳಾಗಿದ್ದವು. ಆದರೆ ಮುಂದೆ ಈ ಕುಟುಂಬಗಳು ಬರುಬರುತ್ತ ವಿಭಕ್ತ ಕುಟುಂಬಗಳಾಗಿ ಪರಿವರ್ತನೆ ಹೊಂದಿದವು. ಅವುಗಳ ಸಾಂಸ್ಕೃತಿಕ ಪಲ್ಲಟಕ್ಕೆ ಕಾರಣಗಳೇನು ಎಂದು ಗುರುತಿಸುವುದು ಮುಖ್ಯ.

## ೧.೨. ಅಧ್ಯಯನದ ಉದ್ದೇಶ

'ಸಂಸ್ಕೃತಿ' ಎಂದರೆ ಜೀವನ ವಿಧಾನ. ಬದುಕಿಗೆ ಸಂಬಂಧಿಸಿದ ಲೌಕಿಕ ಮತ್ತು ಅಲೌಕಿಕ, ಭೌತಿಕ ಮತ್ತು ಅಭೌತಿಕ(ಮಾನಸಿಕ)ವಾದ ಎಲ್ಲ ವಸ್ತುವಿಷಯವನ್ನು ಒಳಗೊಂಡಿರುವಂತಹದ್ದು. ಇತಿಹಾಸ, ವರ್ತಮಾನ ಮತ್ತು ಭವಿಷ್ಯದ ಬದುಕನ್ನು ಒಳಗೊಂಡ ಚಲನಶೀಲ ಸ್ಥಿತಿಯೇ ಸಂಸ್ಕೃತಿಯಾಗಿದೆ. ಆರಂಭದಲ್ಲಿ ಸಂಸ್ಕೃತಿ ಎನ್ನುವ ಪರಿಕಲ್ಪನೆಯ ವ್ಯಾಖ್ಯೆಯಲ್ಲಿ ಏಕಮುಖಿ ದೃಷ್ಟಿಯಿಂದಾಗಿ ಅದನ್ನು 'ಒಂದೇ' ಎನ್ನುವ ನೆಲೆಯಲ್ಲಿ ವಿವರಿಸಲಾಗುತ್ತಿತ್ತು. ಇತ್ತೀಚಿನ ಅಧ್ಯಯನದ ಹೊಸ ಕ್ರಮದಿಂದಾಗಿ ಸಂಸ್ಕೃತಿಯನ್ನು ವಿವಿಧ ದಿಕ್ಕುಗಳಲ್ಲಿ ವಿವಿಧ ಬಗೆಯಲ್ಲಿ ಅರ್ಥೈಸಲಾಗುತ್ತಿದೆ.

ಸಂಸ್ಕೃತಿಯ ವಿಕಾಸದ ಬಗ್ಗೆ ಮೊದಲು ಸಿದ್ಧಾಂತ ಮಂಡಿಸಿದವನು ಮಾರ್ಗನ್. ಈತನ "Ancient Society" ಗ್ರಂಥವು ಸಂಸ್ಕೃತಿಯನ್ನು ಕುರಿತ ಚರ್ಚೆಯನ್ನು ಒಳಗೊಂಡಿದೆ. 'ಸಂಸ್ಕೃತಿ'ಯು ಮೂಲತಃ ವ್ಯಕ್ತಿ-ವ್ಯಕ್ತಿಗಳು, ಕುಟುಂಬ-ಕುಟುಂಬಗಳು, ಬುಡಕಟ್ಟು, ಸಮುದಾಯ, ಊರುಗಳು ಹೀಗೆ ಸಂಸ್ಕೃತಿಯು ಒಂದು ವಿಕಾಸದ ಸ್ವರೂಪವಾಗಿದೆ. ಮನುಷ್ಯ ಮೂಲತಃ ಕಾಡಿನಲ್ಲಿದ್ದವನು, ಗೆಡ್ಡೆಗೆಣಸು ತಿಂದು ಜೀವಿಸುತ್ತಿದ್ದನು. ನಂತರ ಬೇಟೆಯ ಮೂಲಕ ಆಹಾರವನ್ನು ಸಂಗ್ರಹಿಸಲು ಪ್ರಾರಂಭಿಸಿದ. ಬೇಟೆಯು

ಅಂದಿನ ಪ್ರಮುಖ ಆಹಾರವನ್ನು ಒದಗಿಸುತ್ತಿತ್ತು. ಬೇಟೆ ಬರಬರುತ್ತಾ ಒಂದು ಪ್ರಾಸಂಗಿಕ ಕ್ರಿಯೆಯಾಯಿತು. ಉತ್ಪಾದನಾ ವಿಧಾನವೊಂದು ಹವ್ಯಾಸವಾಗಿ ಪರಿವರ್ತನೆಗೊಂಡ ಪ್ರಕ್ರಿಯೆಯಲ್ಲೇ ಗ್ರಾಮದ ಹುಟ್ಟು ಸಂಭವಿಸಿದೆ. ಇದರಿಂದಾಗಿ ಸಂಸ್ಕೃತಿಯು ಸ್ಥಿತ್ಯಂತರ ಮತ್ತು ಚಲನಶೀಲವಾಗಿರುವುದನ್ನು ಗುರುತಿಸಬಹುದು.

ಈ ಹಿನ್ನೆಲೆಯಲ್ಲಿ ಗ್ರಾಮಗಳನ್ನು ಸಂಸ್ಕೃತಿಯ ಮೂಲ ರೂಪವೆಂದೇ ಹೇಳಬಹುದು. ನಮ್ಮ ಗ್ರಾಮೀಣ ಸಂಸ್ಕೃತಿಗೆ ತನ್ನದೇ ಆದಂತಹ ಒಂದು ಸ್ವರೂಪ ಇರುತ್ತದೆ. ಅವಿಭಕ್ತ ಕುಟುಂಬ ಎಂಬ ಒಂದು ಸಂಸ್ಥೆಯು ನಮ್ಮ ಗ್ರಾಮೀಣ ಜನರನ್ನು ಹಿಡಿದಿಡುವ ಮತ್ತು ನಿಯಂತ್ರಿಸುವ ಪ್ರಮುಖಶಕ್ತಿ ಎಂದು ಹೇಳಬಹುದು. ನಮ್ಮ ಗ್ರಾಮೀಣ ಸಂಸ್ಕೃತಿಯು ಮೂಲ ಮಾನವನು, ಎಂದು ತನ್ನ ಅಲೆಮಾರೀ ಜೀವನಕ್ಕೆ ಮಂಗಳ ಹಾಡಿ, ಒಂದು ಕಡೆ ಸ್ಥಿರವಾಗಿ, ನೆಲೆನಿಂತು ವಾಸಿಸಲು ತೊಡಗಿದನೋ, ಅಂದಿನಿಂದಲೇ ಈ ಗ್ರಾಮೀಣ ಸಂಸ್ಕೃತಿಯ ಆರಂಭವಾಯಿತೆಂದು ಖಚಿತವಾಗಿ ಹೇಳಬಹುದು.

ಮಾನವನು ವಿಶ್ವದ ಎಲ್ಲೆಡೆಯಲ್ಲಿಯೂ ತನ್ನ ಅಲೆಮಾರಿ ಜೀವನದ ಹಂತದಲ್ಲಿ ಬೇಟೆಯಾಡುವುದು, ಆಹಾರವನ್ನರಸುವುದು, ಇವೇ ಮೊದಲಾದ ನೆಲೆಗಳನ್ನು ಅವಲಂಬಿಸಿದ್ದನು. ಅದನ್ನು ದಾಟಿ, ನೇಗಿಲನ್ನು ಉಪಯೋಗಿಸಿ ಪ್ರಾಣಿಗಳನ್ನು ಬಳಸಿ ಉತ್ತು, ಬಿತ್ತು, ಬೆಳೆಗಳನ್ನು ಬೆಳೆದು ಬದುಕ ತೊಡಗಿದನೋ ಅಲ್ಲಿಂದಲೇ ನಮ್ಮ ಗ್ರಾಮೀಣ ಸಂಸ್ಕೃತಿಯು ಪ್ರಾರಂಭವಾಗಿದೆ ಎಂದು ಹೇಳಬಹುದು. ಗ್ರಾಮೀಣ ಜನರ ಜೀವನ ಅವರ ಆಹಾರ ವಿಚಾರ, ನಡೆ-ನುಡಿ, ವರ್ತನೆ, ಜೀವನ ಕ್ರಮ ಮೊದಲಾದವುಗಳು ನಗರ ಸಂಸ್ಕೃತಿಗಿಂತ ಭಿನ್ನವಾಗಿರುವುದನ್ನು ಕಾಣಬಹುದಾಗಿದೆ. ಇತ್ತೀಚಿನ ದಿನಗಳಲ್ಲಿ ಗ್ರಾಮೀಣ ಸಂಸ್ಕೃತಿಯ ಮೇಲೆ ಹೊಸಹೊಸ ಪ್ರಭಾವ ಗಳಾಗಿರುವುದನ್ನು ಗಮನಿಸಬಹುದು. ಆಧುನಿಕತೆಯ ಪ್ರಭಾವ, ಶಿಕ್ಷಣದ ಪ್ರಭಾವ, ರಾಜಕಾರಣದ ಪ್ರಭಾವ, ನಗರ ಸಂಸ್ಕೃತಿಯ ಪ್ರಭಾವಗಳಿಂದಾಗಿ ಗ್ರಾಮೀಣ ಬದುಕಿನ ತಳ ಸಡಿಲವಾಗುತ್ತಿದೆ. ಜೊತೆಗೆ ನಗರ ಸಂಸ್ಕೃತಿಯ ಪ್ರಭಾವ ಗಾಢವಾಗಿ ಗ್ರಾಮಗಳ ಮೇಲೆ ಅನೇಕ ರೀತಿಯ ವ್ಯತ್ಯಾಸಗಳನ್ನು ಉಂಟುಮಾಡಿದೆ. ನಮ್ಮ ಗ್ರಾಮೀಣರ ಮುಖ್ಯ ಕಸುಬು ವ್ಯವಸಾಯವನ್ನು ಅವಲಂಬಿಸಿದೆ. ಇತ್ತೀಚಿನ ದಿನಗಳಲ್ಲಿ ನಮ್ಮ ಗ್ರಾಮಗಳು ಬದಲಾವಣೆಯಾಗುತ್ತಿವೆ. ಕೈಗಾರಿಕಾ ಕ್ರಾಂತಿಯ ಪರಿಣಾಮವಾಗಿ ಹಲವಾರು ಜನರು ಕೆಲಸ ಮಾಡಲು ನಗರಗಳಿಗೆ ವಲಸೆ ಹೋಗುತ್ತಿದ್ದಾರೆ. ಹೀಗೆ ಒಂದೇ ಆಗಿರುತ್ತಿದ್ದ ಕುಟುಂಬಗಳು ವಿಭಜನೆಯಾಗುತ್ತಿರುವ ಕಾರಣ ಗ್ರಾಮೀಣ ಸಂಸ್ಕೃತಿಯ ಮೂಲ ಸ್ವರೂಪವನ್ನೇ ಕಳೆದುಕೊಳ್ಳುತ್ತಿವೆ. ಗ್ರಾಮಾಂತರ ಪ್ರದೇಶಗಳಲ್ಲಿ ಪಾರಂಪರಿಕ ಮೌಲ್ಯ ಜನರ ಜೀವನದ ಮೇಲೆ ಹಿಡಿತ ಸಾಧಿಸಿದೆ. ಹೀಗೆ ಗ್ರಾಮೀಣ ಪ್ರದೇಶಗಳಲ್ಲಿ ಸಂಪ್ರದಾಯಗಳೇ ಮುಖ್ಯ ಪಾತ್ರ ವಹಿಸುತ್ತವೆ. ಲೋಕಾರೂಢಿಗಳು, ನೈತಿಕ ನಿಯಮಗಳು, ಸಮುದಾಯ ಹಾಗೂ ವ್ಯಕ್ತಿಗಳನ್ನು ನಿಯಂತ್ರಿಸುವುದರಿಂದ, ಮನುಷ್ಯ ಯಾವ ರೀತಿಯ ಅಡ್ಡದಾರಿಯನ್ನು ಹಿಡಿಯುವುದಿಲ್ಲ!

ಗ್ರಾಮೀಣ ಜನರ ಪ್ರತ್ಯಕ್ಷ ಮತ್ತು ಪ್ರಾಥಮಿಕ ಸಂಬಂಧಗಳೇ ಅಲ್ಲಿನ ಜೀವನದ ಮುಖ್ಯ ಜೀವಾಳ. ಇದರಿಂದ 'ನಾವು' ಎಂಬ ಭಾವನೆ ಉಂಟಾಗಿ ಕುಟುಂಬದ ಸದಸ್ಯರಲ್ಲಿ ಆತ್ಮೀಯತೆ ಬೆಳೆಯುತ್ತದೆ. ಇದರಿಂದ ನಗರವಾಸಿಗಳ ಜೀವನ ಗಡಿಯಾರಕ್ಕೆ ಹೊಂದಿಕೊಂಡ ಯಾಂತ್ರಿಕ ಜೀವನ ನಮ್ಮ ಗ್ರಾಮೀಣ ಪ್ರದೇಶಗಳ

ಮೇಲೆ ತನ್ನ ಪ್ರಭಾವವನ್ನು ಬೀರಿದಾಗ ಅನೇಕ ತೊಂದರೆಗಳಿಗೆ ನಮ್ಮ ಗ್ರಾಮೀಣ ಜನರು ಒಳಗಾಗುತ್ತಿದ್ದಾರೆ. ನಮ್ಮ ಗ್ರಾಮೀಣ ಸಮುದಾಯಗಳಲ್ಲಿ ವ್ಯವಸಾಯವು ಮುಖ್ಯ ಕಸುಬಾಗಿದ್ದು ಉಳಿದ ಕಸುಬುಗಳು ಅದಕ್ಕೆ ಹೊಂದಿಕೊಂಡು ಬೆಳೆಯುತ್ತವೆ. ಸಾಧ್ಯವಾದಷ್ಟು ಮಟ್ಟಿಗೆ ಕುಟುಂಬ ತನ್ನ ಕೆಲಸಗಳನ್ನು, ಆವಶ್ಯಕತೆಗಳನ್ನು ತಾನೇ ಪೂರೈಸಿಕೊಳ್ಳುತ್ತದೆ. ವ್ಯಕ್ತಿಗಳು ಕುಟುಂಬದ ಅವಿಭಾಜ್ಯ ಸದಸ್ಯರಾಗಿ ಅದರ ಸಾಂಸ್ಕೃತಿಕ ರೀತಿ-ನೀತಿಗಳಿಗೆ ಬದ್ಧರಾಗಿರುತ್ತಾರೆ. ಇದಕ್ಕೆ ವಿರುದ್ಧವಾಗಿ ನಗರದ ಸಮಾಜದಲ್ಲಿ ತೀವ್ರವಾದ ಪೈಪೋಟಿ ಕಂಡುಬರುತ್ತದೆ. ನಮ್ಮ ಗ್ರಾಮೀಣ ಉದ್ಯೋಗಗಳು ಬಹಳ ಮಟ್ಟಿಗೆ ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ವರ್ಗಾಯಿಸುತ್ತಾ ಬಂದಿರುವ ಕುಲಕಸುಬುಗಳಾಗಿರುತ್ತವೆ. ಅವುಗಳನ್ನು ಕಲಿಯಲು ವಿಶೇಷ ಪ್ರತಿಭೆಯಾಗಲೀ, ತರಬೇತಿಯಾಗಲೀ, ಅವಶ್ಯವಿರುವುದಿಲ್ಲ. ಅರ್ಹತೆಗಳಿಲ್ಲದ ವ್ಯಕ್ತಿಗಳಿಗೂ ಸಹಭಾಗಿತ್ವದ ಕಾರಣ ಗ್ರಾಮೀಣ ಸಮಾಜದಲ್ಲಿ ಜಾತಿ ಮತಗಳ ಹೆಸರಿನಲ್ಲಿ ಪುರಸ್ಕಾರ ಹಾಗೂ ಅಧಿಕಾರ ದೊರೆಯುತ್ತಿದೆ. ಸ್ವಾಭಾವಿಕ ಪರಿಸರದಲ್ಲಿ ನಮ್ಮ ಗ್ರಾಮೀಣರು ಜೀವನ ನಡೆಸುವುದನ್ನು ನಾವು ಕಾಣಬಹುದು. ನದಿ-ಗುಡ್ಡ-ಬೆಟ್ಟ-ಕಾಡುಗಳಂಥ ಸ್ವಾಭಾವಿಕ ಪರಿಸರದಲ್ಲಿ ಜೀವನ ನಡೆಸುತ್ತಿದ್ದು, ಪ್ರಾಣಿ-ಪಕ್ಷಿಗಳು ಅವರಿಗೆ ಜೊತೆಗಾರರಾಗಿರುತ್ತವೆ. ಉತ್ತಮ ಗಾಳಿ-ಬೆಳಕು ಇವುಗಳನ್ನು ಸಮೃದ್ಧವಾಗಿರುವುದರಿಂದ ಆರೋಗ್ಯವು ಇರುತ್ತದೆ. ಇತ್ತೀಚಿನ ದಿನಗಳಲ್ಲಿ ನಗರ ಸಂಸ್ಕೃತಿಯ ಧಾಳಿಯಿಂದ ಮಾನವ ನಿರ್ಮಿತ ಕೃತಕ ಪರಿಸರ ಮೇಲುಗೈ ಪಡೆದಿದೆ. ಕಡಿದಾದ ಗಲ್ಲಿಗಳು, ವಿಶಾಲವಾದ ಸಿಮೆಂಟ್ ರಸ್ತೆಗಳು, ಕೈಗಾರಿಕಾ ಪ್ರದೇಶಗಳು, ನಮ್ಮ ಗ್ರಾಮೀಣ ಜನಜೀವನದ ಮೇಲೆ ದುಷ್ಪರಿಣಾಮ ಉಂಟುಮಾಡುತ್ತಿವೆ.

ನನ್ನ ಅಧ್ಯಯನಕ್ಕೆ ಸಂಬಂಧಿಸಿದಂತೆ ನಾನು ಕಥಾ ಸಾಹಿತ್ಯದ ಮೂಲಕವೇ ಒಂದು ಗ್ರಾಮೀಣ ಸಂಸ್ಕೃತಿಯನ್ನು ವಿವಿಧ ಅಧ್ಯಾಯಗಳಲ್ಲಿ ಹೊಸತಾಗಿ ಗುರುತಿಸುವ ಪ್ರಯತ್ನ ಮಾಡಿದ್ದೇನೆ. ಸ್ವಾತಂತ್ರ್ಯಾನಂತರದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಕ್ಷಿಪ್ರಗತಿಯ ಬದಲಾವಣೆಗಳಾಗಿರುವುದನ್ನು ನಾವು ಕಾಣಬಹುದು. ಆ ಬದಲಾವಣೆಗಳ ಪ್ರಭಾವ ಗ್ರಾಮೀಣ ಪ್ರದೇಶಗಳ ಮೇಲೆ ತೀವ್ರವಾಗಿ ಆಗುತ್ತಿರುವುದರಿಂದ ಆ ಬಗ್ಗೆ ಸೂಕ್ಷ್ಮ ಮನಸ್ಸಿನ ಸೃಜನಶೀಲ ಕತೆಗಾರರು ಯಾವ ರೀತಿಯ ಪ್ರತಿಕ್ರಿಯೆ ನೀಡಿದ್ದಾರೆ ಎಂದು ಗುರುತಿಸುವ ಕುತೂಹಲದಿಂದಲೇ ಈ ಅಧ್ಯಯನವನ್ನು ಕೈಗೊಂಡಿರುತ್ತೇನೆ. ವಿಷಯವನ್ನು ಬೇರೆ ಬೇರೆ ನೆಲೆಗಳಿಂದ ವ್ಯಾಪಕವಾಗಿ ನೋಡುವ ಕಾರಣಕ್ಕಾಗಿ ಕತೆಗಾರರನ್ನು ಮಿತಿಗೊಳಿಸಿಕೊಳ್ಳಲಾಗಿದೆ.

## ೧.೨. ವ್ಯಾಪ್ತಿ

ಸ್ವತಂತ್ರ ಭಾರತದಲ್ಲಿ ಕೈಗಾರಿಕಾ ಕ್ರಾಂತಿ ಹೆಚ್ಚು ಪ್ರಭಾವಿತವಾಯಿತು, ಕೃಷಿಗೆ ಸಿಕ್ಕ ಪ್ರೋತ್ಸಾಹ ಕಡಿಮೆಯೇ. ಹಾಗಾಗಿ ಸ್ವಾತಂತ್ರ್ಯಾನಂತರ ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಅನೇಕ ರೀತಿಯ ಬದಲಾವಣೆಗಳಾದವು. ನೇಯ್ಗೆಯಿಂದ ಪ್ರಾರಂಭವಾಗಿ ಸರ್ಕಾರ ಗ್ರಾಮೀಣ ಅಭಿವೃದ್ಧಿಗಾಗಿ ಅನೇಕ ಯೋಜನೆಗಳನ್ನು ಪ್ರಾರಂಭಿಸಿ ಗ್ರಾಮೀಣ ಉದ್ಧಾರಕ್ಕೆ ಕಾರ್ಯಕ್ರಮ ಕೈಗೊಂಡ ನಂತರ ಆಧುನಿಕ ರೀತಿಯ ಬದಲಾವಣೆಗಳಾಗಿರುವುದನ್ನು ಕಾಣಬಹುದು. ವ್ಯವಸಾಯದ ಜೊತೆಗೆ ಜನಜೀವನದಲ್ಲೂ ಅನೇಕ ರೀತಿಯ ಬದಲಾವಣೆಗಳಾದವು. ಇದರಿಂದಾಗಿ ಗ್ರಾಮೀಣ ಪ್ರದೇಶಗಳಲ್ಲಿ ಸಾಂಸ್ಕೃತಿಕವಾಗಿಯೂ ಬಹಳಷ್ಟು ಬದಲಾವಣೆಗಳಾಗಿರುವುದನ್ನು

ಕಾಣಬಹುದು.

ಬಹುತೇಕ ಸಣ್ಣ ಕತೆಗಾರರುಗಳೆಲ್ಲ ಗ್ರಾಮೀಣ ಮೂಲದವರಾಗಿದ್ದು ತಮ್ಮ ಅನುಭವಗಳನ್ನು ಕತೆಗಳ ಮೂಲಕ ಅಭಿವ್ಯಕ್ತಿಸಲು ಪ್ರಾರಂಭಿಸಿದರು. ಇವುಗಳ ಆಧಾರದ ಮೇಲೆ ಆಧುನಿಕ ಕತೆಗಾರರು ತಮ್ಮ ಕತೆಗಳಲ್ಲಿ ಗ್ರಾಮೀಣ ಮತ್ತು ನಗರ ಪ್ರದೇಶಗಳನ್ನು ಕುರಿತು ಹೆಚ್ಚುಹೆಚ್ಚಾಗಿ ತಮ್ಮ ಅನುಭವಗಳ ಮೂಲಕ ಜನಜೀವನವನ್ನು ಚಿತ್ರಿಸಿರುವುದನ್ನು ಕಾಣಬಹುದು.

೧೯೫೦-೧೯೯೦ರವರೆಗಿನ ಕಥಾ ಸಾಹಿತ್ಯದಲ್ಲಿ ನಮ್ಮ ಗ್ರಾಮೀಣ ಜನ ಜೀವನಕ್ಕೆ ಹೆಚ್ಚು ಒತ್ತು ಕೊಟ್ಟು ಬರೆಯುತ್ತಿರುವ ಕತೆಗಾರರ ಕತೆಗಳನ್ನು ನನ್ನ ಅಧ್ಯಯನ ವ್ಯಾಪ್ತಿಯಲ್ಲಿ ಬಳಸಿಕೊಂಡಿದ್ದೇನೆ. ಸ್ವತಂತ್ರ ಭಾರತದಲ್ಲಿ ಕೈಗಾರಿಕ ಕ್ರಾಂತಿ ಹೆಚ್ಚು ಪ್ರಭಾವಿತವಾಯಿತು. ಕೃಷಿಗೆ ಸಿಕ್ಕ ಪ್ರೋತ್ಸಾಹ ಕಡಿಮೆಯೇ. ಹಾಗಾಗಿ ನಮ್ಮ ಹಳ್ಳಿಗಳ ಸ್ವಾವಲಂಬಿಯ ಜೀವನ ಸಡಿಲಗೊಳ್ಳುತ್ತಿದೆ. ಬಡತನ ಮತ್ತು ರೈತರ ಆತ್ಮಹತ್ಯೆಗಳ ಪ್ರಕರಣಗಳು ಜಾಸ್ತಿಯಾಗುತ್ತಿವೆ. ಎಲ್ಲಿ ನೋಡಿದರೂ ಮೋಸ, ವಂಚನೆ ಹೆಚ್ಚಾಗುತ್ತಿದೆ. ರಾಜಕೀಯ ಪ್ರವೇಶವು ಇಂದು ಗ್ರಾಮೀಣ ಬದುಕನ್ನು ಇಬ್ಭಾಗ ಮಾಡುತ್ತಿದೆ. ಈ ಹಿನ್ನೆಲೆಯಲ್ಲಿ ಗ್ರಾಮೀಣ ಭಾರತದ ಸಂಕೀರ್ಣತೆಯನ್ನು ಹೆಚ್ಚು ಅನಾವರಣಗೊಳಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

## ೧.೩. ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

೧೯೫೦-೬೦ರ ದಶಕದಲ್ಲಿ 'ಗ್ರಾಮಾಧ್ಯಯನ'ಗಳೆಂದು ಶೀರ್ಷಿಕೆಯನ್ನು ಹೊತ್ತ ಹಲವು ಪ್ರಬಂಧಗಳು, ಗ್ರಂಥಗಳು ಬೆಳೆಯುತ್ತಿರುವ ಸಮಾಜಶಾಸ್ತ್ರದ ಮೂಲಕ ಸಾಹಿತ್ಯ ರಾಶಿಗೆ ಬಂದು ಸೇರಿದವು. ಈ ಕ್ಷೇತ್ರಕ್ಕೆ ಸಮಾಜ ಶಾಸ್ತ್ರಜ್ಞರು ಮಾತ್ರವಲ್ಲದೆ ಸಾಮಾಜಿಕ ಮಾನವ ಶಾಸ್ತ್ರಜ್ಞರು, ಅರ್ಥಶಾಸ್ತ್ರಜ್ಞರು, ರಾಜಕೀಯ ಶಾಸ್ತ್ರಜ್ಞರು ಮತ್ತು ಇತಿಹಾಸಜ್ಞರು ಕೂಡ ಇಂತಹ ಸಾಹಿತ್ಯವನ್ನು ನಿರ್ಮಿಸಿ ಶ್ರೀಮಂತಗೊಳಿಸಲು ಮುಂದಾದರು. ಆದಾಗ್ಯೂ ೧೯೫೫ರ ನಂತರದಲ್ಲಿಯೇ ಗ್ರಾಮಾಧ್ಯಯನವೆಂಬ ಅಧ್ಯಯನದ ಪ್ರಕಾರಗಳಿಗೆ ನಿಶ್ಚಿತ ಸ್ವರೂಪ ಹಾಗೂ ಸ್ಥಾನಮಾನ ಪ್ರಾಪ್ತವಾಯಿತೆಂದು ಕೆಲವು ಸಮಾಜ ಶಾಸ್ತ್ರಜ್ಞರು ಅಭಿಪ್ರಾಯ ಪಡುವುದುಂಟು. ಊರುಗಳ ಅಥವಾ ಗ್ರಾಮಾಧ್ಯಯನಗಳೆಂದರೇನು? ಎಂಬ ಪ್ರಶ್ನೆಗೆ ಪ್ರಸಿದ್ಧ ಸಮಾಜಶಾಸ್ತ್ರಜ್ಞ 'ಹೆರಾಲ್ಡ್‌ಮನ್ ಎಂಬುವರ ಮಾತಿನಲ್ಲಿ ಹೇಳುವುದಾದರೆ, ಗ್ರಾಮಾಧ್ಯಯನಗಳೆಂದರೆ ಗ್ರಾಮೀಣ ಬದುಕು ಹಾಗೂ ಗ್ರಾಮೀಣ ಸ್ಥಿತಿ-ಗತಿಗಳ ಹತ್ತಿರದ ನೋಟಗಳು'. ಈ ಹೇಳಿಕೆಯನ್ನು ಗಮನಿಸಿದರೆ ಸಾಮಾನ್ಯ ತಿಳುವಳಿಕೆಗೆ ಇದಕ್ಕಿಂತ ಹೆಚ್ಚಿನ ವ್ಯಾಖ್ಯೆ ಬೇಕಾಗಿಲ್ಲವೆನ್ನಬಹುದು. ಈ ಪ್ರಕ್ರಿಯೆ ಸಾಹಿತ್ಯ ಚಿಂತಕರಲ್ಲಿಯೂ ಹೊಸ ಚಿಂತನೆಗೆ ಅನುವು ಮಾಡಿಕೊಟ್ಟಿತು :

"... ೧೯೫೦ರ ಹೊತ್ತಿಗೆ ಕನ್ನಡ ಸಾಹಿತ್ಯದಲ್ಲಿ ಹೊಸ ಗಾಳಿ ಬೀಸಲಾರಂಭಿಸಿತು. ೧೯೪೭ರಲ್ಲಿ ಸ್ವಾತಂತ್ರ್ಯ ಬಂದದ್ದು ಇದಕ್ಕೆ ಮುಖ್ಯ ಕಾರಣ. ಸ್ವಾತಂತ್ರ್ಯ ಬಂದ ಸ್ವಲ್ಪ ಕಾಲದಲ್ಲಿಯೇ ದೇಶಾಭಿಮಾನ ತ್ಯಾಗಗಳು ಬೇರೆ ಬೇರೆ ಸಾಕಾರ ರೂಪಗಳೆಂದು ಕಾಣುತ್ತಿದ್ದವರ ಪ್ರತ್ಯೇಕ ವ್ಯಕ್ತಿತ್ವಗಳು ಪ್ರಕಟವಾಗುತ್ತಿದ್ದಂತೆ, ಹೋರಾಟ ಕಾಲದ ಮೌಲ್ಯಗಳು ಹೊಣೆಯ ಯುಗದ ಸವಾಲಿನೆದುರಿನಲ್ಲಿ ದುರ್ಬಲವಾದಂತೆ ವಿದ್ಯಾವಂತರ ಮನಸ್ಸು

ಪ್ರಕ್ಷುಬ್ಧವಾಯಿತು. ವಿಡಂಬನೆಯ ಕಣ್ಣು ತೆರೆಯಿತು."[೧] ಹೀಗೆ ೧೯೫೦ರಲ್ಲಿ ಗೋಕಾಕರು 'ನವ್ಯ'ದ ಬಗ್ಗೆ ಮಾಡಿದ ಒಂದು ಬಾನುಲಿ ಭಾಷಣವೇ ಇದರ ಆರಂಭ. ನವ್ಯ ಸಾಹಿತ್ಯ ಮುಖ್ಯವಾಗಿ ವ್ಯಕ್ತಿವಾದಿ ನೆಲೆಯಲ್ಲಿದ್ದರಿಂದ ಅದು ಮುಂದಿನ ಹಂತದಲ್ಲಿ ಬಂಡಾಯ ಸಾಹಿತ್ಯದ ಧಾಳಿಗೆ ಸಿಕ್ಕು ದಲಿತ ಬಂಡಾಯ ಸಂವೇದನೆಗಳನ್ನು ಸ್ವೀಕರಿಸಿ ಹೊಸ ಹೊಸ ರೂಪ ಪಡೆದುಕೊಂಡಿತು. "ಸಾಂಸ್ಕೃತಿಕವಾಗಿ ಮತ್ತು ಶೈಕ್ಷಣಿಕವಾಗಿ ಅಕ್ಷರದ ಮೂಲಕ ಅಭಿವ್ಯಕ್ತಿಸಲು ತೊಡಗಿದ ಅವಮಾನಿತ ಅಕ್ಷರಸ್ಥ ಸಮುದಾಯವೊಂದು ತಮ್ಮ ಅಭಿವ್ಯಕ್ತಿಯ ಮಾಧ್ಯಮವನ್ನು ತಮ್ಮ ಕೇರಿಯ, ಪ್ರದೇಶದ ಭಾಷೆಯನ್ನು ಉಪಯೋಗಿಸಿಕೊಂಡು ತಮ್ಮ ಸಹಜ ಅನುಭವಗಳ, ಅವಮಾನ ದೌರ್ಜನ್ಯಗಳನ್ನು ಸ್ಪಷ್ಟವಾಗಿ ದಾಖಲಿಸತೊಡಗಿದ ಕೂಡಲೇ ಒಂದು ಜನಾಂಗೀಯ ಸಾಹಿತ್ಯ ಸಿದ್ಧವಾಯಿತು. ಸಾಂಸ್ಕೃತಿಕ ಅಂಶಗಳ ಹಿನ್ನೆಲೆಯಲ್ಲಿ ರೂಪುಗೊಂಡ ದಲಿತ ಸಾಹಿತ್ಯವನ್ನು ನಾವು ಮೊದಲು ಗುರುತಿಸುವುದು ದೇವನೂರು ಮಹಾದೇವರು ಬರೆದ 'ದ್ಯಾವನೂರು' ಸಂಕಲನದಿಂದ." ಇದೇ ಸಂದರ್ಭದಲ್ಲಿ ಬಂದ ಬಂಡಾಯ ಸಾಹಿತ್ಯ "ವ್ಯಕ್ತಿಗೌರವ, ಪ್ರಜಾಪ್ರಭುತ್ವವಾದಿ ನೆಲೆ, ಎಡ ಪಂಥೀಯ ಆಲೋಚನೆಯನ್ನು ಮುಖ್ಯ ನೆಲೆಯಾಗಿ ಶೋಧಿಸುವ ಈ ಬಂಡಾಯ ಸಾಹಿತ್ಯ ಮುಖ್ಯವಾದ ಸಂವೇದನೆಗಳನ್ನು ಹುಟ್ಟುಹಾಕಿತು. ೧. ದಲಿತ ಸಂವೇದನೆ ೨. ಸ್ತ್ರೀ ಸಂವೇದನೆ ೩. ಮುಸ್ಲಿಂ ಸಂವೇದನೆ ಹೀಗೆ ಬಂಡಾಯ ಸಾಹಿತ್ಯದಲ್ಲಿ ಮುಖ್ಯವಾಗಿ ಬದುಕಿನ ಅಪಮಾನತೆಗಳಾದ ಜಾತಿ, ಅಸ್ಪೃಶ್ಯತೆ, ಧರ್ಮ, ಪ್ರಭುತ್ವ, ಲಿಂಗಬೇಧಗಳನ್ನು, ವರ್ಗ-ಸಂಘರ್ಷಗಳನ್ನು ಕುರಿತು ತನ್ನ ಬದುಕಿನ ಇರುವಿಕೆ ಮತ್ತು ಪ್ರತಿಭಟನೆಯನ್ನು ಏಕಕಾಲಕ್ಕೆ ಪ್ರಕಟಿಸುತ್ತದೆ"[೨] ಎಂದಿದ್ದಾರೆ ರಾಜಪ್ಪ ದಳವಾಯಿ.

ಗ್ರಾಮೀಣ ಸಂಸ್ಕೃತಿಯನ್ನು ಗಂಭೀರವಾಗಿ ಅನಾವರಣ ಮಾಡಿರುವುದಕ್ಕೆ ನಿದರ್ಶನಗಳಾಗಿ ಕಥಾ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಪಿ.ಲಂಕೇಶ್, ಶಾಂತರಸ, ಬೆಸಗರಹಳ್ಳಿ ರಾಮಣ್ಣ, ಬರಗೂರು ರಾಮಚಂದ್ರಪ್ಪ, ಚೆನ್ನಣ್ಣ ವಾಲೀಕಾರ, ಕರೀಗೌಡ ಬೀಚನಹಳ್ಳಿ, ಬಾನು ಮುಷ್ತಾಕ್, ಬೊಳುವಾರು ಮಹಮ್ಮದ್ ಕುಂಞ, ಕುಂ. ವೀರಭದ್ರಪ್ಪ, ದೇವನೂರು ಮಹಾದೇವ, ಸಾರಾ ಅಬೂಬಕರ್, ಮುಳ್ಳೂರು ನಾಗರಾಜ, ಅಮರೇಶ ನುಗಡೋಣಿ, ಮೊಗಳ್ಳಿ ಗಣೇಶ, ನಾಗವೇಣಿ ಮುಂತಾದವರ ಕೃತಿಗಳನ್ನು ಗಮನಿಸಬಹುದು. ನನ್ನ ಅಧ್ಯಯನಕ್ಕೆ ಸಂಬಂಧಿಸಿದಂತೆ ಶಾಂತರಸ, ಬೆಸಗರಹಳ್ಳಿ ರಾಮಣ್ಣ, ಪೂರ್ಣಚಂದ್ರ ತೇಜಸ್ವಿ, ಪಿ. ಲಂಕೇಶ್, ದೇವನೂರು ಮಹಾದೇವ, ಕರೀಗೌಡ ಬೀಚನಹಳ್ಳಿ, ಕಾಳೇಗೌಡ ನಾಗವಾರ, ಸಾರಾ ಅಬೂಬಕರ್, ಎಚ್. ನಾಗವೇಣಿ, ಕುಸುಮ, ಬಾನು ಮುಷ್ತಾಕ್, ಆಲನಹಳ್ಳಿ ಕೃಷ್ಣ, ಅಮರೇಶ ನುಗಡೋಣಿ ಹೀಗೆ ಹಿರಿಯ-ಕಿರಿಯ ತಲೆಮಾರುಗಳವರ ಕತೆಗಳನ್ನು ಆಯ್ದುಕೊಂಡು ಗ್ರಾಮೀಣ ಸಂಸ್ಕೃತಿಯ ವಿಚಾರಗಳನ್ನು ಗುರುತಿಸುವ ಪ್ರಯತ್ನ ಮಾಡಿದ್ದೇನೆ.

ಇದಕ್ಕೆ ಕಾರಣವೆಂದರೆ ಈ ಲೇಖಕರೆಲ್ಲ ಬಹುತೇಕ ಗ್ರಾಮೀಣ ಪ್ರದೇಶದಿಂದ ಬಂದವರು. ಅನೇಕರು ನಗರಗಳಲ್ಲಿ ಉದ್ಯೋಗ ಹಿಡಿದರೂ ಕಥಾ ಸ್ವರೂಪ ಮತ್ತು ಸಂವೇದನೆಗೆ ಗ್ರಾಮೀಣ ಬದುಕನ್ನೇ ಮೂಲವಾಗಿರಿಸಿಕೊಂಡಿದ್ದಾರೆ. ಈ ರೀತಿಯಲ್ಲಿ ಅನೇಕರು ತಮ್ಮ ಕಥಾಚೌಕಟ್ಟಿಗೆ ಗ್ರಾಮೀಣ ವಸ್ತುವನ್ನೇ ಹೊಂದಿದ್ದರೂ ಈ ಮೇಲೆ ಹೆಸರಿಸಿರುವ ಲೇಖಕರು ಬಹುತೇಕವಾಗಿ ಗ್ರಾಮೀಣ ಬದುಕಿನ ಪರಿಸರವನ್ನೇ

ತಮ್ಮ ಕಥೆಗಳಲ್ಲಿ ಬಿಂಬಿಸಿದ್ದಾರೆ. ಸ್ವತಂತ್ರ ಭಾರತದ ಬದುಕು ದಿನೇ ದಿನೇ ನಗರಮುಖವಾದಂತೆಲ್ಲ ಗ್ರಾಮೀಣ ಬದುಕು ಹೇಗೆ ಸಂಕೀರ್ಣತೆಗೆ ಒಳಗಾಯಿತು ಮತ್ತು ನಗರದ ಎಲ್ಲ ನೆಲೆಗಳಿಗೆ ತನ್ನನ್ನು ಒಪ್ಪಿಸಿಕೊಳ್ಳುತ್ತಾ ನಡೆಯಿತು ಎಂಬುದರ ಸೂಕ್ಷ್ಮ ವಿವೇಚನೆ ಇವರ ಕಥೆಗಳಲ್ಲಿ ಇವೆ ಎಂಬುದು ಗಮನಾರ್ಹ. ಈ ಕಾರಣವಾಗಿಯೇ ಈ ಲೇಖಕರನ್ನು ಮುಖ್ಯವಾಗಿ ನನ್ನ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುತ್ತೇನೆ.

ಕನ್ನಡದ ನವ್ಯ ಲೇಖಕರಲ್ಲಿ ಲಂಕೇಶರ ಸ್ಥಾನ ವಿಶಿಷ್ಟವಾದದ್ದು. ಇವರು ೧೯೫೮ ರಿಂದ ೧೯೯೧ರವರೆಗೆ ಬರೆದ ಎಲ್ಲ ಕತೆಗಳು ಗಂಭೀರವಾದುವು. ಸಿ.ವೆಂಕಟೇಶ್‌ರವರು ಹೇಳುವಂತೆ "ಲಂಕೇಶರ ಮೊದಲ ಘಟ್ಟದ ಕತೆಗಳಲ್ಲಿ ನವ್ಯದ ಪ್ರಭಾವಕ್ಕೂ ಮತ್ತು ಅಲ್ಲಿ ಕಾಣುವ ಗ್ರಾಮ ಸಮಾಜಕ್ಕೂ ನೇರ ಸಂಬಂಧವಿದೆ. ನವ್ಯ ಸಾಹಿತ್ಯದ ಪ್ರಮುಖ ಮೌಲ್ಯಗಳ ಬೆಳಕಿನಲ್ಲಿಯೇ ಹಳ್ಳಿಯನ್ನು ನೋಡಲಾಗಿದೆ. ನವ್ಯ ಸಂದರ್ಭದಲ್ಲಿ ಬರವಣಿಗೆಯನ್ನು ಪ್ರಾರಂಭಿಸಿದ ಲಂಕೇಶರು ಅಂದಿನ ಸಾಹಿತ್ಯ ಪ್ರಮುಖ ಮೌಲ್ಯಗಳ ಬೆಳಕಿನಲ್ಲಿಯೇ ತಮ್ಮ ಅನುಭವ ಆಲೋಚನೆಗಳನ್ನು ದಾಖಲಿಸಿದ್ದಾರೆ. ಸಾಹಿತ್ಯಕ್ಕೆ ಸಂಬಂಧಿಸಿದಂತೆ ಲಂಕೇಶರ ಬರವಣಿಗೆಯ ಹಂತಗಳನ್ನು ಗಮನಿಸುತ್ತಾ ಹೋದರೆ ಇವರ ಕಥನ ಸಾಹಿತ್ಯದಲ್ಲಿ ಗ್ರಾಮೀಣ ಸಮಾಜ ವಿಶಿಷ್ಟವಾಗಿ ಮೂಡಿ ಬಂದಿದೆ. ಗ್ರಾಮೀಣ ಗರ್ಭದಲ್ಲಿ ಉಂಟಾಗುತ್ತಿರುವ ಪಲ್ಲಟಗಳನ್ನು, ಬದಲಾವಣೆಗಳನ್ನು ಬಯಸುವ ಹೊಸ ಮನಸ್ಸುಗಳನ್ನು ಮುಖ್ಯವಾಗಿ ಗುರುತಿಸುತ್ತಾರೆ. ಹೊಸ ಅನಿಸಿಕೆ, ಧ್ಯೇಯ, ನಂಬಿಕೆಗಳಿಗೆ ಕೈಚಾಚುತ್ತಿರುವ  ಹಳ್ಳಿಗರನ್ನು ನಾವಿಲ್ಲಿ ಕಾಣುತ್ತೇವೆ. ಹಳ್ಳಿಗಳಲ್ಲಿ ಆಗುತ್ತಿರುವ ಸಾಮಾಜಿಕ, ಸಾಂಸ್ಕೃತಿಕ ಬದಲಾವಣೆಗಳನ್ನು ಅವುಗಳ ಗುಣ ದೋಷಗಳೊಂದಿಗೆ ಲಂಕೇಶರ ಕೃತಿಗಳು ಎತ್ತಿ ತೋರಿಸುತ್ತವೆ. ಇವರ ಸಾಹಿತ್ಯದ ಉದ್ದಕ್ಕೂ ಆತ್ಮವಿಮರ್ಶೆಯ ವಿಶಿಷ್ಟ ಗುಣದೊಂದಿಗೆ ಮನುಷ್ಯನ ವ್ಯಕ್ತಿತ್ವದ ವೈವಿಧ್ಯತೆಯ ಶೋಧನಕಾರ್ಯ ನಡೆದಿರುವುದು ಮುಖ್ಯವಾಗಿ ಕಂಡುಬರುತ್ತದೆ."[೩]

ಶ್ರೀಕೃಷ್ಣ ಆಲನಹಳ್ಳಿಯವರು ಸುಮಾರು ೧೧ ಕೃತಿಗಳನ್ನು ಕನ್ನಡ ಸಾರಸ್ವತಲೋಕಕ್ಕೆ ನೀಡಿ ಮಧ್ಯ ವಯಸ್ಸಿನಲ್ಲಿಯೇ ಹೃದಯಾಘಾತದಿಂದ ತೀರಿಕೊಂಡ ಪ್ರತಿಭಾವಂತ ಕವಿ, ಕತೆಗಾರ, ಕಾದಂಬರಿಕಾರ. ಬರೆದ ಹಲವೇ ಕೃತಿಗಳು ಬಹಳ ಮೌಲ್ಯಾಧಾರಿತದವುಗಳಾಗಿದ್ದು ಅವರ ಹೆಸರಿಗೆ ಹಲವು ಪ್ರಶಸ್ತಿಯನ್ನು ತಂದು ಸಾಹಿತ್ಯದ ಇತಿಹಾಸದಲ್ಲಿ ಅವರ ಹೆಸರನ್ನು ಚಿರಸ್ಥಾಯಿಯಾಗಿಸಿವೆ. ಅಮರೇಶ ನುಗಡೋಣಿಯವರು ಅಭಿಪ್ರಾಯಪಡುವಂತೆ ಆಲನಹಳ್ಳಿ "ಸೂಕ್ಷ್ಮಬುದ್ಧಿಯ, ಚುರುಕು ಸ್ವಭಾವದ ಮುಗ್ಧ ಕೃಷ್ಣ. ಹಳ್ಳಿಯ ಜತೆ ಬಿಡಿಸಲಾಗದ ಒಡನಾಡಿಯಾಗಿದ್ದರು. ಹಳ್ಳಿಯ ಬದುಕಿನ ಜತೆ ಗಾಢ ಸಂಬಂಧವನ್ನು ಹೊಂದಿದ್ದ ಕಾರಣ, ಅಲ್ಲಿಯ ಪ್ರೀತಿ, ಕ್ರೌರ್ಯವನ್ನು ಅನುಭವಿಸಿದ್ದರು. ಇದರ ಸೊಗಡು ಅವರ ಸಾಹಿತ್ಯದಲ್ಲಿ ತುಂಬಿಕೊಳ್ಳಲು ಕಾರಣವಾಗಿದೆ. ಕೃಷ್ಣರು ನವ್ಯ ಸಾಹಿತಿಗಳ ಜತೆಗಿದ್ದರೂ ನವ್ಯರಂತೆ ಬರೆಯಲಿಲ್ಲ. ಅವರ ಕತೆಗಳು, ಕಾದಂಬರಿಗಳು, ನವ್ಯದ ಗುಣಾತ್ಮಕ ಅಂಶಗಳನ್ನು ಪಡೆದು ಕಲಾತ್ಮಕತೆಯೊಂದಿಗೆ ಸೃಷ್ಟಿಯಾಗಿದ್ದವು. ಮುಂದೆ ಬರೆದ ಕಾದಂಬರಿಗಳಲ್ಲಿ ಹಳ್ಳಿಯ ದಟ್ಟವಾದ ಅನುಭವವನ್ನು ದಕ್ಕಿಸಿಕೊಂಡು ನಿಂತವು. ಕೃಷ್ಣರು ಕಟ್ಟಿಕೊಡುವ ಪ್ರತಿಮೆ, ಸಂಕೇತ ಮತ್ತು ವಿವರಗಳು, ನುಡಿಗಟ್ಟುಗಳು ಅಲ್ಲಿಂದಲೇ ಸೃಷ್ಟಿಯಾಗತೊಡಗಿವೆ. ನವ್ಯದ ಪ್ರಭಾವವೂ ಯೌವನಕ್ಕೆ ತಕ್ಕ ಉತ್ಸಾಹವೂ ಕಾರಣವಾಗಿ ಅವರ ಮೊದಲ ಕಥೆ, ಕವಿತೆಗಳಲ್ಲಿ

ಕಾಮವೇ ವಸ್ತುವಾಯಿತು. ನಂತರ ದಿನಕಳೆದಂತೆ ಅವರು ಅಪಾರ ಅನುಭವ ತುಡಿತಕ್ಕೆ ಕವಿತೆ ಕಥೆಯ ರೂಪ ಸಾಲದಾಯಿತು. ಅತ್ತ ಹಳ್ಳಿ ಹಾಗೂ ಕಳ್ಳುಬಳ್ಳಿಯ ಸಂಬಂಧ ಇತ್ತ ನಗರದ ವ್ಯಾಮೋಹ ಇವುಗಳ ನಡುವೆ ಭೂತ ವರ್ತಮಾನಗಳಲ್ಲಿ ತೊಳಲಾಡಿದ ತಪ್ತ ಸ್ಥಿತಿಯ ಅನುಭವಗಳು ಅವರ ಕಥೆಗಳು ಮೊದಮೊದಲು ಮೂಡಿ ಬಂದಿವೆ. ಆದರೆ ಕೃಷ್ಣರ ಮೂಲ ಅನುಭವದ ಬೇರುಗಳು ಬಾಲ್ಯವನ್ನು ಕಳೆದ ಹಳ್ಳಿಯಲ್ಲಿತ್ತು. ಪ್ರಾರಂಭದಿಂದ ಕೊನೆಯವರೆಗೆ ಅವರು ಬಾಲ್ಯದ ಅನುಭವಗಳಿಂದ ಮುಕ್ತರಾಗಲಿಲ್ಲ."[೪]

ಲೋಹಿಯಾರವರ ತತ್ವಚಿಂತನೆ, ಕುವೆಂಪುರವರ ಕಲಾಸೃಷ್ಟಿ, ಕಾರಂತರ ಜೀವನದೃಷ್ಟಿ ಮತ್ತು ಬದುಕಿನ ಪ್ರಯೋಗಶೀಲತೆ ಇವು ತೇಜಸ್ವಿಯವರ ಸಾಹಿತ್ಯದ ರಚನೆಯ ಮೇಲೆ ಗಾಢ ಪರಿಣಾಮವನ್ನುಂಟುಮಾಡಿವೆ. ಕರೀಗೌಡ ಬೀಚನಹಳ್ಳಿಯವರು ಗುರುತಿಸಿರುವಂತೆ "ನವ್ಯ ಸಾಹಿತ್ಯದ ಧೋರಣೆಗಳು ಪ್ರಬಲವಾಗಿದ್ದ ಅರವತ್ತರ ದಶಕದಲ್ಲಿಯೇ ಕಥೆಗಳನ್ನು ಬರೆಯಲು ಪ್ರಾರಂಭಿಸಿದ ನವ್ಯ ಕಥೆಗಾರರಲ್ಲಿ ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವರೂ ಒಬ್ಬರು. ಸಾಮಾನ್ಯ ಮನುಷ್ಯನ ಜೀವನ ಕ್ರಮದ ಹಿಂದಿರುವ ಶಕ್ತಿಗಳ ವಸ್ತುನಿಷ್ಠ ಗ್ರಹಿಕೆಯೇ ಇವರ ಕಥೆಗಳ ಹಿಂದಿರುವ ಆಶಯ. ಕನ್ನಡ ಕಥಾ ಸಾಹಿತ್ಯದ ದಿಕ್ಕುಗಳನ್ನು ಅದರ ಅನುಭವ ಕ್ಷೇತ್ರ ಹಾಗೂ ಅಭಿವ್ಯಕ್ತಿಯ ಸಾಧ್ಯತೆಗಳನ್ನು ವಿಸ್ತರಿಸುವ ಪ್ರಯತ್ನಗಳಾಗಿ ತೇಜಸ್ವಿಯವರ ಕಥೆಗಳು ಕಾಣಿಸಿಕೊಳ್ಳುತ್ತವೆ."

"ನವ್ಯ ಲೇಖಕರಿಗೆಲ್ಲಾ ಸುಧಾರಣೆಗಿಂತ ಬದಲಾವಣೆಗಳಲ್ಲಿಯೇ ಅಚಲವಾದ ನಂಬಿಕೆ, ವಿಶ್ವಾಸ ಮತ್ತು ಶ್ರದ್ಧೆ. ಪ್ರಧಾನವಾಗಿ ಜೀವನಮುಖಿಯಾದ ಹೊಸ ಸಾಹಿತ್ಯವನ್ನು ರೂಪಿಸುವುದರ ಕಡೆಗೆ ತೇಜಸ್ವಿಯವರು ಸಾಗಿರುವುದನ್ನು ಅವರ ಕಥೆಗಳಿಂದ ಗುರುತಿಸಬಹುದು. ಮನುಷ್ಯನನ್ನು ಏಕಕಾಲದಲ್ಲಿ ಒಂದು ತಾತ್ವಿಕ ಅನನ್ಯತೆಯ ಪ್ರತೀಕವಾಗಿಯೂ ನೋಡುವ ಮನೋಧರ್ಮ ಇವರ ಕಥೆಗಳ ಮೂಲಭಿತ್ತಿಯಾಗಿದೆ. ಇವರ ದೃಷ್ಟಿ ಜೀವನದಲ್ಲಿ ಕಾಮ ಮತ್ತು ಮೃತ್ಯು ಎರಡು ವಿರುದ್ಧ ಶಕ್ತಿಗಳು. ಅನೇಕರಿಗೆ ಮೃತ್ಯು ಜೀವನವನ್ನು ಅರ್ಥಪೂರ್ಣ ಮಾಡುತ್ತದೆ. ಆದರೆ ಇವರ ದೃಷ್ಟಿಯಲ್ಲಿ ಸಾಯುವುದು ಎಂದರೆ ಸೃಷ್ಟಿಸುವುದು.

೧೯೬೨-೮೫ ರವರೆಗೆ ಬೆಸಗರಹಳ್ಳಿ ರಾಮಣ್ಣನವರು ಕತೆಗಳನ್ನು ಬರೆದಿರುತ್ತಾರೆ. ವೃತ್ತಿಯಲ್ಲಿ ವೈದ್ಯರಾದರೂ ಪ್ರವೃತ್ತಿಯಲ್ಲಿ ಇವರು ಕತೆಗಾರರು. ಕನ್ನಡ ಕಾವ್ಯ, ಕತೆಗಳು ನವ್ಯರ ತೀವ್ರ ಪ್ರಭಾವಕ್ಕೆ ಪಕ್ಕಾಗಿದ್ದ ಕಾಲದಲ್ಲಿ ಅವರಿಗೆ ಬದುಕು ನೀಡಿದ ಅನುಭವಗಳನ್ನು ಕತೆಗಳ ರೂಪದಲ್ಲಿ ಬರೆಯತೊಡಗಿದರು. ಯು.ಆರ್.ಅನಂತಮೂರ್ತಿ ಅವರ ಮಾತಿನಲ್ಲಿ ಹೇಳುವುದಾದರೆ "ಬೆಸಗರಹಳ್ಳಿ ರಾಮಣ್ಣನವರ ಕತೆಗಳ ವಸ್ತು ನಿಸರ್ಗಕ್ಕೆ ಪರಕೀಯವಾಗದೇ ಉಳಿದ ಒಕ್ಕಲು ಮಕ್ಕಳ ನಿತ್ಯ ಜೀವನದ ಸುಖದುಃಖ, ಸಣ್ಣತನ, ಅಸೂಯೆ, ಔದಾರ್ಯ ಇತ್ಯಾದಿ. ಇವು ದಟ್ಟವಾದ ಅನುಭವದಿಂದ ಹುಟ್ಟಿದ ಕತೆಗಳಾದ್ದರಿಂದ ಭಾವಾತಿರೇಕಕ್ಕಾಗಲೀ, ಸುಳ್ಳು ಆದರ್ಶಗಳಿಗಾಗಲಿ ಇವುಗಳಲ್ಲಿ ಮಿಳಿತವಾಗದಿರುವಂಥ ಒಂದು ಪಾತ್ರ"[೫] ಎಂದು ಅಭಿಪ್ರಾಯಪಡುತ್ತಾರೆ. ಇವರು ಹೆಚ್ಚಾಗಿ ಗ್ರಾಮೀಣ ಬದುಕನ್ನು ವಸ್ತುವಾಗಿ ಇಟ್ಟುಕೊಂಡೇ ಕತೆಗಳನ್ನು ಬರೆದಿದ್ದಾರೆ. ಗ್ರಾಮಜೀವನ, ಸಾಮಾಜಿಕ, ರಾಜಕೀಯ, ಆಚರಣೆ, ನಂಬಿಕೆಗಳು, ಸ್ತ್ರೀಯರ ಪಾತ್ರಗಳು ಒಟ್ಟಾರೆ ಸಮಗ್ರ ಗ್ರಾಮ ಜೀವನದ ಚಿತ್ರಣವನ್ನು ಕಾಣಬಹುದು:

"ಹೊತ್ತಿನ ಕಣ್ಣಿನ ಮಿಂಚು" ಕರೀಗೌಡ ಬೀಚನಹಳ್ಳಿಯವರ ಕಥಾ ಸಂಕಲನ. ಇವರ ಅತ್ಯುತ್ತಮ ಸಣ್ಣ ಕತೆಗಳು 'ದೇಸಿ' ಕತೆಗಳೇ ಆಗಿವೆ. ನಮ್ಮ ನಾಡಿನ ಒಂದೊಂದು ನಿರ್ದಿಷ್ಟ ಪ್ರದೇಶದ ಬದುಕನ್ನು ಅಥವಾ ನಿರ್ದಿಷ್ಟ ಜಾತಿಯ ಜನರ ಬದುಕಿನ ಕ್ರಮಗಳನ್ನು ನಿಕಟವಾಗಿ ಆತ್ಮೀಯವಾಗಿ ಮತ್ತು ವಿಮರ್ಶಾತ್ಮಕ ವಾಗಿ ಮೂಲ ಸಾಮಗ್ರಿಯಂತೆ ಬಳಸಿಕೊಂಡ ಈ ಲೇಖಕರು ಅತ್ಯುತ್ತಮ ಕತೆಗಳನ್ನು ಬರೆದಿದ್ದಾರೆ. ಇದರ ಕತೆಗಳ ವಸ್ತು ಕುಣಿಗಲ್ ತಾಲೂಕಿನ ಸುತ್ತಮುತ್ತಲಿನ ಸುಮಾರು ೩೦-೪೦ ಮೈಲಿಯ ಪ್ರದೇಶವಾಗಿದೆ. ಬೆಂಗಳೂರು ನಗರಕ್ಕೆ ಹತ್ತಿರದಲ್ಲಿದ್ದೂ ತನ್ನ ಹಳ್ಳಿತನವನ್ನು ಪೂರ್ಣವಾಗಿ ಕಳೆದುಕೊಂಡಿರದ ಕಾಲದಲ್ಲಿ, ಈ ಶತಮಾನದ ಐದು ಮತ್ತು ಆರನೆಯ ದಶಕದಲ್ಲಿ ಇಲ್ಲಿಯ ಬಹಳಷ್ಟು ಕತೆಗಳು ನಡೆಯುತ್ತವೆ. ಇವರ ಇನ್ನೊಂದು ವಿಶಿಷ್ಟವೆಂದರೆ ಅವರು ಹೆಣ್ಣಿನ ಪಾತ್ರಗಳನ್ನು ಕಂಡಿರಿಸಿರುವ ರೀತಿ ಈ ಕತೆಗಳಲ್ಲಿ ಹೆಣ್ಣಿನ ತಾಯ್ತನದ ವಿವಿಧ ಮುಖಗಳು ಮೈತುಂಬಿದಂತೆ ಚಿತ್ರಿತವಾಗಿದೆ.

ದೇವನೂರ ಮಹಾದೇವರ "ದೇವನೂರ ಮಹಾದೇವ ಅವರ ಕೃತಿಗಳು" ಇವರ ಸಮಗ್ರ ಕತೆಗಳ ಸಂಕಲನ, ಈ ಕೃತಿ ಸಾಮಾಜಿಕವಾದ ಆರ್ಥಿಕವಾದ ಅಸಮಾನತೆಗಳನ್ನು ಚಿತ್ರಿಸುತ್ತದೆ. ಇವರ ಕತೆಗಳಲ್ಲಿ ಮುಖ್ಯವಾಗಿ ಹರಿಜನರಲ್ಲಿಯೇ ಇರುವ ಎರಡು ವರ್ಗದ ದೈನಂದಿನ ಬದುಕಿನ ವಿರೋಧಾಭಾಸಗಳನ್ನು, ಜಮೀನುದಾರೀ ಪದ್ಧತಿಯ ಯಜಮಾನರ ಶೋಷಣೆ ಹಾಗೂ ಕ್ರೌರ್ಯಗಳನ್ನು ಪ್ರಧಾನವಾಗಿ ಬಣ್ಣಿಸುತ್ತದೆ. ಇವರು ಎಪ್ಪತ್ತರ ದಶಕದಲ್ಲಿ ಬರೆದ ಕತೆಗಳನ್ನು ಗಮನದಲ್ಲಿಟ್ಟುಕೊಂಡು ಕೆಲವು ವಿಮರ್ಶಕರು ಈ ಕಥೆಗಾರರನ್ನು ನವ್ಯೋತ್ತರ ಅಥವಾ ಬಂಡಾಯ ಸಾಹಿತ್ಯ ಚಳುವಳಿಯ ನೆಲೆಗಳಲ್ಲಿ ಗುರುತಿಸುವ ಪ್ರಯತ್ನ ನಡೆದಿದೆ. ಪಿ.ಚಂದ್ರಿಕಾರವರು ಹೇಳುವಂತೆ "ಮಹಾದೇವರ ಬಹುಪಾಲು ಬರಹಗಳು ಹೊರಗಿನ ಅಂಶಗಳ ಆಕರ್ಷಣೆಗೆ ಈ ವಿಷಯಗಳನ್ನು ಹೇಳುತ್ತವೆ. ಅದು ದೇಸೀಯತೆಯನ್ನು ಮೀರಿದ ರಾಜಕೀಯ ಶಕ್ತಿಯಿರಬಹುದು, ಸಾಮಾಜಿಕ ಸ್ಥಿತಿಗಳಿರ ಬಹುದು ಅಥವಾ ಪಟ್ಟಣದ ಕಡೆಗಿನ ಆಕರ್ಷಣೆಯಿರಬಹುದು. ಇದೆಲ್ಲದರ ನಡುವೆ ಅನಾವಶ್ಯಕವಾಗಿ ಸಿಕ್ಕು ಮಾಡಿಕೊಳ್ಳುವ ಮುಗ್ಧ ಜನತೆಯ ಪರವಾಗಿ ದೇವನೂರರು ನಿಲ್ಲುತ್ತಾರೆ."[೬]

ಮಹಾದೇವರ ಒಟ್ಟು ನಿಲುವು ಒಂದು ಸಾಂಸ್ಕೃತಿಕ ಜಗತ್ತನ್ನು ಒಳಗೊಳ್ಳುತ್ತಾ ಅದರಾಚೆಗೂ ಬೆಳೆಯುತ್ತದೆ. ಬರೀ ದಲಿತ ಜಗತ್ತಿನ ಅನಾವರಣ ಮಾತ್ರವಲ್ಲ. ಸಾಮಾಜಿಕ ಸಂಬಂಧದ ನೆಲೆಗಳಲ್ಲಿ ಇತರ ಜಾತಿ-ವರ್ಗಗಳ ನಡುವಣ ಸಂವಾದವೊಂದನ್ನು ಅವರ ಕೃತಿಗಳಲ್ಲಿ ಕಾಣಬಹುದು." ಇವರು ಸ್ತ್ರೀ ಪಾತ್ರಗಳನ್ನು ಕೇವಲ ಉಪಭೋಗದ ಅಥವಾ ಆಕರ್ಷಣೆಯ ಕೇಂದ್ರವಾಗಿ ಚಿತ್ರಿಸುವುದಿಲ್ಲ, ಮಾತೃತ್ವ ಮತ್ತು ಅಸ್ತಿತ್ವದ ಪ್ರಶ್ನೆಯಾಗಿ ಹೆಣ್ಣು ವರ್ತಿಸುತ್ತಾಳೆ. ಅಕ್ಕಮಾದೇವಮ್ಮನಿರಬಹುದು, ಕುಸುಮಬಾಲೆಯಿರಬಹುದು, ತೂರಮ್ಮ ಸಾಕವ್ವನಿರಬಹುದು, ಅಲ್ಲಿ ಮಾತೃ ಸಹಜವಾದ ವಾತ್ಸಲ್ಯವಿದೆ. ಬದುಕಿಗೆ ಹೊಸದಾದ ಅರ್ಥವನ್ನು ನೀಡಬಲ್ಲ ಶಕ್ತಿಯಿದೆ.

ಈ ಎಲ್ಲರ ಕಥೆಗಳನ್ನು ಅಧ್ಯಯನ ಮಾಡುವಾಗ ಅವರ ಪರಿಕಲ್ಪನೆಗಳು ಅವರದೇ ಆದ ವಿಶಿಷ್ಟವಾದ ಸಿದ್ಧಾಂತಗಳಾಗಿವೆ. ಅವರ ಕಥೆಗಳನ್ನು ಅಧ್ಯಯನ ಮಾಡುವಾಗ ಪ್ರೇಮ, ವಿವಾಹ, ಸ್ವಾತಂತ್ರ್ಯ, ಕಾಮ, ಸಾಹಿತ್ಯ, ಸೃಷ್ಟಿ, ಧರ್ಮ, ದರ್ಶನ ಈ ಪರಿಕಲ್ಪನೆಗಳ ಅರ್ಥ ಗೊತ್ತಿರಬೇಕಾಗುತ್ತದೆ. ಬದುಕಿನ ಬಗೆಗಿನ

ತಾತ್ವಿಕ ನೋಟವನ್ನು ಹಾಗೂ ಸಾಮಾಜಿಕ ಅರ್ಥಪೂರ್ಣತೆಯನ್ನು ಆಕೃತಿಯೊಳಗೆ ಅಂತಃಸತ್ವವಾಗಿ ಒಟ್ಟಾಗಿ ಮೂಡಿಸುವ, ಬೆಸೆಯುವ ಪ್ರವೃತ್ತಿ ಇವರ ಕಥೆಗಳ ಮುಖ್ಯ ಕೇಂದ್ರ ಕಾಳಜಿ. ಅನುಭವ ಮತ್ತು ಅಭಿವ್ಯಕ್ತಿ ಎರಡಕ್ಕೂ ಸಂಬಂಧಿಸಿದಂತೆ ಅವರು ಹೊಸ ವ್ಯಾಖ್ಯೆ, ಹೊಸ ಸಾಧ್ಯತೆಗಳನ್ನು ತಮ್ಮ ಸೃಜನಶೀಲ ಚೈತನ್ಯ ಮತ್ತು ಅವರ ಒಟ್ಟು ಕಥಾ ಸಾಹಿತ್ಯವನ್ನು ಈ ನಿಟ್ಟಿನಿಂದಲೇ ಅಧ್ಯಯನ ಮಾಡುವ ಕೆಲಸ ಹೆಚ್ಚು ಅರ್ಥಪೂರ್ಣವಾದ ದೃಷ್ಟಿಕೋನವಾಗುತ್ತದೆ."[೭]

ಹೀಗೆ ನಮ್ಮ ಗ್ರಾಮೀಣ ಸಂಸ್ಕೃತಿಯು ನಗರ ಸಂಸ್ಕೃತಿಯ ಪ್ರಭಾವದಿಂದ ಬದಲಾವಣೆಗೆ ಒಳಗಾಗುತ್ತಲೇ ಬಂದಿದೆ. ನಮ್ಮ ಗ್ರಾಮಿಣ ಸಂಸ್ಕೃತಿ ಬೇರುಗಳು ಸಡಿಲಗೊಳ್ಳುತ್ತಿವೆ. ನಮ್ಮ ಮೂಲ ಸಂಸ್ಕೃತಿಯನ್ನು ಉಳಿಸಿ ಬೆಳೆಸಲು ಎಲ್ಲರೂ ಶ್ರಮಿಸಬೇಕು. ಹಾಗೂ ನನ್ನ ಅಧ್ಯಯನಕ್ಕೆ ಸಂಬಂಧಿಸಿದಂತೆ ಇನ್ನೂ ಕೆಲವು ಅಧ್ಯಾಯಗಳನ್ನು ಇಟ್ಟುಕೊಂಡು ಸ್ವಾತಂತ್ರ್ಯೋತ್ತರ ಸಣ್ಣ ಕತೆಗಳಲ್ಲಿ ಗ್ರಾಮೀಣ ಸಂಸ್ಕೃತಿಯ ಅಂಶಗಳನ್ನು ಮುಂದಿನ ಅಧ್ಯಾಯಗಳಲ್ಲಿ ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

**ಅಡಿಟಿಪ್ಪಣಿಗಳು**

೧. ಎಲ್.ಎಸ್.ಶೇಷಗಿರಿರಾವ್, ಹೊಸಗನ್ನಡ ಸಾಹಿತ್ಯ ಚರಿತ್ರೆ, ೧೯೯೯, ಪುಟ ೭, ೭೩

೨. ರಾಜಪ್ಪ ದಳವಾಯಿ, ಕನ್ನಡ ಸಾಹಿತ್ಯ ಕೋಶ, ೧೯೯೮, ಪುಟ ೮೧-೮೨

೩. ಸಿ.ವೆಂಕಟೇಶ, ಲಂಕೇಶರ ಕಥನ ಸಾಹಿತ್ಯದಲ್ಲಿ ಗ್ರಾಮ ಸಮಾಜ, ೧೯೯೮, ಪುಟ ೧, ೨

೪. ಅಮರೇಶ ನುಗಡೋಣಿ, ಶ್ರೀಕೃಷ್ಣ ಆಲನಹಳ್ಳಿ, ೧೯೯೫, ಪುಟ ೧, ೨

೫. ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೯, ಪುಟ ೪, ೫

೬. ಪಿ.ಚಂದ್ರಿಕಾ, ಯಾರ ಜಪ್ತಿಗೂ ಸಿಗದ ನವಿಲುಗಳು, ೧೯೯೯, ಪುಟ ೧೭೨

೭. ಕರೀಗೌಡ ಬೀಚನಹಳ್ಳಿ, ತೇಜಸ್ವಿ ಕತೆಗಳ ಕುರಿತು, ೧೯೯೮, ಪುಟ ೧, ೨

# ಅಧ್ಯಾಯ ೨

## ಗ್ರಾಮೀಣ ಸಂಸ್ಕೃತಿಯ ಸ್ವರೂಪ

೨.೧. ಗ್ರಾಮೀಣ ಬದುಕು ಮತ್ತು ಸಮಾಜ ವ್ಯವಸ್ಥೆ

೨.೨. ಗ್ರಾಮೀಣ ಬದುಕಿನ ಕತೆಗಳು ಮತ್ತು
ಆ ಕತೆಗಳಲ್ಲಿ ವ್ಯವಸ್ಥೆ ಮತ್ತು ಬದುಕಿನ ನೇರಚಿತ್ರಣ

# ಅಧ್ಯಾಯ ೨

# ಗ್ರಾಮೀಣ ಸಂಸ್ಕೃತಿಯ ಸ್ವರೂಪ

ಗ್ರಾಮದ ಹುಟ್ಟು ಮಾನವನು ಎಂದು ತನ್ನ ಅಲೆಮಾರಿ ಜೀವನಕ್ಕೆ ಮಂಗಳ ಹಾಡಿ, ಒಂದು ಕಡೆ ಸ್ಥಿರವಾಗಿ ನೆಲೆ ನಿಂತು ವಾಸಿಸತೊಡಗಿದನೋ ಅಲ್ಲಿಂದ ಆರಂಭವಾಗಿರಬಹುದಾಗಿದೆ. ಪ್ರಾದೇಶಿಕತೆಯ ವಾತಾವರಣದಿಂದ ಪ್ರತಿಯೊಂದು ಜೀವನ ವಿಧಾನವೂ ಬದಲಾವಣೆ ಹೊಂದುತ್ತಾ ಹೋಗುತ್ತದೆ. ಹಾಗೆಯೇ ಒಂದು ಸಂಸ್ಕೃತಿಯೂ ಸಹ ಹುಟ್ಟಿಕೊಂಡು ಹಾಗೆ ಮುಂದುವರಿಯುತ್ತದೆ. ಮನುಷ್ಯನ ಜೀವನದ ಆರಂಭ ಅವನ ಕೆಲಸಗಳು, ಆಚರಣೆಗಳು, ನಂಬಿಕೆಗಳು, ನೀತಿನಿಯಮಗಳು, ಸಮಾಜದ ಮೌಲ್ಯಗಳು ಇವೆಲ್ಲಾ ತನ್ನದೇ ಆದ ಜೀವನ ವಿಧಾನವನ್ನು ರೂಪಿಸಿವೆ. ನಮ್ಮ ಗ್ರಾಮೀಣ ಸಂಸ್ಕೃತಿಯ ಆರಂಭ ಮಾನವನು ತನ್ನ ಅಲೆಮಾರಿ ಜೀವನದಿಂದ ಬೇಟೆಯಾಡುವುದು, ಆಹಾರ ಹುಡುಕುವುದು ಇವೇ ಮೊದಲಾದ ಹಂತಗಳನ್ನು ದಾಟಿ, ನೇಗಿಲನ್ನು ಉಪಯೋಗಿಸಿ ಪ್ರಾಣಿಗಳನ್ನು ಬಳಸಿ ಉತ್ತು, ಬೀಜಗಳನ್ನು ಬಿತ್ತಿ, ಬೆಳೆಗಳನ್ನು ಬೆಳೆದು ಬದುಕತೊಡಗಿದನೋ ಆಗಿನಿಂದ ನಮ್ಮ ಗ್ರಾಮಗಳ ಹುಟ್ಟು ಪ್ರಾರಂಭವಾಯಿತು. ಗ್ರಾಮೀಣ ಸಂಸ್ಕೃತಿಯಲ್ಲಿ “ಸಾಮುದಾಯಿಕ ಭಾವನೆ, ನಿಶ್ಚಿತ ಭೂ ಪ್ರದೇಶವಿದ್ದು, ಸಾಮಾನ್ಯ ಉದ್ಯೋಗ ಮತ್ತು ಸಾಮಾನ್ಯ ಸಾಂಸ್ಕೃತಿಕ ಜೀವನ ಇವುಗಳು ಗ್ರಾಮಗಳ ಅಲೆಮಾರಿ ಜನರಿಗೆ ನೆಲೆಯೊದಗಿಸಿದ ಪ್ರಥಮ ಪ್ರದೇಶಗಳು ಮಾನವ ಶಾಸ್ತ್ರಜ್ಞರು ಹಳ್ಳಿಗಳನ್ನು “ಮಾನವ ಸಂಸ್ಕೃತಿಯ ತೊಟ್ಟಿಲುಗಳೆಂದು ಗುರುತಿಸಿರುತ್ತಾರೆ. ನಮ್ಮ ಗ್ರಾಮಗಳಲ್ಲಿ ಸಾಮುದಾಯಿಕ ಪ್ರಜ್ಞೆ ಇರುವುದರಿಂದ ಜನರಲ್ಲಿ ಒಗ್ಗಟ್ಟನ್ನು ಮೂಡಿಸಿ ನಾವು, ನಮ್ಮದು ಎಂಬ ಭಾವನೆಯನ್ನು ಬೆಳೆಸುವುದರಿಂದ ಇದರ ಹಿನ್ನೆಲೆಯಲ್ಲಿ ಆಚಾರ ವಿಚಾರಗಳೂ, ಸಂಪ್ರದಾಯಗಳೂ, ಹುಟ್ಟಿಕೊಂಡಿವೆ. ಇದೆಲ್ಲದರಿಂದ ನಮ್ಮ ಗ್ರಾಮಗಳ ಮೇಲೆ ಪ್ರಭಾವ ಬೀರಿ ತನ್ನ ಹಿಡಿತ ಸಾಧಿಸಿವೆ ಎಂದೆನ್ನಬಹುದು.

ನಮ್ಮ ಗ್ರಾಮೀಣ ಜನರಲ್ಲಿ ನೆರೆ ಹೊರೆಯ ಪ್ರಭಾವ ಅಪಾರವಾಗಿರುತ್ತದೆ. ಅಕ್ಕಪಕ್ಕದ ಜನರು ವ್ಯಕ್ತಿಯ ಜೀವನದಲ್ಲಿ ನೇರವಾಗಿ ಪಾಲ್ಗೊಳುತ್ತಾರೆ. ವ್ಯಕ್ತಿಯ ನಡವಳಿಕೆ, ವ್ಯಕ್ತಿತ್ವ ನಿರೂಪಣೆ, ಅಭಿರುಚಿಗಳು ಮುಂತಾದವನ್ನು ಬೆಳೆಸುವಲ್ಲಿ ನೆರೆಹೊರೆ ಅತಿಹೆಚ್ಚಿನ ಜವಾಬ್ದಾರಿಯನ್ನು ಹೊತ್ತಿರುತ್ತದೆ. ಹಳ್ಳಿಗಳ ಪರಿಸರದಲ್ಲಿ ಕಂಡುಬರುವ ಈ ಆತ್ಮೀಯ ಸಂಬಂಧದಿಂದ ವ್ಯಕ್ತಿ ರೂಪುಗೊಳ್ಳುತ್ತಾನೆ. ಅವನು, ದುಶ್ಚಟಗಳಿಗೆ, ದುರ್ನಡತೆಗಳಿಗೆ ದಾಸನಾಗಲು ಈ ನೆರೆಹೊರೆಯ ಜನ ಬಿಡುವುದಿಲ್ಲ.

ಅವಿಭಕ್ತ ಕುಟುಂಬ ನಮ್ಮ ಗ್ರಾಮೀಣ ಸಂಸ್ಕೃತಿಯ ಮುಖ್ಯ ಲಕ್ಷಣವಾಗಿದೆ. ವ್ಯವಸಾಯ ಪ್ರಧಾನವಾಗಿರುವ ಗ್ರಾಮೀಣ ಪ್ರದೇಶಗಳು ಇಂದಿಗೂ ಅವಿಭಕ್ತ ಕುಟುಂಬಗಳನ್ನು ಉಳಿಸಿಕೊಂಡು ಬಂದಿವೆ. ಮಕ್ಕಳು ದನಕಾಯುವುದು, ಗಂಡಸರು ವ್ಯವಸಾಯ ಮಾಡುವುದು. ಹೆಂಗಸರು ಮನೆಯ ಕೆಲಸದ ಜೊತೆಗೆ ವ್ಯವಸಾಯ ಕೆಲಸದಲ್ಲೂ ನೆರವಾಗುತ್ತಾರೆ. ಈ ಅವಿಭಕ್ತ ಕುಟುಂಬ ಇರುವುದರಿಂದ ನಮ್ಮ ಗ್ರಾಮೀಣ ಜನತೆಯಲ್ಲಿ ಸ್ವಾವಲಂಬನೆಯನ್ನು ಹೆಚ್ಚಿಸುತ್ತದೆ. ನಮ್ಮ ಗ್ರಾಮೀಣ ಜನರಲ್ಲಿ ಮತಧರ್ಮದಲ್ಲಿ ಶ್ರದ್ಧೆ ಕಂಡುಬರುತ್ತದೆ. ಪ್ರಕೃತಿಯನ್ನು ಅವಲಂಬಿಸಿ ಮಾಡುವ ರೈತರು ಅದನ್ನು ಆರಾಧಿಸುವುದು ಸಾಮಾನ್ಯವಾಗಿ ಕಂಡುಬರುವ ಅಂಶ. ಮತಧರ್ಮಗಳಲ್ಲಿ ನಂಬಿಕೆ ಇರುವುದರಿಂದ ಇದು ಒಂದು ಸಮರ್ಥವಾದ ಸಾಮಾಜಿಕ ನಿಯಂತ್ರಣವಾಗಿದೆ. ಅಲ್ಲದೆ ಮತಧರ್ಮದ ಹೆಸರಿನಲ್ಲಿ ಅನೇಕ ಮೂಢನಂಬಿಕೆಗಳು, ಕಂದಾಚಾರಗಳು ಸೇರಿಕೊಂಡು ಗ್ರಾಮೀಣ ಜೀವನವನ್ನು ಒಂದು ರೀತಿಯಲ್ಲಿ ಅಚಲವಾಗಿಟ್ಟಿವೆ. ಸತ್ಯಾಸತ್ಯತೆಯನ್ನು ಪರೀಕ್ಷಿಸದೆಯೇ ಒಂದು ಸಮಯ, ಸಂದರ್ಭ, ವಸ್ತುಸ್ಥಿತಿ ಮುಂತಾದವುಗಳನ್ನು ಒಪ್ಪಿಕೊಳ್ಳುವುದು, ಆರಾಧಿಸುವುದು ಇವೇ ಮೊದಲಾದವುಗಳು ಮೂಢನಂಬಿಕೆಯ ಮುಖ್ಯ ಲಕ್ಷಣಗಳು. ಇದು ಒಂದು ಗ್ರಾಮೀಣ ಸಂಸ್ಕೃತಿಯನ್ನು ಕಟ್ಟಿಕೊಡುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ನಮ್ಮ ಗ್ರಾಮೀಣ ಜನರ ಜೀವನ ತುಂಬಾ ಸರಳವಾಗಿರುತ್ತದೆ. ಇದು ಆಧುನಿಕ ಸಮಾಜದ ರೀತಿ ನೀತಿಗಳಿಂದ ದೂರವಿರುತ್ತದೆ. ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಜನಸಂಖ್ಯೆ ಮಿತವಾಗಿದ್ದು, ಇದರಿಂದ ವ್ಯಕ್ತಿಗಳಲ್ಲಿ ಆತ್ಮೀಯತೆ ಹಾಗೂ ಸೌಹಾರ್ದಯುತ ಸಂಬಂಧ ಬೆಳೆಯಲು ಸಾಧ್ಯವಾಗುತ್ತದೆ.

ನಮ್ಮ ಗ್ರಾಮಗಳಲ್ಲಿ ವೃತ್ತಿಗೆ ಮಹತ್ವದ ಪಾತ್ರವಿರುತ್ತದೆ. ಪರಂಪರಾನುಗತ ವ್ಯಕ್ತಿಗಳು ಒಂದೇ ಸ್ಥಳದಲ್ಲಿ ಇರುವುದರಿಂದ ಸಾಮಾಜಿಕ ಬದಲಾವಣೆಯುಂಟಾಗುವುದಿಲ್ಲ. ಕುಂಬಾರ, ಕಮ್ಮಾರ, ಚಮ್ಮಾರ ಮುಂತಾದ ವೃತ್ತಿಗಳನ್ನು ಹಳ್ಳಿಗರು ಅವಲಂಬಿಸಿರುವುದರಿಂದ ವೃತ್ತಿಗಳನ್ನನುಸರಿಸಿ ಅವರಿಗೆ ಗ್ರಾಮ ಸಮಾಜದಲ್ಲಿ ಮರ್ಯಾದೆ ಸ್ಥಾನಮಾನ ದೊರೆಯುತ್ತದೆ. ನಮ್ಮ ಗ್ರಾಮೀಣ ಸಮುದಾಯದಲ್ಲಿ ಜಾತಿಯೇ ಮುಖ್ಯ ಸಾಮಾಜಿಕ ಶಕ್ತಿಯಾಗಿದೆ. ಮನೆಗಳನ್ನು ಕಟ್ಟುವ ರೀತಿ, ಓಣಿಗಳನ್ನು ನಿರ್ಮಿಸುವ ಬಗ್ಗೆ ಎಲ್ಲವೂ ಜಾತಿ ಪದ್ಧತಿ ಯನ್ನನುಸರಿಸಿ ನಡೆಯುತ್ತದೆ. ಊರ ಹೊರಗಿರುವ ಕೇರಿಗಳು ಇಂದಿಗೂ ನಮ್ಮ ಹಳ್ಳಿಗಳ ಮುಖ್ಯ ಲಕ್ಷಣವಾಗಿದೆ. ಬ್ರಾಹ್ಮಣರ ಕೇರಿ, ನೆಯ್ಗೆ ಬೀದಿ, ಕುಂಬಾರ ಕೊಪ್ಪಲು, ಗೊಲ್ಲರ ಹಟ್ಟಿ ಮುಂತಾದ ಹೆಸರುಗಳಿಂದ ಆಯಾ ಜಾತಿಗಳಿಗೆ ಸೇರಿದ ಜನರು ಆಯಾ ಬೀದಿಗಳಲ್ಲಿ ವಾಸಿಸುತ್ತಾರೆ. ಹೀಗೆ ನಮ್ಮ ಗ್ರಾಮೀಣ ಜನರು ತಮ್ಮದೇ ಆದ ಸಂಸ್ಕೃತಿಯನ್ನು ಕಟ್ಟಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ.

ಈ ಮೇಲಿನ ವಿಚಾರಗಳು ನಮ್ಮ ಸ್ವಾತಂತ್ರ್ಯೋತ್ತರ ಕಥಾ ಸಾಹಿತ್ಯವನ್ನು ಅಭ್ಯಸಿಸುವಲ್ಲಿ ವಿಶಿಷ್ಟವಾದ ಕುರುಹುಗಳನ್ನು ನೀಡುತ್ತವೆ. ನಮ್ಮ "ಗ್ರಾಮೀಣ ಸಂಸ್ಕೃತಿ" ಸ್ವಯಂಪೂರ್ಣತೆಯ ಒಟ್ಟು ಫಲವಾಗಿದೆ. ಹೀಗೆ ಗ್ರಾಮೀಣ ಸಂಸ್ಕೃತಿಯನ್ನು ರೂಪಿಸಲು ಹತ್ತು ಹಲವು ಅಂಶಗಳು ಕಾರಣವಾಗಿವೆ. ಗ್ರಾಮೀಣ ಬದುಕು ಮತ್ತು ಸಮಾಜ ವ್ಯವಸ್ಥೆ, ಸ್ವಾತಂತ್ರ್ಯಾನಂತರದ ಭಾರತದಲ್ಲಿ ಗ್ರಾಮೀಣ ಬದುಕು, ಗ್ರಾಮೀಣ ಬದುಕಿನ ಕತೆಗಳು ಹಾಗೂ ಆ ಕತೆಗಳಲ್ಲಿನ ವ್ಯವಸ್ಥೆ ಮತ್ತು ಬದುಕಿನ ನೇರ ಚಿತ್ರಣ ಎಂಬ ಮೂರು ಉಪ ಅಧ್ಯಾಯಗಳ ಮೂಲಕ ಅವುಗಳ ಕಾರ್ಯ ಸ್ವರೂಪವನ್ನು ಗಮನಿಸಲಾಗಿದೆ.

## ೨. ೧. ಗ್ರಾಮೀಣ ಬದುಕು ಮತ್ತು ಸಮಾಜ ವ್ಯವಸ್ಥೆ

ಭಾರತೀಯ ಸಮಾಜದಲ್ಲಿ ಗ್ರಾಮಕ್ಕೆ ತನ್ನದೇ ಆದ ಮಹತ್ವವಿದೆ. ಗ್ರಾಮವು ಸಮಾಜದ ಒಂದು ಘಟಕ. ಗ್ರಾಮದ ಉಗಮವು ಬಹಳ ಮಟ್ಟಿಗೆ ಇತಿಹಾಸದಲ್ಲಿನ ಕೃಷಿ ಆರ್ಥಿಕತೆಯ ಉಗಮದೊಂದಿಗೇ ಆಗಿದೆ. ಮಾನವನು ಎಂದು ತನ್ನ ಅಲೆಮಾರೀ ಜೀವನಕ್ಕೆ ಮಂಗಳ ಹಾಡಿ, ಒಂದು ಕಡೆ ಸ್ಥಿರವಾಗಿ ನೆಲೆ ನಿಂತು ವಾಸಿಸಲು ತೊಡಗಿದನೋ ಅಲ್ಲಿಂದ ಗ್ರಾಮದ ಹುಟ್ಟು ಆರಂಭವಾಗಿರಬಹುದಾಗಿದೆ. ಮಾನವ ತನ್ನ ಅಲೆಮಾರಿ ಜೀವನದಲ್ಲಿ ಬೇಟೆಯಾಡುವುದು, ಆಹಾರವನ್ನರಸುವುದು ಇವೇ ಮೊದಲಾದ ಹಂತಗಳನ್ನು ದಾಟಿ, ನೇಗಿಲನ್ನು ಉಪಯೋಗಿಸಿ, ಪ್ರಾಣಿಗಳನ್ನು ಬಳಸಿ ಉತ್ತು ಬೀಜಗಳನ್ನು ಬಿತ್ತಿ ಬೆಳೆಗಳನ್ನು ಬೆಳೆದು ಬದುಕತೊಡಗಿದನು.

ಗ್ರಾಮನಿವಾಸಿಗಳಲ್ಲಿ ಸಮುದಾಯ ಪ್ರಜ್ಞೆ, ಜನರಲ್ಲಿ ಒಗ್ಗಟ್ಟನ್ನು ಮೂಡಿಸಲು ನಾವು ನಮ್ಮದು ಎಂಬ ಭಾವನೆಯನ್ನು ಬೆಳೆಸಿಕೊಳ್ಳಲು ಸಹಾಯಮಾಡುತ್ತದೆ. ನಮ್ಮ ಗ್ರಾಮೀಣ ಜನರಲ್ಲಿ ಸಂಬಂಧಗಳು ಮಧುರವಾಗಿರುತ್ತವೆ. ಪರಸ್ಪರ ಪರಿಚಯವಿದ್ದು ಆಚಾರ-ವಿಚಾರಗಳೂ, ಸಂಪ್ರದಾಯಗಳೂ, ಸಂಸ್ಕೃತಿ ಮುಂತಾದವು ಅಭಿವೃದ್ಧಿ ಹೊಂದಿವೆ. ಗಂಡಾಂತರದ ಸಮಯದಲ್ಲಿ ಗ್ರಾಮೀಣ ಜನರು ತಮ್ಮೊಳಗಿರುವ ಭಿನ್ನತೆಯನ್ನು ಮರೆತು ತಮ್ಮ ಗ್ರಾಮಕ್ಕಾಗಿ ಸರ್ವವನ್ನೂ ಅರ್ಪಿಸಲು ಸಿದ್ಧರಾಗುವ ಹೋರಾಟದ ಮನೋಭಾವವನ್ನು ಕಾಣಬಹುದು.

ಗ್ರಾಮಗಳಲ್ಲಿ ನೆರೆಹೊರೆಯ ಪ್ರಭಾವ ಬಹಳವಾಗಿದ್ದು ಇದು ವ್ಯಕ್ತಿಯ ನಡವಳಿಕೆ, ವ್ಯಕ್ತಿತ್ವ ನಿರೂಪಣೆಯನ್ನು ಬೆಳೆಸುವಲ್ಲಿ ಅತಿ ಹೆಚ್ಚಿನ ಜವಾಬ್ದಾರಿಯನ್ನು ಹೊತ್ತಿರುತ್ತದೆ. ಅವಿಭಕ್ತ ಕುಟುಂಬವನ್ನು ನಮ್ಮ ಭಾರತೀಯ ಗ್ರಾಮಗಳಲ್ಲಿ ಹೆಚ್ಚಾಗಿ ಕಾಣುತ್ತೇವೆ. ಅವಿಭಕ್ತ ಕುಟುಂಬ ಗ್ರಾಮೀಣ ಜನರಲ್ಲಿ ಸ್ವಾವಲಂಬನೆಯನ್ನು ಹೆಚ್ಚಿಸುತ್ತದೆ.

ನಮ್ಮ ಗ್ರಾಮೀಣ ಜನರಲ್ಲಿ ಮತ, ಧರ್ಮಗಳ ಬಗ್ಗೆ ಅಪಾರ ಶ್ರದ್ಧೆ, ನಂಬಿಕೆ ಕಂಡುಬರುತ್ತದೆ. ಗ್ರಾಮೀಣ ಜನರ ಜೀವನ ವಿಧಾನದಲ್ಲಿ ಯಾವುದೇ ರೀತಿಯ ಶೀಘ್ರ ಬದಲಾವಣೆ ಇರುವುದಿಲ್ಲ. ಗ್ರಾಮಗಳಲ್ಲಿ ವ್ಯವಸಾಯವು ಪ್ರಧಾನ ಕಸುಬಾಗಿರುವುದರಿಂದ ಅದಕ್ಕೆ ಹೊಂದಿಕೊಂಡಂತೆ ಜೀವನ ಕ್ರಮವಿರುತ್ತದೆ. ನಮ್ಮ ಗ್ರಾಮಗಳಲ್ಲಿ ಪ್ರಮುಖವಾಗಿ ಸಾಮಾಜಿಕ ಜೀವನದ ಸುವ್ಯವಸ್ಥೆಯನ್ನು ಅರಿಯಬೇಕಾದರೆ ಎರಡು ಮುಖ್ಯ ಅಂಶಗಳು ಪ್ರಮುಖವಾಗುತ್ತವೆ. ೧. ರಚನೆ ೨. ಕ್ರಿಯೆ. "ಒಂದು ಸಮಾಜದಲ್ಲಿ ಸದಸ್ಯರ ಸಮೂಹವೇ ರಚನೆ. ಆ ಸಮೂಹ ಮಾಡುವ ಕೆಲಸಗಳೇ ಕ್ರಿಯೆ." ಸಾಮಾಜಿಕ ವ್ಯವಸ್ಥೆ ಅದರ ಸದಸ್ಯರು ಒಂದು ಗೊತ್ತಾದ ರೀತಿಯ ಕಾರ್ಯಾಚರಣೆಗೆ ತೊಡಗಲು ಅನುಕೂಲವಾಗುವಂತೆ ಮಾಡಿಕೊಂಡಿರುವ ರಚನೆಯಾಗಿದೆ. ರಾಮಾಯಣ, ಮಹಾಭಾರತ ಕಾಲದಿಂದಲೂ ನಮ್ಮ ಸಣ್ಣ ಕತೆಯ ಬೆಳವಣಿಗೆಯು ಅಸ್ತಿತ್ವಕ್ಕೆ ಬಂದಿರುವುದನ್ನು ಗುರುತಿಸಬಹುದು.

ಬ್ರಿಟಿಷರ ಆಗಮನದಿಂದ ಉಂಟಾದ ಪಶ್ಚಿಮದ ಪ್ರಭಾವ ನಮ್ಮ ಮೇಲೆ ಅನೇಕ ಪರಿಣಾಮ ಗಳನ್ನುಂಟುಮಾಡಿತು. ಇಂಗ್ಲಿಷನ್ನು ಶಿಕ್ಷಣ ಮಾಧ್ಯಮವನ್ನಾಗಿ ಇಲ್ಲಿ ಹೇರಲಾಯಿತು. ಹೀಗೆ ೧೯ನೆಯ ಶತಮಾನದ ಯೂರೋಪಿಯನ್ ಪುನರುತ್ಥಾನದ ಅನೇಕ ವಿಚಾರಗಳನ್ನು ಭಾರತಕ್ಕೆ ತಂದದ್ದೇ ಅಲ್ಲದೆ,

ಕಥೆ ಕಾದಂಬರಿಗಳ ಮೂಲಕ ಮಾನವೀಯ ಸಾಹಿತ್ಯದ ದರ್ಶನವನ್ನು ಮೂಡಿಸಿತು. ಹೀಗೆ ಬಂದಂತಹ ಸಾಹಿತ್ಯವು ಅನೇಕ ರೀತಿಯಲ್ಲಿ ಗಮನ ಸೆಳೆಯುವಂಥದ್ದೂ ಮತ್ತು ಸಹಜರೂಪದ್ದೂ ಆಗಿದೆ. ಸಣ್ಣಕತೆ ಮೂಲಭೂತವಾಗಿ ಅನಿಸಿಕೆಗಳ ವೈಯಕ್ತಿಕ ಅಭಿವ್ಯಕ್ತಿ. ಇದು ಪ್ರತಿಯೊಬ್ಬ ಬರಹಗಾರನ ವಿಚಿತ್ರವಾದ ಮನಃಸ್ಥಿತಿಯ ಸೂಕ್ಷ್ಮ ವ್ಯತ್ಯಾಸಗಳನ್ನು ಬಿಚ್ಚಿಡುತ್ತದೆ.

ನಮ್ಮ ಕನ್ನಡ ಸಣ್ಣಕತೆಯ ಚರಿತ್ರೆಯು ಕನ್ನಡ ಕಾದಂಬರಿಯ ಚರಿತ್ರೆಯನ್ನೆ ಬಹುಮಟ್ಟಿಗೆ ಹೋಲುತ್ತದೆ. ಇದು ವಿಶಿಷ್ಟ ಸಾಹಿತ್ಯ ಪ್ರಕಾರವಾಗಿ ಕನ್ನಡದಲ್ಲಿ ಮೂಡಿಬಂದದ್ದು ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ. ಇದರಲ್ಲಿ ಸಣ್ಣಕಥೆಯ ಬೆಳವಣಿಗೆಯನ್ನು ಆಧುನಿಕ ಕನ್ನಡ ಸಾಹಿತ್ಯದ ನಾಲ್ಕು ಹಂತಗಳಲ್ಲಿ ಗುರುತಿಸಬಹುದಾಗಿದೆ.

ನಾವು ನವೋದಯ ಕಾಲಘಟ್ಟದಲ್ಲಿನ ಕಥಾ ಸಾಹಿತ್ಯವನ್ನು ಗಮನಿಸಿದಾಗ ಇದರಲ್ಲಿ ವಾಸ್ತವವಾದಿ ಪರಂಪರೆಗೆ ಹತ್ತಿರವಾಗುವ ಸರಳ ಧಾಟಿಯಲ್ಲಿ ಬರೆದಿರುವುದನ್ನು ಕಾಣಬಹುದು. ಸಾಮಾಜಿಕ, ಐತಿಹಾಸಿಕ, ಪೌರಾಣಿಕ ಈ ಎಲ್ಲದರಲ್ಲೂ ತಮ್ಮದೇ ಆದ ಛಾಪು ಒತ್ತಿರುವ ಮಾಸ್ತಿಯವರ ಕತೆಗಳಲ್ಲಿ ಘಟನೆಗಳು ಮತ್ತು ಘಟನೆಗಳಿಗೆ ಕಾರಣವಾಗುವ ಮನುಷ್ಯ ಮನಸ್ಸುಗಳ ಪರಿಶೀಲನೆ ಹೆಚ್ಚು ಮುಖ್ಯವಾಗುತ್ತದೆ. ಮತ್ತು ಮಾಸ್ತಿಯವರು ಹುಟ್ಟು ಹಾಕಿದ ಕಥನ ಪರಂಪರೆಯನ್ನು ಮಾಸ್ತಿಯವರ ಜತೆಗೇ ಮುಂದುವರಿಸಿದ್ದ ಬಾಗಲೋಡಿ ದೇವರಾಯ, ಗೊರೂರು ರಾಮಸ್ವಾಮಿ ಅಯ್ಯಂಗಾರ್ ಕೊರಡ್ಕಲ್ ಶ್ರೀನಿವಾಸರಾವ್, ಭಾರತೀಪ್ರಿಯ, ಕೆ. ಗೋಪಾಲಕೃಷ್ಣರಾವ್, ಅಶ್ವತ್ಥ, ಎಂ.ವಿ. ಸೀತಾರಾಮಯ್ಯ ಮುಂತಾದ ಲೇಖಕರು ಮಾಸ್ತಿಯವರ ವಿಚಾರಧಾರೆಗಿಂತ ಸ್ವಲ್ಪ ಭಿನ್ನವಾದ ನಿಲುವು ಹೊಂದಿದವರಾಗಿದ್ದರು. ಇವರೆಲ್ಲ ತಮಗಿಂತ ಹಿಂದಿನ ಸಾಹಿತ್ಯದಿಂದ ಸಾಕಷ್ಟು ಸ್ವೀಕರಿಸಿಕೊಂಡಿರುವುದು ಕಾಣಿಸುವುದಾದರೂ, ಇವರ ಬರಹ ನಿಲುವುಗಳಲ್ಲಿ ಹತ್ತೊಂಬತ್ತನೆಯ ಶತಮಾನದ ಕೊನೆಯ ಸಂಕ್ರಮಣ ಸ್ಥಿತಿಗೆ ಕಾರಣವಾದ ಶಿಕ್ಷಣ, ಕೈಗಾರಿಕೆ, ಸ್ವದೇಶಿ ಪ್ರಜ್ಞೆ, ವಸಾಹತುಶಾಹಿ ಈ ಎಲ್ಲದರ ಪ್ರಭಾವಗಳು ಅಲ್ಲಲ್ಲಿ ಅಷ್ಟಿಷ್ಟು ಬೆರಕೆಯಾಗಿರುವುದು ಸ್ಪಷ್ಟವಾಗಿಯೇ ಗೋಚರಿಸುತ್ತದೆ.

ಸಾಹಿತ್ಯವನ್ನು ಸಾಮ್ರಾಜ್ಯಶಾಹಿ ಹಾಗೂ ಊಳಿಗಮಾನ್ಯ ಮೌಲ್ಯಗಳಿಂದ ಪಾರುಮಾಡುವ ಸಲುವಾಗಿ ಹುಟ್ಟಿಕೊಂಡ ಪ್ರಗತಿಶೀಲ ಚಳುವಳಿ ಕ್ರಮೇಣ 'ವಸ್ತು-ವಿನ್ಯಾಸ' ಹಾಗೂ 'ಬದ್ಧತೆ-ಜವಾಬ್ದಾರಿ'ಗಳ ವಿವರಣೆಯಲ್ಲಿ ತನ್ನೊಳಗೆ ಹುಟ್ಟಿಸಿಕೊಂಡ ವೈರುಧ್ಯಗಳಿಂದಾಗಿ ಎರಡು ದಾರಿಗೆ ಹೊರಳಿತು. ಎಡಪಂಥೀಯ ಅದರಲ್ಲೂ ಮುಖ್ಯವಾಗಿ ಮಾರ್ಕ್ಸ್‌ವಾದಕ್ಕೆ ಸಂಪೂರ್ಣ ಶರಣಾಗಲೊಲ್ಲದ ಕೆಲವರು ಆಳುವ ವರ್ಗದತ್ತ ವಾಲುತ್ತಾ, ಭಾಷೆ, ಶೈಲಿ, ಅಭಿವ್ಯಕ್ತಿ ಇತ್ಯಾದಿ ಪದಗಳಿಂದ ತಮ್ಮ ನಡವಳಿಕೆಗಳನ್ನು ಸಮರ್ಥಿಸುತ್ತಾ ಕ್ಷೀಣಿಸಿದರೆ ತಾತ್ವಿಕ ಪ್ರಣಾಳಿಕೆಗೆ ಬಲವಾಗಿ ಅಂಟಿಕೊಂಡ ಕೆಲವರು ದುಡಿಯುವ ಮಧ್ಯಮ ವರ್ಗದವರ ನಡುವೆ ಜನಪ್ರಿಯರಾದರು. ಇದು ಕನ್ನಡದ ಓದುಗರ ಸಂಖ್ಯೆಯನ್ನು ನಾಲ್ಕರಷ್ಟು ಹೆಚ್ಚಿಸಿದ ಗೌರವ 'ಪ್ರಗತಿಶೀಲ' ಲೇಖಕರಿಗೆ ಸಲ್ಲುತ್ತದೆ. ನವೋದಯವು ವಸಾಹತುಶಾಹಿ ದಾಳಿಗೆ ನೇರ ಪ್ರತಿಭಟನೆಯಾಗಿದ್ದರೆ, ನವ್ಯವು ವಸಾಹತುಶಾಹಿಯ ನೇರ ಪ್ರತಿಫಲವಾಗಿತ್ತು. ದೇಶಿಯ ಮೂಲದ ಅಭಿವ್ಯಕ್ತಿ ನೆಲೆಗಳನ್ನು ಹುಡುಕುವ

ಅತಿ ಉತ್ಸಾಹದಲ್ಲಿ ಸನಾತನವಾದಿ ನಿಲುವುಗಳ ಜತೆ ಸಮೀಕರಣಗೊಂಡ ಪ್ರಗತಿಶೀಲರ ಒಂದು ವರ್ಗದ ಲೇಖಕರ ಗೊಂದಲದ ಲಾಭ ಪಡೆದ, ನವವಸಾಹತುಶಾಹಿ ಮೂಲದ ಬಲಪಂಥೀಯ ಗುಂಪಿನ ನವ್ಯರು ಪರಂಪರೆಯ ಆಳದಲ್ಲಿ ಮುತ್ತು ಹುಡುಕುವ ಮುಳುಗು ತಜ್ಞರಾಗಿ ಬಿಟ್ಟರು.

ಕನ್ನಡ ಭಾಷೆಯ ಧ್ವನಿ ಸಾಧ್ಯತೆಗಳು ಉತ್ತುಂಗ ಶಿಖರವೇರಿದ್ದು ನವ್ಯರ ಕಾಲದಲ್ಲಿ. ಕನ್ನಡದ ಕತೆ ಕವನಗಳಲ್ಲಿ ನವ್ಯದ ಬೀಜ ಬಿತ್ತಿದ ಮೊದಲಿಗರಲ್ಲೊಬ್ಬರಾದ ಬಿ.ಸಿ. ರಾಮಚಂದ್ರಶರ್ಮರಿಂದ ಮೊದಲ್ಗೊಂಡು, ಕನ್ನಡ ನವ್ಯ ಕತೆಗಳ ಸೂಪರ್ ಸ್ಟಾರ್‌ಗಳಾಗಿ ವಿಜೃಂಭಿಸಿದ ಯು.ಆರ್. ಅನಂತಮೂರ್ತಿ, ಯಶವಂತ ಚಿತ್ತಾಲ, ಶಾಂತಿನಾಥ ದೇಸಾಯಿ, ಪಿ.ಲಂಕೇಶ್ ಮುಂತಾದ ಎಲ್ಲ ಲೇಖಕರೂ ಪದ್ಯ ಮತ್ತು ಗದ್ಯ ಎರಡರಲ್ಲೂ ತಮ್ಮ ಪ್ರತಿಭೆ ಮೆರೆದರಲ್ಲದೆ, ಸಾಹಿತಿಗಳೆಂದರೆ ಹೀಗಿರಬೇಕು ಎಂಬ ಆದರ್ಶ ಪ್ರಾಯರಾದರು.

ನವ್ಯ ಪಂಥದವರ ವಿಜೃಂಭಣೆಯ ದಿನಗಳಲ್ಲೇ ಗಂಭೀರ ಕತೆಗಾರರಲ್ಲಿ ಒಬ್ಬರಾಗಿದ್ದ ಪೂರ್ಣಚಂದ್ರ ತೇಜಸ್ವಿಯವರು ೧೯೭೩ರಲ್ಲಿ ಹೊರತಂದ 'ಅಬಚೂರಿನ ಪೋಸ್ಟಾಫೀಸು' ಕಥಾ ಸಂಕಲನವು ಮುಂದಿನ ಕನ್ನಡ ಕತೆಗಳಿಗೆ ದಿಕ್ಸೂಚಿಯಾಗಿ ಬಿಟ್ಟಿತು. ಮತ್ತು ನವ್ಯದವರ ಪರಕೀಯ ಪ್ರಕರಣದಿಂದ ರೋಸಿ ಹೋಗಿದ್ದ ನವ್ಯೇತರರಿಗೆ ೧೯೭೪ರ 'ಬೂಸಾ ಪ್ರಕರಣ' ದ್ಯಾವನೂರು ಮಹದೇವರಿಂದ ಆರಂಭಗೊಂಡ 'ದಲಿತ ಲೋಕದ ಅನಾವರಣ' ಮತ್ತು ಎಲ್ಲಕ್ಕಿಂತ ಮುಖ್ಯವಾಗಿ ಕನ್ನಡ ಸಾಹಿತ್ಯವನ್ನು ಬ್ರಾಹ್ಮಣಶಾಹಿಯಿಂದ ಪಾರು ಮಾಡುವುದಕ್ಕೆ ಕರ್ನಾಟಕ ದಲಿತ ಸಂಘರ್ಷ ಸಮಿತಿ ಹಾಗೂ ಕರ್ನಾಟಕ ಬರಹಗಾರರ ಮತ್ತು ಕಲಾವಿದರ ಒಕ್ಕೂಟಗಳು ಹೊಸ ಉತ್ಸಾಹ ತಂದುಕೊಟ್ಟವು.

ಈ ಎಲ್ಲ ಕಾರಣಗಳಿಂದಾಗಿ ಕನ್ನಡ ಕಥಾಲೋಕದಲ್ಲಿ 'ದಲಿತ ಸಂವೇದನೆ' ಮತ್ತು 'ಮುಸ್ಲಿಂ ಸಂವೇದನೆ'ಗಳ ಪ್ರವೇಶವಾಯಿತು. ಈ ಬಗೆಯಲ್ಲಿ ಕನ್ನಡದ ಕತೆಗಳು ಕಳೆದೊಂದು ಶತಮಾನದ ಅವಧಿಯಲ್ಲಿ ದೇಶೀವಾದ, ವಸಾಹತುಶಾಹಿ, ರಾಜಕೀಯ ಪ್ರಜ್ಞೆ, ಸ್ವಾತಂತ್ರ್ಯ ಸಂಗ್ರಾಮ, ಔದ್ಯೋಗೀಕರಣ, ನಗರೀಕರಣ, ವ್ಯಕ್ತಿಸ್ವಾತಂತ್ರ್ಯ, ತುರ್ತು ಪರಿಸ್ಥಿತಿ ಈ ಎಲ್ಲಾ ಸಂಗತಿಗಳಿಗೂ ಸ್ಪಂದಿಸುತ್ತಾ ಕನ್ನಡ ಸಾಹಿತ್ಯವನ್ನು ಶ್ರೀಮಂತ ಗೊಳಿಸಿವೆ. (ಶತಮಾನದ ಸಣ್ಣಕತೆ ಸಂ. ಬೊಳುವಾರ್ ಮೊಹಮದ್ ಕುಂಞ, ಪ್ರಸ್ತಾವನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೧)

"ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯ, ಕನ್ನಡ ಸಣ್ಣಕತೆಗಳ ಬಗ್ಗೆ ಮಾತನಾಡುವ ಯಾರಿಗಾದರೂ ಮಾಸ್ತಿಯವರು ಕೇವಲ ಮೊದಲ ಪ್ರಮುಖ ಸಣ್ಣಕತೆಗಾರರಾಗಿ ಮುಖ್ಯರಾಗುತ್ತಾರೆ. ಮಾಸ್ತಿಯವರ 'ವೆಂಕಟಿಗನ ಹೆಂಡತಿ', ಒಂದು ಅತ್ಯುತ್ತಮ ಕಥೆ. ಪಂಜೆಯವರ 'ಕಮಲಾಪುರದ ಹೋಟೆಲಿನಲ್ಲಿ', ಶ್ರೀನಿವಾಸರಾವ್‌ರವರ 'ಧನಿಯರ ಸತ್ಯನಾರಾಯಣ', ಆನಂದರ 'ನಾ ಕೊಂದ ಹುಡುಗಿ' ಕುವೆಂಪುರವರ 'ಧನ್ವಂತರಿ ಚಿಕಿತ್ಸೆ, ನಿರಂಜನರ 'ಕೊನೆಯ ಗಿರಾಕಿ' ಕಟ್ಟೀಮನಿಯವರ 'ಗಿರಿಜಾಕಂಡ ಸಿನಿಮಾ', ಅನಂತ ಮೂರ್ತಿಯವರ 'ಮೌನಿ', ಶಾಂತಿನಾಥ ದೇಸಾಯಿಯವರ 'ರಾಕ್ಷಸ', ತೇಜಸ್ವಿಯವರ 'ಅವನತಿ', ಶ್ರೀಕೃಷ್ಣ ಆಲನಹಳ್ಳಿಯವರ 'ಗೀಜಗನ ಗೂಡು', ಸುಧಾಕರರವರ 'ಜಲದಕಣ್ಣು', ಬೆಸಗರಹಳ್ಳಿ

ರಾಮಣ್ಣವನರ 'ಕಕರನ ಉಗಾದಿ', ಕುಂ.ವೀರಭದ್ರಪ್ಪನವರ 'ದೇವರ ಹೆಣ', ಬರಗೂರು ರಾಮಚಂದ್ರಪ್ಪನವರ 'ಕಪ್ಪು ನೆಲದ ಕೆಂಪು ಕಾಲು', ಕಾಳೇಗೌಡ ನಾಗವಾರರ 'ಕೂಡಿಕೆ', ದೇವನೂರು ಮಹಾದೇವ ಅವರ 'ಮಾರಿಕೊಂಡವರು', ಕರೀಗೌಡ ಬೀಚನಹಳ್ಳಿಯವರ 'ವಿಯೋಗ', ಅಮರೇಶ ನುಗಡೋಣಿಯವರ 'ಮಣ್ಣು ಸೇರಿತು ಬೀಜ' ಮೊಗಳ್ಳಿ ಗಣೇಶ್‌ರವರ 'ಭತ್ತ' ಮುಂತಾದ ಕೆಲವು ಸಣ್ಣ ಕತೆಗಳನ್ನು ಹೆಸರಿಸಬಹುದು."[೧]

ಮಾಸ್ತಿಯವರಿಂದ ಹಿಡಿದು ಇಂದಿನವರೆಗೂ ಕನ್ನಡ ಸಣ್ಣಕತೆಗಳು ಬಹಳ ಗಂಭೀರವೂ ಸೂಕ್ಷ್ಮವೂ ಆದ ನೆಲೆಯಲ್ಲಿ ರಚನೆಗೊಂಡಿವೆ. ಸುಮಾರು ಹತ್ತಿರ ಹತ್ತಿರ ನೂರು ವರ್ಷಗಳಷ್ಟು ಇತಿಹಾಸವಿರುವ ಕನ್ನಡ ಸಣ್ಣ ಕತೆಗಳ ಕ್ಷೇತ್ರಕ್ಕೆ ಮಾಸ್ತಿ ಗಟ್ಟಿಯಾದ ಅಡಿಪಾಯವನ್ನು ಹಾಕಿಕೊಟ್ಟರು. ೧೯೨೦ರಲ್ಲಿ ಪ್ರಕಟವಾದ ಅವರ 'ಕೆಲವು ಸಣ್ಣಕತೆಗಳು' ಎಂಬ ಕೃತಿ ತನ್ಮೂಲಕ ಕನ್ನಡ ಕಥಾ ಪರಂಪರೆಯ ಐತಿಹಾಸಿಕ ಪ್ರಪಂಚವನ್ನು ಕನ್ನಡಿಗರೆದುರು ತೆರೆದಿಟ್ಟಿತು. ಅಂದರೆ ಭಾರತೀಯ ಕಥಾ ಪರಂಪರೆಯ ಒಟ್ಟು ಚೌಕಟ್ಟಿನಲ್ಲಿ ಪಾಶ್ಚಾತ್ಯ ಸಣ್ಣ ಕತೆಯ ಮಾದರಿಯನ್ನು ಸ್ವೀಕರಿಸಿ ಅಭಿವ್ಯಕ್ತಿಸಿದ್ದು ಕನ್ನಡ ಸಣ್ಣಕತೆಯ ಪ್ರಕಾರ ತನ್ನದೇ ಆದ ಖಚಿತ ಸ್ವರೂಪವನ್ನು ಕಟ್ಟಿಕೊಳ್ಳುವಲ್ಲಿ ಯಶಸ್ವಿಯಾಯಿತು. ಆ ಮೊದಲೇ ಪಂಚತಂತ್ರ, ಕಥಾಸರಿತ್ಸಾಗರಗಳಂತಹ ಕೃತಿಗಳು ಬಂದಿದ್ದವಾದರೂ ಈ ಸಣ್ಣಕತೆಯ ಪ್ರಕಾರ ಭಿನ್ನವಾದುದು. ವಸ್ತು, ತಂತ್ರ, ಭಾಷೆ ಮತ್ತು ನಿರೂಪಣಾ ವಿಧಾನವು ಬೇರೆಯೇ ಆದುವುಗಳಾಗಿದ್ದವು. ದೈವಿಕ ಆಯಾಮದಿಂದ ಶುದ್ಧ ಸಾಮಾಜಿಕ ಆಯಾಮವನ್ನು ಪ್ರರೂಪಿಸಿತು. ನವೋದಯಪೂರ್ವ, ನವೋದಯ, ಪ್ರಗತಿಶೀಲ, ನವ್ಯ, ನವ್ಯೋತ್ತರ ಮತ್ತು ದಲಿತ, ಬಂಡಾಯ ಸಾಹಿತ್ಯ ಘಟ್ಟಗಳು ಸಣ್ಣ ಕತೆಗಳ ಮೂಲಕ ನಾಡು, ನುಡಿ, ರಾಷ್ಟ್ರೀಯತೆ, ಸಮಾಜ, ಶೋಷಣೆ, ದಬ್ಬಾಳಿಕೆ, ಜಮೀನ್ದಾರಿ ಪದ್ಧತಿಯ ಕರಾಳ ಮುಖ ಮುಂತಾದುವನ್ನು ಬಹಳ ಸೂಕ್ಷ್ಮವಾಗಿ ಹಿಡಿದಿಟ್ಟವು. ಈ ಅಧ್ಯಯನ ಚೌಕಟ್ಟಿನಲ್ಲಿ ನಾನು ನವ್ಯ ಮತ್ತು ನವ್ಯೋತ್ತರ ಘಟ್ಟದ ಲೇಖಕರ ಕೃತಿಗಳನ್ನು ಇಟ್ಟುಕೊಂಡು ಗ್ರಾಮೀಣ ಸಂಸ್ಕೃತಿಯ ಅನನ್ಯತೆಯನ್ನು ಗುರುತಿಸುವ ಪ್ರಯತ್ನ ಮಾಡಿದ್ದೇನೆ.

ನಮ್ಮ ನವ್ಯ ಸಾಹಿತಿಗಳಲ್ಲಿ ಗ್ರಾಮೀಣ ಜನಜೀವನದ ಅನಾವರಣ ಕಡಿಮೆಯಾಗುತ್ತಿದ್ದ ಅಥವಾ ಕೊರತೆ ಉಂಟಾಗಿದ್ದರಿಂದ ನಮ್ಮ ಗ್ರಾಮೀಣ ಸಂಸ್ಕೃತಿಯ ವಿವಿಧ ಮುಖಗಳ ಚಿತ್ರಣವನ್ನು ಕಟ್ಟಿಕೊಟ್ಟು ಅದರ ವೈವಿಧ್ಯತೆಗೆ ಕಾರಣರಾದವರಲ್ಲಿ ಡಾ.ಬೆಸಗರಹಳ್ಳಿ ರಾಮಣ್ಣನವರು ಮುಖ್ಯರಾಗುತ್ತಾರೆ. ಇವರ ಕತೆಗಳಲ್ಲಿ ನಾವು ಗ್ರಾಮೀಣ ಪರಿಸರದಲ್ಲಿ ಮಾನವೀಯತೆಯ ಮೌಲ್ಯಗಳನ್ನು ಹುಡುಕುವ, ಪರಿಶೀಲಿಸುವ, ಹೊಸ ಸಮಾಜವನ್ನು ಕಟ್ಟುವ ಮನಸ್ಸನ್ನು ಇವರ ಕಥಾ ಸಾಹಿತ್ಯದಲ್ಲಿ ಕಾಣಬಹುದಾಗಿದೆ. ಇವರ ಕತೆಗಳಲ್ಲಿ ಗ್ರಾಮೀಣ ಸಂಸ್ಕೃತಿಯ ಸೊಗಡು, ಗ್ರಾಮೀಣ ಜನರ ಪ್ರೀತಿ, ಶ್ರದ್ಧೆ ದಟ್ಟವಾಗಿರುವುದನ್ನು ಕಾಣಬಹುದು. ಗ್ರಾಮೀಣ ಸಮಾಜ ವ್ಯವಸ್ಥೆಯ ಬಗ್ಗೆ ಬೇರೆ ಬೇರೆ ಕತೆಗಾರರ ಚಿಂತನೆಗಳ ಹಿನ್ನೆಲೆಯಲ್ಲಿ ವಿವರವಾಗಿ ನೋಡಬಹುದು.

"ಒಬ್ಬ ವ್ಯಕ್ತಿಯ ಅಭಿಪ್ರಾಯಗಳು ಸಾಮಾಜಿಕಗೊಳ್ಳದಿದ್ದಾಗ ಅವನು ಒಂದು ರೀತಿಯಲ್ಲಿ ವಿರೋಧಿ ನೆಲೆಯಲ್ಲಿರುತ್ತಾನೆ. ಯಾಕೆಂದರೆ ಸಾಮಾಜಿಕ ವಿನ್ಯಾಸವೊಂದು ವ್ಯಕ್ತಿಯ ಹಕ್ಕು ಭಾದ್ಯತೆಗಳನ್ನು ನಿರ್ವಹಿಸುತ್ತದೆ. ಇದು ಸಾಮಾಜಿಕ ಆಶಯವೇ ಪ್ರಧಾನವಾಗಿರುವ ಸಂದರ್ಭದಲ್ಲಿ ಅನಿವಾರ್ಯವಾಗುತ್ತದೆ. 'ಕಕರನ ಯುಗಾದಿ' ರಾಮಣ್ಣನವರ ಪ್ರಮುಖ ಕತೆಗಳಲ್ಲಿ ಒಂದು. ಇದರ ಒಂದು ಪಾತ್ರ ಜೋಯಿಸರು

ಇಂತಹ ಸ್ಥಿತಿಯ ಪ್ರತಿನಿಧಿ. ಎಲ್ಲ ಅಮಾನವೀಯ ವಿಷಯದಲ್ಲೂ ಉನ್ನತ ಶಿಖರದಲ್ಲಿರುವ ಈತ, ಕಕರನಂತಹ ತಿರಸ್ಕೃತ ವ್ಯಕ್ತಿಯಲ್ಲೂ ತನ್ನ ಉದ್ಯೋಗದ ಬಗೆಗೆ ಭರವಸೆಯನ್ನು ಹುಟ್ಟಿಸುವ ಪ್ರಯತ್ನ ಮಾಡಬೇಕಾಗಿದೆ. ತನ್ನ ಕುಟುಂಬದೊಳಗೆ ಇರುವ ದುರಂತವನ್ನು ಬಗೆ ಹರಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಇದೊಂದರಿಂದಲೇ ನಮಗೆ ಗೊತ್ತಾಗುತ್ತದೆ, ಕಕರನಂಥವರು ನಂಬಿರುವ ಜೋಯಿಸನ ಶಕ್ತಿಯು ಡಾಂಭಿಕವಾದುದು. ಆದರೆ ಇಂಥ ಡಾಂಭಿಕ ಅರಿವನ್ನು ತನ್ನ ಉಳಿವಿಗಾಗಿ ಬಳಸಿಕೊಳ್ಳುವ ವ್ಯವಸ್ಥೆಯು, ತನ್ನೊಳಗೆ ಇರುವ ಗೊಂದಲಗಳನ್ನು ಆತಂಕಗಳನ್ನು ಭವಿಷ್ಯದ ಒಳಿತಿಗಾಗಿ ಬಚ್ಚಿಟ್ಟುಕೊಳ್ಳುತ್ತದೆ ಎಂಬುದನ್ನು ಶೋಷಿತ ಆವರಣವನ್ನು ಇದಿರಾಗಿಸಿ ಹೇಳುವ ಈ ಕತೆ ಕನ್ನಡದ ಶ್ರೇಷ್ಠ ಕತೆಗಳಲ್ಲಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿದೆ. ಸಾಮಾಜಿಕ ಸಾಂಸ್ಕೃತಿಕ ಕಾಳಜಿಯಿರುವ ಲೇಖಕ ಮಾತ್ರ ಇಂಥ ಕತೆ ಬರೆಯಲು ಸಾಧ್ಯ."[೨]

ಕಕರನ ಬದುಕಿನ ಅಳಿವು ಉಳಿವಿನ ಸಂದರ್ಭದಲ್ಲಿ ಹಣದ ಬೇಡಿಕೆಯನ್ನು ಕೇವಲವಾಗಿ ತೆಗೆದುಕೊಳ್ಳುವ ಜೋಯಿಸರು, ಈಗ ತಕ್ಷಣದಲ್ಲಿ ಈಡೇರಿಸಬೇಕಾದ ತಮ್ಮ ಬೇಡಿಕೆಯನ್ನು ಅವನ ಮುಂದಿಡುತ್ತಾರೆ. ಉಳಿದ ಸಂದರ್ಭಗಳಲ್ಲಿ ಅವನ ಅಸ್ತಿತ್ವವು ಮೈಲಿಗೆಯಾದರೆ, ಈಗ ಭಗವಂತನ ದೃಷ್ಟಿಯಲ್ಲಿ ಎಲ್ಲ ಒಂದೇ ಆಗಿ ಕಾಣುತ್ತದೆ. ಹೀಗೆ ನಮ್ಮ ಗ್ರಾಮೀಣ ಬದುಕಿನಲ್ಲಿ ಏರುಪೇರುಗಳಿದ್ದರೂ ಸಹ ಒಂದು ವ್ಯವಸ್ಥೆಯ ಕಪಿಮುಷ್ಟಿಯಲ್ಲಿ ಜನರು ಅನೇಕ ಸಂಕಷ್ಟ ಅನುಭವಿಸುತ್ತಾರೆ. ಜಾತಿ ವ್ಯವಸ್ಥೆ ಇದಕ್ಕೆ ಮುಖ್ಯ ಕಾರಣವಾಗಿದೆ.

ತಾಳಿಕೊಳ್ಳುವಿಕೆಯನ್ನು ಕಳೆದುಕೊಳ್ಳುತ್ತಿರುವ ಹಳ್ಳಿಯ ವಿಘಟನೆಯ ಪ್ರಕ್ರಿಯೆಯನ್ನು ತೀವ್ರಗೊಳಿಸುವ ಸಂಸ್ಥೆಗಳೆಂದು 'ಪೋಲಿಸರು', 'ನ್ಯಾಯಾಲಯಗಳು', 'ಸರ್ಕಾರಿ ಆಸ್ಪತ್ರೆಗಳು' ಹಾಗೂ 'ಖಾಸಗಿ ಡಾಕ್ಟರು' ಇವುಗಳನ್ನು ರಾಮಣ್ಣನವರು ಗುರುತಿಸಿದಂತಿದೆ. ಪ್ರಜಾಪ್ರಭುತ್ವ ಮತ್ತು ಮೂರು ಮಂಗಗಳು, ಗಾಂಧಿ, ಸಂತೆಯೊಳಗೊಂದು ಮನೆಯ ಮಾಡಿ ಹಾಗೂ ಕರುಣಾಳು ಬಾ ಬೆಳಕೆ ಈ ಕಥೆಗಳಲ್ಲಿ ಸಾಮಾಜಿಕ ಕಥಾಲೋಕದ ಸ್ವರೂಪ ಬದಲಾಗುತ್ತದೆ. ಹಳ್ಳಿ ತನ್ನೊಳಗಿನ ವಿರೋಧಗಳನ್ನು ಇನ್ನೂ ಮುಟ್ಟುಕೊಂಡು ಎಲ್ಲಾ ಕ್ಷೇಮ 'ಭೂಮಿಯಲ್ಲಿ' ಎಂಬ ನಿಲುವನ್ನು ನೆಚ್ಚಿ ನಿಲ್ಲಲಾಗದು. ಗರ್ಜನೆಕಥೆಯ ನಾಯಕ ಮರಿನಂಜ ಸಿಡಿಯಲು ಸನ್ನದ್ಧನಾಗುತ್ತಾನೆ. ಅವನ ಅಸಹಾಯಕತೆ ಪ್ರತಿಭಟನೆಯಲ್ಲಿ, ಪ್ರತಿರೋಧದಲ್ಲಿ, ಸಂಸ್ಥಾಪನೆಯಲ್ಲಿ ಕೊನೆಗೊಳ್ಳುತ್ತದೆ. ಇದು ಈ ಕಥೆಯಲ್ಲಿ ದಿಕ್ಕು ತಪ್ಪಿದ ಮೈಪರಚಿಕೊಳ್ಳುವಂತೆ ಭಾಸವಾಗುತ್ತದೆ. ಕೋತಿಯೊಡನೆ ಮರಿನಂಜನ ಪೈಪೋಟಿಯನ್ನು ನೋಡಿದಾಗ ಇವನ ಸ್ಫೋಟ ಕೇವಲ ಯೌವನೋನ್ಮದದ ಆಟವಿರಬಹುದೇ ಎನಿಸುವುದು ಸಹಜ. ಆದರೆ ಈ ಕಥೆ ಅವನನ್ನು ಹೇಗಾದರೂ ಅತಂತ್ರಗೊಳಿಸಿಯೇ ಬಿಡುಗಡೆ ಮಾಡಲು ಯೋಚಿಸುತ್ತದೆ. ಹೀಗಾಗಿ ಕುಡುಗೋಲ ಬಾಯಿ ಮೇಲೆ ಬೆರಳಾಡಿಸಿ ಮುಂದಕ್ಕೆ ನಡೆದ. ಮರಿನಂಜನಿರದಿರುವ ಹಳ್ಳಿಯಲ್ಲಿ ಪಲ್ಲಟ ಕಟ್ಟಿಟ್ಟದ್ದು."[೩]

ಇವರದೆ ಇನ್ನೊಂದು ಕತೆಯಾದ 'ಅಭಿಮಾನ' ಕತೆಯಲ್ಲಿ ಗ್ರಾಮೀಣ ಬದುಕು ಮತ್ತು ಸಮಾಜ ವ್ಯವಸ್ಥೆಗೆ ಸಂಬಂಧಿಸಿದಂತೆ ಕತೆಯ ಸಂದರ್ಭವನ್ನು ಈ ಕೆಳಕಂಡಂತೆ ಗುರುತಿಸಲಾಗಿದೆ :

"ಬೆಳಿಗ್ಗೆ ಚನ್ನಯ್ಯ, ಸಿದ್ದೇಗೌಡರು, ಯಾಲಕ್ಕಿಯ ಮನೆಯ ಹತ್ತಿರ ಖಾಲಿ ಪತ್ರಕ್ಕೆ ರುಜು ಹಾಕಿದ ವಿಷಯವನ್ನು ಖುದ್ದಾಗಿಯೇ ತಿಳಿಯಲೆಂದು ಕುತೂಹಲದಿಂದ ಹೋದಾಗ ಯಾಲಕ್ಕಿಯ ತಾಯಿ ಪುಟ್ಟಮ್ಮ

ಬಾಗಿಲ ಬಳಿ ಅಕ್ಕಿ ಸೋಸುತ್ತಿದ್ದವಳು, ಸಿದ್ದೇಗೌಡರು ತನ್ನ ಮನೆಯ ಬಾಗಿಲ ಬಳಿ ಬಂದುದನ್ನು ಕಂಡು ಗೌರವದಿಂದ ಅಕ್ಕಿಯ ಮೊರವನ್ನು ಕೆಳಗಿಟ್ಟು ಮೈತುಂಬ ಸೆರಗು ಹೊದ್ದು ಕೊಂಡು ಏನ್ರಪ್ಪಾ ಬಡವರ ಮನೆಗಂಟ ಪಾದ ಬೆಳಸಿಬುಟ್ರಿ ಎಂದು ಕೈ ಮುಗಿದು, ಜಗಲಿಯ ಮೇಲೆ ಚಾಪೆ ಹಾಸಿದಳು.

ಚನ್ನಯ್ಯ ಚಿಕ್ಕವ್ವೋ ಯಾಲಕ್ಕಿ ಎಲ್ಲಿ? ಒಳ್ಳೆ ಬುದ್ಧಿವಂತನಿಗೆ ಜನ್ಮಕೊಟ್ಟೆ ಎಂದು ನಗೆ ಆಡಿದ. ಅಷ್ಟು ಹೊತ್ತಿಗೆ ಸರಿಯಾಗಿ ಅಂಗಡಿಗೆ ಬೀಡಿ ತರಲು ಹೋಗಿದ್ದ ಯಾಲಕ್ಕಿ ಬಂದವನೆ ಗೌಡರಿಗೆ ಕೈಮುಗಿದು ಚನ್ನಯ್ಯನ ಕಡೆ ನೋಡಿ ಏನ್ನ ಅಪ್ಪಯ್ಯ, ಈ ಸುತ್ತ ಮುತ್ತಲಿಗೆಲ್ಲ ನೀನೊಬ್ಬನೇ ಅನ್ನು ಸೀಮೆ ಎಣ್ಣೆ ಬುದ್ಧಿವಂತ" ಎಂದ. ಇನ್ನೇನು ಮತ್ತೆ? ನಿನ್ನಂಗೆ ಜಪ್ತಿ ಮಾಡ್ತೀವಿ ಅಂತ ನೋಟಿಸ್ ಕೊಟ್ಟಿದ್ದೇ ತಡ ಓಡೋಗಿ ಅವರು ಹೇಳಿದ್ಕೆಲ್ಲ ಕೋಲೆ ಬಸವನಂಗೆ ತಲೆ ಆಡಿಸಿಬುಟ್ಟ; ಐನೂರು ರೂಪಾಯಿ ಸಾಲ ಧರ್ಮದ ಬಡ್ಡಿಗೆ ಕೊಟ್ಟೆವ್ನಿ ಅಂದದಕ್ಕೆಲ್ಲ 'ಸೈ' ಅಂದುಬುಟ್ಟು ಖಾಲಿ ಪತ್ರಕ್ಕೆ ರುಜು ಗುಜರಾಯ್ಸಿ ಬಂದಿದ್ದೀ ಅಲ್ಲ... 'ಸೈ'

"ಬಂದಿದ್ದರೆ ಅದ್ಕೆ ...?"

"ಅದ್ಕೆ ಏನು ಅಂದ? ಛೇರ್ಮನ್ ಸಿದ್ದೇಗೌಡರ ಮೇಲೆ ಅವಿಶ್ವಾಸ ತರೋಕೆ ಒಬ್ಬನ ರುಜು ಸಾಕಾಗೋದಿಲ್ಲ ನೀನೊಬ್ಬ ಹಾಕಿದರೆ ನಮ್ಮ ಬೇಳೆಕಾಳು ಬೇಯ್ತದೆ ಅಂತಾರೆ, ನೀನು ಹಾಕದೆ ಹೋದ್ರೆ ಹೆಂಗಿದ್ರೂ ಖಾಲಿ ಪತ್ರ ಅದೆ, ಜುಟ್ಟು ಹಿಡಿದು ನಿಗಿರ್ಸುತಾರೆ!

"ಧರ್ಮ ಯಾವತ್ತಿದ್ರೂ ಸಾಯೋದಿಲ್ಲ. ನನ್ನ ಮನೆ ಮುಳುಗೂ ಸಮಯ ಬಂದ್ರೂ ಛೇರ್ಮನ್ನರ ವಿರೋಧವಾಗಿ ನಾನು ರುಜು ಹಾಕೋದಿಲ್ಲ. "ನಂಬಬೋದೋ?" ಚನ್ನಯ್ಯ ಅನುಮಾನ ರಾಗ ಎಳೆದ. ಯಾಲಕ್ಕಿ ಯಾವಾಗಲೂ ಕಡ್ಡಿ ಮೂರು ತುಂಡು ಆಗುವಂತೆ ಮಾತನಾಡುವವನು.

"ಹೂ, ಕಣ್ಲೇ ಅಂದ್ರೆ ನಾನು ಅಪ್ಪನಿಗೆ ಹುಟ್ಟೆವ್ನಿ, ಅಡ್ನಾಡೀಗೆ ಹುಟ್ಟಿಲ್ಲ. ಜೀವಸಹಿತ ಇರೊ ನಮ್ಮವ್ವನಾಣೆ. ಉರಿತಾ ಇರೋ ಸೂರ್ಯನ ಆಣೆ, ನಮ್ಮೂರ ಮಾನ ಕಳೆಯೋದಿಲ್ಲ. ಛೇರ್ಮನ್ ಸಿದ್ದೇಗೌಡ್ರ ವಿರುದ್ಧ ರುಜು ಹಾಕೋದಿಲ್ಲ." ಎಂದು ಖಡಾಖಂಡಿತವಾಗಿ ನುಡಿದಾಗ ಗೌಡರ ಮನಸ್ಸು ಕೃತಜ್ಞತೆಯಿಂದ ತುಳುಕಿತು.

"ಯಾಲಕ್ಕಿ ನಿನ್ನ ಮೇಲೆ ನನ್ಗೆ ನಂಬಿಕೆ ಇದ್ದೇ ಅದೆ. ನೆನ್ನೆ ದಿನ ನಡೆದ ವಿಚಾರ ಕಿವಿಗೆ ಬಂದು, ಏನೇನೋ ಗುಲ್ಲು ಊರಲೆಲ್ಲಾ ಕುಣಿತಾ ಅದಲ್ಲ. ಅದ ನಿನ್ನೇ ಕೇಳುವ ಅಂತ ಬಂದೆ. ಬಾ ಇಷ್ಟು ತಿಳ್ಕೊ ನನ್ನ ಮಾನ ಮರ್ಯಾದೆ ನಿನ್ನ ಕೈಲಿದೆ ನೀರುಗಾರ ಹಾಕು, ಹಾಲುಗಾರ ಹಾಕು ಎಂದು ಹೇಳುವಾಗ ಅವರ ಕಣ್ಣು ಗುಡ್ಡೆಗಳು ನೀರಿನಲ್ಲಿ ತೇಲಿದುವು."[೪]

ಸಿದ್ದೇಗೌಡರು ಮನೆಗೆ ಬಂದಾಗ ಯಾಲಕ್ಕಿಯ ತಾಯಿ ಪುಟ್ಟ ತಾಯಮ್ಮ ಏನೋ ಕೆಲಸದಲ್ಲಿದ್ದವಳು ಗೌಡರನ್ನು ನೋಡಿ ಮೈತುಂಬ ಸೆರಗು ಹೊದ್ದುಕೊಂಡಿದ್ದು ಗೌಡರಿಗೆ ಕೊಡುವ ಗೌರವ ಮತ್ತು ಗೌಡರ ಬಗ್ಗೆ ಇರುವ ಒಳ್ಳೆಯ ಅಭಿಪ್ರಾಯವನ್ನು ಸೂಚಿಸುತ್ತದೆ. ತಾಯಿ ಪುಟ್ಟತಾಯಮ್ಮ ಅಕ್ಷರಸ್ಥಳಲ್ಲದಿದ್ದರೂ ಸಹ ಅವಳಲ್ಲಿ ಒಂದು ಮಾನವೀಯತೆಯ ಸಂಸ್ಕಾರವನ್ನು ಕಾಣಬಹುದು. ಇಂತಹ ಸಹಜವಾದ ಗುಣಗಳನ್ನು

ನಮ್ಮ ಗ್ರಾಮೀಣ ಸಂಸ್ಕೃತಿಯಲ್ಲಿ ಕಾಣಬಹುದಾಗಿದೆ. ನಮ್ಮ ಗ್ರಾಮೀಣ ಸಂಸ್ಕೃತಿಯಲ್ಲಿ ಕೆಲವು ಸಂಸ್ಕಾರಗಳು ಹುಟ್ಟಿನಿಂದಲೇ ಬಂದಿರುವವುಗಳಾಗಿವೆ. ಇಂತಹ ಸಾಮಾನ್ಯ ಸ್ತ್ರೀಯರೂ ಸಹ ತಮ್ಮ ಒಳ್ಳೆಯ ನಡತೆ ಗುಣಗಳಿಂದ ಯಾವ ಅಕ್ಷರಸ್ಥ ಸ್ತ್ರೀಗೂ ಕಡಿಮೆಯಿಲ್ಲ ಎಂಬ ದಿಟ್ಟತನವನ್ನು ಇವರಲ್ಲಿ ಕಾಣಬಹುದಾಗಿದೆ. ಯಾಲಕ್ಕಿಯೂ ಸಹ ಗೌಡರ ವಿರುದ್ಧವಾಗಿ ಪತ್ರಕ್ಕೆ ರುಜುವನ್ನು ಹಾಕುವುದಿಲ್ಲ. ಇವರು ಒಂದು ವ್ಯವಸ್ಥೆಯಲ್ಲಿ ಇದ್ದರೂ ಸಹ ಮಾನವೀಯ ಮೌಲ್ಯಗಳನ್ನು ನಮ್ಮ ಗ್ರಾಮೀಣ ಜನರಲ್ಲಿ ಕಾಣಬಹುದಾಗಿದೆ. ಇಂತಹ ಮೌಲ್ಯಗಳು ಇಂದಿನ ನಮ್ಮ ಸಂಸ್ಕೃತಿಯಲ್ಲಿ ಮುಖ್ಯವಾಗಬೇಕು ಮತ್ತು ನಮ್ಮ ಗ್ರಾಮೀಣರ ಬದುಕು ಹಸನಾಗಬೇಕು. ಇಲ್ಲಿ ಯಾಲಕ್ಕಿಯು ಒಬ್ಬ ವ್ಯಕ್ತಿಯ ಮೇಲೆ ತನ್ನ ನಿಷ್ಠೆಯನ್ನು ಇಟ್ಟಿರುವುದನ್ನು ಯಾವುದೇ ಸಂಶಯವಿಲ್ಲದೆ ವ್ಯಕ್ತಪಡಿಸುವುದನ್ನು ಮುಗ್ಧ ಜನರ ಮನಃಸ್ಥಿತಿಯನ್ನು ತೋರಿಸಿಕೊಡುತ್ತದೆ.

ಇಲ್ಲಿ ಯಾಲಕ್ಕಿಯು ಒಬ್ಬ ವ್ಯಕ್ತಿಯ ಮೇಲೆ ತನ್ನ ನಿಷ್ಠೆಯನ್ನು ಇಟ್ಟಿರುವುದನ್ನು ಯಾವುದೇ ಸಂಶಯವಿಲ್ಲದೆ ವ್ಯಕ್ತಪಡಿಸುವುದನ್ನು ಮುಗ್ದ ಜನರ ಮನಃಸ್ಥಿತಿಯನ್ನು ತೋರಿಸಿಕೊಡುತ್ತದೆ.

ಇಲ್ಲಿ ಊರಿನ ರಾಜಕೀಯದಲ್ಲಿ ನಮ್ಮ ಬಡಜನರು ನರಳುವುದನ್ನು ಈ ಕತೆಯಲ್ಲಿ ಕಾಣಬಹುದು. ಅದೇ ಜನರು ತಮ್ಮ ಒಳಿತಿಗಾಗಿ ತಿರುಗಿ ಬಿದ್ದಾಗ ಊರಿನಲ್ಲಿ ಹಿರಿಯರು ಎನಿಸಿಕೊಂಡವರು ಸುಮ್ಮನಾಗುವುದನ್ನು ಕಾಣಬಹುದು.

ಇವರ ಇನ್ನೊಂದು ಕತೆಯಾದ 'ಗರ್ಜನೆ' ಕತೆಯಲ್ಲಿ ಗ್ರಾಮೀಣ ಬದುಕು ಮತ್ತು ಸಮಾಜ ವ್ಯವಸ್ಥೆಯನ್ನು ಕುರಿತಂತೆ ವಿವರಣೆಯನ್ನು ನೀಡಲಾಗಿದೆ.

ಇವರದೇ ಆಗಿರುವ ಗರ್ಜನೆ ಕತೆ ಗ್ರಾಮೀಣ ಬದುಕು ಮತ್ತು ಸಮಾಜ ವ್ಯವಸ್ಥೆಯನ್ನು ಕುರಿತಂತೆ ಅನೇಕ ವಿಷಯಗಳನ್ನು ಇದರಲ್ಲಿ ಕಂಡುಕೊಳ್ಳಲಾಗಿದೆ. ನಮ್ಮ ಭಾರತಕ್ಕೆ ಸ್ವಾತಂತ್ರ್ಯ ಬರುವುದಕ್ಕೆ ಮುಂಚೆ ಜಾತಿ ವ್ಯವಸ್ಥೆಯು ತುಂಬಾ ಪ್ರಭಾವ ಬೀರಿರುವುದನ್ನು ನಮ್ಮ ಗ್ರಾಮಗಳಲ್ಲಿ ಕಾಣಬಹುದು. ಮರಿನಂಜ ಕೆಳಜಾತಿಯಲ್ಲಿ ಹುಟ್ಟಿರುವುದರಿಂದ ಅವನನ್ನು ಎಲ್ಲರೂ ಕೀಳಾಗಿ ಮಾತನಾಡಿಸುತ್ತಾರೆ. ಹೀಗೆ ಅವನಿಗೆ ರಕ್ಷಣೆ ಕೊಡಲು ಯಾರೂ ಸಹ ಮುಂದೆ ಬರುವುದಿಲ್ಲ. ಆದರೆ ಈಗಿನ ನಮ್ಮ ಗ್ರಾಮಗಳಲ್ಲಿ ಜಾತಿ ವ್ಯವಸ್ಥೆಯಲ್ಲಿ ಬದಲಾವಣೆಗಳು ಆಗಿರುವುದನ್ನು ಕಾಣಬಹುದಾಗಿದೆ. ಹಲವಾರು ಕಾನೂನುಗಳು ಬಂದು ಸಾಮಾನ್ಯ ಜನರಿಗೆ ರಕ್ಷಣೆ ಕೊಡುವುದನ್ನು ಕಾಣಬಹುದಾಗಿದೆ. ಗಿರಿಜಕ್ಕನ ಮಾತಿನಿಂದ ಮರಿನಂಜನ ಮನಸ್ಸಿನಲ್ಲಿ ತನ್ನ ತಂದೆಯ ಬಗ್ಗೆ ತಿಳಿದುಕೊಳ್ಳಲೇಬೇಕೆಂಬ ವಿಶೇಷವಾದ ಆಸಕ್ತಿ ಉಂಟಾಗಿರುವುದು ಇಲ್ಲಿ ನಾವು ಗಮನಿಸಬಹುದು. ಮರಿನಂಜ ಇಲ್ಲಿ ತನ್ನ ತಂದೆ ಇವನೇ ಎಂಬ ಸತ್ಯಾಂಶ ಅರಿತಿದ್ದರೂ ಸಹ ಸಮಾಜದಲ್ಲಿ ತನ್ನ ಜಾತಿ ವ್ಯವಸ್ಥೆಯ ಕಟ್ಟುಪಾಡುಗಳಿಂದಾಗಿ ತನ್ನ ಮನದಾಳದ ಇಂಗಿತವನ್ನು ವ್ಯಕ್ತಪಡಿಸಲು ಅಶಕ್ತನಾಗಿರುವುದು ಕಂಡು ಬರುತ್ತದೆ. ಈಗಿನ ನಮ್ಮ ಗ್ರಾಮೀಣ ಸಂಸ್ಕೃತಿಯಲ್ಲಿ ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ ಹಳೆಯ ಪದ್ಧತಿಯ ವಿರುದ್ಧವಾಗಿ ಗ್ರಾಮೀಣ ಜನರ ನೇರ ಸಂಘರ್ಷಣೆಯನ್ನು ಕಾಣುತ್ತೇವೆ. ಈ ರೀತಿಯ ವಿಷಯಗಳಲ್ಲಿ ಯಾವುದೇ ಸಂಕೋಚವಿಲ್ಲದೆ ನೇರವಾಗಿ ಪ್ರಶ್ನಿಸಬಹುದಾದ ಸಂದರ್ಭವನ್ನು ಗಮನಿಸಬಹುದು. ಈ ನಮ್ಮ ಗ್ರಾಮೀಣರು ಆಧುನಿಕತೆಗೆ ಯಾವುದೇ ಎಗ್ಗಿಲ್ಲದಂತೆ ಹೊಂದಿಕೊಳ್ಳಬಹುದಾದ

ಪರಿಸ್ಥಿತಿ ನಿರ್ಮಾಣವಾಗಿರುವುದನ್ನು ಕಾಣುತ್ತೇವೆ. ಇದನ್ನು ನಮ್ಮ ಕತೆಗಾರರು ಸಮರ್ಥವಾಗಿ ಗುರುತಿಸಿರುವುದನ್ನು ಗಮನಿಸಲಾಗಿದೆ.

ಕೆಳಜಾತಿಯವನಾದ ಮರಿನಂಜ ಜಮೀನುದಾರನಿಗೆ ಹುಟ್ಟಿದರೂ ಸಹ ಕೆಳಜಾತಿಯವನಾದ್ದರಿಂದ ಅವನು ಸಮಾಜದಲ್ಲಿ ತಿರಸ್ಕರಿಸಲ್ಪಟ್ಟ ವ್ಯಕ್ತಿಯಾಗಿದ್ದಾನೆ. ಇಲ್ಲಿ ಕೆಳಜಾತಿಯವರಿಗೆ ಒಂದು ವ್ಯವಸ್ಥೆಯಾದರೆ ಜಮೀನುದಾರಿ ಪದ್ಧತಿಯ ಅಡಿಯಲ್ಲಿ ಸಿಲುಕಿದ ಮರಿನಂಜ ಸಮಾಜದಲ್ಲಿ ತಿರಸ್ಕೃತನಾಗುತ್ತಾನೆ. ಅವನು ಪ್ರತಿಭಟನೆ ಮಾಡಿದಾಗ ಸಮಾಜ ಅವನನ್ನು ಒಪ್ಪಿಕೊಳ್ಳುವ ಸ್ಥಿತಿಗೆ ಬರುತ್ತದೆ. ಒಂದು ವ್ಯವಸ್ಥೆ ಮಾನಸಿಕವಾಗಿ ಕೆಳವರ್ಗದ ಜನರನ್ನು ಹಿಂಸಿಸುತ್ತದೆ. ಅವರು ಪ್ರತಿಭಟನೆ ಮಾಡಿದಾಗ ಮೌನವಾಗಿ ಒಪ್ಪಿಕೊಳ್ಳುವ ಸ್ಥಿತಿಯನ್ನು ಕಾಣಬಹುದು.

ಇವರ ಇನ್ನೊಂದು ಕತೆಯಾದ 'ಹರಕೆಯ ಹಣ' ಒಂದು ಉತ್ತಮ ಕತೆ. ಇದು ಗ್ರಾಮ್ಯ ವಸ್ತುವನ್ನು ಒಳಗೊಂಡಿದೆ. ಒಂದು ನಿರ್ದಿಷ್ಟವಾದ ಪ್ರಾದೇಶಿಕ ಹಿನ್ನೆಲೆಯಲ್ಲಿ ಸಮಾಜದ ಬದುಕಿನ ಸ್ತರಗಳನ್ನು ಚಿತ್ರಿಸುತ್ತದೆ. ಇದು ಅಲಕ್ಷ್ಯಕ್ಕೀಡಾದ ಜನಾಂಗದ ಬದುಕಿನ ವಿವಿಧ ಸ್ತರಗಳನ್ನು, ಸಾಂಸ್ಕೃತಿಕ ಶೋಷಣೆಯ ಸೂಕ್ಷ್ಮಗಳನ್ನು ಇಲ್ಲಿ ಲೇಖಕರು ಅಭಿವ್ಯಕ್ತಿಸಿದ್ದಾರೆ. ಬಹುಪಾಲು ಕೆಳವರ್ಗದವರು ಅಲ್ಪಸ್ವಲ್ಪ ವಿದ್ಯಾಭ್ಯಾಸ ದಿಂದ, ಆಧುನಿಕ ವಿಚಾರಗಳಿಂದ ಎಚ್ಚೆತ್ತ ಬೆರಳೆಣಿಕೆಯ ವ್ಯಕ್ತಿಗಳನ್ನು ಕಾಣಬಹುದು. ಕತೆಯ ಸುಮಾನಿ ಯಂತಹ ಪಾತ್ರ ಅವನು ತನ್ನ ಜನಾಂಗದ ಹಕ್ಕುಗಳಿಗೆ ಹೋರಾಡಲು ಮುಂದಾದರೆ ಅವನ ಜನರೇ ಅವನಿಗೆ ಬೆಂಬಲ ನೀಡುವುದಿಲ್ಲ.

ಇಲ್ಲಿ ಒಂದು ಆಚರಣೆಯ ಸಂದರ್ಭದಲ್ಲಿ ಜಾತಿ ಜಾತಿಗಳಲ್ಲಿ ಭಿನ್ನಾಭಿಪ್ರಾಯಗಳನ್ನು ಕಾಣಬಹುದು. ಬದುಕಿನ ಜೊತೆಯಲ್ಲಿ ಒಂದು ವ್ಯವಸ್ಥೆಯ ಮುಖಾಮುಖಿಯನ್ನು ಕಾಣಬಹುದು. ಈ ಕತೆಯ ಸಂದರ್ಭದ ವಿವರಣೆಯನ್ನು ಕೆಳಕಂಡಂತೆ ಗುರುತಿಸಲಾಗಿದೆ. ಮತ್ತು ಸುಮಾನಿಯಂತಹ ವಿದ್ಯಾವಂತ ಪ್ರತಿಭಟಿಸಲು ಹೋದಾಗ ಅವನ ಜನರು ಅವನಿಗೆ ಸಹಾಯ ಮಾಡುವುದಿಲ್ಲ. ವಿವರಣೆ ಈ ರೀತಿ ಇದೆ.

"ಸುಮಾನಿ ಮೂರುಜನ ಗುಡ್ಡರನ್ನು ಹುಚ್ಚಮ್ಮನ ಗುಡಿಯಲ್ಲಿ ಪರ ಆದ ಮಾರನೆಯ ದಿನ ರಾತ್ರೊ ರಾತ್ರಿ ಸೇರಿಸಿ ಅವರ ಕಿವಿಗೆ ಚೆನ್ನಾಗಿ ಬೆಸೆದ "ಈ ಸಾರಿ ದಂಡಿಗಮ್ಮಗೆ ಹರಕೆಯ ಹಣ ಏನೂ ಇಲ್ಲಅಂದ್ರೆ ಹತ್ತೋ ಹನ್ನೆರಡು ಸಾವಿರ ಬಂದಿದೆ. ಪೂಜೆ ಮಾಡೋರು ನಾವು, ಕೊಂಡ ಹಾಯೋರು ನಾವು, ದಂಡಿಗಮ್ಮ ನಮ್ಮ ಮನೆದೇವರು, 'ಮೂಲ ದೇವರು' ಎಂದ ಪುಣ್ಯಾತ್ಮ ಇಷ್ಟಕ್ಕೆ ನಿಲ್ಲಿಸದೆ ಚರಿತ್ರೆಯನ್ನೆಲ್ಲಾ ಅರೆದು ಕುಡಿದೋನಂಗೆ. "ನಂಗೇನೋ ಹಿಂಗನ್ನಿಸ್ತದಪ್ಪ ಮಂಡ್ಯ ಡಿಸ್ಟ್ರಿಕಲ್ಲೇ ಎಲ್ಲೂ ನಮ್ಮೋರು ಪೂಜಾರಿಗೋಳಿಲ್ಲ. ಒಕ್ಕಲಿಗರ ದೇವರ್ಗೆ ಹೊಲೇರ್ರು ಪೂಜಾರಿ ಅಂದ್ರೆ ನಂಬೂಕಾದಾದಾ! ಕೇರಿಗೆ, ಬಾವಿಗೆ ಹೋಟ್ಲುಗೆ ನಮ್ಮ ಕೂಡಿಸ್ದೆ ಇರೋ ಈ ಗೌಡಗೊಳು ಹೆಂಗೆ ನಮ್ಗೆ ಗುಡ್ಡರ ಮಾಡಾರು?"

ಮೊದಲು ಈ ಊರ ಮಲ್ಲನಾಯಕ ಅಂಥ ನಂಜಾತಿ ಪಾಳೆಗಾರನೇ ಆಳ್ತಾಯಿದ್ದ. ದಂಡಿಗಮ್ಮನೇ ಅವನ ಮನೆ ದೇವು. ಅವನ ಕೈ ಬಿದ್ದೋದ ಮೇಲೆ ನಂ ಎಲ್ಲಾರ್ನೂ ಈ ಗೋಡುಗೋಳು ಊರಿಂದಾಚೆಗೆ ಓಡ್ಸಿ, ನಂಮನೆ ಮಠ ಕಿತ್ತುಕೊಂಡು, ನಂ ಗುಡೀನೂ ತಮ್ಮದೇ ಅಂದ್ಕೊಂಡು ಗುಡ್ಡನ ಬದಲಾಯಿಸಿದ್ರೆ

ಹೊಸ ಗುಡ್ಲ ಕೊಂಡ ಹಾಯುವಾಗ ರಕ್ತ ಕಕ್ಕೊಂಡು ಸತ್ತೋಯ್ತಾನೆ ಅಂತ ಹೆದರ್ಕೊಂಡು ನಂಜನಾನೇ ಗುಡ್ಡರಾಗಿ ಬುಟ್ಕಂಡ್ ಬಂದೆವ್ರೆ. ಇಲ್ದೆ ಹೋದ್ರೆ ಬಿಡೋರೆ! ಅದ್ಕೆ ಈಗ ನಾ ಹೇಳೋದು ಹರಕೆ ನಮ್ ಜಾತಿಯೋರ ಕೈಗೇ ಬರಬೇಕು. ಎಷ್ಟು ದಿನ ಅಂತ ಇವರ ತಾವು ಕೈ ಚಾಚುಕೊಂಡು, ಕೈ ಮುಗ್ಕೊಂಡು ಕಾಲ ಹಾಕೋದೂ ಅಂತ.

ಮೊನ್ನೆದಿನ ಆ ಹೋಟ್ಲು ನಿಂಗಣ್ಣ ಬಂದು ಟೀ ಕೊಡು ಅಂದ್ರೆ ಗೋಡೆ ಆಚೆ ಇರೊ ಗೂಡೆಲಿದ್ದ ಗತನಾತ ಬಡೀತಿದ್ದ ಸಿಲ್ವಾರದ ಲೋಟತಕ್ಕೊ ಉಯ್ದು ಕೊಡ್ತೀನಿ ಅಂದ. ನಿನ್ ಟೀ ನೀನೆ ಕುಡುಕೊ, ಆ ಲೋಟದಲ್ಲಿ ಕುಡಿಯೋಕೆ ನಾವು ಮನುಷ್ಯನಿಗೆ ಹುಟ್ಟೀವ್ನಿಯಂತ ಮುಖಕ್ಕೆ ಬಾರಿಸಿದಂಗೆ ಅಂದುಬುಟ್ಟ ಕೊರಕೊರನೆ ಕಡಿದು ಹೊಂಟು ಬಂದೆ.''[೫]

ಸ್ವಾತಂತ್ರ್ಯಪೂರ್ವದಲ್ಲಿ ಅಸ್ಪೃಶ್ಯತೆ ಎಷ್ಟರಮಟ್ಟಿಗೆ ಇತ್ತೆಂದರೆ ದಲಿತರು ಸವರ್ಣೀಯರಿಂದ ಆತಿಥ್ಯ ಸ್ವೀಕರಿಸುವುದಕ್ಕೆ ಅವಕಾಶ ಇರಲಿಲ್ಲ. ಇದಕ್ಕೆ ಉದಾಹರಣೆ ಬೆಸಗರಹಳ್ಳಿ ರಾಮಣ್ಣನವರ 'ಹರಕೆಯ ಹಣ' ಕತೆಯಲ್ಲಿ ಬರುವ ಸುಮಾನಿ ಎಂಬ ದಲಿತ ಯುವಕ ದಿಟ್ಟತನದಿಂದ ಅಸ್ಪೃಶ್ಯತೆಯನ್ನು ಎದುರಿಸಲು ಮುಂದಾಗುತ್ತಾನೆ. ಸ್ವಾತಂತ್ರ್ಯಾನಂತರದಲ್ಲಿ ವಿದ್ಯಾಭ್ಯಾಸದ ಫಲವಾಗಿ ಹಳೆಯ ಕಂದಾಚಾರಗಳಿಗೆ ತಿಲಾಂಜಲಿಯನ್ನು ನೀಡಿ ಬೇರೆ ಬೇರೆ ನೆಲೆಗಳಿಂದ ಸಾಮಾಜಿಕವಾಗಿ ಮುನ್ನುಗ್ಗುತ್ತಿರುವುದನ್ನು ಕಾಣಬಹುದು. ಇಲ್ಲಿ ಬರುವ ದಲಿತ ಸುಮಾನಿಯ ದಿಟ್ಟತನ ನೋಡಬಹುದಾಗಿದೆ. ಅಸ್ಪೃಶ್ಯತೆ ಬಗ್ಗೆ ಈ ಯುವಕ ಸ್ವಲ್ಪವೂ ಎಗ್ಗಿಲ್ಲದೆ ಬಹಿರಂಗಪಡಿಸುವುದನ್ನು ಕಾಣಬಹುದು.

''ಇತರ ನವ್ಯ ಕಥೆಗಾರರಿಗಿಂತ ದೇವನೂರು ಮಹಾದೇವರು ವಯಸ್ಸಿನಲ್ಲಿ ಅತ್ಯಂತ ಕಿರಿಯ ವ್ಯಕ್ತಿ. ಇವರ ಕಥಾ ಸಾಹಿತ್ಯ ಗಾತ್ರದ ದೃಷ್ಟಿಯಿಂದ ತುಂಬಾ ಚಿಕ್ಕದು. ಆದರೆ ಗುಣದ ದೃಷ್ಟಿಯಿಂದ ನೋಡಿದಾಗ ಇವರ ಕಥಾ ಸಾಹಿತ್ಯಕ್ಕೆ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ವಿಶಿಷ್ಟ ಸ್ಥಾನವಿದೆ. ಇವರ ಕತೆಗಳು ಸಾಮಾಜಿಕವಾದ, ಆರ್ಥಿಕವಾದ ಅಸಮಾನತೆಗಳನ್ನು ಚಿತ್ರಿಸುತ್ತವೆ. ಹರಿಜನರಲ್ಲಿಯೇ ಇರುವ ಎರಡು ವರ್ಗದ ಜನರ ದೈನಂದಿನ ಬದುಕಿನ ವಿರೋಧಾಭಾಸಗಳನ್ನು, ಜಮೀನುದಾರೀ ಪದ್ಧತಿಯ ಯಜಮಾನರ ಶೋಷಣೆ ಹಾಗೂ ಕ್ರೌರ್ಯಗಳನ್ನು, ವಿದ್ಯಾವಂತ ಹರಿಜನ ಯುವಕರ ಕ್ರಾಂತಿಕಾರೀ ಪ್ರತಿಭಟನೆಯನ್ನು ಅವಿದ್ಯಾವಂತ ಹರಿಜನ ವ್ಯಕ್ತಿಗಳ ಅಸಹಾಯಕತೆಯನ್ನು ಇವರ ಕಥೆಗಳು ಪ್ರಧಾನವಾಗಿ ಚಿತ್ರಿಸುತ್ತವೆ.

ದೇವನೂರು ಮಹಾದೇವರ 'ಮೂಡಲ ಸೀಮೆಯಲ್ಲಿ ಕೊಲೆಗಿಲೆ ಮುಂತಾಗಿ' ಇವರ ಅತ್ಯುತ್ತಮ ಕಥೆಗಳಲ್ಲಿ ಒಂದು. ಈ ಕತೆಗೆ ರಂಗಪ್ಪನ ಅಲೆದಾಟವೇ ಕೇಂದ್ರ. ತನ್ನ ಹೆಂಡತಿ, ತನ್ನ ಮಗ ಮತ್ತು ಜೋಪಡಿ ಇಷ್ಟೆ ರಂಗಪ್ಪನ ಆಸ್ತಿ. ಮುಂದಿನ ಊಟಕ್ಕೆ ಗತಿ ಇಲ್ಲ. ನೆರವಾಗಲು ಗೌಡರಿದ್ದಾರೆ. ಆದರೆ ಅವರು ಒಂದು ದಿನ ಊರಲ್ಲಿದ್ದರೆ ಇನ್ನೊಂದು ದಿನ ಇರುವುದಿಲ್ಲ. ''ವಸಿ ಗೌಡರ್ನಾರು ನೋಡ್ಕಂಡು ಬತ್ತೀನಿ'' ಎಂದು ಹೊರಡುವ ಆತನಿಗೇ ಗೌಡರಿರುವ ಬಗ್ಗೆ ಅನುಮಾನವಿದೆ. ಆದರೂ ಹೋಗುತ್ತಾನೆ. ಗೌಡರು ಊರಿಗೆ ಒಬ್ಬಳು ನರ್ಸ್ ನೇಮಕ ಮಾಡಿಸಿ ತಮ್ಮ ಜಗುಲಿಯ ಮೇಲೆ ಅವಳಿಗೆ ಪ್ರತ್ಯೇಕ ಮನೆ ಮಾಡಿ ಕೊಟ್ಟಿದ್ದಾರೆ. ಹಾಗೆಯೇ ಊರಿಗೆ ದಲಿತ ಅಧ್ಯಾಪಕನೊಬ್ಬ ಬಂದಿದ್ದಾನೆ. ಆತ ದಲಿತನೆಂದು ಯಾರೂ ಕೀಳು ಬಗೆಯುವುದಿಲ್ಲ.

ಹಾಗೆಯೇ ಗ್ರಾಮೀಣ ಬದುಕು ಮತ್ತು ಸಮಾಜ ವ್ಯವಸ್ಥೆಯನ್ನು ದೇವನೂರರು ಆ ಕಾಲಘಟ್ಟದಲ್ಲಿ ಗುರುತಿಸಿರುವುದನ್ನು ಕಾಣಬಹುದು. ಅದರ ಒಂದು ಸಂದರ್ಭವನ್ನು ಈ ಕೆಳಕಂಡಂತೆ ಗುರುತಿಸಲಾಗಿದೆ.

"ಗೌಡರು ನಂಜಲಗೂಡಲ ದಿಕ್ಕಿಗೆ ಪ್ರಯಾಣ ಬೆಳೆಸಿದವರು ಬಂದವರೋ ಬಂದಿಲ್ಲವೋ ಎಂಬ ಅನುಮಾನ ರಂಗಪ್ಪನಿಗೂ ಇದ್ದುದೆ. ಕಳೆದವಾರ ನರ್ಸಮ್ಮನಿಗೆ ವರ್ಗವಂತೆ ಅಂತ ಊರೆಲ್ಲ ಮಾತಾಯಿತು. ಈಗ ಗೌಡರು ಬಂದಿದ್ದರೆ ಅವರೊಡನೆ ವರ್ಗ ಇಲ್ವಂತೆ ಕೂಡ ಇರುತ್ತಿತ್ತು. ವರ್ಷದ ಕೆಳಗೆ ಊರಿಗೆ ಒಬ್ಬಳು ನರ್ಸು ಬೇಕು ಅಂತ ಮೇಲಿನವರೊಡನೆ ಹೊಡೆದಾಡಿ ತಂದವರು ಅವರೆ ಅವರು ಮತ್ತು ಅವರಂಥವರು ಊರು ಒಂದು ಕೊಂಪೆ ಅಂತ, ಆಚೀಚಲವರು ಅಂದುಕೊಂಡರೆ ಒಂದಿಷ್ಟು ಸಹಿಸರು. ನರ್ಸಮ್ಮ ಬಂದಾಗ ಕಿರಸ್ತಾನದವಳು ಅಂತ ಯಾರೂ ಮನೆ ಕೊಡದಿದ್ದ ಪ್ರಸಂಗವನ್ನೆ ನೋಡಬಹುದು. ಗೌಡರೆ ತಮ್ಮ ಜಗಲಿ ಮನೇಗೆ ಬಾಡಿಗೇನು ಬೇಡ ಏನೂ ಬೇಡ ಅಂತಂತ ಬಿಟ್ಟುಕೊಟ್ಟು ಬಿಟ್ಟರು. ಅವಳು ಬಂದವಳೆ ಊರಿಗೊಂದಾಗಿ ಬಿಟ್ಟಳು. ಆಮೇಲೆ ಊರು ಅಂದರೆ ಮುಖ್ಯವಾಗಿ ಆ ಜಾತಿ ಈ ಜಾತಿ ಅನ್ನದೆ ಪಡ್ಡೆ ಹೆಣ್ಣು ಮಕ್ಕಳು ಅವಳಂತಾಗಲು ತೆವಳುತ್ತಿದ್ದುವು. ಅದು ಹಾಗಿರಲಿ, ಇಂದು ಊರಿಗೆ ಊರೆ ಲೈಟು ಬರೋ ಸಂಭ್ರಮದಲ್ಲಿ ಬೀಗುತ್ತಿದೆ. ಅದಕ್ಕೆ ಕಾರಣಪುರುಷರು ಗೌಡರು. ಅವರು ಹೋದ ಹೋದ ದಿಕ್ಕಿಗೆಲ್ಲ ಕೆಲಸಗಳು ತಂತಾನೆ ಹುಟ್ಟುಕೊಳ್ಳುತ್ತವೆ."[೬]

ದೇವನೂರು ಮಹಾದೇವರ 'ಮೂಡಲ ಸೀಮೇಲಿ ಕೊಲೆ ಗಿಲೆ ಮುಂತಾಗಿ' ಕತೆಯಲ್ಲಿ ಊರಿನ ಗೌಡರು ಮುಖ್ಯರಾಗುತ್ತಾರೆ. ಈ ಕತೆಯಲ್ಲಿ ಸ್ವಾತಂತ್ರ್ಯಪೂರ್ವದಲ್ಲಿ ಜಮೀನ್ದಾರಿ ಪದ್ಧತಿ, ಯಜಮಾನರ ಶೋಷಣೆ ಹಾಗೂ ಕ್ರೌರ್ಯಗಳನ್ನು ಅವಿದ್ಯಾವಂತ ಮತ್ತು ಹಿಂದುಳಿದ ಗ್ರಾಮೀಣ ಜನತೆ ವಿರೋಧಿಸಲಾರದೆ ಅಸಹಾಯಕರಾಗಿರುವುದು ಕಂಡು ಬರುತ್ತದೆ. ಈಗಿನ ಸ್ವಾತಂತ್ರ್ಯಾನಂತರದ ಬೆಳವಣಿಗೆಯನ್ನು ಗಮನಿಸಿದಾಗ ನಮ್ಮ ಗ್ರಾಮೀಣ ಜನತೆ ವಿದ್ಯಾವಂತರಾಗಿ ಪ್ರತಿ ಹಂತದಲ್ಲಿಯೂ ಎಲ್ಲ ಕ್ಷೇತ್ರಗಳಲ್ಲಿಯೂ ಇಷ್ಟವಿಲ್ಲದಿದ್ದರೆ ಪ್ರತಿಭಟಿಸುತ್ತಾರೆ. ತಮ್ಮ ಜೀವನದ ಭದ್ರತೆಗಾಗಿ ಹೋರಾಡುವುದನ್ನು ಕಾಣಬಹುದು.

ಹೀಗೆ ಗೌಡರ ಮೂಲಕವೇ ನಮ್ಮ ಗ್ರಾಮೀಣ ಬದುಕು ಮತ್ತು ಸಮಾಜ ವ್ಯವಸ್ಥೆ ಆಶ್ರಯಿಸಿರುವುದನ್ನು ಕಾಣಬಹುದಾಗಿದೆ.

ಗ್ರಾಮೀಣ ಬದುಕು ಮತ್ತು ಸಮಾಜ ವ್ಯವಸ್ಥೆಗೆ ಸಂಬಂಧಿಸಿದಂತೆ ಕತೆಗಳನ್ನು ಬರೆದವರಲ್ಲಿ ಕರೀಗೌಡ ಬೀಚನಹಳ್ಳಿಯವರು ಪ್ರಮುಖರಾಗುತ್ತಾರೆ. "ಇವರು ತಮ್ಮ ಕತೆಗಳಲ್ಲಿ ಖಚಿತ ವಿನ್ಯಾಸವೊಂದನ್ನು ಕಂಡುಕೊಂಡಿದ್ದಾರೆ. ನಮ್ಮ ನಾಡಿನ ಒಂದೊಂದು ನಿರ್ದಿಷ್ಟ ಪ್ರದೇಶದ ಬದುಕನ್ನು ಅಥವಾ ನಿರ್ದಿಷ್ಟ ಜಾತಿಯ ಜನರ ಬದುಕಿನ ಕ್ರಮಗಳನ್ನು ನಿಕಟವಾಗಿ ಆತ್ಮೀಯವಾಗಿ ಮತ್ತು ವಿಮರ್ಶಾತ್ಮಕವಾಗಿ ಮೂಲ ಸಾಮಗ್ರಿಯಂತೆ ಬಳಸಿಕೊಂಡಿದ್ದಾರೆ. ಇವರ ಕತೆಯಲ್ಲಿ ಪಾತ್ರಗಳು ನಗರದೊಳಗಿದ್ದರೂ ಅವುಗಳ ಮನಸ್ಸಿನ ತುಂಬ ಹಳ್ಳಿಯ ಬದುಕನ್ನು ಕಾಣಬಹುದು.

ಇವರ ಕತೆಗಳಲ್ಲಿ ಹಳ್ಳಿ ವಿಶಿಷ್ಟವೂ ಹೌದು, ಸಾಮಾನ್ಯವೂ ಹೌದು. ನೀರಾವರಿಯ ಅನುಕೂಲವಿಲ್ಲದ ಹೆಚ್ಚು ಮಳೆ ಬಾರದ, ಅತ್ಯಂತ ಶ್ರೀಮಂತರಿಲ್ಲದ, ಬೇಸಾಯವೇ ಮುಖ್ಯ ಕಸುಬಾದ, ಆಧುನಿಕ ಶಿಕ್ಷಣಕ್ಕೆ

ಹೆಚ್ಚಾಗಿ ತೆರೆಕೊಳ್ಳದ, ಹಳೆಯ ಮೈಸೂರು ಪ್ರಾಂತದ ಬಯಲು ಸೀಮೆಯ ಹಳ್ಳಿಯಾಗಿ ಇವರ ಕತೆಗಳಲ್ಲಿ ಕಾಣುತ್ತದೆ. ಹಳ್ಳಿಯ ಭೌಗೋಳಿಕ ವಿವರಗಳು ಈ ಕತೆಗಳಲ್ಲಿ ದೊರೆಯುವುದಾದರೂ ಹಳ್ಳಿಯ ಬಿಡಿ ಬಿಡಿ ವ್ಯಕ್ತಿಗಳ ಬದುಕಿನ ಚಿತ್ರಣವನ್ನು ನೀಡುವುದರಲ್ಲಿ ಕತೆಗಾರರಿಗೆ ಹೆಚ್ಚು ಆಸಕ್ತಿ.

ಶಿಕ್ಷಣದಿಂದ ಮಾತ್ರ ಹಳ್ಳಿಯ ಬದುಕಿನ ದುರ್ಭರತೆ ಇಲ್ಲವಾಗಲು ಸಾಧ್ಯ. ಮಕ್ಕಳು ತಮ್ಮ ಹಿರಿಯರಿಗಿಂತ ಉತ್ತಮ ಬದುಕನ್ನು ಕಾಣಬಲ್ಲರು. ತಾಯ್ತನವುಳ್ಳ ಹೆಣ್ಣು ಮಾತ್ರ ಕುಟುಂಬದ ಸೌಖ್ಯ ಮತ್ತು ತನ್ನ ಬದುಕಿನ ಕ್ಷೇಮವನ್ನು ಕಾಪಾಡಬಲ್ಲಳು. ವರ್ತಮಾನ ಎಷ್ಟೆ ಕಟುವಾಗಿ ಕಹಿಯಾಗಿ ಇದ್ದರೂ ಭವಿಷ್ಯ ಉತ್ತಮ ವಾಗಬಲ್ಲದು."[೬]

'ನೆನಪಲ್ಲ ವಾಸ್ತವ' ಇವರ ಒಂದು ಮುಖ್ಯವಾದ ಕಥೆ. ಇಲ್ಲಿ ಆಧುನಿಕತೆಯ ಪ್ರಭಾವದಿಂದ ಊರಿನಲ್ಲಿ ಹೊಸದಾಗಿ ಸ್ಕೂಲು ಪ್ರಾರಂಭವಾಗುತ್ತದೆ. ಹೊಸದಾಗಿ ಪ್ರಾರಂಭವಾದ ಸ್ಕೂಲಿಗೆ ಸೇರಲು ಮಕ್ಕಳ ಕುತೂಹಲ, ಹಿರಿಯರಿಗೂ ಸಹ ಶಿಕ್ಷಣದ ಬಗ್ಗೆ ಕುತೂಹಲ ಏರ್ಪಟ್ಟು ದನ ಕಾಯ್ದುಕೊಂಡು ಕುಳಿತಿದ್ದ ಮಕ್ಕಳನ್ನೆಲ್ಲ ಹಿರಿಯರು ಸ್ಕೂಲಿಗೆ ಸೇರಿಸಲು ಕಾತರರಾಗುತ್ತಾರೆ. ನಮ್ಮ ಗ್ರಾಮಗಳಲ್ಲಿ ಹೊಸದನ್ನು ಅಂದರೆ ಶಿಕ್ಷಣ ಬಂದಾಗ ಅದನ್ನು ಹೇಗೆ ನಮ್ಮ ಗ್ರಾಮದಲ್ಲಿ ಜನರು ಸ್ವೀಕರಿಸುತ್ತಾರೆ, ಎಂಬುದೊಂದು ನಮ್ಮ ಗ್ರಾಮೀಣ ಸಂಸ್ಕೃತಿಯ ಭಾಗವಾಗೇ ಕಾಣುತ್ತದೆ. ಮತ್ತು ಇಲ್ಲಿ ನಡೆಯುವ ಹಲವಾರು ಪಾರ್ಟಿಗಳು ಏರ್ಪಟ್ಟು ಕೆಲವರು ಸ್ಕೂಲು ಬೇಕು ಎಂದರೆ ಇನ್ನೂ ಕೆಲವರು ಬೇಡ ಎಂದು ತಕರಾರು ತೆಗೆಯುತ್ತಾರೆ. ಕೊನೆಗೆ ಒಂದು ಮನೆಯ ಜಗುಲಿಯ ಮೇಲೆ ಶಾಲೆ ಪ್ರಾರಂಭವಾಗುತ್ತದೆ. ಊರಿನ ಹಿರಿಯರ ದ್ವೇಷಗಳು ಇನ್ನೂ ಹೆಚ್ಚಾಗಿ ಕೊನೆಗೆ ಪೋಲಿಸ್ ಸ್ಟೇಷನ್ನಿನವರೆಗೂ ಹೋಗುವುದನ್ನು ಕಾಣಬಹುದು. ನಮ್ಮ ಗ್ರಾಮಗಳಲ್ಲಿ ಹೊಸದನ್ನು ಸ್ವೀಕರಿಸುವಾಗ ಆಗುವ ಬದಲಾವಣೆಯ ಜೊತೆ ಜೊತೆಗೆ ಜನರು ಪ್ರಮುಖ ಊರಿನ ಹಿರಿಯರಿಂದ ಹಲವು ತೊಂದರೆಗಳನ್ನು ಅನುಭವಿಸಬೇಕಾದ ಪರಿಸ್ಥಿತಿ ಬರುತ್ತದೆ. ಈ ಕತೆಯಲ್ಲಿ ಊರಿಗೆ ಹೊಸದಾಗಿ ಬಂದ ಶಾಲೆಗೆ ಹಿರಿಯರು ಮತ್ತು ಮಕ್ಕಳು ಹೇಗೆ ಪ್ರತಿಕ್ರಿಯಿಸುತ್ತಾರೆ ಎಂಬುದನ್ನು ಕತೆಯ ಸಂದರ್ಭದ ವಿವರಣೆಯನ್ನು ಈ ಕೆಳಕಂಡಂತೆ ಕೊಡಲಾಗಿದೆ.

"ಅವರೆಲ್ಲ ಊರೊಳಕ್ಕೆ ಬಂದಾಗ ಮುನಿಗೌಡರ ಜಗುಲಿಯ ಮೇಲೆ, ಕೆಳಗೆ ಬೀದಿಯಲ್ಲಿ ಜನಕಿಕ್ಕಿರಿದು ನೆರೆದಿದ್ದರು. ಅವರ ಸುತ್ತಮುತ್ತ ಕೊಂಚ ದೂರದಲ್ಲಿ ಪಂಚಾಯಿತಿ ಮೆಂಬರುಗಳಾದ ಕರಿಯನ ತಂದೆ ಕಾಡಣ್ಣ, ಕೆಂಚನ ತಂದೆ ನಿಂಗಣ್ಣ, ಓದೋ ಜೋರೇಗೌಡ, ಯಜಮಾನ್ ಮಾರೇಗೌಡ, ವಡ್ಡರ ತಿಮ್ಮಾಬೋವಿ, ತಿಗಳರ ಹೊನ್ನಯ್ಯ, ಗಾಣಿಗರ ಮಂಡಣ್ಣ, ಬೆಸ್ತರ ಚಿಕ್ಕತಿಮ್ಮ, ಕುರುಬರ ಸುಗ್ಗಯ್ಯ ಇನ್ನೂ ಮುಂತಾದ ಊರಿನ ಹಿರಿಯ ಮುಖಂಡರೆಲ್ಲಾ ಮಂಡಿಸಿದ್ದರು.

ಆಗಲೇ ತಗ್ಗಳ್ಳಿಗೆ ಪಾಠಶಾಲೆ ಬಂದಾಗ ಮುಂಗಾರು ಮಳೆ ಶುರುವಾಗಿತ್ತು. ಆಗ ತಾನೆ ಹೊಲಮಾಳದಲ್ಲಿ ಚಿಗುರುತ್ತಿದ್ದ ಗರಿಕೆ ಹುಲ್ಲಿಗೆ ದನಕರುಗಳನ್ನು ಬಿಟ್ಟುಕೊಂಡು ಕರಿಯ ಮತ್ತು ಅವನ ಸಂಗಡಿಗರು ಹೊಂಗೆ ಮರದ ನೆರಳಿನಲ್ಲಿ ಮರಕೋತಿ ಆಟ ಆಡುತ್ತಾ ತಲ್ಲೀನರಾಗಿದ್ದರು.

ಆಗಲೇ ಸಂಜೆ ತಂಪೊತ್ತಾಗುತ್ತಾ ಬಂದಿತ್ತು. ಊರಿನ ಕಡೆಯಿಂದ ನಿಂಗಣ್ಣನ ಮಗ ಕೆಂಚ ಹೊಲಮಾಳದತ್ತ ಓಡೋಡಿ ಬರುತ್ತಿದ್ದ. ಆತ ಓಡಿ ಬಂದ ಬಿರುಸು ಕಂಡು ಹೊಂಗೆ ಮರದ ಟೊಂಗೆಯಲ್ಲಿ ಕೋತಿಗಳ ಹಾಗೆ ನೇತಾಕಿಕೊಂಡು ಮರಕೋತಿ ಆಟ ಆಡುತ್ತಿದ್ದವರಿಗೆಲ್ಲಾ ಗಾಬರಿಯಾಯಿತು.

ಕೆಂಚ ಓಡಿ ಬಂದು ಎದುಸಿರು ಬಿಡುತ್ತಾ ನಿಂತು ಒಂದೇ ಉಸಿರಿಗೆ, "ಊರ್ಗೆ ಮೇಷ್ಟ್ರು ಬಂದವ್ರೆ. ನಿಮ್ಮನ್ನೆಲ್ಲಾ ಕರ್ಕೊಂಡ್ ಬರೋಕೆ ಹೇಳಿದ್ರು, ಬೇಗ ಬರ್ಬೇಕಂತೆ. ನಮ್ಮಪ್ಪ ನಿಮ್ಮಪ್ಪ ಎಲ್ರು ಅಲ್ಲವ್ರೆ" ಎಂದು ಹೇಳಿದ.

ಕರಿಯ ಕುತೂಹಲದಿಂದ "ಯಾಕೆ"? ಅಂದ.

"ಯಾಕೊ ಗೊತ್ತಿಲ್ಲ. ನಿಮ್ಮನ್ನೆಲ್ಲಾ ಕೂಗು ಅಂದ್ರು" ಎಂದ ಕೆಂಚ.

ಹೊಲಮಾಳದಲ್ಲಿ ದನಕರುಗಳು ಮುಂಗಾರಿನ ನೆಲದ ಹಸಿರಿಗೆ ಬಾಯಿ ಕಚ್ಚಿದ್ದವು. ಹೊತ್ತು ಮುಳುಗಿದ ಮೇಲೆ ಅವು ಮನೆಗೆ ಬರುತ್ತವೆ ಎಂಬುದು ಆ ಬಾಲಕರಿಗೆಲ್ಲಾ ಖಾತ್ರಿ ಇದ್ದದ್ದರಿಂದ ಆಡುತ್ತಿದ್ದ ಮರಕೋತಿ ಆಟವನ್ನು ಅರ್ಧಕ್ಕೆ ನಿಲ್ಲಿಸಿ ಕೆಂಚನ ಹಿಂದೆ ಊರಿನ ಕಡೆಗೆ ಎಲ್ಲರೂ ಹೊರಟರು."[೮]

ಇವರದೇ ಇನ್ನೊಂದು ಕತೆಯಾದ 'ದುಃಖಿಗಳು'ವಿನಲ್ಲಿ ರಾಮಯ್ಯನ ಬಡತನ ಮತ್ತು ತನ್ನ ಮಗನನ್ನು ವಿದ್ಯಾವಂತನನ್ನಾಗಿ ಮಾಡಿಸಬೇಕೆಂಬ ಬಯಕೆ ಕೊನೆಗೆ ಮಗನಿಗೆ ಫೀಸು ಕಟ್ಟಲು ಗದ್ದೆಯನ್ನು ಬೇರೆಯವರಿಗೆ ಒತ್ತೆಯಾಗಿಡುತ್ತಾನೆ. ಹಾಗೆ ಇಟ್ಟು ತನ್ನ ಮಗನ ಓದಿಗೆ ಬಹಳ ಉಪಕಾರವಾಯಿತೆಂದು ಹೇಳಿ ಗದ್ದೆಯನ್ನು ಕೊಂಡು ಕೊಂಡ ಬಸಪ್ಪನವರಿಗೆ ರಾಮಯ್ಯ ಕೃತಜ್ಞತಾ ಭಾವವನ್ನು ತೋರಿಸುವ ಸಂದರ್ಭ ಗಂಭೀರವಾದುದು. ಇದರಲ್ಲಿ "ರಾಮಯ್ಯ ತನ್ನ ತಂದೆ, ತಾತ ಮುತ್ತಾತ, ಮರಿ ತಾತ ಹೀಗೆ ಅನೇಕ ತಲೆ ತಲಾಂತರದಿಂದ ಬಂದಿದ್ದ ಗದ್ದೆಯನ್ನು ಬೇರೆಯವರಿಗೆ ಮಾರುವಾಗ ಅವನಲ್ಲಿ ಎಲ್ಲಿಲ್ಲದ ದುಃಖ ಕಿರಿ ಮಗನನ್ನು ಜೀತಕ್ಕೆ ಬೇರೆಯವರ ಮನೆಯಲ್ಲಿ ಬಿಟ್ಟಾಗ ಅವನಿಗೆ ಅಷ್ಟೊಂದು ದುಃಖವಾಗಿರಲಿಲ್ಲ. ಆ ಗದ್ದೆಯಲ್ಲಿ ಹಿರಿಯರು ಬಿಟ್ಟು ಹೋಗಿರುವ ಹಿಂದಿನ ನೆನಪುಗಳು ಅವನನ್ನು ಹೆಚ್ಚಾಗಿ ಕಾಡುತ್ತಿವೆ. ನಮ್ಮ ಗ್ರಾಮೀಣ ಜನರು ಭಾವನೆಗಳಿಗೆ ಹೆಚ್ಚು ಸ್ಪಂದಿಸುತ್ತಾರೆ ಮತ್ತು ಹಿರಿಯರಲ್ಲಿ ಹೆಚ್ಚಿನ ಬಾಂಧವ್ಯವನ್ನು ಕಾಣಬಹುದು. ನಮ್ಮ ಗ್ರಾಮೀಣರ ಬದುಕಿನಲ್ಲಿ ವ್ಯಕ್ತಿಯ ಮನಸ್ಸುಗಳು ಬೇರೆಯವರಿಗೆ ಒಂದು ಸುಸಂಸ್ಕೃತವಾದ ಮಾರ್ಗದರ್ಶನ ವನ್ನು ಕೊಟ್ಟು ಮುಂದಿನ ಪೀಳಿಗೆಗೆ ಮಾದರಿಯಾಗಿವೆ.

ವಿದ್ಯಾಭ್ಯಾಸವನ್ನು ಸಾರ್ವತ್ರಿಕವಾಗಿ ಸರ್ಕಾರ ಅದನ್ನು ಒಂದು ವ್ಯವಸ್ಥೆಯನ್ನಾಗಿ ರೂಪಿಸಿತು. ಸ್ವಾತಂತ್ರ್ಯಕ್ಕೆ ಮೊದಲೇ ಈ ಸವಲತ್ತು ಇದ್ದಿತ್ತಾದರೂ ಆಗ್ಗೆ ಬ್ರಿಟಿಷ್ ಆಡಳಿತದ ಹುನ್ನಾರ ಭಾರತೀಯರನ್ನು ಕಪ್ಪು ಇಂಗ್ಲಿಷರನ್ನಾಗಿಸುವ ನೆಲೆಯಿಂದ ರೂಪುಗೊಂಡುದಾಗಿತ್ತು ಎಂಬುದು ಗಮನಾರ್ಹ. ಅರವಿಂದ ಮಹರ್ಷಿ, ಮಹಾತ್ಮ ಗಾಂಧೀಜಿ, ವಿನೋಬಾಭಾವೆ, ಅಂಬೇಡ್ಕರ್, ಲೋಹಿಯಾ ಮುಂತಾದವರು ಶಿಕ್ಷಣವು ಜನರ ಆತ್ಮಪ್ರವೃತ್ತಿಯನ್ನು ಜಾಗೃತಗೊಳಿಸುವ ಮುಖ್ಯ ಮೌಲ್ಯವನ್ನಾಗಿಸಿದರು. ಸ್ವಾತಂತ್ರ್ಯಾ ನಂತರದಲ್ಲಿ ವಿದ್ಯಾಭ್ಯಾಸ ಅದರಲ್ಲೂ ಪ್ರಾಥಮಿಕ ನೆಲೆಯಲ್ಲಿ ಕಡ್ಡಾಯವಾಯಿತು. ಹದಿನೈದು ವರ್ಷದವರೆಗೆ ಪ್ರತಿಯೊಬ್ಬ ಮಗುವಿಗೆ

ಕಡ್ಡಾಯವಾಗಿ ಉಚಿತ ಶಿಕ್ಷಣ ಸೌಲಭ್ಯವನ್ನು ಕಲ್ಪಿಸಿದುದು ಗ್ರಾಮೀಣ ಬದುಕಿನಲ್ಲಿ ಬೇರೆ ಬೇರೆ ಪಲ್ಲಟಗಳು ಉಂಟಾಗಲು ಕಾರಣವಾಯಿತು ಎಂಬುದು ಇಲ್ಲಿ ಗಮನಾರ್ಹ ಸಂಗತಿ.

ಒಟ್ಟಾರೆಯಾಗಿ ಹೇಳುವುದಾದರೆ ಗ್ರಾಮೀಣ ಬದುಕು ಮತ್ತು ಸಮಾಜ ವ್ಯವಸ್ಥೆ ಈ ಎರಡೂ ಸಹ ಒಂದಕ್ಕೊಂದು ಸಂಬಂಧವಿರುವುದನ್ನು ಕಾಣಬಹುದು. ನಮ್ಮ ಕತೆಗಾರರೂ ಸಹ ತಮ್ಮ ಅನೇಕ ಕತೆಗಳಲ್ಲಿ ಇಂಥದೇ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ನಮ್ಮ ಗ್ರಾಮಗಳಲ್ಲಿ ಒಂದು ವ್ಯವಸ್ಥೆಯ ಒಳಗಡೆಯೇ ಬದುಕು ನಿಂತಿರುವುದನ್ನು ಕಾಣಬಹುದು. ಹಾಗೆಯೇ ಬದುಕು ಮತ್ತು ವ್ಯವಸ್ಥೆಗಳು ಒಂದಕ್ಕೊಂದು ಅವಲಂಬಿತವಾಗಿರುವುದನ್ನೂ ಈ ಮೇಲೆ ಹೇಳಿದ ಕತೆಗಳಲ್ಲಿ ಕಾಣಬಹುದು.

ಸ್ವಾತಂತ್ರ್ಯಾನಂತರದಲ್ಲಿ ಭಾರತದಲ್ಲಿ ಅನೇಕ ರೀತಿಯಾದ ವ್ಯತ್ಯಾಸಗಳುಂಟಾದವು. ಕೈಗಾರಿಕಾ ಕ್ರಾಂತಿಯ ಪರಿಣಾಮವಾಗಿ ಅನೇಕ ಜನ ಗ್ರಾಮದಿಂದ ಪಟ್ಟಣಕ್ಕೆ ಬಂದು ನೆಲೆಸತೊಡಗಿದರು. ಅದರಿಂದ ಅನೇಕ ರೀತಿಯಾದ ಬದಲಾವಣೆಗಳಾದವು. ಇದು ಗ್ರಾಮೀಣ ಸಮಾಜದ ದೃಷ್ಟಿಯಿಂದ ಬಹಳ ಮುಖ್ಯವಾದ ಒಂದು ಹಂತ. ಏಕೆಂದರೆ ಭಾರತವು ಕೃಷಿ ಪ್ರಧಾನವಾದ ದೇಶ. ಬೇಸಾಯವು ಭಾರತದಲ್ಲಿ ಅತಿ ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿರುವ ಪ್ರಧಾನ ಉದ್ಯೋಗವಾಗಿದೆ. ನಮ್ಮ ಗ್ರಾಮಗಳಲ್ಲಿ ಬಹುಪಾಲು ಜನರು ತಮ್ಮ ಜೀವನಕ್ಕಾಗಿ ಬೇಸಾಯವನ್ನೇ ಅವಲಂಬಿಸಿರುವುದನ್ನು ಕಾಣಬಹುದು. ಸ್ವಾತಂತ್ರ್ಯಾ ನಂತರದ ನಮ್ಮ ಗ್ರಾಮಗಳಲ್ಲಿ ಸಾಮಾಜಿಕ ಮತ್ತು ರಾಜಕೀಯ ಸ್ಥಿತಿಗಳ ಮೇಲೆ ವ್ಯವಸಾಯ ತನ್ನ ಪ್ರಭಾವ ಬೀರಿತ್ತು. ಸ್ವಾತಂತ್ರ್ಯಾನಂತರದ ನಮ್ಮ ಗ್ರಾಮಗಳಲ್ಲಿ ಹಣಕಾಸಿನ ಸೌಲಭ್ಯಗಳು ಸಾಕಷ್ಟು ಇಲ್ಲದೆ ಇದ್ದುದರಿಂದ ರೈತರು ಹಳ್ಳಿ ಸಾಹುಕಾರರಿಂದ ಸಾಲವನ್ನು ಬಡ್ಡಿ ದರದಲ್ಲಿ ತೆಗೆದುಕೊಳ್ಳಬೇಕಿತ್ತು. "ಅನೇಕ ಸಹಸ್ರ ವರ್ಷಗಳ ಚಾರಿತ್ರಿಕ ಹಿನ್ನೆಲೆಯನ್ನು ನಮ್ಮ ಭಾರತೀಯ ಗ್ರಾಮೀಣ ಸಮಾಜ ಹೊಂದಿದೆ. ಚಾರಿತ್ರಿಕ ಪೂರ್ವ ಸಮಾಜಗಳನ್ನು ಹೊಂದಿರುವ ರಾಷ್ಟ್ರಗಳಲ್ಲಿ ಭಾರತಕ್ಕೆ ಬಹುದೊಡ್ಡ ಸ್ಥಾನವಿದೆ. ಜಗತ್ತಿನ ವಿವಿಧ ಬುಡಕಟ್ಟುಗಳ, ವಿವಿಧ ಭಾಷೆಗಳನ್ನಾಡುವ ಮೂಲ ನಿವಾಸಿಗಳ ಬೀಡಾದ ನಮ್ಮ ಭಾರತದಲ್ಲಿ ಸರಳವಾದ ಜೀವನ ಕ್ರಮವನ್ನು ಕಾಣಬಹುದು. ಪುರಾತನ ಶಿಲಾಯುಗ, ನೂತನ ಶಿಲಾಯುಗಗಳಿಂದ ಪ್ರಾರಂಭವಾಗುವ ನಮ್ಮ ಭಾರತದ ಪರಂಪರೆ ಮುಂದುವರಿದು ವಿವಿಧ ಜನಾಂಗ ಧರ್ಮಗಳ ಅಭಿವೃದ್ಧಿಗೆ ಕಾರಣವಾಗಿದೆ. ಜಾತಿಪದ್ಧತಿ, ಅವಿಭಕ್ತ ಕುಟುಂಬ ಮುಂತಾದ ಸಾಮಾಜಿಕ ವ್ಯವಸ್ಥೆಗಳು ನಮ್ಮ ಗ್ರಾಮೀಣ ಸಮಾಜದಲ್ಲಿ ತಮ್ಮ ಹಿಡಿತವನ್ನು ಸಾಧಿಸಿವೆ.

ಕ್ರಿಸ್ತಪೂರ್ವ ಆರು ಮತ್ತು ಏಳನೆಯ ನೆಯ ಶತಮಾನಗಳಲ್ಲಿ ಭಾರತೀಯ ಗ್ರಾಮೀಣ ಸಮಾಜದ ಲಕ್ಷಣಗಳನ್ನು ಕೆಲವು ಪ್ರಾಚೀನ ಗ್ರಂಥಗಳಲ್ಲಿ ಪ್ರಸ್ತಾಪ ಮಾಡಲಾಗಿದೆ. ಬೋಧಿಸತ್ವನ ಜಾತಕದ ಕಥೆಗಳಲ್ಲಿ ಹಳ್ಳಿಗಳ ರಚನಾಕ್ರಮ, ಆಡಳಿತ ವಿಧಾನ ಮುಂತಾದವುಗಳ ವಿವರ ಕಂಡು ಬರುತ್ತದೆ. ಹೀಗೆ ನಮ್ಮ ಗ್ರಾಮ ಬಹಳ ಹಿಂದಿನ ಇತಿಹಾಸವನ್ನು ಹೊಂದಿದೆ.

ಬ್ರಿಟಿಷರ ಕಾಲದಲ್ಲಿ ಹಳ್ಳಿಗಳ ಜೀವನ ವ್ಯವಸ್ಥೆ ನೇರವಾಗಿ ಬದಲಾಗದಿದ್ದರೂ, ಅದರ ಅಧಿಕಾರ ಶಾಹಿ ಧೋರಣೆಯಿಂದ ಕ್ರಮೇಣ ತನ್ನ ಮೂಲ ಸ್ವರೂಪವನ್ನು ಕಳೆದುಕೊಂಡಿತು. ಹಳ್ಳಿಗಳ ಆದಾಯ ಕ್ರಮೇಣ ರಾಜ್ಯದ ಬೊಕ್ಕಸಕ್ಕೆ ಸೇರತೊಡಗಿತು."[೯]

ಬ್ರಿಟಿಷರ ಆಡಳಿತ ಕಾಲದಲ್ಲಿ ಗ್ರಾಮೀಣ ಬದುಕಿನ ಒಟ್ಟು ಸ್ವರೂಪವೇ ಬದಲಾಯಿತು. ಸಾಟಿ ವಿನಿಮಯ ಪದ್ಧತಿಯಂತಹ ವ್ಯವಸ್ಥೆಯಿಂದ ಆರ್ಥಿಕವಾಗಿಯೂ, ಪಂಚಾಯಿತಿ ವ್ಯವಸ್ಥೆಯಿಂದ ನ್ಯಾಯಾತ್ಮಕವಾಗಿಯೂ ಮತ್ತು ವೃತ್ತಿ ಪ್ರಧಾನತೆಯ ಅವಲಂಬನೆಯಿಂದ ಸಾಮುದಾಯಿಕವಾಗಿಯೂ ಸ್ವಾವಲಂಬಿಯಾಗಿದ್ದವು. ಗ್ರಾಮೀಣ ಪ್ರದೇಶಗಳು ಬ್ರಿಟಿಷರು ಎಲ್ಲವನ್ನು ಹಣದ ಮೂಲಕವೇ ನಡೆಯುವಂತೆ ಮಾಡಿದಾಗ ಸಮಗ್ರ ಭಾರತವೇ ಬ್ರಿಟಿಷರ ಎಲ್ಲ ಆಗುಹೋಗುಗಳನುಸಾರ ನಡೆಯುವಂತಾಯಿತು. ಅದರಲ್ಲೂ ಗ್ರಾಮ ಪ್ರಧಾನವಾದ ಭಾರತದ ಸ್ವಾವಲಂಬಿತನ ಛಿದ್ರವಾಯಿತು. ಗ್ರಾಮೀಣ ಸಂಸ್ಕೃತಿಯು ಐಕ್ಯತೆಯಂಥ ಮೌಲ್ಯದಿಂದ ಕ್ರಮೇಣ ದೂರ ಸರಿದುದು ಒಂದು ಗಂಭೀರ ದುರಂತವೇ ಸರಿ.

ಇನ್ನು ಸ್ವಾತಂತ್ರ್ಯದ ನಂತರದ ಯಾಂತ್ರೀಕರಣ, ನಗರೀಕರಣದ ಪರಿಣಾಮವಾಗಿ ಗ್ರಾಮೀಣ ಜನರಲ್ಲಿ ಸುಲಭ ಜೀವನದ ಆಸೆಯನ್ನು ಹುಟ್ಟಿಸಿದೆ. ಕೈಗಾರಿಕೀಕರಣ ಮತ್ತು ನಗರೀಕರಣ ಹಳ್ಳಿಗಳ ಸಂಸ್ಕೃತಿಯ ಮೇಲೆ ನೇರ ಪರಿಣಾಮ ಬೀರಿರುವುದನ್ನು ಕಾಣಬಹುದು. ಸ್ವಾತಂತ್ರ್ಯಾನಂತರದ ಹಳ್ಳಿಗಳಲ್ಲಿ ಜ್ಞಾನ ಪ್ರಸರಣಕ್ಕೆ ಅನೇಕ ಕ್ರಮಗಳನ್ನು ಕೈಗೊಂಡರು. ಕೇಂದ್ರ ಸರ್ಕಾರ ದೇಶಕ್ಕೆ ಅನ್ವಯವಾಗುವ ಶಿಕ್ಷಣ ನೀತಿಯನ್ನು ರೂಪಿಸಿಕೊಂಡಿತು. ಗ್ರಾಮೀಣ ಭಾರತದ ಪುನರ್ ನಿರ್ಮಾಣದಲ್ಲಿ ಗಾಂಧೀಜಿ ವಿಶೇಷ ಆಸಕ್ತಿ ವಹಿಸಿದ್ದಾರೆ. ರಾಜಕಾರಣಿಯಾಗಿ ಗಾಂಧೀಜಿ ಕಂಡ ಯಶಸ್ಸಿಗಿಂತ ಸಮಾಜ ಕಾರ್ಯಕರ್ತರಾಗಿ ಕಂಡ ಯಶಸ್ಸು ಹೆಚ್ಚೆಂದು ಹೇಳಬಹುದು. ರಾಜಕಾರಣಕ್ಕಿಂತ ಗಾಂಧೀಜಿಯನ್ನು ಹೆಚ್ಚು ಆಕರ್ಷಿಸಿದ್ದು ಮಾನವ ಸೇವೆ.

ಗಾಂಧೀಜಿಯವರ ಪ್ರಕಾರ ಪ್ರತಿಯೊಂದು ಗ್ರಾಮವೂ ಸ್ವಯಂಪೂರ್ಣವಾಗಿರಬೇಕು. ಅಂದರೆ ಎಲ್ಲ ಆರ್ಥಿಕ ಚಟುವಟಿಕೆಗಳ ಕೇಂದ್ರಬಿಂದು ಗ್ರಾಮವಾಗಿರಬೇಕು. ದೊಡ್ಡ ದೊಡ್ಡ ಕೈಗಾರಿಕೆಗಳಿಂದ ಗ್ರಾಮಗಳಲ್ಲಿ ನಿರುದ್ಯೋಗ ಉಂಟಾಗುವುದಲ್ಲದೆ ಅಲ್ಲಿಯ ಜನರ ಶೋಷಣೆಯೂ ಆಗುತ್ತದೆ ಎಂದು ನಂಬಿದ್ದರು. ಗಾಂಧೀಜಿಯವರ ಯೋಜನೆಯಂತೆ ಹಳ್ಳಿಗಳು ರಚಿಸಲ್ಪಟ್ಟು ಅವು ಕಾರ್ಯಾಚರಣೆಯಲ್ಲಿ ತೊಡಗಿದರೆ ಮಾತ್ರವೇ ಭಾರತವು ಎಲ್ಲ ತೊಂದರೆಗಳಿಂದ ಮುಕ್ತವಾಗುವುದು ಎಂದು ಅವರು ನಂಬಿದ್ದರು. ಹಳ್ಳಿಗಳಲ್ಲಿ ಬಡತನ, ಅನಾರೋಗ್ಯ, ನಿರಕ್ಷರತೆಯನ್ನು ಶಾಶ್ವತವಾಗಿ ಬಿಡಿಸಿದರಷ್ಟೆ ಅವುಗಳ ನೈಜ ಅಭಿವೃದ್ಧಿಯಾಗುವುದು ಎಂಬುದು ಅವರಿಗೆ ಮನವರಿಕೆಯಾಗಿತ್ತು. ನಮ್ಮ ಗ್ರಾಮಗಳನ್ನು ಅಭಿವೃದ್ಧಿ ಪಡಿಸಲು ಸರ್ವೋದಯದ ಕನಸನ್ನು ಕಂಡರು. ಸ್ವಾತಂತ್ರ್ಯಾನಂತರದ ಭಾರತದ ಗ್ರಾಮೀಣ ಬದುಕಿನಲ್ಲಿ ಅನೇಕ ಬದಲಾವಣೆಗಳನ್ನು ಕಾಣಬಹುದು. ಇವೆಲ್ಲ ಸಂಗತಿಗಳು ಸಮಕಾಲೀನ ಸಣ್ಣ ಕತೆಗಳಲ್ಲಿ ಗಂಭೀರವಾಗಿ ವ್ಯಕ್ತವಾಗಿವೆ. ಭಾರತೀಯ ಗ್ರಾಮೀಣ ಬದುಕನ್ನು ಬಾಧಿಸಿದವು. ಭಾರತದ ಸ್ವಾತಂತ್ರ್ಯ ಕಾಲಕ್ಕೆ ಉಂಟಾದ ದೇಶದ ವಿಭಜನೆ ಮತ್ತು ತದನಂತರದಲ್ಲಿ ಮಹಾತ್ಮ ಗಾಂಧೀಜಿಯವರ ದುರಂತ ಮರಣ ಭಾರತೀಯ ಬದುಕಿನ ಗತಿಯನ್ನೇ ಅಲ್ಲಾಡಿಸಿತು. ಭಾರತವನ್ನು ವಿಭಜನೆ ಮಾಡಲು ಸುತಾರಾಂ ಒಪ್ಪದ ಗಾಂಧೀಜಿಯವರು ದೇಶ ವಿಭಜನೆಯ ನಂತರವೂ 'ಗ್ರಾಮ ಸ್ವರಾಜ್ಯ'ದ ಮೂಲಕವೇ 'ರಾಮರಾಜ್ಯ' ನಿರ್ಮಾಣದ ತಮ್ಮ ವಿಚಾರಗಳನ್ನು ಮಂಡಿಸಿದ್ದರು. ಆದರೆ ನೆಹರೂ ಅವರ ನೇತೃತ್ವದ ಸ್ವತಂತ್ರ ಭಾರತವು ಬೃಹತ್ ಕೈಗಾರಿಕೆಗಳ ನಿರ್ಮಾಣದತ್ತ ಹೊರಳಿತು. ಗಾಂಧೀಜಿಯವರು ಈ ವಿಚಾರಗಳನ್ನು ವಿರೋಧಿಸುತ್ತಲೇ ಇದ್ದರೂ ಪ್ರಯೋಜನವಾಗಲಿಲ್ಲ. ಬೃಹತ್ ಕೈಗಾರಿಕೆಗಳು ನಿರ್ಮಾಣವಾದೊಡನೆ ಗ್ರಾಮಗಳಿಂದ ನಗರಮುಖೀ ಸಂಚಾರ ತೀವ್ರವಾಯಿತು.

ನಗರಗಳಲ್ಲಿಯೂ ಕೊಳಚೆ ಪ್ರದೇಶವೇ ಮೊದಲಾಗಿ ಕೆಲವಾರು ಗ್ರಾಮೀಣ ಕುರುಹುಗಳು ಉಳಿದುಕೊಂಡವಾದರೂ ನಗರವು ಎಲ್ಲಾ ಸವಲತ್ತುಗಳನ್ನು ಒಳಗೊಂಡಿದ್ದರಿಂದ ಬದುಕು ಸಹಜವಾಯಿತು. ಎಲ್ಲಾ ನಗರಗಳು ಮಜಾ ಮತ್ತು ಮೋಜಿನ ಕೇಂದ್ರಗಳಾದವು. ಪು.ತಿ.ನ ಅವರು ತಮ್ಮ 'ಮಸಾಲೆ ದೋಸೆ' ಎಂಬ ಪ್ರಬಂಧದಲ್ಲಿ ಹೇಳಿರುವಂತೆ 'ಮಸಾಲೆ ದೋಸೆ'ಯ ರುಚಿಯಿಂದಾಗಿ ಗ್ರಾಮಗಳು ಹಾಳಾದವು ಎಂಬುದು ಕೇವಲ ಹಾಸ್ಯದ ಮಾತಲ್ಲ. ನಗರಗಳ ನಿರ್ಮಾಣವು ತೀವ್ರವಾಗಿ ಬೆಳೆದಂತೆ ಎಲ್ಲಾ ಸವಲತ್ತುಗಳು ನಗರಗಳಲ್ಲಿ ನೆಲೆಗೊಂಡವು. ಒಂದು ಕಾಲಕ್ಕೆ ಸ್ವಾವಲಂಬಿ ಗ್ರಾಮ ಪ್ರದೇಶಗಳು ಬ್ರಿಟಿಷ್ ಸರ್ಕಾರದ ಮರ್ಜಿಯಂತೆ ನಡೆಯುವಂತಾಗಿದ್ದವು. ಸ್ವಾತಂತ್ರ್ಯಾನಂತರದಲ್ಲಿ ನಗರಗಳ ಮರ್ಜಿಯಲ್ಲಿ ಗ್ರಾಮಗಳ ಚಟುವಟಿಕೆ ನಿರ್ಧಾರವಾಗುವಂತಾಯಿತು. ಹಾಗಾಗಿಯೇ ಭಾರತದ ಗ್ರಾಮೀಣ ಬದುಕು ಎಂದರೆ ಒಂದು ರೀತಿಯಲ್ಲಿ ಮತ್ತೆ ಮತ್ತೆ ಸಾಂಸ್ಕೃತಿಕ ಶಿಥಿಲತೆಗೆ ಒಳಗಾದುದಾಗಿದೆ. ಪಂಚವಾರ್ಷಿಕ ಯೋಜನೆಗಳು, ವಾರ್ಷಿಕ ಯೋಜನೆಗಳೆಲ್ಲವೂ ಗ್ರಾಮಗಳ ಅಭಿವೃದ್ಧಿಯನ್ನೇ ಮುಖ್ಯವಾಗಿಟ್ಟುಕೊಂಡವಾಗಿದ್ದವು. ಹಾಗೆಯೇ ದಿವಂಗತ ಪ್ರಧಾನಿ ಲಾಲ್ ಬಹಾದ್ದೂರ್ ಶಾಸ್ತ್ರೀಜಿಯವರು ಹೇಳಿದ 'ಜೈಜವಾನ್ ಜೈಕಿಸಾನ್' ಎಂಬ ಘೋಷಣೆಯಾಗಲೀ, ಗುದ್ದಲಿಯೇ ಭಾರತದ ಮುಖ್ಯ ಸಂಕೇತವಾಗಬೇಕು ಎಂದು ಹೇಳಿದ ಸ್ವಾತಂತ್ರ್ಯೋತ್ತರ ಭಾರತದ ಮುಖ್ಯ ಚಿಂತಕ ದಿವಂಗತ ರಾಮಮನೋಹರ ಲೋಹಿಯಾರ ವಿಚಾರವಾಗಲಿ ಭಾರತದ ಉದ್ಧಾರ ಗ್ರಾಮಗಳ ಮೂಲಕವೇ ಸಾಧ್ಯ ಎಂಬುದನ್ನು ಪುನರುಚ್ಚರಿಸುತ್ತಿವೆ.

## ೨.೨. ಗ್ರಾಮೀಣ ಬದುಕಿನ ಕಥೆಗಳಲ್ಲಿ ವ್ಯವಸ್ಥೆ ಮತ್ತು ಬದುಕಿನ ನೇರ ಚಿತ್ರಣ

ಕನ್ನಡದಲ್ಲಿ ಆಧುನಿಕ ಸಣ್ಣಕತೆಯ ಚರಿತ್ರೆ ಇಪ್ಪತ್ತನೆಯ ಶತಮಾನದ ಎರಡನೆಯ ದಶಕದಲ್ಲಿಯೇ ಪ್ರಾರಂಭವಾಗಿದೆ. ''ಕನ್ನಡ ಸಣ್ಣಕತೆಯ ಬೆಳವಣಿಗೆಯಲ್ಲಿ ನಾವು ಮೂರು ಮುಖ್ಯ ಹಂತಗಳನ್ನು ಗುರುತಿಸಬಹುದು. ೧೯೨೦ ರಿಂದ ೧೯೫೦ ರವರೆಗಿನ 'ನವೋದಯ'ವೆಂದು, ೧೯೫೦ರಿಂದ ೧೯೭೦ ರವರೆಗಿನ 'ನವ್ಯ'ವೆಂದು ೧೯೭೦ರ ನಂತರದ 'ನವ್ಯೋತ್ತರ'ವೆಂದು ಒಟ್ಟಿನಲ್ಲಿ ಈ ಮೂರು ಕಾಲಾವಧಿಗಳಲ್ಲಿಯೂ ಅನನ್ಯ ಪ್ರತಿಭೆಯ ಕತೆಗಾರರು ವಿಭಿನ್ನ ರೀತಿಯ ಕತೆಗಳನ್ನು ಬರೆದರಾದರೂ ಅವರ ಶೈಲಿ, ತಂತ್ರ, ಸಂವೇದನೆ ಅಭಿವ್ಯಕ್ತಿ ವಿಧಾನಗಳಲ್ಲಿ ವ್ಯತ್ಯಾಸ ಕಾಣಬಹುದಾಗಿದೆ.'' ಎಂ.ಎಸ್.ಕಾಮತ್ ಮತ್ತು ಕೆರೂರ ವಾಸುದೇವಾಚಾರ್ಯರು ಹೊಸ ಬಗೆಯ ಗದ್ಯವನ್ನು ಬಳಸಿ ಸಾಮಾಜಿಕ ಹಾಗೂ ಚಾರಿತ್ರಿಕ ವಸ್ತುಗಳನ್ನು ಆಯ್ದು, ಮಾನವೀಯ ಮೌಲ್ಯಗಳಲ್ಲಿ ನಂಬಿಕೆಯಿರಿಸಿಕೊಂಡು ಕತೆಗಳನ್ನು ಬರೆದರು. ನಂತರ ಸಣ್ಣಕತೆಗೆ ವಿಶಿಷ್ಟ ಆಯಾಮವನ್ನೊದಗಿಸಿ ಸಣ್ಣ ಕತೆಯ ಜನಕರೆನಿಸಿದ ಮಾಸ್ತಿಯವರು ತಮ್ಮ ಅಪಾರ ಜೀವನಾನುಭವ ದಿಂದ, ಮಾನವೀಯ ಅಂತಃಕರಣದಿಂದ ಪರಿಪಕ್ವ ಜೀವನ ದೃಷ್ಟಿಯಿಂದ ಶ್ರೇಷ್ಠ ಕತೆಗಳನ್ನು ಬರೆದಿದ್ದಾರೆ. ಸಣ್ಣಕತೆ ಕನ್ನಡದಲ್ಲಿ ಒಂದು ವಿಶಿಷ್ಟ ಆಧುನಿಕ ಸಾಹಿತ್ಯ ಪ್ರಕಾರವೆನ್ನಿಸಲು ಇವರು ಕಾರಣರಾದರು. ಇವರೆಲ್ಲರ ಹಾಗೂ ಇವರನ್ನನುಸರಿಸಿ ಬರೆದ ಆನಂದ, ಕೃಷ್ಣಶರ್ಮ ಇತ್ಯಾದಿ ನಂತರದ ಲೇಖಕರ ಕತೆಗಳಲ್ಲಿ ಮುಖ್ಯವಾಗಿ ಸಾಮಾಜಿಕ ಪ್ರಜ್ಞೆ, ಭಾರತೀಯ ಸಂಸ್ಕೃತಿಯ ಬಗೆಗಿನ ಗೌರವ, ಪಾರಂಪರಿಕ ಮೌಲ್ಯಗಳ ಬಗೆಗೆ ನಿಷ್ಠೆ ಆದರ್ಶಪ್ರಿಯತೆ ಹಾಗೂ ಮುಖ್ಯವಾಗಿ ಮನುಷ್ಯನ ಒಳ್ಳೆಯತನದಲ್ಲಿ ವಿಶ್ವಾಸ ಇವು ಎದ್ದು ಕಾಣುವ ಅಂಶಗಳಾಗಿವೆ.

೧೯೫೦ರ ದಶಕದಲ್ಲಿ ನವ್ಯ ಚಳುವಳಿ ಕನ್ನಡ ಸಾಹಿತ್ಯಕ್ಕೆ ಹೊಸದೊಂದು ತಿರುವು ನೀಡಿತು. ಬದುಕಿನ ಮೌಲ್ಯಗಳ ಮರುಶೋಧನೆ, ಪಾತ್ರಗಳ ಮಾನಸಿಕ ವಿಶ್ಲೇಷಣೆ, ಪ್ರಸ್ಥಾಪಿತ ಸಂಪ್ರದಾಯಗಳ ನಿರಾಕರಣೆ, ವೈಚಾರಿಕತೆ ಇವು ನವ್ಯ ಸಾಹಿತ್ಯದಲ್ಲಿ ಮುಖ್ಯವಾದ ಅಂಶಗಳಾಗಿವೆ. ಈ ಕತೆಗಾರರಿಗೆ ಸಾಮಾಜಿಕ ಬದ್ಧತೆಗಿಂತ ಆತ್ಮ ಶೋಧನೆಯೇ ಹೆಚ್ಚು ಮಹತ್ವದ್ದಾಯಿತು. ಕನ್ನಡದ ಪ್ರಮುಖ ನವ್ಯ ಕತೆಗಾರರಾದ ರಾಮಚಂದ್ರ ಶರ್ಮ, ಶಾಂತಿನಾಥ ದೇಸಾಯಿ, ಚಿತ್ತಾಲ, ಅನಂತಮೂರ್ತಿ, ಲಂಕೇಶ್, ತೇಜಸ್ವಿ, ರಾಘವ, ಆಲನಹಳ್ಳಿ, ದಿವಾಕರ ಮುಂತಾದವರು ಭಾಷೆ, ಸಂಕೇತ, ಪ್ರತಿಮೆ, ರೂಪಕ ಇತ್ಯಾದಿಗಳನ್ನು ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಬಳಸಿಕೊಂಡಿದ್ದಾರೆ.

೧೯೭೦ರ ನಂತರ ನವ್ಯೋತ್ತರ ಕಾಲದಲ್ಲಿ ಕನ್ನಡ ಯುವ ಜನಾಂಗವು ಹಲವಾರು ಬಗೆಯ ಕ್ರಾಂತಿಕಾರಕ ವಿಚಾರಗಳಿಂದ ಪ್ರಭಾವಿತವಾಯಿತು. ಇವು ಕನ್ನಡ ಲೇಖಕರ ಮೇಲೆ ಗಾಢ ಪ್ರಭಾವ ಬೀರಿದವು. ಎಲ್ಲ ಬಗೆಯ ಶೋಷಣೆಗಳ ವಿರುದ್ಧ ಬಂಡಾಯದ ದನಿಯತ್ತಿದ ಈ ಲೇಖಕರ ಕತೆಗಳಲ್ಲಿ ನೋವು ಮತ್ತು ಆಕ್ರೋಶ ಎದ್ದು ಕಾಣುತ್ತದೆ. ದೇವನೂರು ಮಹಾದೇವ, ಬರಗೂರು ರಾಮಚಂದ್ರಪ್ಪ, ಕುಂ.ವೀ. ಮುಂತಾದ ಪ್ರಾರಂಭದ ಕತೆಗಾರರಿಂದ ಹಿಡಿದು ಮೊಗಳ್ಳಿ, ನುಗಡೋಣಿಯಂತಹ ಇತ್ತೀಚಿನ ಕತೆಗಾರರವರೆಗೂ ಎಲ್ಲರೂ ದುರ್ಬಲರ ಮೇಲಾಗುವ ಅನ್ಯಾಯ, ಅತ್ಯಾಚಾರಗಳನ್ನು ಖಂಡಿಸುತ್ತಾರೆ. ಸಾಮಾಜಿಕ ನ್ಯಾಯಕ್ಕಾಗಿ ಗಟ್ಟಿದನಿಯೆತ್ತುತ್ತಾರೆ. ಇದೇ ಕಾಲಾವಧಿಯಲ್ಲಿ ಮುಕ್ತವಾಗಿ ದಿಟ್ಟವಾಗಿ ಬರೆಯ ತೊಡಗಿದ ವೈದೇಹಿ, ನೇಮಿಚಂದ್ರ ಮುಂತಾದವರು ಮಹಿಳೆಯರ ಕತೆಗಳಲ್ಲಿ, ಪರಂಪರಾಗತವಾಗಿ ಅನೇಕ ಅರ್ಥಗಳಲ್ಲಿ ಅನೇಕ ಶಕ್ತಿಗಳಿಂದ ಶೋಷಿತೆಯಾಗುತ್ತ ಬಂದಿರುವ ಹೆಣ್ಣಿನ ಒಳಮನಸ್ಸಿನ ಚಿತ್ರಣ ಹಾಗೂ ಶೋಷಕ ಶಕ್ತಿಗಳ ವಿರುದ್ಧ ತಾತ್ವಿಕ ಪ್ರತಿಭಟನೆಗಳು ಮುಖ್ಯ ಅಂಶಗಳಾಗಿವೆ.

ನಮ್ಮ ಗ್ರಾಮೀಣ ಕತೆಗಾರರಲ್ಲಿ ಬೆಸಗರಹಳ್ಳಿ ರಾಮಣ್ಣನವರು ಒಬ್ಬರು. ಇವರ ಸಾಹಿತ್ಯ ಪ್ರತಿಭೆಯ ಕ್ಷೇತ್ರ ಸಣ್ಣಕತೆ. ಇವರ 'ಕನ್ನಂಬಾಡಿ' ಸಮಗ್ರ ಕತೆಗಳ ಸಂಕಲನ. ಇದರಲ್ಲಿ 'ಸುಗ್ಗಿ' ಅತ್ಯುತ್ತಮ ಕತೆಗಳಲ್ಲಿ ಒಂದಾಗಿದೆ. ಬೆಸಗರಹಳ್ಳಿ ರಾಮಣ್ಣನವರು ಕನ್ನಡ ಕಾವ್ಯ, ಕತೆಗಳು ನವ್ಯರ ಪ್ರಭಾವಕ್ಕೆ ಘಕ್ಕಾಗಿದ್ದ ಕಾಲದಲ್ಲಿ ಅವರು ತನ್ನ ಬದುಕು ನೀಡಿದ ಅನುಭವಗಳನ್ನು ಕತೆಗಳ ರೂಪದಲ್ಲಿ ಬರೆಯಲು ತೊಡಗಿದರು.

ಮಂಡ್ಯ ಜಿಲ್ಲೆಯ ಗ್ರಾಮೀಣ ಪರಿಸರ ರಾಮಣ್ಣನವರ ಕಥಾ ಸಾಹಿತ್ಯದ ಮೂಲಸೆಲೆಯಾಗಿದೆ. ಮಂಡ್ಯ ಜಿಲ್ಲೆಯ ಹಳ್ಳಿಗಳು ಬದುಕಿನ ಬಗ್ಗೆ ಅಧಿಕೃತವಾಗಿ ಬರೆಯುತ್ತಿರುವ ಲೇಖಕರ ಅಗ್ರಸ್ಥಾನದಲ್ಲಿ ರಾಮಣ್ಣನವರು ಇದ್ದಾರೆ. ಸ್ವಾತಂತ್ರ್ಯಾನಂತರದಲ್ಲಿ ಗ್ರಾಮೀಣ ಬದುಕು ಹೇಗಿತ್ತೆಂಬುದನ್ನು ಇವರ 'ಸುಗ್ಗಿ' ಕತೆಯಲ್ಲಿ ಕಾಣಬಹುದು. ಆ ಸಂದರ್ಭದ ವಿವರಣೆಯನ್ನು ಈ ಕೆಳಕಂಡಂತೆ ಕತೆಯ ಸಂದರ್ಭದೊಡನೆ ವಿವರಿಸಲಾಗಿದೆ.

"ತನ್ನ ಬಯಕೆ ಚಿಗುರಿ, ಕಾಯಾಗಿ, ಹಣ್ಣಾಗಿ ಭಾಗ್ಯ ನೀಡುವ ಕಾಲದಲ್ಲಿ ಉತ್ತು ಬಿತ್ತು ನಾಟಿ ಹಾಕಿದವನ ಎದೆಯಲ್ಲಿ ಹೇಳಲಾರದಂಥ ಸುಖ ಮನೆಮಾಡುತ್ತದೆ. ಫಲದ ಭಾರದಿಂದ ಭೂಮಿ ಕುಸಿದು ಮುಗಿಲು ನೋಡುವ ನಸು ಹಳದಿ ಬಣ್ಣದ ಬತ್ತದ ಬೆಳೆಯನ್ನು ಕೊಯ್ದು, ಹೊರೆ ಕಟ್ಟಿ ಸಾಗಿಸುವಾಗ ಆನಂದದ ಅಲೆಗಳೇಳುತ್ತವೆ. ವರ್ಷವಿಡೀ ದುಡಿದುದರ ಫಲ ಎದುರು ಮೂಡಿ ನಿಂತಾಗ 'ಒಕ್ಕಲು ಮಕ್ಕಳು' ಹೂವಾಗುತ್ತಾರೆ - ಸುಗ್ಗಿ ತರುವ ಸಿರಿಯಿಂದ.

"ಕಳೆದ ಸಲದ ಸುಗ್ಗಿಗಿಂತ ಈ ಸಲ ಬತ್ತ ಹುಲುಸಾದರೂ ಸಹ ಅದೇಕೋ ಕಣದಲ್ಲಿ ಅಷ್ಟು ಕಳೆಯಿಲ್ಲ ವೆನಿಸಿತು. ಬಡಿಯುವವರೂ ಅದೇಕೋ ಮಾತುಕತೆ ಅತಿಯಿಲ್ಲದೆಯೇ ಯಂತ್ರಗಳಂತೆ ಕೆಲಸ ಮಾಡು ತ್ತಿರುವುದನ್ನು ನೋಡಿ, ಮಧ್ಯರಾತ್ರಿಯಿಂದ ಬಡಿತಾ ಅವ್ರೆ, ಬೇಜಾರು ಪಾಪ ಎಂದುಕೊಂಡರೂ, ವರ್ಷವರ್ಷವೂ ಬತ್ತ ಬಡಿಯುವುದಕ್ಕೆ ಮಧ್ಯ ರಾತ್ರಿಯಲ್ಲಿ ಬರುತ್ತಿದ್ದ ಇದೇ ಆಳುಗಳದೇನು ಕೇಕೆ, ಕೂಗು, ನಾಟಕದ ಪದಗಳು! ಒಂದೆ, ಎರಡೆ, ಕೋಳಿ ಕೂಗುವ ಹೊತ್ತಿಗೆ ಬಡಿಯುವುದನ್ನು ನಿಲ್ಲಿಸಿ ನೆಲ್ಲುಲ್ಲಿನ ಬೆಂಕಿಯನ್ನು ಹಾಕಿಕೊಂಡು, ಹಸಿ ಕಡಲೆಕಾಯನ್ನು ನೆಂಜಿಕೊಂಡು ತಿನ್ನುವಾಗ ನೋಡಬೇಕಿತ್ತು."[೧೦]

"ಸ್ವಾತಂತ್ರ್ಯಾನಂತರದಲ್ಲಿ ನಮ್ಮ ಗ್ರಾಮೀಣ ಜನರು ಹೆಚ್ಚು ಬೇಸಾಯವನ್ನೇ ಅವಲಂಬಿಸಿದ್ದು. ಒಬ್ಬರು ಯಾವುದೇ ಕೆಲಸವನ್ನು ಮಾಡುವಾಗ ಇನ್ನೊಬ್ಬರು ಸಹಾಯಕರಾಗಿ ನಿಂತ ಒಂದು ತುಂಬು ಬದುಕನ್ನು ಕಾಣಬಹುದು. ಇಲ್ಲಿ 'ಸುಗ್ಗಿ' ಸಂಭ್ರಮದ ಸಂತೋಷದ ಸಂಕೇತವಾಗಿ ಬರುತ್ತದೆ. ನಮ್ಮ ಗ್ರಾಮಗಳಲ್ಲಿ ಇಂದಿಗೂ ಸಹ ಸಹಬಾಳ್ವೆಯನ್ನು ಕಾಣಬಹುದು.

ಇವರ ಇನ್ನೊಂದು ಕತೆಯಾದ 'ದೇವರ ಹೂ' ಕತೆಯಲ್ಲಿ ಒಂದು ಕ್ಷುಲ್ಲಕ ವಿಷಯಕ್ಕೆ ಇಬ್ಬರು ಹೆಂಗಸರಲ್ಲಿ ಜಗಳ ಏರ್ಪಟ್ಟು, ದೇವರಿಗೆ ದೀಪ ಹಚ್ಚಿ ಏಳು ದಿನಗಳ ಒಳಗೆ ಮನಸ್ಸು ಪರಿವರ್ತನೆಗೊಂಡು ಇಲ್ಲಿ ದೇವಸ್ಥಾನ ಮತ್ತು ದೇವರು ಎರಡು ಮನಸ್ಸುಗಳು ಒಂದುಗೂಡುವುದಕ್ಕೆ ಒಂದು ಸಂಕೇತವಾಗುತ್ತದೆ. ಸ್ವಾತಂತ್ರ್ಯಾನಂತರದಲ್ಲಿ ಆಧುನಿಕತೆಯ ಪ್ರಭಾವದಿಂದ ನ್ಯಾಯ ತೀರ್ಮಾನಕ್ಕೆ ಕೋರ್ಟುಗಳು ಅಸ್ತಿತ್ವಕ್ಕೆ ಬಂದಿದ್ದರೂ ಸಹ ನಮ್ಮ ಗ್ರಾಮೀಣ ಜನರು ಊರಿನ ಸಮಸ್ಯೆಗಳನ್ನು ತಮ್ಮ ತಮ್ಮಲ್ಲೇ ಬಗೆಹರಿಸಿ ಕೊಳ್ಳುವುದನ್ನು ಕಾಣಬಹುದು.

ಇವರ ಇನ್ನೊಂದು ಕತೆಯಾದ 'ಹರಕೆಯ ಹಣ' ಒಂದು ಉತ್ತಮ ಕತೆ. ಮೇಲು ಕೀಳಿನ ಸಮಸ್ಯೆಯನ್ನು ಸಾಂದ್ರವಾಗಿ ಹಿಡಿಯುತ್ತದೆ. ತಲೆ ತಲಾಂತರದಿಂದ ಕಾಲಕಸವಾಗಿ ಬದುಕುತ್ತಿದ್ದ ಜನ ಕೆಳವರ್ಗದಲ್ಲಿ ಬಹುಮಂದಿ ಹೇಳಿದ ಹಾಗೆ ಕೇಳಿಕೊಂಡಿರುವ ಮನಸ್ಸುಳ್ಳವರಾದರೂ ಅಲ್ಪಸ್ವಲ್ಪ ವಿದ್ಯಾಭ್ಯಾಸದಿಂದ ಆಧುನಿಕ ವಿಚಾರಗಳಿಂದ ಎಚ್ಚೆತ್ತ ಬೆರಳೆಣಿಕೆಯ ವ್ಯಕ್ತಿಗಳನ್ನು ರಾಮಣ್ಣನವರು ಜೀವಂತವಾಗಿ ಮೂಡಿಸಿದ್ದಾರೆ.

ಇವರ ಸ್ವಾಭಿಮಾನ, ಕೆಚ್ಚು, ಹಟ, ರೋಷ, ಶಕ್ತಿ ಮುಂತಾದ ಗುಣಗಳು ಅವರ ಕತ್ತಲ ಬಾಳಿನ ಹಂದರದಲ್ಲಿ ಇಣುಕುವ ಕಿರಣಗಳಾಗಿವೆ. ಇಲ್ಲಿ ಒಂದು ಆಚರಣೆಯ ಸಂದರ್ಭದಲ್ಲಿ ನಮ್ಮ ಗ್ರಾಮಗಳಲ್ಲಿ ಜಾತಿ ಜಾತಿಗಳಲ್ಲಿ ಹೇಗೆ ಭಿನ್ನಾಭಿಪ್ರಾಯಗಳು ಹುಟ್ಟಿಕೊಂಡು ಅದೇ ಗ್ರಾಮದ ವಾಸಿಯಾದ ಒಬ್ಬ ವಿದ್ಯಾವಂತ ಯುವಕನ ಮನಸ್ಸು ಅನ್ಯಾಯದ ವಿರುದ್ಧ ಹೇಗೆ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತದೆ ಎಂಬುದು ಕಂಡು ಬರುತ್ತದೆ. ಮಲ್ಲನಾಯಕನ ಹಳ್ಳಿ ಗ್ರಾಮದಲ್ಲಿ ಯಾವ ಯಾವ ಜಾತಿಯ ಜನರು ಇದ್ದರೆಂಬುದು ಅವರ ಬದುಕನ್ನು ಈ ಕತೆಯ ಸಂದರ್ಭ ವಿವರಿಸುತ್ತದೆ."[೧೧]

ಗ್ರಾಮೀಣರಲ್ಲಿ ಮುಗ್ಧತೆ ಇದ್ದು, ರಾಜಕಾರಣಿಗಳು ಇವರನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಂಡಿರುತ್ತಾರೆ. ಸ್ವಾತಂತ್ರ್ಯ ಬಂದರೂ ಸಹ ಈ ಗ್ರಾಮಕ್ಕೆ ಸ್ವಾತಂತ್ರ್ಯ ಇಲ್ಲದಿರುವುದು ಇದರಿಂದ ತಿಳಿಯುತ್ತದೆ.

ಇವರ ಇನ್ನೊಂದು ಕತೆಯಾದ 'ಕಕರನ ಯುಗಾದಿ' ಕತೆಯಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿ ದಲಿತರ ಬದುಕು ಪರಿವರ್ತನೆಗೆ ಒಳಗಾಗಿರುವುದನ್ನು ಈ ಕತೆಗಳು ದಾಖಲಿಸುತ್ತವೆ. ಹೊಸ ಹೊಸ ಕಾನೂನುಗಳು ಹೇಗೆ ಬಡವರ ಬಾಳನ್ನು ಬೆಳಗಲು ಹೊರಟಿವೆ ಅವುಗಳನ್ನು ಯಾವ ರೀತಿ ಸಮಾಜದ ದುಷ್ಟ ಶಕ್ತಿಗಳು ಊಳಿಗಮಾನ್ಯ ಪದ್ಧತಿಯ ಜಮೀನ್ದಾರಿ ವ್ಯವಸ್ಥೆಯ ಸ್ವಾರ್ಥಿಗಳು ಹೇಗೆ ದುರುಪಯೋಗ ಪಡಿಸಿಕೊಳ್ಳುತ್ತಾರೆ ಎಂಬುದನ್ನು ಮನಕರಗುವಂತೆ ಚಿತ್ರಿಸಿದ್ದಾರೆ.

" 'ದೇವರಸ': ಅಪ್ಪೊ ನಂಗೇಳ್ದೆ ಉಣ್ಣೊಕೆ ಬಂದ್ಬುಟ್ಟಿದ್ದೀ ಎಂದು ರಾಗ ಎಳೆದ ಕಕರನಿಗೆ ಕೋಪ ಬಂದರೂ ತಡೆದುಕೊಂಡ. ತಾನು ಬಂದಿರುವ ಕಾಯಕವು ಅಂಥ ಮಹತ್ತರವಾದುದಲ್ಲ ಎಂಬ ಅರಿವು ಅವನಿಗಿದ್ದುದರಿಂದ ಸುಮ್ಮನೆ ಮಗನನ್ನೇ ನೋಡಿದ. ಅಪ್ಪನ ಮುಖದಲ್ಲಿ ಏನೋ ಚಿಂತೆ ಕವಿದಿದೆ ಎಂದು ತಾನು ಇಲ್ಲಿಗೆ ಉಣ್ಣಲು ಬಂದಿರುವುದರಿಂದಲೇ ಇರಬೇಕು ಎಂದು ಅಂದಾಜು ಮಾಡಿ "ಅವ್ವನ್ನ ಕೇಳಿಕೊಂಡು ಬಂದೆ ಕೇರಿಯೋರೆಲ್ಲ ಹೋಗ್ವಾಗ ನಿಂದೇನು ಹೋಗು ಅಂದ್ಲು" ಎಂದ.

"ಸರಿ ಹೋಗು"

"ಅಪ್ಪೋ!"

"ಏನ್ಲ ಅದು!"

"ನಾಳೀಕೆ ಉಗಾದಿ ಹಬ್ಬವಂತೆ"

"ಅದ್ಕೇನ್ಮಾಡ್ಲಿ? ಕತ್ತುಕುಯ್ಕೊಳ್ಳ!

"ನಂಗೊಂದು ಹೆಗಲ ಮ್ಯಾಕೆ ಚೌಕವ"

"ಆಂ! ಏನಂದೆ? ನಿಂತಾತುಂದು ಜವಳಿ ಅಂಗ್ಡಿ ಅದ?" ಎಂದವನೆ ದೂರ ಪುಟ್ಟೇಗೌಡರು ಬರುತ್ತಿರುವುದನ್ನು ಕಂಡು ಆ ಕಡೆಗೆ ಹೋದ. ತಾನು ಬಂದ ಕಾರಣ ಹೇಳಿದ ಪುಟ್ಟೇಗೌಡರು ಅವನನ್ನು ಅಡಿಗೆಯ ಮನೆ ಕಡೆಕರೆದುಕೊಂಡು ಹೊರಟರು.

ಪುಟ್ಟೇಗೌಡರು ಮಡಕೆ ಹಗ್ಗವನ್ನು ಕೊಟ್ಟು "ನೀನು ಹೊರುವಷ್ಟು ಕಟ್ಟಿಕೋ" ಎಂದರು. ಕಕರ ಒಂದು ದೊಡ್ಡ ಹೊರೆ ಕಟ್ಟಿಕೊಂಡು, ತಲೆ ಮೇಲೆ ಮಡಗಿಸಿಕೊಂಡು ಹೊರಡಲು ಅನುವಾದುದನ್ನು ಕಂಡು ಪುಟ್ಟೇಗೌಡರು, "ಲೋ ಕಕರ ಇನ್ನೇನು ನಿಂಜಾತಿಯೋರ್ಗೂ ಉಣ್ಣಾಕೆ ಕೊಡ್ತೀವಿ ಉಂಡ್ಬುಟ್ಟು ಹೊತ್ಕಂಡು ಹೋಗು, ಅಷ್ಟೊತ್ತಿಗೆ ತಂಪಾಯ್ತದೆ" ಎಂದರು. ಮನೆಯಲ್ಲಿ ತನ್ನ ಹೆಂಡತಿ ದಮ್ಮು ಬಂದು ನರಳುತ್ತಿರುವುದನ್ನು ಹೇಳಿ, ಅವಳಿಗೆ ಆಗಲೋ ಈಗಲೋ ಎಂದು ಉತ್ಪ್ರೇಕ್ಷೆ ಮಾಡಿ ತನ್ನ ಹಿಂದೆಯೇ ಇದ್ದ ದೇವರಸನನ್ನು ತೋರಿಸಿ "ಇವ್ನು ನನ್ಮಗ ಕಣ್ರಪ್ಪ. ಇವನು ಉಂಡಾದ ಮೇಲೆ ಬೋಸಿಗೆ ಒಸಿ ಅನ್ನ ಎಸರು ಕೊಡ್ಬುಡಿ. ಊರೇಲೇ ಉಣ್ಕೊತೀನೀ" ಎಂದುದಕ್ಕೆ ಪುಟ್ಟೇಗೌಡರು "ಸರಿ ನೀನು ಹೊರಡು ಬಿಸಿಲು" ಎಂದು ಅಡಿಗೆ ಮನೆ ಒಳಕ್ಕೆ ಹೋದರು."[೧೨]

ನಮ್ಮ ಗ್ರಾಮೀಣರು ದಲಿತ ಜನರನ್ನು ಹೇಗೆ ದುರುಪಯೋಗಪಡಿಸಿಕೊಳ್ಳುತ್ತಾರೆ ಮತ್ತು ಜಾತಿ ಪದ್ಧತಿಯು ಇಲ್ಲಿ ಬಹು ಮುಖ್ಯವಾಗಿ ಕಂಡುಬರುತ್ತಿದೆ.

ನಮ್ಮ ದೇಶದ ಮೇಲೆ ನೆರೆಯ ರಾಷ್ಟ್ರಗಳು ದಾಳಿ ಮಾಡಿದಾಗ, ಶೇಕಡ ಅರವತ್ತಕ್ಕೂ ಹೆಚ್ಚು ಅನಕ್ಷರಸ್ಥರೂ ಕಡು ಬಡವರೂ ಇರುವ ಭಾರತದ ಹಳ್ಳಿಗಾಡುಗಳಲ್ಲಿ ಶ್ರೀಸಾಮಾನ್ಯರ ಮನಸ್ಥಿತಿ ಹೇಗಿತ್ತು? ಅವರ ಪ್ರತಿಕ್ರಿಯೆ ಏನು? ಎಂಬುದಕ್ಕೆ 'ಮಹಾನವಮಿ' ಕತೆ ಒಂದು ಉದಾಹರಣೆಯಾಗಿದೆ.

ವರ್ಷಕ್ಕೊಮ್ಮೆ ಬರುವ ಮಹಾನವಮಿ ಹಬ್ಬ ಮಾಡಲು ದುಡ್ಡಿಲ್ಲದಿದ್ದರೂ, ತಮಗೆ ಮಾನ ಮುಚ್ಚಲು ಸೀರೆ ಇಲ್ಲದಿದ್ದರೂ, ಇರುವ ದುಡ್ಡಿನಲ್ಲೇ ಸ್ವಲ್ಪ ಭಾಗವನ್ನು ದೇಶದ ಯುದ್ಧದ ಫಂಡ್‌ಗೆ ಖಜಾನೆಯಲ್ಲಿ ಕಟ್ಟುವುದು ದೊಡ್ಡ ತ್ಯಾಗವಾಗಿದೆ. ಇದೇ ನಿಜವಾದ ಮಹಾನವಮಿ ಹಬ್ಬ! ಹೀಗೆ ಸಾಂಕೇತಿಕತೆಯನ್ನು ರಾಮಣ್ಣ ತಮ್ಮ ಕತೆಗಳಲ್ಲಿ ನಿರಾಯಾಸವಾಗಿ ತರುತ್ತಾರೆ.

ಈ ಸಂದರ್ಭದ ವಿವರಣೆಯನ್ನು ಕೆಳಕಂಡಂತೆ ವಿವರಿಸಲಾಗಿದೆ. "ಅದೇನ್ಲ ಚಿಕ್ಕಣ್ಣ, ಗಂಡ ಸತ್ತೋದೋಳಂಗೆ ತಲೇಗೆ ಕೈಕೊಟ್ಟು ಬಿಟ್ಟು ಕುಂತಿದ್ದಲ್ಲ?"

"ಏನೂ ಯಿಲ್ಲಕನೋ, ಅದೇ ಮಾರ್ನಮಿ ಹಬ್ಬ ಬತ್ತಲ್ಲ ಇನ್ನೂ ಐದು ದಿನಕ್ಕೆ!"

"ಅದ್ಕೆ ಕುಂತ್ಕಂಡು ಅಳ್ತಿದ್ದ ಗದ್ದೆ ಅಂಚೇಲಿ!"

"ನಿನಗೇಳಪ್ಪ? ಹಬ್ಬ ಸುಮ್ಮನೆ ಆಗೋದದೆ? ದುಡ್ನು ಬೇಡವೇನೋ!"

"ಲೋ! 'ಹಬ್ಬ' 'ದುಡ್ನು' ಅಂತ ಯಾಕ್ಲ ಸತ್ತಿ ಬಡ್ಕೆತ್ತುದ್ದೆ.

ಮೊದಲು ಹಬ್ಬದಗಂಟ ನಾವು ಬದುಕೇವೋ ಇಲ್ಲವೋ ಅದ ನೋಡವ! ಪಾಕಿಸ್ತಾನದೋರು ಇಮಾನದೇಲಿ ಬಂದು ಬಾಂಬಾಕ್ತಾಯಿದ್ದಾರಂತೆ ಊರೊರ ಮೇಲೆ! ಬೋಜನ, ಹೆಂಗಸರು ಮಕ್ಕಳು ನಿಗತಿಕಂಡುವಂತೆ ಅಂದ್ರೆ!! ಶಾನುಭೋಗ ಹೇಳಿದ್ದು ಕೇಳಿಬಿಟ್ಟು ನನಗೆ ತೊಳ್ಳೆ ಎಲ್ಲ ನಡುಗುಬುಡ್ತು- ಒಸಿ ಹೊತ್ತು- ನಮಗೂ ಪಾಕಿಸ್ತಾನದೋರ್ಗೊ ಯುದ್ಧ ಶುರುವಾಗಿ ಮೂರು ನಾಲ್ಕುದಿನ ಆಯ್ತುಂತೆಕನೊ; ನೀನು ಮಾರ್ನಮಿ ಹಬ್ಬಕ್ಕೆ ದುಡ್ಡಿಲ್ಲ ಅಂತ ಕೊರಗ್ತಾಯಿರು! ಮೊದಲು ಅಷ್ಟು ದಿನಗಂಟ ಬದುಕಿದ್ರೆ ನಮ್ಮ ಪುಣ್ಯಕನೋ.... ಪುಣ್ಯ!" ಮೌನ ಮತ್ತೆ ಚೇತರಿಸಿಕೊಂಡಿತು. ಆದರೆ ಸಿದ್ದಣ್ಣ ಈ ಸಾರಿ ಅದರ ಕತ್ತನ್ನು ಹಿಸುಕಿದ. "ಲೋ ಬಿದಕ್ಲ! ಆ ಶಾನುಭೋಗ ಒಬ್ಬ, ಕತ್ತಲೇಲಿ ಹೊರಕ್ಕೆ ಬರಬೇಕಾದರೆ ಹೆಂಡತಿ ಕರ್ಕಂಡ್ ಬತ್ತಾನೆ- 'ಅಂಥ ಗಂಡಸು ಅವನು'-ಅವನು ಹೇಳುಬುಟ್ಟ, ಇವನು ಕೇಳು ಬುಟ್ಟ: ಕಿಸಬಾಯಿ ಬಿಟ್ಟುಕೊಂಡು ಇಲ್ಲಿ ಹೇಳ್ತಾನೆ. ಅವರ ಇಮಾನ ಎಲ್ಲಾನೂ ನಮ್ಮೋರು ತರಗೆಲೆ ಉದುರಿಸಿದಂಗೆ ಬಡದಾಕ್ತಾವರಂತೆ! ಅವರು ಬರೀ ಸುಳ್ಳುಕತೆ ಕಟ್ಟುತಾ ಅವರೆ, ನಮ್ಮ ಜನಗೋಳೆಲ್ಲ ಹೆದರ್ಲಿ ಅಂತ. ನಮ್ಮೋರೆ ಗೆಲ್ತಾಯಿರೋದು. ಈಗ ಈ ಮಾತು ಪುಟ್ಟಣ್ಣಾರ ಮಗ ಮೈಸೂರಿನಿಂದ ನೆನ್ನೆದಿನ ಬಂದ, ನನಗೆ ಕೇಳ್ಳೊತ್ಕೆ ಎಲ್ಲಾನೂ ಹೇಳವ್ನೆ ಕನ."

ಸಿದ್ದಣ್ಣನ ಮಾತಿನ ಹೊಡೆತಕ್ಕೆ ದಾಸಣ್ಣ 'ಬಾಂಬಿಗಿಂತಲೂ ಜಾಸ್ತಿ ಹೆದರಿದವನಂತೆ ಸುಮ್ಮನೆ ಕುಳಿತುಕೊಂಡ. ಸಹಾಯಕ್ಕೆ ಎಟಕಿಸಿ ಮಾತನಾಡಿದ. "ಪಾಕಿಸ್ತಾನದೋರು, ಅವರ ಜೊತೆಗೆ ಚೈನಾದೋರು

ಎಲ್ಲಾ ನಮ್ಮೇಲೆ ಕತ್ತಿ ಮಸ್ಕಂಡ್ ನಿಂತಿದ್ದಾರಂತೆ! ನಮ್ಮ ದೇಶಕ್ಕೆ ಬಾಳ ಕಷ್ಟ ಅಂತ ನನಗೂ ಅವರಿವರೂ ಮದ್ದೂರೇಲಿ ಮಾತಾಡ್ತಾಯಿದ್ದುದು ಕಿವಿ ಮೇಲೆ ಬೀಳ್ತುಕನೋ! ನಾವು, ಹಿಂಗೆ ಮಾತಾಡಿದ್ರೆ ಏನು ಸುಖ ಬತ್ತು ಬುಡು! ಅವರು ಬಂದ್ರೆ ನಮ್ಮ ಮೇಲೆ ನಾವು ಹಳ್ಳಿಯೋರು ಏನು ಮಾಡಬಲ್ಲೊ?"

"ಎಂಥ ಮಾತು ನೀವೆಲ್ಲ ಆಡೋದು? ಥೂ ಮೈಲಿ ಶಕ್ತಿ, ಉಸಿರು, ರಕ್ತ ಇಲ್ವೆ? ನಾವೆಲ್ಲ ಹೆಣಗೋಳ ಅಂದೆ! ನಡಕಟ್‌ಕಂಡು ಮೂರೊತ್ತು ಮೈ ಬಗ್ಗಿಸಿ, ಗೇದು, ಬತ್ತರಾಗಿ ಬೆಳೆದರೆ ಅದೇನು ನಾವು ನಮ್ಮ ದೇಶಕ್ಕೆ ಮಾಡಬೇಕಾದ ನಮ್ಮ ಪಾಲಿನ ಕೆಲ್ಸ ಅಲ್ವೇನೋ? ಮೊದಲು ಹೊಟ್ಟೆಗಿದ್ರೆ ಆಮೇಲೆ ಉಳಿದುದ್ದೆಲ್ಲ!"

"ಈಗ ಯಾರ್ಯಾರೋ ಯುದ್ಧಕ್ಕೆ ಅಂತ ದಾನಧರ್ಮ, ಸರ್ಕಾರಕ್ಕೆ ಸಾವಿರಾರು ರೂಪಾಯಿ ಚಿನ್ನ, ಬೆಳ್ಳಿ, ಕೊಡ್ತಾಯಿದ್ದಾರಂಥಲ್ಲ ನಾವೇನು ಕೊಡುವಪ್ಪ? ಹೋಗ್ಲಿ ನೀ ಏನ್ ಕೊಟ್ಟೆ?"

"ಕೊಡಬೇಕು ಅಂಥ ಮನಸ್ಸು ಮಾಡಿದ್ರೆ ದೊಡ್ಡದೇ ಅದು. ನೋಡುವಂತೆ ನಾನೀಗ ಮಾರ್ನಮ್ಮಿ ಹಬ್ಬಕ್ಕೆ ಅಂಥ ಮೂವತ್ತು ರೂಪಾಯಿ ಮಡಿಕಂಡೀವ್ನಪ್ಪ ಅದರಲ್ಲೇ ಕೊಡತೀನಪ್ಪ."

"ಹಬ್ಬಕ್ಕೆ"

"ಹಬ್ಬಕ್ಕೆ ಹದಿನೈದು ರೂಪಾಯಿ ಸಾಕು ಎರಚಾಟ. ತಕ್ಕಮಟ್ಟಿಗೆ ಮಾಡಿದರಾಯಿತು. ಉಳಿದ ಹದಿನೈದು ನಾಳಾಕೆ ಮದ್ದೂರಿಗೋಯ್ತೀನಿ ಸರ್ಕಾರಿ ಖಜಾನೆಗೆ ಕಟ್ಟುಬುಟ್ಟು ಬತ್ತೀನಿ. ನಂದು ಆಯ್ತಪ್ಪ. ನೀವಿನು ಕೊಟ್ಟೀಯೋ ವೆಂಕಟಪ್ಪ. ನಮ್ಮೂರೇಲಿ ನೀನೂ ಒಬ್ಬ ಗಟ್ಟಿ ಕುಳವಪ್ಪ."

"ನೀನೇ ಕೊಟ್ಟೆ ಅಂದ್ಮೇಲೆ ನಾನೂ ಒಂದಷ್ಟು ಕೊಡ್ತೀನಿ."[೧೩]

ಸಣ್ಣಕತೆಗಳಲ್ಲಿ ಕಂಡುಬರುವಂತೆ ಬೆಸಗರಹಳ್ಳಿ ಅವರ 'ಮಹಾನವಮಿ' ಕತೆಯಲ್ಲಿ ಗ್ರಾಮೀಣ ಜನರು ನಿರ್ಗತಿಕರಾಗಿದ್ದರೂ ದೇಶದಲ್ಲಿ ಸಂಭವಿಸಬಹುದಾದಂತಹ ಯುದ್ಧದ ಬಗ್ಗೆ ಅಲ್ಪ ಸ್ವಲ್ಪ ಜ್ಞಾನವನ್ನು ಉಪಯೋಗಿಸಿಕೊಂಡು ಹಬ್ಬ ಆಚರಣೆಗಳಲ್ಲಿ ತಮ್ಮ ಅಳಿವು ಉಳಿವುಗಳ ಬಗ್ಗೆ ಚಿಂತಿಸುವುದನ್ನು ಕಾಣಬಹುದು.

ನಮ್ಮ ದೇಶದ ಮೇಲೆ ನೆರೆಯ ರಾಷ್ಟ್ರಗಳು ದಾಳಿ ಮಾಡಿದಾಗ ಶೇಕಡ ಅರವತ್ತಕ್ಕೂ ಹೆಚ್ಚು ಅನಕ್ಷರಸ್ಥರೂ ಕಡು ಬಡವರೂ ಇರುವ ಭಾರತದ ಹಳ್ಳಿಗಾಡುಗಳಲ್ಲಿ ಶ್ರೀಸಾಮಾನ್ಯರ ಮನಃಸ್ಥಿತಿ ಮತ್ತು ಅವರ ಪ್ರತಿಕ್ರಿಯೆಯನ್ನು ಮಹಾನವಮಿ ಕತೆ ವಿವರಿಸುತ್ತದೆ.

ಇವರ ಇನ್ನೊಂದು ಕತೆಯಾದ "ಬೆಟ್ಟದ ಮೇಲೊಂದು ಮನೆಯಮಾಡಿ" ಕತೆಯಲ್ಲಿಯೂ ಸಹ ಸ್ವಾತಂತ್ರ್ಯಾನಂತರದ ಭಾರತದಲ್ಲಿ ಗ್ರಾಮೀಣ ಬದುಕನ್ನು ಕಾಣಬಹುದು.

ಗ್ರಾಮೀಣ ಜನರಲ್ಲಿ ಎಲ್ಲೂರಪ್ಪ ಮತ್ತು ಊರುಗಯ್ಯ ಇವರ ಮಧ್ಯೆ ಕಂಡುಬರುವ ವ್ಯತ್ಯಾಸವನ್ನು ಬಡವ ಶ್ರೀಮಂತ ಯಾವ ರೀತಿ ಕಾರ್ಯೋನ್ಮುಖರಾಗಿರುವುದನ್ನು ಕಾಣಬಹುದು.

ಒಂದು ಜಮೀನುದಾರಿ ವ್ಯವಸ್ಥೆಯ ವಿರುದ್ಧ ಊರುಗಯ್ಯ ಹೋರಾಡುವುದನ್ನು ಕಾಣಬಹುದು. “ಊರುಗಯ್ಯನ ತಾಯಿ ಯಾಕೆ ಇಂತಹ ಅನ್ಯಾಯ ಮಾಡಿದೆ ಎಂದು ಕೇಳಿದಾಗ “ಯಾವುದು ಅನ್ಯಾಯ?” ಎಂದು ಬಿಡಿಸಿಕೊಂಡು ತನ್ನ ಅವ್ವನನ್ನು ಕಣ್ಣಲ್ಲಿ ಅಡಗಿಸಿಕೊಳ್ಳುವವನಂತೆ ಒಂದಷ್ಟು ಕ್ಷಣಗಳು ನೋಡಿ ಹೊರಟ.. ಮತ್ತೆ ಹಿಂದಿರುಗಿ ನೋಡಲಿಲ್ಲ!

ಇವರ ಇನ್ನೊಂದು ಕತೆಯಾದ ‘ಗಾಂಧಿ’ ಕತೆ ರಾಮಣ್ಣನವರ ಅತ್ಯುತ್ತಮ ಕತೆಗಳಲ್ಲಿ ಒಂದು. ಮಹಾತ್ಮಗಾಂಧಿಯ ಹೆಸರು ಹೊಂದಿದ ಹಳ್ಳಿಯ ರೋಗಗ್ರಸ್ತನಾದ ಬಡ ಹುಡುಗ, ಆ ಹೆಸರಿನಿಂದಾಗಿಯೇ ವ್ಯಂಗ್ಯದ ವಸ್ತುವಾಗುವುದು ಈ ಕಥೆಯ ಮುಖ್ಯಧಾಟಿಯಾಗಿದೆ. ಈ ಕತೆಯಲ್ಲಿ ಸ್ವಾತಂತ್ರ್ಯಾನಂತರದಲ್ಲಿ ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಕಡು ಬಡವರಾದ ದಲಿತರ ಬದುಕನ್ನು ಈ ಕತೆ ಚಿತ್ರಿಸುತ್ತದೆ. ಗಾಂಧಿ ಎಂಬ ಹುಡುಗನ ಸಾವಿಗೆ ಬಡತನ, ಅಜ್ಞಾನ ಇವುಗಳಷ್ಟೇ ಕಾರಣವಲ್ಲ; ಡಾಕ್ಟರ್ ಅಧಿಕಾರ ಶಾಹಿಯ ನಿರ್ಲಕ್ಷ್ಯತೆಯೂ ಕಾರಣ ಎಂಬುದನ್ನು ಈ ಕತೆ ಹೇಳುತ್ತದೆ. ಹುಡುಗ ತನ್ನ ಸಾವಿನ ಬಗ್ಗೆ ತಳೆಯುವ ಧೀರ ಧೋರಣೆ, ಅವನ ಆಶೆ ಬಡತನದಿಂದ ಫಲಿಸದೆ ಹೋಗುವುದು, ಆಸ್ಪತ್ರೆಯಲ್ಲಿ ಎಲ್ಲರೂ ಅವನ ಹೆಸರನ್ನು ವ್ಯಂಗ್ಯವಾಗಿ ನೋಡುವುದು ಮುಂತಾದ ವಿವರಗಳು ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತವೆ.

ಕರೀಗೌಡ ಬೀಚನಹಳ್ಳಿಯವರ “ನೆನಪಲ್ಲ ವಾಸ್ತವ” ಕತೆಯಲ್ಲಿಯೂ ಸಹ ಇವರ ಕತೆಯ ತಗ್ಗಳ್ಳಿ ಎಂಬ ಹಳ್ಳಿಯ ಬದುಕಿನ ಚಿತ್ರಣವನ್ನು ನೀಡಿರುವುದು ಭಾರತದ ಗ್ರಾಮೀಣ ಬದುಕನ್ನು ಸಮಗ್ರವಾಗಿ ಹೇಳಿದಂತಿದೆ.

ತಗ್ಗಳ್ಳಿ ಹಾಳೂರಿನ ದಾಖಲೆಗೆ ಸೇರಿದ ಒಂದು ಸಣ್ಣ ಹಳ್ಳಿಯಾಗಿತ್ತು. ಸುಮಾರು ಇನ್ನೂರು ಮನೆಗಳ ಗ್ರಾಮ. ಅಲ್ಲಿ ಮುಸಲ್ಮಾನರಾಗಲೀ, ಹರಿಜನರಾಗಲೀ, ಬ್ರಾಹ್ಮಣರಾಗಲೀ ಇರಲಿಲ್ಲ. ಅಲ್ಲಿ ಒಕ್ಕಲಿಗರು ಮತ್ತು ವಡ್ಡರು ಹೆಚ್ಚು ಇದ್ದರು. ಜೊತೆಗೆ ನಾಕು ಲಿಂಗಾಯಿತರ ಮನೆ, ಒಂದು ಕುರುಬರ ಮನೆ ಇದ್ದವು. ಎಲ್ಲರೂ ವ್ಯವಸಾಯ ಮತ್ತು ಪಶುಪಾಲನೆಯನ್ನೇ ತಮ್ಮ ಮುಖ್ಯ ಕಸುಬನ್ನಾಗಿ ಹೊಂದಿದ್ದರು. ತಿಗಳರಿಗೆ ತೋಟ ಇತ್ತು. ವಡ್ಡರಿಗೆ ಅಲ್ಪಸ್ವಲ್ಪ ಜಮೀನಿತ್ತು. ಅದರ ಜೊತೆಗೆ ಅವರು ಊರಿನ ಮಂಡಿ ಗುಡ್ಡೆಯ ಮೇಲೆ ಕಲ್ಲು ಹೊಡೆದು ಮಾರುವ ವೃತ್ತಿಯನ್ನು ಇಟ್ಟುಕೊಂಡಿದ್ದರು. ಅದರಿಂದ ಅವರಿಗೆ ಅಲ್ಪಸ್ವಲ್ಪ ಆದಾಯವೂ ಇತ್ತು.

ಸ್ವಾತಂತ್ರ್ಯ ಬಂದ ನಂತರವೂ ಸಹ ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ತಮ್ಮ ಜಾತಿಗಳಿಗನುಸಾರವಾಗಿ ತಮ್ಮ ಕುಲಕಸುಬುಗಳನ್ನೇ ಅವಲಂಬಿಸಿರುವುದನ್ನು ಕಾಣಬಹುದು.

ಇವರ ಇನ್ನೊಂದು ಕತೆಯಾದ ‘ಉಗುಳು’ ಕಥೆಯಲ್ಲಿ ಸ್ವಾತಂತ್ರ್ಯಾನಂತರದ ಗ್ರಾಮೀಣ ಬದುಕನ್ನು ನೋಡಬಹುದು.

“ಚನ್ನೇಗೌಡರು ಬಾಯಾಕಿ ಕೇಳಿದರು: ಏನಪ್ಪ ನಿನ್ನ ಹೆಸರು?”

“ನನ್ನೆಸ್ರು ಮಾದೇವ್ ಅಂತ” ಬಾಲಕ ಬಾಯಿ ತೆಗೆದ.

"ಹು ಹು ಹು ಮಾದೇವ್ ಅಂತ ಅವರಪ್ಪ ಇವನ್ಗೆ ಹೆಸರಿಟ್ಟು ಬಿಟ್ಟವ್ನ. ನನ್ ಮಕ್ಕಳು! ಈಗ ಬೋರ, ಕಾಳ, ಗುಡ್ಡೆ, ಕೊಂಡ, ಉಲ್ಲೂರ, ಗುತ್ತಿ ಅಂತ ತಂತಮ್ಮ ಮಕ್ಕಳಿಗೆಲ್ಲ ಹೆಸರಿಡೋದ್ನೆಲ್ಲಾ ಮರೆತು ಬಿಟ್ರು" ಎಂದು ಆಳು ತಿಮ್ಮೇಗೌಡ ಎಗರಾಡಿದ.

"ಹೊರಗೆ ಹೆಸರು ಇಂದ್ರ, ಚಂದ್ರ ಅಂತ ಇಟ್ಕೊಂಡ್ರುನು, ಒಳಗೆ ಮಾತ್ರ ಅವರ ಹುಟ್ಟುಗುಣ ಸುಟ್ರೂ ಹೋಗಲ್ಲ" ಎಂದು ಗೌಡರು ಕೂತಲ್ಲೇ ಹೇಳಿದರು.

"ಏನಪ್ಪ ಮರಿ! ನೀನು ಈ ಹುಡುಗನಿಗೆ ಉಗಿದಿದ್ದು ನಿಜತಾನೆ?" ಎಂದು ಚನ್ನೇಗೌಡರು ಮಾದನ ವಿಚಾರಿಸತೊಡಗಿದರು.

ಬಾಲಕ ಬಾಯಿ ಬಿಡದೆ ತನ್ನ ಅಪ್ಪನ ಪಕ್ಕ ನಿಂತಿದ್ದ. "ಲೇ ಬಿಡೋ ಬಾಯ. ಉಗಿಯೋದಕ್ಕೆ ಆಗ್ತದೆ! ಬಾಯಿ ಬಿಡಕೆ ಆಗಲ್ವಾ? ಇಲ್ಲಿಂದ ಒದ್ರೆ ತಿಂದಿರೋದ್ನೆಲ್ಲಾ ಕಕ್ಕೋಬೇಕು ನೋಡ" ಎಂದು ಆಳು ತಿಮ್ಮೇಗೌಡ ಬಾಲಕನ ಮೇಲೆ ಸಿಟ್ಟಾದ.

ಬಾಲಕ ಬೆಚ್ಚಿ, "ಊ ಉಗಿದೆ" ಎಂದ.

"ಯಾಕೆ ಉಗಿದೆ? ಹೇಳು" ಗೌಡರ ಮಾತು.

"ಸುಮ್ನೆ ಉಗಿದೆ" ಬಾಲಕನ ನುಡಿ.

"ಈಗ ನೀ ಏನೇಳ್ತಿ, ನಿನ್ನ ಮಗನೇ ಈಗ ತಾನೇ ಉಗಿದದ್ದು ನಿಜ ಅಂತ ಒಪ್ಕೊಂಡಿದ್ದಾನೆ" ಎಂದು ಚನ್ನೇಗೌಡರು ಉಲ್ಲೂರಯ್ಯನ ಕೇಳಿದರು.

"ತಾವು ಹಿರಿಯೋರು, ತಿಳಿದೋರು, ನನ್ನ ಹೈದ ತಿಳಿದೋ  ತಿಳಿಯದೆಯೋ ಅಂತ ತಪ್ಪು ಮಾಡಿದೆ. ಅದು ಮಾಡಿಲ್ಲ ಅಂತ ನಾ ಈಗ ಹೆಂಗೇಳ್ಲಿ? ತಾವು ಇದಕ್ಕೆ ನನಗೆ, ನನ್ನ ಮಗನಿಗೆ ಏನು ಶಿಕ್ಷೆ ಕೊಡ್ತೀರೋ, ದಂಡ ಹಾಕ್ತಿರೋ ಅದಕ್ಕೆ ನಾನು ಶಿರಸಾ ವಹಿಸ್ತೀನಿ"[೧೪] ಎಂದ ಉಲ್ಲೂರಯ್ಯ.

ಸ್ವಾತಂತ್ರ್ಯಾನಂತರದಲ್ಲಿ ಗ್ರಾಮೀಣ ಜನರಲ್ಲಿ ಹೆಚ್ಚಿನ ಆಸಕ್ತಿ ವಹಿಸಿ ಸರ್ಕಾರ ಕೆಲವು ನಿಯಮಗಳನ್ನು ದಲಿತರ ಪರ ಜಾರಿಗೆ ತಂದರು. ಆಗ ದಲಿತರು ಕೆಳವರ್ಗದ ಜನರು ಮಾತನಾಡುವುದಕ್ಕೆ ಶುರು ಮಾಡಿದರು.

ದೇವನೂರು ಮಹಾದೇವ ಅವರ ಕಥೆಗಳೂ ಸಹ ಗ್ರಾಮೀಣ ಬದುಕನ್ನು ಚಿತ್ರಿಸುತ್ತದೆ. ಇವರು ತಮ್ಮ ಕಥೆಗಳನ್ನು ಪ್ರಸಂಗಗಳೆಂದು ಕರೆದುಕೊಂಡಿದ್ದಾರೆ. ಸಂಕೇತ ಪ್ರತಿಮೆಗಳ ಗೊಂದಲವಿಲ್ಲದೆ ನೇರವಾಗಿ ಇವರ ಕತೆಗಳು ಇವೆ. ಇವರ 'ಮಾರಿಕೊಂಡವರು' ಕತೆ ಇವರ ಅತ್ಯುತ್ತಮ ಕಥೆಗಳಲ್ಲಿ ಒಂದು. ಈ ಕಥೆಯ ಬೀರ ತನ್ನ ಒಡೆಯ ಗೌಡರ ಮಗ ಕಿಟ್ಟಪ್ಪನಿಗೂ ತನ್ನ ಹೆಂಡತಿ ಲಚುಮಿಗೂ ಅಕ್ರಮ ಸಂಬಂಧವಿದೆ ಎಂದು ತಿಳಿದರೂ ಏನೂ ಮಾಡಲಾಗದ ಪರಿಸ್ಥಿತಿಗೆ ಒಗ್ಗಿಕೊಳ್ಳುತ್ತಾನೆ. "ಹೆಚ್ಚಾಗಿ ಮಾತಾಡೋಕೆ ಅನ್ನ ಹಾಕಿದ ದಣಿ" ಅನ್ನೋ ಗೌರವ. ಅವರ ಬದುಕಿನ ಸಂದರ್ಭವನ್ನು ಕತೆಯ ಮೂಲಕ ವಿವರಿಸಿದ್ದೇನೆ.

ಒಂದು ದಿನ ಸರಾಬಿನ ಬಾಟಲಿಗಳನ್ನು ಬೀರನೇ ಹಲ್ಲು ಕಿರಿಯುತ್ತ ತಂದನು. ಅವತ್ತಿನ ಮಾಂಸವೂ ಹೆಚ್ಚಾಗಿಯೇ ಇತ್ತು. ಇಂದು ಕಿಟ್ಟಪ್ಪ ಬರುವರು ಅಂದ. ಅದಕ್ಕೇನೂ ಮಾತಾಡಲಿಲ್ಲ. ಮಾಡಿಕೊಟ್ಟೆ ಕತ್ತಲಾಗಿ

ಚಣ ಹೊತ್ತು ಕಳೆಯಲು ಕಿಟ್ಟಪ್ಪ ಬಂದರು. ತುಂಬವೆ ಶಿಸ್ತು ಮಾಡಿಕೊಂಡಿದ್ದರು. "ಏನಾರಾ ಮದ್ವೆ ಹೆಣ್ಣ ನೋಡಾಕ ಬಂದಿದಿರಾ ಕಿಟ್ಟಪ್ಪಾ?" ಬೀರ ನಗುನಗುತ್ತ ಅಂದಾಗ ಕಿಟ್ಟಪ್ಪನೂ ನಕ್ಕನು. ಹುಟ್ಟುತ್ತಲೇ ನಗುತ್ತ ಹುಟ್ಟಿದನೇನೋ ಅವ.

ಇಬ್ಬರೂ ತಿಂದರು. ಕುಡಿದರು. ಬೀರನೇ ಹೆಚ್ಚು ಬಗ್ಗಿಸಿಕೊಂಡನು. ಆಮೇಲೆ ಕಣ್ಣು ತೇಲಿಸಿ ಕಾಲು ಚಾಚಿ ಬಿದ್ದುಕೊಂಡನು. ಕಿಟ್ಟಪ್ಪ ಎಷ್ಟು ಹೊತ್ತಾದರೂ ಹೋಗಲಿಲ್ಲ. ನಾನು ಕೋಣೆ ಒಳಕ್ಕೆ ಹೋದೆ. ಕಿಟ್ಟಪ್ಪ ಕೆಮ್ಮಿ ನಾವು ಬರುವುದಕ್ಕೆ ಮುಂಚಿನಿಂದಲೂ ಇದ್ದ ಹಗ್ಗದ ಹುರಿ ಮಂಚದ ಮೇಲೆ ಕುಂತು ಹಾಗೆ ಇದ್ದು ಆಮೇಲೆ ನಿಧಾನಕ್ಕೆ ಅಲ್ಲೇ ಒರಗಿದನು. ಜೀವ ಕೈಲಿಡಿದು ಕೋಣೆ ಒಳಗೆ ಕಂಬಳಿ ಹಾಸಿ ಮಲಗಿ ರಗ್ಗು ಹೊದ್ದು ದೀಪವಾರಿಸಿದೆ. ಕತ್ತಲಾಯಿತು. ಕಣ್ಣು ಮುಚ್ಚಿದರೂ ನಿದ್ದೆ ಸುಳಿಯಲಿಲ್ಲ. ಏನೇನೋ ಊರ ಕಡೆಯ ನೆನಪುಗಳು.

ಸ್ವಲ್ಪ ನಿದ್ದೆಯ ಮಂಕು. ಹಜಾರದಿಂದ ಬೀರನ ಗೊರಕೆ ಚೆನ್ನಾಗಿ ಕೇಳಿಸುತ್ತಿತ್ತು. ಕಿಟ್ಟಪ್ಪನ ಆಗಾಗಲ ಕೆಮ್ಮು, ಹೊರಳಿದಾಗ ಸರಸರ ಸದ್ದು, ಬೀಡಿ ಎಳೆದಾಗಿನ ಕಂಪು ಬೆಳಕು, ಪುನಃ ಬೀರನ ಗೊರಕೆ, ಎಲ್ಲವನ್ನು ಕಾಣದ ಹಾಗೆ ಕರಗಿಸಿಕೊಂಡಿರುವ ಗವಗತ್ತಲು. ಬಿಗಿಯಾಗಿ ಕಣ್ಣು ಮುಚ್ಚಿದರೂ ನಿದ್ದೆಯ ಸುಳಿವೇ ಇಲ್ಲ. ಕೆಮ್ಮುವುದೂ ಕಷ್ಟ. ಉಗುಳು ನುಂಗಲೂ ಆಗದು. ನುಂಗಿದರೆ ಗೊಳಕ್ ಅಂತ ಸದ್ದಾಗುತ್ತದೆ. ಸುತ್ತಲೂ ಎಂಥದೂ ಸದ್ದಿಲ್ಲ. ಅದೇ ದೊಡ್ಡದಾಗಿ ಕೇಳಿಸುತ್ತದೆ."[೧೫]

ಸ್ವಾತಂತ್ರ್ಯಾನಂತರವೂ ಸಹ ಗ್ರಾಮೀಣ ಬದುಕಿನಲ್ಲಿ ದಲಿತರ ಅಸಹಾಯಕತೆಯ ಹಾಗೂ ಪ್ರತಿಭಟಿಸಲಾಗ ದಂತಹ ಕೂಪದಲ್ಲಿ ಇರುವುದನ್ನು ಕಾಣಬಹುದು. ಹೀಗೆ ಸ್ವಾತಂತ್ರ್ಯಾ ನಂತರದಲ್ಲಿ ಗ್ರಾಮದ ಮಹತ್ವ ಭಾರತದಲ್ಲಿ ದಿನದಿಂದ ದಿನಕ್ಕೆ ಹೆಚ್ಚುತ್ತದೆ. ಅವರ ಜೀವನ ವಿಧಾನದಲ್ಲಿ ಸಾಕಷ್ಟು ಬದಲಾವಣೆಗಳನ್ನು ಕಾಣುತ್ತೇವೆ. ಆಧುನಿಕತೆ ಮತ್ತು ಶಿಕ್ಷಣದ ಪ್ರಭಾವದಿಂದ ನಮ್ಮ ಗ್ರಾಮಗಳಲ್ಲಿ ಅನೇಕ ಬದಲಾವಣೆ ಗಳಾಗಿರುವುದನ್ನು ಗಮನಿಸಬಹುದು. ನಮ್ಮ ಗ್ರಾಮೀಣ ಸಮಾಜವನ್ನು ಅನೇಕರು ಅಧ್ಯಯನಕ್ಕೆ ಒಳಪಡಿಸಿರುವುದನ್ನು ಕಾಣಬಹುದು. ಇದರ ಮುಖ್ಯ ಉದ್ದೇಶ ಗ್ರಾಮ ಜೀವನದ ನಾನಾ ಮುಖಗಳನ್ನು ಬೆಳಕಿಗೆ ತರುವುದೇ ಆಗಿದೆ.

ಸ್ವಾತಂತ್ರ್ಯಪೂರ್ವದಲ್ಲಿ ದೇವನೂರ ಮಹಾದೇವರ ಈ ಮೇಲಿನ ಕತೆಯನ್ನು ಅವಲೋಕಿಸಿದಾಗ ಗ್ರಾಮೀಣ ಜನತೆಯು ಊಳಿಗಮಾನ್ಯ ಪದ್ಧತಿಯಲ್ಲಿದ್ದು ಈ ಜನತೆ ತಮ್ಮ ಪರಿಸ್ಥಿತಿಯ ಅರಿವಿದ್ದರೂ ಸಹ ತಮ್ಮ ಮೇಲೆ ನಡೆಯಬಾರದ ಕೃತ್ಯಗಳು ನಡೆದರೂ ಸಹ ಪ್ರತಿಭಟಿಸಲಾರದಂತಹ ಅಸಹಾಯಕತೆಯನ್ನು ಇಲ್ಲಿ ಕಂಡುಕೊಂಡಿದ್ದೇವೆ.

ಗ್ರಾಮೀಣ ಪರಿಸರದಲ್ಲಿ ವಾಸಿಸುವ ಜನರ ಜೀವನ ವಿಧಾನವು ನಗರ ವಾಸಿಗಳ ಜೀವನ ವಿಧಾನಕ್ಕಿಂತ ಭಿನ್ನವಾಗಿರುವುದನ್ನು ಇಂದು ಕಾಣಬಹುದು. ಅವರ ಆಹಾರ-ವಿಹಾರ, ನಡೆ-ನುಡಿ, ಉಡಿಗೆ-ತೊಡಿಗೆ, ಆಚಾರ-ವಿಚಾರ, ವರ್ತನೆ: ಜೀವನಕ್ರಮ ಮೊದಲಾದವು ಗ್ರಾಮೀಣ ಪರಿಸರದಿಂದ ವಿಶೇಷವಾಗಿ ಪ್ರಭಾವಿತ ವಾಗಿರುವುದನ್ನು ಕಾಣಬಹುದು.

ಗ್ರಾಮೀಣ ಜನರ ಆರ್ಥಿಕ ಸ್ಥಿತಿಗತಿ, ರಾಜಕೀಯ ಏರ್ಪಾಡು, ಧಾರ್ಮಿಕ ವ್ಯವಸ್ಥೆ, ನಡವಳಿಕೆ ಮೊದಲಾದವುಗಳು ವಿಶಿಷ್ಟ ಸ್ವರೂಪದವುಗಳಾಗಿರುತ್ತವೆ. ಗ್ರಾಮೀಣ ಸಮುದಾಯಗಳಲ್ಲಿನ ಸಾಮಾಜಿಕ ಸಂಸ್ಥೆಗಳು, ಸಾಮಾಜಿಕ ಚಲನೆ, ಬದಲಾವಣೆಗಳು ನಗರ ಸಮುದಾಯಗಳಿಗಿಂತ ಭಿನ್ನವಾಗಿರುವುದನ್ನು ನಾವು ಇಂದು ಕಾಣಬಹುದು.

ಇಪ್ಪತ್ತನೆಯ ಶತಮಾನದ ನಡುಭಾಗ ಕನ್ನಡ ಸಾಹಿತ್ಯದ 'ನವ್ಯ ವೈಭವ'ದ ದಿನಗಳಾಗಿದ್ದವು. ಈ ಕಾಲ ಘಟ್ಟದಲ್ಲಿ ಕತೆ ಬರೆಯುವವರೂ ಕತೆಗೆ ವಿಮರ್ಶೆ ಬರೆಯುವವರೂ ಒಂದೇ ಆಗಿದ್ದರಿಂದ ಪರಸ್ಪರ ಪೂರಕ ಸಾಹಿತ್ಯವನ್ನೇ ಕಾಣಬಹುದು. ನವೋದಯವು ವಸಾಹತುಶಾಹಿ ದಾಳಿಗೆ ನೇರ ಪ್ರತಿಭಟನೆಯಾಗಿದ್ದರೆ, ನವ್ಯವು ವಸಾಹತುಶಾಹಿಯ ನೇರ ಪ್ರತಿಫಲವಾಗಿತ್ತು. ದೇಶೀಯ ಮೂಲದ ಅಭಿವ್ಯಕ್ತಿ ನೆಲೆಗಳನ್ನು ಹುಡುಕುವ ಅತಿ ಉತ್ಸಾಹದಲ್ಲಿ ಸನಾತನವಾದಿ ನಿಲುವುಗಳ ಜತೆ ಸಮೀಕರಣಗೊಂಡ ಪ್ರಗತಿಶೀಲರ ಒಂದು ವರ್ಗದ ಲೇಖಕರ ಗೊಂದಲದ ಲಾಭ ಪಡೆದ ನವ ವಸಾಹತುಶಾಹಿ ಮೂಲದ ಬಲ ಪಂಥೀಯ ಗುಂಪಿನ ನವ್ಯರು, ಪರಂಪರೆಯ ಆಳದಲ್ಲಿ ಮತ್ತು ಹುಡುಕುವ ಮುಳುಗುತಜ್ಞರಾಗಿ ಬಿಟ್ಟರು.

ಕನ್ನಡದ ಕತೆ-ಕವನಗಳಲ್ಲಿ ನವ್ಯದ ಬೀಜ ಬಿತ್ತಿದ ಮೊದಲಿಗರಲ್ಲೊಬ್ಬರಾದ ಬಿ.ಸಿ.ರಾಮಚಂದ್ರಶರ್ಮ ರಿಂದ ಮೊದಲ್ಗೊಂಡು, ಕನ್ನಡ ಕತೆಗಳಲ್ಲಿ ಮಿಂಚಿದ ಯು.ಆರ್. ಅನಂತಮೂರ್ತಿ, ಯಶವಂತ ಚಿತ್ತಾಲ, ಶಾಂತಿನಾಥ ದೇಸಾಯಿ, ಪಿ.ಲಂಕೇಶ್ ಮುಂತಾದವರು ತಮ್ಮ ಪ್ರತಿಭೆ ಮೆರೆದರಲ್ಲದೆ ಸಾಹಿತಿಗಳೆಂದರೆ ಹೀಗಿರಬೇಕು ಎಂಬ ಆದರ್ಶಪ್ರಾಯರಾದರು.

ನವ್ಯ ಪಂಥದವರ ವಿಜೃಂಭಣೆಯ ದಿನಗಳಲ್ಲಿ ಪ್ರಮುಖ ಕತೆಗಾರರಲ್ಲಿ ಒಬ್ಬರಾದ ಪೂರ್ಣಚಂದ್ರ ತೇಜಸ್ವಿಯವರು ೧೯೭೩ರಲ್ಲಿ ಹೊರತಂದ "ಅಬಚೂರಿನ ಪೋಸ್ಟಾಫೀಸು" ಕಥಾ ಸಂಕಲನವು ಕನ್ನಡ ಕತೆಗಳಿಗೆ ದಿಕ್ಸೂಚಿಯಾಗಿ ಬಿಟ್ಟಿತು. ಬೇರೆ ಬೇರೆ ಕಾಲಘಟ್ಟದಲ್ಲಿ ಆಯಾ ಕಾಲದ ತುರ್ತಿಗನುಸಾರವಾಗಿ ಪ್ರತಿಕ್ರಿಯಿಸುತ್ತಾ ಬಂದಿರುವ ಸೃಜನಶೀಲ ಲೇಖಕರಲ್ಲಿ ಪ್ರಮುಖರಾದವರು ಅನಂತಮೂರ್ತಿ, ಚಿತ್ತಾಲ, ತೇಜಸ್ವಿ, ಲಂಕೇಶ, ದೇಸಾಯಿ, ದ್ಯಾವನೂರು, ಬೆಸಗರಹಳ್ಳಿ ರಾಮಣ್ಣ, ಬೊಳುವಾರು, ಕಾಯ್ಕಿಣಿ, ಕುಂ.ವೀ. ಇನ್ನೂ ಮೊದಲಾದವರನ್ನು ಗುರುತಿಸಬಹುದಾಗಿದೆ.

ಬೆಸಗರಹಳ್ಳಿ ರಾಮಣ್ಣನವರ ಕತೆಗಳಲ್ಲಿ ಬದುಕು ಮತ್ತು ವ್ಯವಸ್ಥೆಯ ನೇರ ಚಿತ್ರಣವನ್ನು ಕಾಣಬಹುದು. ಇವರು ನಮ್ಮ ಹಳ್ಳಿಗಳಲ್ಲಿ ಕಾಣುವ ರೈತ ಕುಟುಂಬದ ಸುಖ ದುಃಖಗಳನ್ನು ಅವರ ಬದುಕನ್ನು ನಿಯಂತ್ರಿಸುವ ನಂಬಿಕೆ, ನಡವಳಿಕೆಗಳನ್ನು, ಮೇಲುನೋಟಕ್ಕೆ ಕಂಡರೂ ಅವರ ಬದುಕಿನಲ್ಲಿ ತುಂಬಿರುವ ಮಾನವೀಯತೆಯ ಸಿರಿಯನ್ನು ಇವರ ಕತೆಗಳಲ್ಲಿ ಕಾಣಬಹುದು. ಇಲ್ಲಿಯ ಎಲ್ಲ ಕಥೆಗಳೂ ಗ್ರಾಮದ ಮತ್ತು ಅಲ್ಲಿಯ ಕುಟುಂಬಗಳ ಜೀವನ ರೀತಿಯನ್ನು ಮತ್ತು ಅವುಗಳ ಸ್ವರೂಪವನ್ನು ಕಾಪಾಡಿಕೊಂಡು ಬಂದಿರುವ ಮೌಲ್ಯಗಳನ್ನು ಪ್ರಶಂಸಿಸುತ್ತವೆ. 'ಸುಗ್ಗಿ' ಕತೆಯಲ್ಲಿ ವ್ಯಕ್ತವಾಗುವ ಕೌಟುಂಬಿಕ ಸ್ನೇಹ, ಅದು ಬದುಕಿಗೆ ನೀಡುವ ಘನತೆ ಉತ್ತಮವಾಗಿದೆ. ಅವರ ಬದುಕನ್ನು 'ಸುಗ್ಗಿ' ಕತೆಯಲ್ಲಿ ನೇರವಾಗಿ ಕಟ್ಟಿಕೊಟ್ಟಿದ್ದಾರೆ.

"ಇಲ್ಲೇನು ಹುಲಿ ಇಲ್ಲ. ಗೋಡೆ ಬಂದೋಬಸ್ತಾಗಿರಬೇಕು ಅಯ್ಯೋ! ಅಣ್ಣ ತಮ್ಮಂದಿರ ಮಧ್ಯೆ ಗೋಡೆ ಭದ್ರವಾಗಿರಬೇಕೆ! ಇಲ್ಲಿ ಹುಲಿ ಇಲ್ಲವೇ ಇದನ್ನು ತಡೆಯೋದಕ್ಕೆ?" ಮೈಕುದಿಯಿತು. ಕೆಂಪ, ಮರಿದಿಮ್ಮ ಆಗಲೆ ಇಟ್ಟಿಗೆಗಳನ್ನು ತೆಗೆದು ಜೋಡಿಸಲು ಶುರು ಮಾಡಿದ್ದನ್ನು ಕಂಡು "ಥೂ! ಮನೆ ಹಾಳ ನನ್ನ ಮಕ್ಕಳು ಇಲ್ಲದ್ದು ಹೇಳಿ ಮನಸ್ಸು ಚೂರು ಮಾಡಿದ್ದೂ ಅಲ್ದೆ, ಮನೇನೂ ಭಾಗ ಮಾಡೋಕೆ ಬಂದ್ರು, ಹುಟ್ಟಿದ ದಿನ ಕಾಣಿಸ್ತೀನಿ" ಎಂದು ಮೂಲೆಯಲ್ಲಿದ್ದ ಗೊಬ್ಬಳಿದಡಿಯನ್ನು ತೆಗೆದುಕೊಳ್ಳಬೇಕು. ಅವರು ಇಟ್ಟಿಗೆ ಇಲ್ಲೇ ಬಿಟ್ಟು ತಮ್ಮನ ಬೆನ್ನು ಸೇರಿದರು. ಒಂದಷ್ಟು ಹೊತ್ತು ಸದ್ದಿಲ್ಲ. "ನನ್ನ ಭಾಗ ನಾನು ಬಿಗಿ ಮಾಡ್ಕೋಳೋಕೆ ಯಾರ್ದೇನು ಅಡ್ಡಿ ಅಂತೀನಿ" ಎಂದು ತಮ್ಮನೆ ಜೋಡಿಸಲಾರಂಭಿಸಿದ. ನನ್ನ ಕಣ್ಣು ಮಂಜುಗಟ್ಟಿದವು. ಕೈಕಾಲು ನಡುಗಿದವು. ಇಷ್ಟು ಹೊತ್ತಿನವರೆಗೂ ಸುಮ್ಮನಿದ್ದ ನಾದಿನಿ ಸರೋಜ ಗಂಡನಿಗೆ ಅಡ್ಡಲಾಗಿ ಬಂದಳು. ಬೇಡಿಂದ್ರೆ. ಇದರ ಅಪರಾಧವೆಲ್ಲ ನನ್ನ ಮೇಲೆ ಬತ್ತದೆ. ಮನೆ ಮುರ್ಕಿ ಅಂತ ಊರೆಲ್ಲ ಕುಣೀತದೆ... ನಿಮ್ಮ... ದಮ್ಮಯ್ಯ ಎಂದು ಕೈ ಹಿಡಿದುಕೊಂಡಳು. ರಾತ್ರಿ ಸಾಕಷ್ಟು ನಿದ್ದೆ ಇಲ್ಲದಿದ್ದರಿಂದ ಕಣ್ಣುಗಳು ಉರಿಯಲಾರಂಭಿಸಿದುವು. ಬೊಗಸೆ ಕೈಯಿಂದ ಉಜ್ಜಿಕೊಂಡರು. ಕಳೆದ ಸುಗ್ಗಿಯಲ್ಲಿ ತನಗೆ ಈ ಪಾಡು ಇರಲಿಲ್ಲ. ತಮ್ಮನೇ ಎಲ್ಲವನ್ನು ಮಾಡುತ್ತಿದ್ದ ತನ್ನದೇನಿದ್ದರೂ ರಾಶಿಗೆ ಪೂಜೆಗೆ ಮಾಡುವ ಹೊತ್ತಿಗೆ ಸರಿಯಾಗಿ ಬಂದು, ತಮ್ಮನೊಡನೆ ಪೂಜೆ ಮುಗಿಸಿ 'ಹೆಚ್ಚಲಿ' ಎಂದು ಮೊದಲನೆಯ ಕೊಳಗವನ್ನು ಅಳೆದು ಚೀಲಕ್ಕೆ ತುಂಬುವುದು- ಅಷ್ಟೆ. ಆದರೆ ಈಗ... ನಿಟ್ಟುಸಿರೊಂದು ಹೊರಬಂತು. ಹಾಗೆಯೇ ಹುಲ್ಲಿನ ರಾಶಿಗೆ ಮೈ ಆನಿಸಿದರು. ಕಣ್ಣು ಎಳೆಯಲಾರಂಭಿಸಿ ಮುಚ್ಚಿಕೊಂಡವು.

ಮನೆಯ ಹಿತ್ತಲಲ್ಲಿ ನಾಲ್ಕೈದು ಗಾಡಿಗಳಷ್ಟು ಇಟ್ಟಿಗೆ ಬಂದು ಬಿದ್ದಿದೆ. ಒಳಗಡೆಗೆ ಯಾರೋ ನಾಲ್ಕೈದು ಜನ ಸಾಗಿಸುತ್ತಿದ್ದಾರೆ. ಮನೆಯ ಹಜಾರದಲ್ಲಿ ಒಂದು ಸಣ್ಣ ರಾಶಿಯೇ ಆಯಿತು. ತಮ್ಮ ಪುಟ್ಟಸ್ವಾಮಿ ತೊಟ್ಟಿಯ ಹತ್ತಿರ ನಿಂತು "ನೋಡು ಕೆಂಪಣ್ಣ, ಮರಿದಿಮ್ಮ ಈ ನಾಲ್ಕನೇ ಕಂಬದ ನೇರಕ್ಕೆ ಸರಿಯಾಗಿ ಬರಬೇಕು. ಅಲ್ಲಿಗೆ ಇತ್ತಾಗರ್ಧ ಸರಿಹೋಗ್ತದೆ" ಎಂದು ಬೆರಳು ಮಾಡಿ ತೋರಿಸುತ್ತಿದ್ದಾನೆ. ಅವರು ಸುಮ್ಮನೆ ನನ್ನ ಮುಖವನ್ನೇ ನೋಡುತ್ತಿದ್ದಾರೆ. ಅವ್ವ, ಒಂದು ಮೂಲೆಯಲ್ಲಿ ಕುಳಿತು ನೀರು ತುಂಬಿದ ಕಣ್ಣುಗಳಿಂದ ನೋಡುತ್ತಿದ್ದಾಳೆ. ಹೆಂಡತಿ ಮತ್ತು ತುಂಬಿದ ಬಸುರಿ ನಾದಿನಿ, ಸರೋಜ ಬೆಪ್ಪಾಗಿ ನೋಡುತ್ತಿದ್ದಾರೆ.

ಕೆಂಪನಿಗಾಗಲೀ ಮರಿದಿಮ್ಮನಿಗಾಗಲೀ ಮುಖ, ನೋಡಿ ಇಟ್ಟಿಗೆ ಮುಟ್ಟುವ ಧೈರ್ಯ ಬರಲಿಲ್ಲ. ತಮ್ಮನೇ ಮತ್ತೆ ಹೇಳಿದ ಯಾಕಂಗೆ ನಿಂತಿದ್ದೀರಿ ತಗೊಳ್ರೋ ಮಾರಾಯ್ರು. ಇಲ್ಲೇನು ಹುಲಿ ಇಲ್ಲ ಗೋಡೆ ಒಳ್ಳೆ ಬಂದೋಬಸ್ತಾಗಿರಬೇಕು. ಮೂರು ಇಟ್ಟಿಗೆ ದಾಯ ಇರಲಿ ಎಂದು ಅವರ ಬೆನ್ನು ತಟ್ಟಿದ."[೧೬]

ಇಲ್ಲಿ ಬೇರೆಯವರ ಮಾತಿನಿಂದ ಎರಡು ಮನಸ್ಸುಗಳ ವಿಘಟನೆ ಕಾಣುತ್ತೇವೆ. 'ಸುಗ್ಗಿ' ಇದು ಸಂಭ್ರಮದ ಸಂಕೇತವಾಗಿ ಕಂಡುಬಂದು ಅಣ್ಣತಮ್ಮಂದಿರ ಮನಸ್ಸುಗಳು ಒಂದುಗೂಡುವುದನ್ನು ಕಾಣುತ್ತೇವೆ.

ಇವರ ಇನ್ನೊಂದು ಕತೆಯಾದ 'ಜೀತ' ಕತೆಯಲ್ಲಿ ವ್ಯವಸ್ಥೆ ಮತ್ತು ಬದುಕಿನ ನೇರ ಚಿತ್ರಣವನ್ನು ನೋಡಬಹುದು. "ರಾತ್ರಿ ಮನಸ್ಸಿಲ್ಲದ ಮನಸ್ಸಿನಿಂದ ಉಂಡು ಪುಟ್ಟಸ್ವಾಮಿ, ಚಿಕ್ಕರಾಮ ಕೈತೊಳೆದು ಮೇಲೆದ್ದರು. ದನದ ಮನೆಯಲ್ಲಿ ಮಲಗಲೆಂದು ಪುಟ್ಟಸ್ವಾಮಿ ತಮ್ಮನನ್ನು ಕರೆದುಕೊಂಡು ಹೊರಟ.

ಎದೆಯಲ್ಲಿ ನೋವು ದುಃಖಗಳೆರಡೂ ಹೆಪ್ಪು ಕಟ್ಟಿದ್ದವು. ಪುಟ್ಟಸ್ವಾಮಿಗೆ ನೆರಳಿನಂತೆ ಹಿಂದೆ ಬರುತ್ತಿರುವ ತಮ್ಮನನ್ನು ದಿಟ್ಟಿಸಿ ನೋಡಿದರಲ್ಲಿ ಅಳು ಉಕ್ಕಿ ಬರುವುದೋ ಎಂದು ಮಾತನಾಡದೆಯೇ ಮಲಗುವ ಜಾಗವನ್ನು ಗುಡಿಸಿ ಹಸನು ಮಾಡಲು ಹೋದಾಗ ಚಿಕ್ಕರಾಮ ಇಲ್ಲಿ ಕೊಡಣ್ಣ ಗುಡಿಸ್ತೀನಿ ಎಂದು ಕೈ ಮುಂದೆ ಚಾಚಿದ. 'ಬ್ಯಾಡ ಸುಮ್ಮನಿರು. ಒಸಿ ಒಡದಿದ್ದಾನ ಅವನ ಮನೆ ಕಿಸಾಂತರವಾಗ, ಮೈ ಬಗ್ಗಿಸಿದರೆ ಪ್ರಾಣ ಹೋಗುವಂಗೆ ಬಾಸುಂಡೆ' ಎಂದು ಸುಮ್ಮನಿರಿಸಿ, ಚಾಪೆ ಹಾಸಿ, ಜಿಡ್ಡು ಹಿಡಿದ ಹಳೆಯ ತಲೆದಿಂಬನ್ನೂ, ಕಂಬಳಿಯನ್ನೂ ತೊಲೆಯ ಮೇಲಿಂದ ತೆಗೆದು ಕೊಟ್ಟು ನೀನು ಮಲೀಕೋ ಎಂದು ಹೇಳಿ ಹುಲ್ಲು ಹಾಕಿ ಆಮ್ಯಾಲೆ ಮಲಿಕತ್ತೀನಿ ಎಂದು ಹೇಳಿ ಹುಲ್ಲು ಹಾಕಿ, ಗೂಟಕ್ಕೆ ಸರಿಯಾಗಿ ಕಟ್ಟಿಹಾಕಿದ್ದಾವ ಎಂದು ಪರೀಕ್ಷೆ ಮಾಡಿದ. ಕೈಗೆ ಒಂದು ಹಿಡಿ ನೆಲ್ಲುಲ್ಲನ್ನು ತೆಗೆದುಕೊಂಡು ಎತ್ತಿನ ಮೈಯನ್ನು ತಿಕ್ಕಲಾರಂಭಿಸಿದ. ಬೆಳಗಿನಿಂದ ದುಡಿದ ಮೈ ನೋವು ಮಾಯವಾಗಲೆಂದು ದಿನವೂ ತಾನು ಮಲಗುತ್ತಿದ್ದಾಗ ಮಾಡುತ್ತಿದ್ದ ಈ ಕೆಲಸ ಅವನಿಗೆ ರೂಢಿಯಾಗಿ ಬಂದಿತ್ತು. ಎಡಗೋಲಿನ ಕತ್ತಿನ ಬಳಿ ತಿಕ್ಕುತ್ತಿದ್ದಾಗ ಎರಡೂ ಅವನನ್ನು ಎಟುಕಿಸಿ ದಿಟ್ಟಿಸಿ ನೋಡುತ್ತ ಅವನನ್ನು ಪ್ರೀತಿಯಿಂದ ನೆಕ್ಕಲು ಪ್ರಯತ್ನಿಸುತ್ತಿರುವುದನ್ನು ಕಂಡು ಎಷ್ಟು ತಡೆದರೂ ಕಣ್ಣು ಮಂಜಾದವು. ಎರಡರ ಹೆಗಲ ಮೇಲೂ ಕೈ ಹಾಕಿ ಕೊಂಬುಗಳ ಮಧ್ಯದಲ್ಲಿ ಬೆಟ್ಟುಗಳಿಂದ ನವಿರಾಗಿ ತುರುಚಲು ಪ್ರಾರಂಭ ಮಾಡಿದ."[೧೭]

ಈ ಮೇಲಿನ ಕತೆಯನ್ನು ಗಮನಿಸಿದಾಗ ಜೀತದಾಳುಗಳು ತಮ್ಮ ಸಹನೆಯನ್ನು ಮೀರಿ ನೋವುಗಳನ್ನು ಸಹಿಸಿಕೊಂಡಿರುವ ತಾಳ್ಮೆಯನ್ನು ಕಾಣಬಹುದು. ಆರ್ಥಿಕವಾಗಿ ದುರ್ಬಲರು, ಅವಿದ್ಯಾವಂತರಾಗಿರುವ ಕಾರಣದಿಂದಾಗಿ ಒಂದು ವ್ಯವಸ್ಥೆಯ ವಿರುದ್ಧ ಪ್ರತಿಭಟಿಸಲಾರದ ಅಸಹಾಯಕತೆಯನ್ನು ಕಾಣುತ್ತೇವೆ.

ಗ್ರಾಮೀಣ ಜನರು ಮನುಷ್ಯರನ್ನು ಹೇಗೆ ಪ್ರಿತಿಯಿಂದ ಕಾಣುತ್ತಾರೋ ಹಾಗೆಯೇ ಪ್ರಾಣಿಗಳನ್ನು ಪ್ರಿತಿಸುವುದನ್ನು ಕಾಣಬಹದಾಗಿದೆ. ಇವರ ಇನ್ನೊಂದು ಕತೆಯಲ್ಲಿ ಗ್ರಾಮೀಣ ಬದುಕಿನ ನೇರ ಚಿತ್ರಣವನ್ನು ಗುರುತಿಸಲಾಗಿದೆ. 'ಅವ್ವ' ಕತೆ.

"ಚನ್ನಣ್ಣನಿಗೆ ತಲೆ ಚಿಟ್ಟು ಹಿಡಿದು ಹೋಯಿತು. ಈ ಹಾಳಾಗೋದೂವು ಅದೇನಿಂಗೆ ಅರಚಾವು ಥೂ" ಎಂದು ಗದರಿಸಿದ. ಕೆಂಪಕ್ಕನಿಗೆ ಕೆಣಕಿದಂತಾಯಿತು. "ಅದಕ್ಕೆ ಅವ್ವ ಅಂದ್ರೆ ಏನು ಅಂತ ಗೊತ್ತಾ. ಅರಚತಾವೆ. ನೀನು ಸುಮ್ಮನಿರು. ನಿನಗೆ ಏನು ಅರ್ಥವಾದಾತು" ಎಂದು ತಾಯಿಯನ್ನು ನೋಡಿದಳು. ಅವರೂ ತಮ್ಮ ಅವ್ವನನ್ನು ಒಳಗೊಳಗೇ ಕರೆದು ಕೊರಗುತ್ತಿರುವುದನ್ನು ಅವರ ಕಳೆಗುಂದಿದ ಮುಖಗಳೇ ಸಾರುತ್ತಿದ್ದುವು. ಅಲ್ಲಿಂದ ದೃಷ್ಟಿ ಕಿತ್ತು ಮಗನ ನೋಡುವುದಕ್ಕೂ ಕರುಗಳು ಮತ್ತೆ 'ಅಂಬಾ' ಎಂದು ಅರಚುವುದಕ್ಕೂ ಒಂದಾಯಿತು. ಚನ್ನಣ್ಣ ಕೊಟ್ಟಿಗೆಗೆ ಹೋಗಿ ಅವುಗಳ ಮುಂದೆ ನಿಂತ. ಅವು ಕತ್ತೆತ್ತಿ ಅವನು ನೀಡಿದ ಕೈಗಳನ್ನು ಪ್ರೀತಿಯಿಂದ ಮೂಸಿ, ನೆಕ್ಕಲಾರಂಭಿಸಿದವು. ಅವನ ಕೈಬೆರಳುಗಳನ್ನು ತಮ್ಮ ಅವ್ವನ ಬಳಿ ಹಾಲು ಕುಡಿಯುವಾಗ ಚೀಪುವಂತೆ ಚೀಪಲಾರಂಭಿಸಿದವು.

ಮಳೆ ಇನ್ನೂ ಸುರಿಯುತ್ತಲೇ ಇತ್ತು. ಮನೆಯವರೆಲ್ಲ ಉಂಡು ಮಲಗುವುದಕ್ಕೆ ಮುಂಚೆ ಚನ್ನಣ್ಣ ಕರುಗಳ ಬೆನ್ನನ್ನು ಚೆನ್ನಾಗಿ ತೀಡಿ ಮುಂದಕ್ಕೆ ಇನ್ನಷ್ಟು ಹಸಿರು ಹುಲ್ಲನ್ನು ಹಾಕಿ, ಬೆಚ್ಚಗೆ ಕೆಡೆದುಕೊಳ್ಳಲಿ

ಎಂದು ಕೆಳಕ್ಕೆ ಒಣ ನೆಲ್ಲುಲ್ಲನ್ನು ಹಾಸಿ ತಾನೂ ಹಜಾರದಲ್ಲಿ ಮಲಗಿಕೊಂಡ. ದೀಪ ತುಂಬಿದ. ಮಿಂಚು ಆಗಾಗ್ಗೆ ಕಾಣಿಸಿಕೊಂಡು ಮಾಯವಾಗುತ್ತಿತ್ತು. ಮಿಂಚಿದ ನಂತರ ಒಮ್ಮೊಮ್ಮೆ ಬರುತ್ತಿದ್ದ ಗುಡುಗಿಗೆ ಕರುಗಳು ಬೆದರಿ ಕೂಗುತ್ತಿದ್ದವು."[೧೮]

ನಮ್ಮ ಗ್ರಾಮೀಣ ಪ್ರದೇಶದಲ್ಲಿ ಅವಿಭಕ್ತ ಕುಟುಂಬಗಳು ಹೆಚ್ಚಾಗಿದ್ದು ವ್ಯವಸಾಯವನ್ನೇ ಮುಖ್ಯ ಕಸುಬನ್ನಾಗಿ ಅವಲಂಬಿಸಿರುವುದನ್ನು ಕಾಣಬಹುದು. ಪ್ರಾಣಿಗಳನ್ನು ಸಹ ತನ್ನ ಜೊತೆಯಲ್ಲಿ ಹುಟ್ಟಿದ ಮನಷ್ಯರಂತೆಯೇ ಕಾಣುವುದನ್ನು ಒಂದು ಸಂಸ್ಕೃತಿಯನ್ನು ಕಟ್ಟಿಕೊಡುವಲ್ಲಿ ರಾಮಣ್ಣನವರ ಈ ಕತೆ ಸಹಾಯಕವಾಗಿದೆ. ಇಲ್ಲಿಯ ಬದುಕು ಪ್ರಾಣಿಗಳನ್ನು ಮನುಷ್ಯರು ನಮ್ಮಂತೆಯೇ ಎಂಬ ದೃಷ್ಟಿಕೋನವನ್ನು ಕಾಣಬಹುದು. ಕಾಣೆಯಾದ ಹಸು ಮತ್ತೆ ಕರುಗಳನ್ನು ಹುಡುಕಿಕೊಂಡು ಅದೇ ಜಾಗಕ್ಕೆ ಬರುವುದನ್ನು ಕಾಣಬಹುದು.

ಇವರದೇ ಇನ್ನೊಂದು ಕತೆಯಾದ 'ಜೀತ' ಕತೆಯಲ್ಲಿ ಬದುಕಿನ ನೇರ ಚಿತ್ರಣವನ್ನು ನೋಡಬಹುದು. "ಚಿಕ್ಕರಾಮ ದನಗಳೆಲ್ಲವನ್ನು ಒಮ್ಮೆ ನೋಡಿ ಮಾವಿನ ಮರದಡಿ ಕುಳಿತ, ಕಣ್ಣುಗಳು ರಾತ್ರಿಯೆಲ್ಲ ನಿದ್ರೆ ಕಟ್ಟಿದ್ದುದರಿಂದ ಉರಿಯತೊಡಗಿದವು. ಜೊತೆಗೆ ಬರುವಾಗ ಗಡದ್ದಾಗಿ ತಂಗಳುಂಡು ಬಂದಿದ್ದುದರಿಂದ ಮೈ ಭಾರವಾಗಿತ್ತು. ದನಗಳು ಸುತ್ತಮುತ್ತಲ ಗದ್ದೆಗೆ ಹೋದರೂ ಅಂಥ ಅನಾಹುತವೇನೂ ಆಗಲಾರದು. ಎಲ್ಲ ತಾನು ಜೀತಕ್ಕಿರುವ ಸಾಹುಕಾರ್ ದೇವಿರಯ್ಯನವರ ಭತ್ತ, ಕಬ್ಬಿನ ಗದ್ದೆಗಳು ಎಂಬ ಧೈರ್ಯದಿಂದಲೋ ಏನೋ ತನ್ನ ಚೌಕವನ್ನು ತಲೆದಿಂಬು ಮಾಡಿಕೊಂಡು ಮಲಗಿದ. ಬೆಳಗಾಗುವುದಕ್ಕೆ ಮುಂಚೆಯೇ ಮೂವತ್ತು ಮಂಕರಿಯಷ್ಟು ಕಸಗುಡಿಸಿ, ಹೊತ್ತು, ತಿಪ್ಪೆಗೆ ಹಾಕಿ, ಆಮೇಲೆ ಒಂದು ಚೀಲ ಹಸಿರು ಹುಲ್ಲನ್ನು ಕುಯ್ದು ಬಂದಿದ್ದುದರಿಂದ ಗಾಢವಾದ ನಿದ್ರೆಬಂತು. ಜೊತೆಗೆ ತಾನು ವೀರ ಅಭಿಮನ್ಯುವಿನ ಪಾತ್ರ ಮಾಡಿದಂತೆ, ಚಕ್ರವ್ಯೂಹದಲ್ಲಿ ಕರ್ಣ, ದ್ರೋಣ ಮುಂತಾದವರನ್ನು ಎದುರಿಸಿ ವೀರಾವೇಶದಿಂದ ಹೋರಾಡಿದಂತೆ ಕನಸು.

ಆಗಲೇ ಮಧ್ಯಾಹ್ನದ ಸಮಯ.

ಒಮ್ಮೆಲೆ ನಾಲ್ಕಾರು ಚಾವಟಿಗಳು ಮೈಮೇಲೆ ಬಾರಿಸಿದಂತಾಗಿ ಚಿಕ್ಕರಾಮ "ಅಯ್ಯೋ" ಎಂದು ಕಿರುಚುತ್ತ ನಿಂತ. ಕಣ್ಣು ಬಿಟ್ಟು ಎದುರಿರುವವರು ಯಾರು ಎಂಬುದನ್ನು ಕಂಡಾಗ ಅವನನ್ನು ಕುದಿಯುವ ಬೆಲ್ಲದ ಕೊಪ್ಪರಿಗೆಗೆ ಎತ್ತಿ ಹಾಕಿದಂತಾಯಿತು. ಕೈಯಲ್ಲಿ ತಾನು ಗದೆ ಎಂದು ಹಿಡಿದು ಮರದ ಸರ್ವೇ ಚಬ್ಬೆಯನ್ನೇ ಹಿಡಿದು ನಿಂತು: "ಲೋ ಸೂಳೇ ಮಗನೆ, ಇದ್ಕೆ ಏನ್ಲ ನಿಂಗೆ ವರ್ಷಕ್ಕೆ ಅರವತ್ತು ರೂಪಾಯಿ ಕೊಟ್ಟು, ಹಿಟ್ಟು ಬಟ್ಟೆ ಕೊಟ್ಟು ಜೀತಕ್ಕೆ ಮಡಕೊಂಡಿರೋದು. ಕಬ್ಬಿನ ಗದ್ದೆಗೆ ನುಗ್ಗಿ ಎರಡು ಪಾತಿ ನುಣ್ಣಗೆ ಮೇಯ್ಕೊಂಡವಲ್ಲೋ" ಎಂದು ಕಾಲಿನ ಮೇಲೆ, ಮೈಮೇಲೆ ಬಾರಿಸತೊಡಗಿದರು. ಏಟು ಬಿದ್ದ ಕಡೆಯೆಲ್ಲ ಬಾಸುಂಡೆ ನುಲಿದುಕೊಂಡು ಬರುತ್ತಿತ್ತು. ಏಟಿನ ಚುರುಕು ತಾಳಲಾಗಲಿಲ್ಲ "ಅಪ್ಪೋ, ಅಪ್ಪೋ, ಅಣ್ಣೋ" ಎಂದು ಕಿರುಚುತ್ತ ಚಿಕ್ಕರಾಮ ಗದ್ದೆ ಬಯಲಿನ ಕಡೆ ಓಡಿದ."[೧೯]

ಈ ಕತೆಯು ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಜಮೀನುದಾರಿ ಪದ್ಧತಿಯು ದಲಿತನಾದ ಚಿಕ್ಕರಾಮನನ್ನು ಹೇಗೆ ಕಷ್ಟದಲ್ಲಿ ಸಿಕ್ಕಿಸುತ್ತದೆ ಎಂಬುದನ್ನು ಚಿತ್ರಿಸುತ್ತದೆ. ಒಂದು ವ್ಯವಸ್ಥೆಯ ಮೂಲಕ ಬಡತನದಲ್ಲಿ ಸಿಲುಕಿದವರಿಗೆ ಯಾವ ರೀತಿಯ ಕಷ್ಟಗಳನ್ನು ಅನುಭವಿಸುತ್ತಾರೆ ಎಂಬುದನ್ನು ತಿಳಿಸುತ್ತದೆ.

ಇವರದೇ ಕತೆಯಾದ ಸ್ವಾರ್ಥ ಕತೆಯಲ್ಲಿಯೂ ವ್ಯವಸ್ಥೆ ಮತ್ತು ಗ್ರಾಮೀಣ ಬದುಕಿನ ನೇರ ಚಿತ್ರಣವನ್ನು ಕಾಣಬಹುದು.

"ಮಧ್ಯಾಹ್ನದ ಬಿಸಿಲ ಜಳಕ್ಕೆ ಸೋತವರಂತೆ ಪುಟ್ಟಸ್ವಾಮಿಗೌಡರು ತೋಟದಲ್ಲಿರುವ ತಮ್ಮ ಶಂಕರ ಮಠದ ಹಜಾರದಲ್ಲಿ ಹಗ್ಗದ ಮಂಚದ ಮೇಲೆ ಕುಳಿತು ಯೋಚನಾಮಗ್ನವಾಗಿದ್ದರು. ತಲೆಯಲ್ಲಿ ಸಂತೆಕಟ್ಟಿದಂತೆ ಗೊಂದಲ. ನಡುಕಲ ಮಗ ಬಿಡಿಸಲಾರದ ಕಗ್ಗಂಟಾಗಿ ಕಾಡತೊಡಗಿದ್ದ. "ಆಹಾ! ಎಂಥ ಮೂರ್ಖ ಮಗನಯ್ಯ ಇವನು. ಹೆಸರಿಗೆ ರಾಮಚಂದ್ರ, ಜನ್ಮ ಕೊಟ್ಟ ಅಪ್ಪನಿಗೆ ನಿದ್ದೆ ಕಿತ್ತುಕೊಂಡ. ಪಾಲು! ಪಾಲು!! ಈ ಎರಡು ಅಕ್ಷರಗಳೇ ಸದಾ ಇವನ ನಾಲಗೆ ಮೇಲೆ. ನಿನ್ನ ಹೆಣದ ಮೇಲಾದರೂ ನಾನು ಪಾಲು ತಗೋಳ್ಳಿಲ್ಲ ಅಂದ್ರೆ ನಾನು ನಿನಗೆ ಹುಟ್ಟಿದೋನೇ ಅಲ್ಲ ಎಂದು ನಡು ಬೀದಿಯಲ್ಲಿ ನಿಂತು ಎರಡು ಹಸ್ತಗಳಿಂದಲೂ ಮಣ್ಣು ಹಿಡಿದು ಪ್ರಮಾಣ ಮಾಡಿದ. "ಹೆಂಡತಿ ಮಗನನ್ನು ತೌರಿಗೆ ಬಿಟ್ಟು ನನ್ನ ಹಿತಶತ್ರು ಆ ಛೇರ್ಮನ್ ಶಿವರಾಮನ ಮನೇಲಿ ಉಣ್ಣುವುದು: ಮಲಗುವುದು" ಎಂದು ಮೆಲ್ಲಗೆ ಗೊಣಗುತ್ತ ಉಸಿರು ಸಿಕ್ಕಿದವರಂತೆ ಮೇಲೆದ್ದರು. ಮಠದ ಹಜಾರ ಬಿಟ್ಟು ತೋಟಕ್ಕೆ ಇಳಿದರು. ಸುತ್ತಮುತ್ತ ನೋಡಿದರು. ತೋಟ ಬೆಳೆಸಲು ತಾವು ಪಟ್ಟ ಕಷ್ಟವನ್ನು ನೆನೆದರು. ಎಂಟು ದಿನಗಳ ಹಿಂದೆ ಅವರಿವರನ್ನು ಕರೆದು ಕೊಂಡು ಬಂದು ತಮ್ಮ ಎದುರಿನಲ್ಲೇ ಎಳನೀರು ಕಿತ್ತು, ಕೆತ್ತಿ ಕುಡಿಯಲು ಕೊಟ್ಟು "ಕುಡೀಲೇ ಮೂದೇವಿ, ಅದೇನು ಹಿಂದೆ ಮುಂದೆ ನೋಡಿ, ಇಲ್ಲೇನು ಹುಲಿ ಇಲ್ಲಕನ. ಏನಾದ್ರೂ ಕದ್ದಿ ಕುಡಿಬೇಕೆ? ನನ್ಗೂ ಹಕ್ಕು ಅದೇಕನ!" ಎಂದು ಮಠದ ಒಳಗೆ ಮಲಗಿರುವ ತಮಗೆ ಕೇಳಿಸಲಿ ಎಂದು ಗಡುಸಾಗಿ ಆಡಿದ ಮಾತು ಜ್ಞಾಪಕಕ್ಕೆ ಬಂದು, "ಶುದ್ಧ ಮೂರ್ಖ ಮುಂಡೇಮಗ ಎಂದರು."[೨೦]

ಹೇಳಿಕೆ ಮಾತಿನಿಂದ ತನ್ನ ತಂದೆಯ ವಿರುದ್ಧವೇ ವರ್ತಿಸುವುದನ್ನು ಕಾಣಬಹುದು. ಇವರದೇ ಇನ್ನೊಂದು ಕತೆಯಾದ 'ಕಕರನ ಉಗಾದಿ' ಕತೆಯಲ್ಲಿ ಗ್ರಾಮೀಣ ಬದುಕಿನ ಕತೆಗಳಲ್ಲಿ ವ್ಯವಸ್ಥೆ ಮತ್ತು ಬದುಕಿನ ನೇರ ಚಿತ್ರಣವಿದೆ.

"ಮಧ್ಯಾಹ್ನದ ಬೇಸಿಗೆ ಬಿಸಿಲ ಜಳದಲ್ಲಿ ಸೊರಗಿದ ಕೆರೆಯ ಏರಿ ಮೇಲೆ ನಿಧಾನವಾಗಿ ನಡೆಯುತ್ತಿದ್ದ ವ್ಯಕ್ತಿ ಬಂದು ಗಕ್ಕನೆ ನಿಂತುನೋಡಿತು. ಕೆರೆಯಲ್ಲಿ ಊರಿನ ಜನರಿಗೆ ನಿತ್ಯದ ಅಂಡುಸ್ನಾನಕ್ಕೆ ಉಪಯೋಗಿಸಲು ಸಾಕಾಗುವಷ್ಟು ನೀರು ಅಂಗೈ ಅಗಲಕ್ಕೆ, ಹಳದಿ ಮಿಶ್ರಿತ ಹಸಿರು ಬಣ್ಣಕ್ಕೆ ತಿರುಗಿದೆ. ಏರಿ ಕೆಳಗಿನ ಭೂಮಿಯಲ್ಲಿ ಸರಿಯಾಗಿ ಬೆಳೆಯಾಗಿ ಮೂರು ವರ್ಷಕ್ಕೂ ಮೇಲಾಗಿದೆ. ಸುತ್ತಾ ಕಣ್ಣಾಡಿಸುತ್ತ, ಯೋಚಿಸುತ್ತ ನಿಂತ ಈ ವ್ಯಕ್ತಿಗೆ ತಲೆ ಸುತ್ತು ಬಂದಂತಾಗಿ ಹತ್ತಾರು ಮಾರು ದೂರಕ್ಕೆ ಬರಡು ಬರಡಾಗಿ ನಿಂತ ಹುಣಸೆ ಮರಗಳ ಕಡೆ ನಡೆದು ಕುಳಿತುಕೊಂಡಿತು.

ಮಳೆ ಏಕೆ ವರ್ಷ ವರ್ಷ ಸರಿಯಾಗಿ ಉಯ್ಯುವುದಿಲ್ಲ. ಬೆಳೆ ಏಕೆ ಆಗುವುದಿಲ್ಲ? ಜನ ಏಕೆ ಮೂಳೆಯ ಹಂದರವಾಗಿ ಬೆಂಕಿಯ ಮೇಲೆ ಮಲಗಿದವರಂಗೆ ಬದುಕಿದ್ದಾರೆ. ಇಡೀ ಊರಿನಲ್ಲಿ ಸಾಹುಕಾರರು, ಶ್ಯಾನುಭೋಗರು ಮತ್ತು ಅಲ್ಲೊಂದು-ಇಲ್ಲೊಂದು ಕುಳಗಳನ್ನು ಬಿಟ್ಟರೆ, ಉಳಿದವರು ಸದಾ ಹೊರೆ ಹೊತ್ತವರಂತೆ ಕುಗ್ಗಿ ಹೋಗಿದ್ದಾರೆ... ಹಾಳು ಯೋಚನೆಗಳು, ಮೆದುಳಿಗೆ ಲಗ್ಗೆ ಹಾಕಿದವು.

ತನಗೂ ಇವಕ್ಕೂ ಏನು ಸಂಬಂಧ ಎಂದು ಕೆದಕಿ ನೋಡುವ ಗೋಜಿಗೆ ಹೋಗದೆ "ನನ್ನದು ನಾನು ತೊಳಕೊಂಡರೆ ಸಾಕು ಯಾರ್ದು ಎಂಗಾರ ಕೊಳ್ತು ನಾರ್ಲಿ" ಎಂದು ಕಣ್ಣು ಮುಚ್ಚಿತು. ಕಣ್ಣಿನ ತುಂಬ ತನ್ನ ಕುಟುಂಬವೆ ತುಂಬಿಕೊಂಡಿತು. ಬಡಕಲಾದ ನಾಲ್ಕು ಗಂಡು ಹೈಕಳು, ದಮ್ಮು ಬಂದು ಕೊಂಯ ಕೊಂಯ ಎಂದು ಆಗಲೋ ಈಗಲೋ ಎನ್ನುವಂತೆ ಘನ ಘೋರವಾಗಿ ಕೆಮ್ಮುತ್ತ, ನರಳುತ್ತ, ತೊಂಟಿಯನ್ನು ಉಗಿಯದೆ ನುಂಗಿ ಅಸಹಾಯಕತೆಯಿಂದ ಪಿಳಪಿಳನೆ ಸುತ್ತ ಕಣ್ಣಾಡಿಸಿ ಮಕ್ಕಳನ್ನು ಕೂರಿಸಿಕೊಂಡು ಅವರ ಬೆನ್ನಮೇಲೆ ಕೈ ಆಡಿಸಿ, ಆಸ್ತಿ ಸಿಕ್ಕಿದವಳಂತೆ ಕೆಲವು ಕ್ಷಣಗಳು ಆನಂದಿಸಿ ಇದ್ದಕ್ಕಿದ್ದಂತೆಯೇ ತನ್ನ ಎದುರಿಗೆ ಕುಳಿತಿರುವ ಬಸುರಿ ಮಗಳನ್ನು ಕಂಡು, ಜೀವ ಉಡುಗಿ ಹೋದಂತಾಗಿ ಕಣ್ಣು ತೇಲಿಸಿದಾಗ ಹೈಕಳೆಲ್ಲ 'ಲಬೋ ಲಬೋ' ಎಂದು ಬಾಯಿ ಬಡಿದುಕೊಂಡ ಸದ್ದುಕೇಳಿ ಓಡೋಡಿ ಹೋಗಿ ನೋಡಿ ಮುಖಕ್ಕೆ ತಣ್ಣೀರೆರಚಿ ಕಣ್ಣು ಬಿಟ್ಟವಳಿಗೆ ಔಷಧಿ ಕುಡಿಸಲು ಯತ್ನಿಸಿ ಸೋತು:

"ಎಂಗಾರ ಸಾಯಿ"

"ನಾನ್ ಸತ್ರೆ ಮಕ್ಕಳ ಗತಿ"

"ದೇವರೆ ಗತಿ"

"ಹಾಳುದೇವರ ಮನೆ ಹಾಳಾಗೋಗ ನಾಳಾಕೆ ಉಗಾದಿ ಹಬ್ಬ ಹೈಕ್ಳು ಅವರಿವ್ರ ಕೈಬಾಯಿ ನೋಡ್ತಾ ನಿತ್ಕಂತವೆ. ಎಲ್ಲಾರು ವಸಿ ದುಡ್ನ ಅಂಬರಿಸಿ, ಇವ್ಳು ಬ್ಯಾರೆ ನಿನ್ನೆ ದಿನದಿಂದ ಬೋ ಸುಸ್ತು ಪಡ್ತಾ ಅವ್ಳೆ"

"ಇವ್ಳು ಕದ್ದು ಬಸುರಾಗು ಅಂದಿದ್ನಾ"

ಕೈ ಹಿಡಿದೋನು ನಾಮರ್ದ, ಇವ್ಳ್ಗಿದೂ ಉಪ್ಪುಕಾರ ತಿಂದ ಮೈ ಅಲ್ವ ಏನೋ ಮಣ್ಣು ತಿಂದ್ಬುಟ್ಳು"

"ಅನುಭವಿಸಲೀ ಬಿಡು! ಆ ಗೌಡ್ರು ಹೈದ್ನ ತಾವು ಕಿಲಕಿಲ ಅಂತ ನಗ್ತಾ ಮಾತಾಡೋಕೆ ನಿಂತ್ರೆ ನಮ್ಮ ಯಾರ್ರೂ ಒಂದು ಪೈಸೆಗೆ ಜಮಾ ಖರ್ಚಿಗೆ ತಗೋತಿರ್ಲಿಲ್ಲ."[೨೧]

ಇದರಲ್ಲಿ ಕಕರನ ಬಡತನ ಜೀತ ಮತ್ತು ಜಾತಿ ಪದ್ಧತಿಯ ಶೋಷಣೆಯನ್ನು ಕಾಣಬಹುದು. ದಲಿತನಾದ ಕಕರನ ದುರಂತವನ್ನು ಇದು ಹೇಳುತ್ತದೆ. ಸುಪ್ತಕಾಮ, ಜೀತ ಪದ್ಧತಿ, ಹಳ್ಳಿಗಳ ಬಾಳಿನ ಗೋಳಿನ ವಿವರಗಳು ತಮ್ಮ ಸಮಾಜದ ದುಷ್ಟ ಶಕ್ತಿಗಳು ಈ ಕಥೆಯಲ್ಲಿ ದಾಖಲಾಗಿರುವುದನ್ನು ಕಾಣಬಹುದು.

"ಕಲೆ ಅನುಭವದ ಮೂಸೆಯಿಂದ ರೂಪುಗೊಳ್ಳುವುದಾದರೆ ಅದು ಸಾಮಾನ್ಯವಾದುದಾದರೂ ಜೀವಂತವಾಗಿರಬಲ್ಲದೆಂಬುದನ್ನು ಇಲ್ಲಿನ ಕಥೆಗಳಲ್ಲಿ ನಾವು ನೋಡಬಹುದು. ರಾಮಣ್ಣನವರ ಕಥೆಗಳಲ್ಲಿ ಧಾರಾಳವಾದ ಜೀವನ ಶ್ರದ್ಧೆಯಿದೆ: ಗ್ರಾಮ ಜೀವನದ ಹಲ ಬಗೆಯ ಚಿತ್ರಣವಿದೆ. ಬದುಕಿನ ನಿಜ ಮೌಲ್ಯಗಳಲ್ಲಿ ಆಸಕ್ತರಾಗಿರುವ ಯಾರಿಗೂ ಅವರ ಬರವಣಿಗೆ ನಿರಾಶೆಯನ್ನುಂಟು ಮಾಡುವುದಿಲ್ಲ. ಹಾ.ಮಾ. ನಾಯಕರ ಮಾತು ಈ ಕೃತಿಯ ಸ್ವರೂಪವನ್ನು ಚೆನ್ನಾಗಿ ಹಿಡಿದಿಟ್ಟಿದೆ."[೨೨]

ಇವರ ಈ ಸಂಧರ್ಭಕ್ಕೆ 'ಗಾಂಧಿ' ಕತೆ ಒಂದು ಉತ್ತಮ ಉದಾಹರಣೆಯಾಗಿದೆ. "ಮಹಾತ್ಮಗಾಂಧಿಯನ್ನು ಮೂವತ್ತು ಜನರು ಇರಬೇಕಾದ ವಾರ್ಡಿನಲ್ಲಿ ಅರವತ್ತು ಜನರಿರುವ ಕಡೆ ನೆಲದ ಮೇಲೆ ಒಂದು ಹಾಸಿಗೆ

ಕೊಟ್ಟು ಹಾಕಿದರು. ಎಕ್ಸ್‌ರೇ, ತೊಂಟಿ ಪರೀಕ್ಷೆಗಳ ಜೊತೆಗೆ ಔಷದೋಪಚಾರ ನಡೆಯ ತೊಡಗಿತು. ವೈದ್ಯರು ಬರೆದು ಕೊಟ್ಟ ಔಷಧಿಗಳನ್ನು ತಂದು ಕೊಡುವುದಕ್ಕೆ ಮೂರು ದಿವಸಕ್ಕೆ ಕರಿಸಿದ್ದೇಗೌಡನ ಪುಟ್ಟಗಂಟು ಕರಗಿ ಹೋಯಿತು.

ನಾಲ್ಕನೆಯ ದಿನ ತನ್ನ ಅವ್ವ ನಿಂಗಮ್ಮ ತನ್ನ ತಂಗಿಯ ಕಿವಿಯ ಮತ್ತು ತನ್ನ ಕಿವಿ ಓಲೆಗಳನ್ನು ಬಿಚ್ಚಿ ತನ್ನ ಅಯ್ಯನಿಗೆ ಏಕೆ ಕೊಡುತ್ತಿದ್ದರೆಂಬುದನ್ನು ಊಹಿಸಿ, ತನ್ನ ಪ್ರೀತಿಯ ಅಯ್ಯನನ್ನು ಕರೆದು ಕೇಳಿದ: "ಅಯ್ಯಾ ನನ್ನ ಊರಿಗೇ ಕರ್ಕೊಂಡು ನಡಿ, ನನ್ನ ಹಣೇಬರಹ ಇದ್ದಂಗಾಯ್ತದೆ"

"ಅಂಗೆಲ್ಲ ಮಾತಾಡಬ್ಯಾಡ ನಾನೂ ಇನ್ನೂ ಬದುಕಿವ್ನಿ ಕಲ ಮಗ, ನಿನ್ನ ಉಳಿಸಿಕೋತೀನಿ"

ತನ್ನ ಮೇಲೆ ಅಯ್ಯನಿಗಿರುವ ಪ್ರೀತಿಗಾಗಿ ಗಾಂಧಿಗೆ ಅಳು ಒಳಗಿಂದ ಗುದ್ದುಕೊಂಡು ಬಂತು. ತನ್ನ ಪ್ರೀತಿಯ ಅಯ್ಯನ ತೊಡೆಯ ಮೇಲೆ ತಲೆ ಮಡಗಿಕೊಂಡು ದೃಷ್ಟಿಗೆ ದೃಷ್ಟಿ ಸೇರಿಸಿ ಹೇಳಿದ :

"ಅಯ್ಯ ನಾನು ಸತ್ತೋದ್ರೆ ನನ್ನ ನಮ್ಮ ಅಲಸಿನ ಮರದ ಬುಡದಲ್ಲೇ ಹಾಕಬೇಕು." ಕರಿಸಿದ್ದೇಗೌಡ ಬಿಕ್ಕಿ ಬಿಕ್ಕಿ ಅತ್ತುಬಿಟ್ಟ. ನಿಂಗಕ್ಕ 'ಬುಡ್ತು ಅನ್ನು' ಎಂದು ಗಾಂಧೀಯನ್ನು ಗದರಿಕೊಂಡಳು. ಪದ್ದಿ 'ಅಣ್ಣಾ ಅಣ್ಣಾ' ಎಂದು ಬಿಕ್ಕಳಿಸಿ ಅತ್ತುಬಿಟ್ಟಳು.

ಇಷ್ಟೆಲ್ಲಾ ನಡೆಯುತ್ತಿರುವಾಗ ಎಂ.ಡಿ. ಪಾಸು ಮಾಡಿರುವ ದೊಡ್ಡ ಡಾಕ್ಟರ್ ಸಾಹೇಬರು ದಯಮಾಡಿಸಿ, ಗಾಂಧಿಯನ್ನು ಪರೀಕ್ಷೆಮಾಡಿ ಒಂದು ಚೀಟಿಯಲ್ಲಿ ಔಷಧಿಯನ್ನು ಬರೆದು ಆದಷ್ಟು ಬೇಗ ತರಿಸಬೇಕೆಂದು ಅಪ್ಪಣೆ ಮಾಡಿ ಬೇರೆ ರೋಗಿಗಳನ್ನು ನೋಡ ತೊಡಗಿದರು. ಮಗಳು ಮತ್ತು ಮೊಮ್ಮಗಳು ಓಲೆಗಳನ್ನು ತೆಗೆದು ಕೊಂಡು ಊರಿಗೆ ಬಂದು ಕರಿಸಿದ್ದೇ ಗೌಡ ಗಿರವಿ ಇಡಲು ಪ್ರಯತ್ನಿಸಿದ. ಯಾರೂ ಒಪ್ಪಲಿಲ್ಲ. ಸಾಲ ಪಡೆಯಲು ಯತ್ನಿಸಿದ, ಎಲ್ಲೂ ಒಂದು ಪೈಸೆ ಹುಟ್ಟಲಿಲ್ಲ. ಹಲಸಿನಮರ ಕೊಡುವುದಾದರೆ ಕೊಂಡು ಕೊಳ್ಳುವುದಾಗಿ ಸುಳಿವು ಸಿಕ್ಕಲು, ಇನ್ನೂರ ಐವತ್ತು ರೂಪಾಯಿಗಳಿಗೆ ಮರವನ್ನು ಮಾರಬೇಕಾದರೆ ಎರಡು ದಿವಸಗಳು ಹಿಡಿದುವು. ಹಣ ಪಡೆದು ಕರಿಸಿದ್ದೇಗೌಡ ಬಸ್ಸು ಹತ್ತಿ ಆಸ್ಪತ್ರೆಯ ಬಳಿಗೆ ಬಂದಾಗ ಮಗಳು ನಿಂಗವ್ವ ಬಾಗಿಲಲ್ಲೇ ಪದ್ದಿಯನ್ನು ನಿಲ್ಲಿಸಿಕೊಡು ಅಳುತ್ತ ನಿಂತಿದ್ದಳು. ಕರಿಸಿದ್ದೇಗೌಡ 'ಗಾಂಧಿ' ಹೇಗಿದ್ದಾನೆ? ಎಂದು ಕೇಳಲೇ ಇಲ್ಲ ಬದಲು ಯಾವಾಗ ಜೀವ ಹೋಯ್ತು? ಎಂದು ಕೇಳಿದ.

"ರಾತ್ರಿ ಸರೋತ್ತಿನಲ್ಲಿ ಹೆಣೇನ ಮನೇಲಿ ಮಲಗಿಸವ್ರೆ" ಎಂದು ಅಳಲು ಪ್ರಾರಂಭಿಸಿದ ಮಗಳನ್ನು ಸಂತೈಸುತ್ತ ಕರಿಸಿದ್ದೇಗೌಡ ಹೇಳಿದ. "ಮನುಷ್ರು ಸಾಯ್ದೆ ಕಲ್ಲು ಸತ್ತಾದ 'ಸುಮ್ಕಿರು ಮಂತೆ' ಎಂದು ಗಾಂಧೀಯ ಹೆಣವನ್ನು ಪಡೆಯಲು ಅಪ್ಪಣೆಗಾಗಿ ದೊಡ್ಡ ಸಾಹೇಬರ ರೂಮಿನ ಕಡೆ ಹೆಜ್ಜೆ ಹಾಕಿದ."[೨೩]

'ಗಾಂಧಿ' ಕಥೆಯಲ್ಲಿ ಬರುವ 'ಗಾಂಧಿ' ಎಂಬ ಬಡ ಹುಡುಗನ ಸಾವು ಗಾಂಧೀಜಿಯ ಎರಡನೆಯ ಸಾವು ಎಂಬಂತೆ ಧ್ವನಿ ಹೊಮ್ಮಿಸುತ್ತದೆ. ಆದರೆ ಹುಡುಗನ ಸಾವಿಗೆ, ಅವನ ಸುತ್ತಲಿನ ಪರಿಸರ, ವ್ಯವಸ್ಥೆ ಕಾರಣವಾಗುವುದರ ಬದಲು ಕುಟುಂಬದ ಮುಗ್ಧತೆ ಹಾಗೂ ಬಡತನವೇ ಕಾರಣವಾಗಿರುವಂತೆ ಕಥೆಯ

ಅಂತ್ಯ ಸೂಚಿಸುತ್ತದೆ. ಹುಡುಗನ ತಂಗಿಯರು ಔಷಧಿಗಾಗಿ ಓಲೆಗಳನ್ನು ಗಿರವಿ ಇಡಲು ಕೊಡುವುದು. ಮತ್ತು ಹುಡುಗನ ಅಜ್ಜ ದುಡ್ಡಿಗಾಗಿ ಪರದಾಡುವುದು. ಈ ಚಿತ್ರಣ ಬಡತನದ ಬಗ್ಗೆ ಮರುಕ ಹುಟ್ಟಿಸುತ್ತದೆ.

"ಗಿರಡ್ಡಿಯವರ ಮಾತಿನಲ್ಲಿ ಹೇಳುವುದಾದರೆ "ಮಹಾತ್ಮಗಾಂಧೀಜಿಯ ಹೆಸರು ಹೊಂದಿದ ಹಳ್ಳಿಯ ರೋಗಗ್ರಸ್ತ ಬಡ ಹುಡುಗನೊಬ್ಬ ಆ ಹೆಸರಿನಿಂದಾಗಿಯೇ ವ್ಯಂಗ್ಯದ ವಸ್ತುವಾಗುವುದು ಕಥೆಯ ಮುಖ್ಯ ಧಾಟಿಯಾಗಿದೆ. ಈ ಹಿನ್ನೆಲೆಯಲ್ಲಿ ಆ ಹುಡುಗನ ದುರಂತಕ್ಕೆ ಬಡತನ, ಅಜ್ಞಾನಗಳೇ ಕಾರಣವೆಂದು ಕಥೆ ಒತ್ತಿ ಒತ್ತಿ ಹೇಳುತ್ತದೆ." (ಗಿರಡ್ಡಿ ಗೋವಿಂದರಾಜ-೧೯೮೩) [೨೪]

ಗಾಂಧೀಜಿಯವರ ಬಗೆಗೆ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಏನೆಲ್ಲ ಗೊಂದಲಗಳು ವಿಚಾರಗಳು ರೂಪುಗೊಂಡಿದ್ದವು ಎಂಬುದರ ಗಂಭೀರ ಚಿತ್ರಣವೇ ಈ ಕಥೆ. ಒಂದೆಡೆ ಭಕ್ತಿಪೂರ್ವಕಗೌರವ, ಮತ್ತೊಂದೆಡೆಗೆ ಅಪಹಾಸ್ಯಗಳು ಹುಟ್ಟಿಕೊಂಡು ಇಂದಿಗೂ ನಮ್ಮಲ್ಲಿ ಚಾಲ್ತಿಯಲ್ಲಿವೆ. ಇದರಲ್ಲಿ ಭಾವೋದ್ವೇಗ ಮತ್ತು ಆದರ್ಶಗಳ ವಿಡಂಬನೆಯು ಅಸಹಾಯಕ ನೆಲೆಯಿಂದ ವ್ಯಕ್ತವಾಗಿದೆ. ಗಾಂಧಿ ಹೆಸರಿನ ವ್ಯಂಗ್ಯವು ಆ ಹುಡುಗನು ಸಾವು ಕಾಣುವವರೆಗೆ ತೀವ್ರವಾಗಿದೆ. ಇದು ಗಾಂಧೀಜಿಯವರ ಎರಡನೆಯ ಮರಣವನ್ನೇ ಧ್ವನಿಸುತ್ತದೆ ಎಂಬುದರಲ್ಲಿ ಎರಡು ಮಾತಿಲ್ಲ.

ಇವರ ಇನ್ನೊಂದು ಕತೆಯಾದ 'ಸಂತೆಯ ಒಳಗೊಂದು ಮನೆಯ ಮಾಡಿ' ಕತೆಯಲ್ಲಿ ವ್ಯವಸ್ಥೆ ಮತ್ತು ಬದುಕಿನ ನೇರ ಚಿತ್ರಣವನ್ನು ಕಾಣಬಹುದು. "ಊರಿನ ಅಂಗಡಿ ಬೀದಿಯ ಚೌಕದಲ್ಲಿ ರಾಜ ಕೈಯಲ್ಲಿ ಉಪ್ಪಿನ ಪೊಟ್ಟಣವನ್ನು ಹಿಡಿದು ಮುಖ ಕೆಳಗೆ ಮಾಡಿಕೊಂಡು ಬಿದ್ದಿದ್ದ. ತಲೆಯಿಂದ ರಕ್ತ ಸೋರುತ್ತಿತ್ತು. ಚೌಕದ ಸುತ್ತಮುತ್ತ ಜನಕ್ಕೇನೂ ಬರ ಇರಲಿಲ್ಲ. ಅನೇಕ ಚಿಲ್ಲರೆ ಅಂಗಡಿ, ಬಟ್ಟೆ ಅಂಗಡಿ ಜೊತೆಗೆ ಭೈರವೇಶ್ವರ ಮತ್ತು ಲಕ್ಷ್ಮೀನಾರಾಯಣ ದೇವಸ್ಥಾನಗಳ ಮಧ್ಯೆ ನಡೆದ ಈ ಘಟನೆ ಜನಕ್ಕೆ ಕುತೂಹಲಕಾರಿಯೂ ಆಗಿರಲಿಲ್ಲ. ಅಥವಾ ಸಹಾಯ ಮಾಡುವ ಇಚ್ಛೆಯಿದ್ದರೂ, ಎಲ್ಲರನ್ನೂ ಯಾವುದೋ ಒಂದು ಅವ್ಯಕ್ತ ವಿಷಯ ಬಂಧಿಸಿದಂತೆ ತೋರುತ್ತಿತ್ತು. ಹುಡುಗ ಹೊಲೆಯರ ಜಾತಿಯವನಾದುದರಿಂದ ಎಲ್ಲರ ಹೃದಯದಲ್ಲಿ ಕರುಣೆ ಸತ್ತಿತ್ತು. ಆದರೂ 'ಯಾರು ಈ ಹುಡುಗ?' ಆ ಅಯ್ಯೋಗ್ಯ ಸೂಳೆಮಗ ಸೈಕಲ್ಲು ಬಿಟ್ಟುಬಿಟ್ಟು ಹೊರಟೇ ಹೋದನಲ್ಲ: 'ಅಯ್ಯೋ ದೇವರೆ ರಕ್ತ ಎಷ್ಟು ಸುರಿತಾ ಅದಪ್ಪಾ! ಇತ್ಯಾದಿ ಗುಸು ಗುಸು ಸದ್ದು ನಡೆಯುತ್ತಿದ್ದಾಗ ಎದೆ ಚಚ್ಚಿಕೊಂಡು ಓಡೋಡಿ ಬಂದ ಹೊಂಬಾಳೆ: "ರಾಜು"ಎಂದವಳೆ ಮಗನ ತಲೆಯನ್ನು ಎತ್ತಿಕೊಂಡು ಸುರಿಯುತ್ತಿದ್ದ ರಕ್ತ ಕಂಡು ಹಾಗೆಯೇ ಮೂರ್ಛೆ ಹೋದಳು. ಪುಟ್ಟಣ್ಣ ಅರಸಿಯನ್ನೂ ಮತ್ತು ತನ್ನ ಕೇರಿಯ ಒಂದು ಗುಂಪನ್ನೇ ಕರೆದುಕೊಂಡು ಅಲ್ಲಿಗೆ ಓಡೋಡಿ ಬಂದ. ಸುತ್ತ ನಿಂತಿರುವ ಜನಕಂಡು ಅವನಿಗೆ ಜುಗುಪ್ಸೆ ಆಯಿತು. ಇನ್ನೂ ಆಸ್ಪತ್ರೆ ಮುಚ್ಚಲು 'ಟೈಂ' ಅದೆ ಎನ್ನಿಸಿ ರಾಜನನ್ನು ಎತ್ತಿಕೊಂಡು ಆಸ್ಪತ್ರೆ ಕಡೆಗೆ ನಡೆದ. ಪುಟ್ಟನನ್ನು ಹಿಂಬಾಲಿಸಿದ್ದ ಕೇರಿಯ ಸ್ತ್ರೀ ಸಮೂಹ ಹೊಂಬಾಳೆಯ ಯೋಗಕ್ಷೇಮದಲ್ಲಿ ನಿರತವಾಯಿತು. ಅಳುವ ಅರಸಿಯನ್ನು ಗದರಿಸಿ ಸುಮ್ಮನಿರಿಸಲು ಯತ್ನಿಸತೊಡಗಿದರು." [೨೫]

ಇಂದಿಗೂ ಸಹ ಜಾತಿವ್ಯವಸ್ಥೆಯಲ್ಲಿ ಜನರಲ್ಲಿ ಮೇಲು ಕೀಳು ಎಂಬ ಭಾವನೆಯನ್ನು ಅಗಾಧವಾಗಿ ಮೂಡಿಸಲಾಗಿದೆ.

ಇವರದೇ ಇನ್ನೊಂದು ಕತೆಯಾದ 'ಸೋಲು' ಕತೆಯಲ್ಲಿ ಬದುಕಿನ ನೇರ ಚಿತ್ರಣವನ್ನು ಗುರುತಿಸಿದ್ದೇನೆ.

"ಕಬ್ಬಿನ ಗರಿಗಳೆಲ್ಲ ಒಮ್ಮೆಯೇ ಕತ್ತಿಯ ಮೊನೆಯಂತಿರಿದಂತಾಗಿ ಎದೆಯಲ್ಲಿ ಹೇಳಲಾರದ ನೋವು ಕೋಪ ತುಟಿಗಳನ್ನು ಹಲ್ಲಿಂದೊಮ್ಮೆ ಕಚ್ಚಿ, ಆಮೇಲೆ 'ಥತ್' ಎಂದು ಉಗುಳಿದರು. ಉಗುಳಿದ ಶಬ್ದಕ್ಕೆ ಮೈಮರೆತು ಮಲಗಿದ್ದವು. ಎಚ್ಚರವಾಗಿ ಯಾರು ಬಂದರೆಂದು ನೋಡುವುದರೊಳಗೆ ಗೌಡರು ತೆವರಿಯ ಮೇಲೆ ಬೇಗ ಬೇಗನೆ ಹೆಜ್ಜೆ ಹಾಕುವಾಗ ಕಾಲು ತಪ್ಪಿ ಬಿದ್ದು ಮೊಣಕೈ, ಮಂಡಿ ಪರಚಿಕೊಂಡು ಮತ್ತೆ ಸಿಟ್ಟಿನಿಂದ ಎದ್ದು ನಡೆದರು. ನೆಟ್ಟಗೆ ತೋಟದ ಬಳಿ ಬಂದು, ಬಾಗಿಲನ್ನು ತಳ್ಳಿ ತೆಂಗಿನ ಮರ ಒಂದಕ್ಕೆ ಮೈ ಆನಿಸಿ ನಿಂತುಕೊಂಡರು.

ಕೋಪ!

ನೋವು!

ತಿರಸ್ಕಾರ!! ಎಲ್ಲದರ ತೌರಾಯಿತು ಮೈ. "ಅಯ್ಯೋ! ಪಾಪಿ" ಎಂದು ಕಣ್ಣು ಮುಚ್ಚಿದಾಗ ಏನೋ ಕಂಡಂತಾಗಿ ಬೆಚ್ಚಿಬಿಟ್ಟು ನೋಡಿದರು. ಬರಿಯ ಬಿಸಿಲು-ಮರಗಳ ನೆರಳು. ಅಷ್ಟೆ.

ಸುಬ್ಬಿ ತಾನು ಆ ವಿಷಯ ಹೇಳಿದಾಗ ಬಾಯಿಯ ಮೇಲೆ ಕೈ ಮಡಗಿದ್ದೇಕೆ. ಕೆಂಪಿಯ ವಿಚಾರದಲ್ಲಿ ಎಂಬುದು ಇಂಥ ಕಠೋರ ದೃಶ್ಯದಲ್ಲೇ ತನಗರಿವಾಗಬೇಕಿತ್ತೆ.

...ಅಯ್ಯೋ ಮಗನೇ!

...ಥೂ! ಕೆಂಪಿ.... ನಿನ್ನೊಡನೆ? ಕಣ್ಣು ಮುಚ್ಚಿದರು.

"ಕೀಚ್...ಕೀಚ್...ಚೀಕ್...ಚೀಕ್....ಗುರ್" ಮರದ ಮೇಲೆ ಸುಮ್ಮನೆ ಒಂದೇ ಬಗೆಯ ಸದ್ದು. ನೋಡಿದರು. ಎಳನೀರನ್ನು ಕಿತ್ತು; ಕೊರೆದು ತಿನ್ನುತ್ತಿವೆ ಕೋತಿಗಳೆರಡು. ಕೈ ಎತ್ತಿ ಗದರಿಸಿದರು. ಒಂದು ಕೋತಿ 'ಗುರ್' ಎಂದು ಲೆಕ್ಕಿಸದೆಯೇ ಮೂತಿಯನ್ನು ಮುಂದಕ್ಕೆ ತಂದು ಎರಡು ಮೂರು ಸಾರಿ ಹಲ್ಲುಗಿಂಜಿ ಅಣಕಿಸಿತು. ಬಗ್ಗಿ ಕೈಗೆ ಸಿಕ್ಕಿದ ಮಣ್ಣಿನ ಹೆಂಟೆ ಒಂದನ್ನು ತೆಗೆದು ಹೊಡೆಯಲು ಕೈ ಎತ್ತಿದಾಗ ...ಒಮ್ಮೆಲೇ ಎರಡು ಕೋತಿಗಳೂ ಹಲ್ಲುಗಿಂಜಿ 'ಗುರ್ ಗುರ್' ಎಂದು ಅಣಕಿಸಬೇಕೆ!

ಮೇಲೆತ್ತಿದ ಕೈ ಇಳಿಸಿ, ಹೆಂಟೆ ಬಿಸಾಡಿ, ಹಾಗೆಯೇ ಮರಕ್ಕೆ ಮೈ ಒರಗಿಸಿ ಕಣ್ಣು ಮುಚ್ಚಿದರು.

ಮುಚ್ಚಿದ್ದ ರೆಪ್ಪೆಗಳನ್ನು ಮೀಟಿ ಕಣ್ಣೀರು ಕೊನೆಯನ್ನು ಬೆಚ್ಚಗೆ ಮಾಡಿತು"[೨೬]

ಈ ವ್ಯಕ್ತಿಯ ಮನಸ್ಸಿನ ಹೊಯ್ದಾಟವನ್ನು ನಾವು ಇಲ್ಲಿ ಕಾಣಬಹುದು.

ಇವರದೇ ಇನ್ನೊಂದು ಕತೆಯಾದ 'ಮಹಾನವಮಿ' ಕತೆಯಲ್ಲಿ ವ್ಯವಸ್ಥೆ ಮತ್ತು ಬದುಕಿನ ನೇರ ಚಿತ್ರಣ ಇದೆ. "ಹೊತ್ತು ಪಶ್ಚಿಮದಲ್ಲಿ ಮರೆಯಾದಂತೆಲ್ಲ ಕತ್ತಲು ಸ್ವಲ್ಪ ಸ್ವಲ್ಪವಾಗಿ ತನ್ನ ನೆರಳನ್ನು ಚೆಲ್ಲತೊಡಗಿತು. ಕತ್ತಲೆಯ ಜೊತೆಗೆ ಆಕಾಶದಲ್ಲಿ ಅಲ್ಲಲ್ಲಿ, ಹೆಪ್ಪುಗಟ್ಟಿದ ಮೋಡಗಳು: ಕೆಲವು ಕಪ್ಪು, ಮತ್ತೆ ಕೆಲವು ಇನ್ನೂ ಕಪ್ಪು. ಮಂದವಾದ ದೀಪದ ಕೆಳಗೆ ಮನೆಯ ಹಜಾರದಲ್ಲಿ ಕುಳಿತು ಯೋಚಿಸತೊಡಗಿದ್ದ ಚಿಕ್ಕಣ್ಣನನ್ನು "ಖ್ಯೋ ...ಖ್ಯೋ" ಎಂದು ಅವ್ವ ನಿಂಗಕ್ಕ ಮಲಗಿದ್ದ ಮೂಲೆ ಕಡೆಯಿಂದ ಬಂದ ಕೆಮ್ಮಿನ ಸದ್ದು ಎಚ್ಚರಿಸಿತು.

ಎದ್ದು ಎತ್ತುಗಳಿಗೆ ಒಣ ಹುಲ್ಲನ್ನು ಹಾಕಿ, ಬಿಗಿಯಾಗಿ ಗೂಟಕ್ಕೆ ಕಟ್ಟಿದೆಯೋ ಎಂಬುದನ್ನು ಪರೀಕ್ಷಿಸಿ, ಮೈ ಸವರಿ ಮನೆಯ ಬಾಗಿಲಿಗೆ ಬಂದು ನಿಂತು ನೋಡಿದ, ಕತ್ತಲೆ 'ಗವ್' ಎನ್ನುತ್ತಿದೆ. ಆಕಾರದಲ್ಲಿ ಕಪ್ಪು, ಅಲ್ಲಲ್ಲಿ ಒಡಲನ್ನು ಇರಿದು ಹೋಗುವ ಮಿಂಚು. ಸಿದ್ದಣ್ಣನನ್ನು ಉಣ್ಣುವುದಕ್ಕೆ ಮುಂಚೆಯೇ ಗದ್ದೆ ಕಡೆಗೆ ಹೋಗಿ ನೀರು ನೋಡಿಕೊಂಡು ಬರುವ ಬಾ ಎಂದು ಕೂಗಬೇಕೆನ್ನಿಸಿದರೂ, "ಭೂಮಿ ತಡೆಯಲಾರದಂಥ ಮಳೆ ಬರಬಹುದು. ಬರದಿದ್ದರೆ ನೋಡುವ" ಎಂದುಕೊಂಡು ಒಳಕ್ಕೆ ಬಂದು ಕೈಕಾಲು ಮುಖ ತೊಳೆದು ಕೊಂಡು, "ಹಿಟ್ಟಾಗಿದ್ದಾದೇನಮ್ಮಿ?" ಎಂದುದಕ್ಕೆ, "ಹೂ ಆಲೆ ಆಗಿ ಸಪಾರೊತ್ತಾಯ್ತು" ಎಂದು ಬಂದ ಹೆಂಡತಿಯ ಉತ್ತರ ಕಿವಿ ಮುಟ್ಟುವುದಕ್ಕೆ ಮೊದಲೇ ಒಳ ಮನೆಯನ್ನು ಹೊಕ್ಕ. ತಣಿಗೆಯ ಮುಂದೆ ಕುಳಿತುಕೊಂಡು ಹಿಟ್ಟು, ಬದನೆಕಾಯಿ ಈರುಳ್ಳಿಯ ಹುಳಿ ಎಸರನ್ನು ಉಣ್ಣುತ್ತಿದ್ದಂತೆಯೇ ಯಾರೋ ಮನೆಗೆ ಬಂದಂತಾಯಿತು. ಬಂದವರು ಯಾರು? ಎಂದು ಕೇಳುವುದಕ್ಕೆ ಮೊದಲೇ "ಚಿಕ್ಕಣ್ಣ ಇದ್ದಾನೋ ಗದ್ದೆಯ ಕಡೆಗೇನಾದ್ರೂ ಹೋದ್ನೋ ನಿಂಗಕ್ಕ?" ಎಂದು ಬಂದ ಸದ್ದಿನಿಂದಲೇ ಗೊತ್ತಾಗಿ ಹೋಯಿತು ಮತ್ತ್ಯಾರೂ ಅಲ್ಲ ಸಿದ್ದಣ್ಣ ಎಂದು.

"ಹೂ, ಅವನೇ ಉಣ್ಣತಾಯಿರ ಬೇಕು" ಎಂದಳು ನಿಂಗವ್ವ.

'ಬಾರೋ ಸಿದ್ದಣ್ಣ, ಉಣ್ಣು ತಾಯಿವ್ನಿ, ನೀನೂ ಬಾ"

"ಬಾಣ್ನೋ! ಚನ್ನಾಗದೆ ಬಿಸಿ ಬಿಸಿ"

"ಗಂಡ ಹೆಂಡತಿ ಇಬ್ರೂ ಹೆಚ್ಚುಗಟ್ಲೆ ಮಾಡದಾಗ ಕಂಡ್ರೂ ಮಾತಾಡಿಸಬ್ಯಾಡಿ ಕರದ್ರೂ ಉಣ್ಣುವುದಿಲ್ಲ ವಲ್ಲ ಅಂತ ಊಟಮಾಡದಾಗ ಮಾತ್ರ ಬಾಯಿತುಂಬ 'ಉಣ್ಣು ಬಾ' ಅಂತ ಕರೀದೆ ಮಾತ್ರ ಮುಂದು ಯಾವಾಗ್ಲೂ.

"ನಂಮಂಥ ಬಡವರ ಮನೇಲಿ ಉಂಡಿಯೇನೋ ನೀನು?"

"ಉಣ್ಣದೆ - ನಾನೇನು ನನ್ನ ಮನೆಗೆ ಚಿನ್ನದ ಕಳಸ ಹಾಕಿದ್ದೀನೇನೋ ಚಿಕ್ಕಣ್ಣ? ಒಳ್ಳೆ ಮಾತೇಳ್ದೆ!"

"ಗದ್ದೆ ಕಡೆಗೆ ಹೋಗೂವ?"

"ಮಳೆ ಬರುವಂಗದಲ್ಲೋ! ಮುಗಿಲು ಘನವಾಗಿ ಬಿದ್ದದೆ "

ಸರಿಯಾಗಿ ಅಂದ್ರೆ ಭೂಮಿ ತಡಿನಾರದೆ ಮುಲುಕಿ ಮೂರು ದಿನ ಗಂಟ್ಲೋ ನೀರ ಕಕ್ಕಬೇಕಪ್ಪ!"[೨೭]

ಡಾ.ಕರೀಗೌಡ ಬೀಚನಹಳ್ಳಿ ಅವರ ಕತೆಗಳಲ್ಲಿಯೂ ಸಹ ಗ್ರಾಮೀಣ ಬದುಕಿನ ಕತೆಗಳು ಆ ಕತೆಗಳಲ್ಲಿ ವ್ಯವಸ್ಥೆ ಮತ್ತು ಬದುಕಿನ ನೇರ ಚಿತ್ರಣವನ್ನು ಕಾಣಬಹುದು. ಇವರ ಕಥೆಗಳು ಸೃಷ್ಟಿಗೆ ನನ್ನ ಪ್ರಜ್ಞೆ ಮತ್ತು ಪರಿಸರ ಮೂಲ ಕಾರಣ ಎಂದು ಕಥೆಗಾರರೇ ಹೇಳಿಕೊಂಡಿದ್ದಾರೆ.

ಇವರ 'ವಿಯೋಗ' ಎಂಬ ಕಥೆಯಲ್ಲಿ ಬದುಕಿನ ನೇರ ಚಿತ್ರಣವನ್ನು ಕಾಣಬಹುದು. "ಅವರಲ್ಲಿ ಒಬ್ಬ ಇದುವರೆಗೂ ನಾನು ಗಮನಿಸಿದಂತೆ ಮೌನವಾಗಿ ಮರ ಕಡಿಯುತ್ತಲೇ ಇದ್ದ! ಆತ ತನ್ನ ಏಟು ನಿಲ್ಲಿಸಿ

"ಏನ್ ಕೆಲಸದಲ್ಲಿ ಇದ್ದೀರಿ ಸಾರ್, ಬೆಂಗಳೂರ್ನಲ್ಲಿ" ಎಂದು ನನ್ನ ಪ್ರಶ್ನಿಸಿದ. ಆತನಿಗೆ ಯಾಕೋ ಏನೋ ನನ್ನ ಬಗ್ಗೆ ತಿಳಿದು ಕೊಳ್ಳುವ ಕುತೂಹಲವಿದ್ದಂತಿತ್ತು. ನಾನು ಇರುವ ನನ್ನ ಕೆಲಸದ ಬಗ್ಗೆ ಆತನಿಗೆ ಹೇಳಿದೆ. ಆತ ನನಗೆ ತಿಂಗಳಿಗೆ ಸಂಬಳ ಎಷ್ಟು ಬರುತ್ತದೆಂದು ಕೇಳಿದ. ನಾನು ಅದಕ್ಕೆ ಅವನಿಗೆ ಉತ್ತರಿಸಲು ಆಗದೆ, ನನ್ನ ಕೆಲಸದ ಬಗ್ಗೆ ಇರುವ ಕೆಲವು ತೊಂದರೆಯ ಬಗ್ಗೆ ಆತನಿಗೆ ಹೇಳಿದೆ. ಆದರೆ ಅದು ಮಾತ್ರ ಅರ್ಥವಾದಂತೆ ಕಾಣಲಿಲ್ಲ. "ನಿಮ್ಮಣ್ಣ ಮದುವೆ ಮಾಡಿಕೊಳ್ಳಿ ಅಂದ್ರೆ ನೀವು ಈಗಲೇ ಆಗೋದಿಲ್ಲ ಅಂತ ಇದ್ದೀರಂತೆ, ಯಾಕ್ ಸ್ವಾಮಿ" ಎಂದಾಗ ನನಗೆ ಆತನಿಗೆ ಏನು ಹೇಳಬೇಕೆಂದು ತೋಚಲಿಲ್ಲ. ಅವರ ಮಾತಿನಿಂದ ಈಗಾಗಲೇ ನನ್ನ ಬಗ್ಗೆ ನನ್ನಣ್ಣ ಏನೇನೋ ಹೇಳಿರಬೇಕು ಎಂಬ ಅನುಮಾನ ನನ್ನಲ್ಲಿ ಉಂಟಾಯಿತು.

"ನೋಡೀ ಸಾರ್ ಅವತ್ತು ನಡೆದದ್ದು ಇಷ್ಟೆ: ನಿಮ್ಮಣ್ಣ ಈ ಮರಗಳನ್ನೆಲ್ಲಾ ಮಾರಿದ ವಿಷಯ ನಿಮ್ಮವ್ವನಿಗೆ ಗೊತ್ತಿರಲಿಲ್ಲವಂತೆ. ನಾವೆಲ್ಲಾ ಮರ ಕಡಿಯೋಕೆ ಬಂದ ದಿನ ಅವಳಿಗೆ ಗೊತ್ತಾಗಿ ಅವಳು "ನಾನು ನೆಟ್ಟು ನೀರು ಹೂದು ಸಾಕಿ ಬೆಳೆಸಿದ ಮರಗಳ ನನ್ನ ಕಣ್ಮುಂದೆ ಕಡಿಯಕ್ಕೆ ನಾನು ಬಿಡುವುದಿಲ್ಲ. ನೀವು ಅವುಗಳ ಕಡಿಯೋದಾದ್ರೆ ಮೊದ್ಲು ನನ್ನ ಕಡಿದು, ಆಮೇಲೆ ನನ್ನ ಮರಗಳನ್ನು ಕಡಿದು ಕೊಂಡು ಹೋಗಿ" ಅಂತ ನಮ್ಮನ್ನು ತಡೆದಳು. ಅಷ್ಟರಲ್ಲಿ ನಿಮ್ಮಣ್ಣ ಚಂದ್ರಣ್ಣ ಬಂದು, 'ಬಾರವ್ವ ನೀನು ಇನ್ನು ಸಾಕು ನಿನ್ನ ಗೋಳು ಅನ್ನುತ್ತಾ ಅವಳ ರಟ್ಟೆ ಹಿಡಿದು ಎಳೆದರು. ಆಗ ಅವರು ಎಳೆದ ರಭಸಕ್ಕೆ ನಿಮ್ಮವ್ವ ಮಾರುದ್ದ ಹೋಗಿ ಬಿದ್ದರು. ಅಷ್ಟೇ ನೋಡಿ, ಅವತ್ತು ನಡೆದದ್ದು."[೨೮]

ನಮ್ಮ ಗ್ರಾಮೀಣ ಮಹಿಳೆಯರಲ್ಲಿ ತನ್ನ ಜೀವಕ್ಕಿಂತಲೂ ತಾವು ಪೋಷಿಸಿದ ಮರಗಿಡಗಳನ್ನು ಹೆಚ್ಚಾಗಿ ಪ್ರೀತಿಸುವುದನ್ನು ಇಲ್ಲಿ ಕಾಣುತ್ತೇವೆ.

ಇವರದೇ ಕತೆಯಾದ 'ಉಗುಳು' ಕತೆಯಲ್ಲಿ ವ್ಯವಸ್ಥೆ ಮತ್ತು ಬದುಕಿನ ನೇರ ಚಿತ್ರಣವನ್ನು ಕಾಣಬಹುದು.

"ಇವನು ಹೊಟ್ಟೆಕಿಚ್ಚು ಪಡುವುದು: ಇವನು ಬದುಕಿದರೆ ಅವನು ಹೊಟ್ಟೆಕಿಚ್ಚು ಪಡುವುದು: ಹೊಡೆದಾಡಿಕೊಂಡು ಪೋಲಿಸ್‌ಸ್ಟೇಷನ್ನು ಕೋರ್ಟು, ಜೈಲು ಹತ್ತುವುದು ಇದ್ದೇ ಇರುತ್ತದೆ. ತಾನು ಹೊತ್ತ ಹರಕೆಗಳನ್ನು ತೀರಿಸದಿದ್ದರೆ ತಮ್ಮ ಏಳಿಗೆ ಆಗುವುದಿಲ್ಲ ಎಂಬುದು ಜನರಲ್ಲಿರುವ ಬಲವಾದ ನಂಬಿಕೆ. ಗೌಡರು ಮನೆಗೆ ಮೂರುದಿನಗಳಿಂದ ಸುಣ್ಣ, ಬಣ್ಣ ಚಿತ್ತಾರದ ಕೆಲಸ ಮಾಡಿಸುತ್ತಿದ್ದಾರೆ. ಗೋಡೆಯ ಹಳೆ ಫೋಟೋಗಳಿಗೆಲ್ಲ ಹೊಸ ಮೆರಗು ಬರುತ್ತಿದೆ. ಹಳೆಯ ಕಾಲದ ಮನೆಯ ಮರದ ಕಂಬಗಳು ಪಾಲಿಶಿನಿಂದ ಮಿರಮಿರನೆ ಮಿನುಗುತ್ತಿವೆ. ಚಿಕ್ಕಿಗಂತು ಒಂದು ಅರೆಗಳಿಗೆ ಸುಧಾರಿಸಿಕೊಳ್ಳಲು ಬಿಡುವಿಲ್ಲದ ಕೆಲಸ. ಗುಡಿಸುವುದು, ಒರೆಸುವುದು, ತೊಳೆಯುವುದು, ಬಳಿಯುವುದು ಅದನ್ನು ಇತ್ತ ಎತ್ತಿಡುವುದು : ಇದನ್ನು ಅತ್ತ ಎತ್ತಿಡುವುದು ಇಂತಹ ಹತ್ತಾರು ಕೆಲಸಗಳು ಆಕೆಗೆ. ಗೌಡರ ಮಗ ಮನೆಯ ಸಿಂಗಾರಕ್ಕೆ ಆಳುಗಳ ಕಟ್ಟಿಕೊಂಡು ತೊಡಗಿದ್ದಾನೆ. ಮನೆಗೆ ಮತ್ತಷ್ಟು ಜೀವ ಬಂದು, ಗಲ ಗಲ ಅನ್ನುವುದಕ್ಕೆ ಶುರುಮಾಡಿದೆ! ಪಡಸಾಲೆ ಮೇಲೆ ಕೂತ ಗೌಡರು ನೋಡುತ್ತಾ, ನಡೆಯುತ್ತಿರುವುದರ ಬಗ್ಗೆ, ನಡೆಯಬೇಕಾದರ ಬಗ್ಗೆ ಸೂಚನೆ ನೀಡುತ್ತಲೇ ಇದ್ದಾರೆ. ದನಿನಟ್ಟಿ, ಕುರಿಯಟ್ಟಿ, ಕಬ್ಬಿನಗದ್ದೆ ಹತ್ತಿರ ಇರುವ ಹೊಸ ಮನೆಗಳಿಗೂ ಸುಣ್ಣ ಬಣ್ಣ ಹೊಡೆಯಲು ಗೌಡರಿಗೆ ಆಳೊಬ್ಬ ಒಪ್ಪಿಸುತ್ತಿದ್ದಾನೆ."[೨೯]

ಗ್ರಾಮೀಣ ಜನರು ಹಬ್ಬ ಹರಿದಿನ ಮಾಡುವಾಗ ಸಂಭ್ರಮ ಮತ್ತು ವಿಶೇಷವಾದ ಆಸಕ್ತಿ ವಹಿಸುವುದನ್ನು ಕಾಣಬಹುದು.

ಇವರದೇ ಕತೆಯಾದ 'ನೆನಪಲ್ಲ ವಾಸ್ತವ' ಕತೆಯಲ್ಲಿಯ ಸಂದರ್ಭವನ್ನು ಕಾಣಬಹುದು "ಕಾಡಣ್ಣ ತನ್ನ ಮೌನವನ್ನು ಕಿತ್ತು ನೋಡಿ ಸ್ವಾಮಿ ನಮ್ಮ ಮನೇಲಿ ಎರಡ್ಮೂರು ರೂಮು ಖಾಲಿ ಇವೆ. ಇಷ್ಟು ದಿನ ಬಾದನ ಚೆನ್ನಮ್ಮ ಇದ್ಲು, ಅವಳೂ ಹೊರಟೋದ್ಲು, ಇನ್ನೊಬ್ಬಳು ದಾಕ್ಷಾಯಣಮ್ಮ ಅಂತ ಇದ್ಲು ಅವಳು ಹೊಲದಲ್ಲಿ ಗುಡ್ಲು ಹಾಕ್ಕೊಂಡು ಹೊರಟೋದ್ಲು. ಗೊಂಬೆ ರಾಮಣ್ಣನೂ ಇಲ್ಲ. ಯಾಕ್ ನೀವು ಅಲ್ಲೇ ಈಗ ಸಧ್ಯಕ್ಕೆ ಸ್ಕೂಲ್ ನಡೆಸಬಾರದು" ಎಂದು ಕೇಳಿದ.

ನಿಂಗಣ್ಣ, "ಹೌದು, ಸಾಮಿ, ಅದೇ ಒಳ್ಳೆ ಜಾಗ! ಅಲ್ಲಿ ಯಾವುದೇ ತೊಂದರೆ ಇಲ್ಲ! ಅಲ್ಲಿ ಶಾಲೆಯನ್ನು ತಾವು ಎಷ್ಟು ದಿನ ಬೇಕಾದರೂ ನಿಶ್ಚಿಂತೆಯಿಂದ ಸುಖವಾಗಿ ನಡೆಸಬಹುದು" ಎಂದ.

"ಸಧ್ಯಕ್ಕೇನು! ನಮ್ಮೂರಿಗೆ ಶಾಶ್ವತವಾಗಿ ಕಟ್ಟಡ ಆಗುವ ತನಕ ಅಲ್ಲೇ ನೀವು ಶಾಲೆ ನಡೆಸಿ. ನಾನು ಬೇಡ ಅನ್ನುವುದಿಲ್ಲ. ನಮಗೂ ನಾಲ್ಕೈದು ವರ್ಷದಿಂದ ಹೆಣಗಿ ಹೆಣಗಿ ಜೀವ ರೋಸಿ ಹೋಗಿದೆ ಎಷ್ಟು ಮಳೆಗಾಲ ಬಂದರೂ ಆ ಕಲ್ಲಿನ ಮಂಟಪ ಜಗ್ಗುವುದಿಲ್ಲ" ಎಂದ ಕಾಡಣ್ಣ.

"ಹಾಗಾದರೆ ನೋಡುವ ನಡೀರಿ...." ಎಂದರು ಮಾಸ್ತರು. ಮೂವರೂ ಹೊರಟರು."[೩೦]

ನಮ್ಮ ಗ್ರಾಮೀಣ ಕುಟುಂಬಗಳು ಜಾತಿಯ ವಿಷಯದಲ್ಲಿ ಬದಲಾವಣೆ ಆಗುತ್ತಿದ್ದರೂ ಸಹ ಅವರ ಸುತ್ತಲಿನ ಪರಿಸರ ಅದಕ್ಕೆ ಅವಕಾಶ ಕೊಡದೇ ಇರುವುದನ್ನು ಗಮನಿಸಬಹುದು.

ಊರಿನಲ್ಲಿ ಶಾಲೆ ತೆರೆಯಲು ಸ್ಥಳ ಸಿಗದಿದ್ದಾಗ, ಕಾಡಣ್ಣ ಎಂಬುವನು ನಮ್ಮ ರೂಮಲ್ಲೇ ಶಾಲೆ ತೆರಸಿ ಎಂದು ಊರಿನ ಜನಕ್ಕೆ ಸಹಕಾರ ಕೊಡುತ್ತಾರೆ. ನಮ್ಮ ಗ್ರಾಮೀಣ ಜನರಲ್ಲಿ ಸಹಕಾರ ಮನೋಭಾವದ ತುಂಬು ಬದುಕನ್ನು ಕಾಣಬಹುದು.

ಇವರದೇ ಕತೆಯಾದ 'ನೆನಪಲ್ಲ ವಾಸ್ತವ' ಕತೆಯಲ್ಲಿ ತುಂಬು ಗ್ರಾಮೀಣ ಬದುಕನ್ನು ಕಾಣಬಹುದು. ಆದರೆ ಒಂದು ದಿನ ತಮ್ಮ ಮನೆಯಲ್ಲಿ ಒಳಗೆ ನಡುಮನೆಯಲ್ಲಿ ಮಾಸ್ತರು ಕೂತು ಉಣ್ಣುತ್ತಿದ್ದದ್ದನ್ನು ಕರಿಯಪ್ಪ ಆಚೆಯಿಂದ ಬಂದವನೇ ಕಂಡು ಬೆರಗಾದ. ಅವರಿಗೆ ತನ್ನವ್ವ ಉಣ್ಣಲು ಬಡಿಸುತ್ತ "ನರಮನ್ಸನ ಜಾತಿಯೆಲ್ಲಾ ಒಂದೇ ಜಾತಿ ಬಿಡಿ ಸಾಮಿ..." ಎನ್ನುತ್ತಿದ್ದಳು. ಮಾಸ್ತರು ಏನೂ ಮಾತನಾಡದೆ ತಲೆ ಬಗ್ಗಿಸಿ ಉಣ್ಣುತ್ತಿದ್ದರು. "ಇವತ್ತಿನಿಂದ ನೀವು ನಮ್ಮ ಮನೇಲಿ ಊಟಮಾಡಿ, ಸಂಕೋಚ ಇಟ್ಕೋಬೇಡಿ, ಇದೂ ನಿಮ್ಮ ಮನೇನೆ ಅಂತ ತಿಳಿದುಕೊಳ್ಳಿ. ನಿಮಗೆ ನಮ್ಮ ಮನೇಲಿ ಬಿಟ್ಟಿ ಉಣ್ಬೇಕು ಅಂತ ಅನ್ನಿಸಿದ್ರೆ, ನೀವು ನಿಮ್ಮ ಊರ್ನಿಂದ ಅಕ್ಕಿ ಬೇಳೆ ತರ್ತೀರಲ್ಲ ಅದನ್ನೇ ನನಗೆ ಕೊಡಿ. ನಾನೇ ನಿಮಗೆ ಅದನ್ನು ಬೇಸಾಕ್ತೀನಿ..." ಎನ್ನುತ್ತಿದ್ದಳು.

"ಪಾಪ, ನಿಮಗೆ ಯಾಕೆ ತೊಂದರೆ ಕೊಡ್ಲಿ, ನಾನೇ ಮಾಡ್ಕೊಳ್ತೀನಿ, ಕಷ್ಟನೋ ಸುಖನೋ..." ಎನ್ನುತ್ತಿದ್ದರು ಮಾಸ್ತರು.

ಮಾಸ್ತರು ಉಂಡು ಕೈತೊಳೆದು ತಾವು ಉಂಡ ತಟ್ಟೆಲೋಟಗಳನ್ನು ತಾವೇ ತೊಳೆದು ಅತ್ತ ಇಡುತ್ತಿದ್ದದ್ದನ್ನು ಕಂಡು ಗೌರಕ್ಕ ರೇಗಿ, ''ಹಾಗೆಲ್ಲಾ ಮಾಡಬೇಡಿ, ನಾನೇ ತೊಳ್ಕೋತ್ತೀನಿ. ನೀವು ಹಾಗೆಲ್ಲಾ ಮಾಡೋದಾದ್ರೆ ನಮ್ಮ ಮನೆಗೆ ಊಟಕ್ಕೆ ಬರ್ಲೇಬೇಡಿ...'' ಎಂದು ದನಿ ಎತ್ತರಿಸಿದಳು.

ಆಮೇಲೆ ಮಾಸ್ತರು ದಿನಾಲು ತಮ್ಮ ಮನೆಯಲ್ಲಿಯೇ ಉಣ್ಣುವುದನ್ನು ಕರಿಯಪ್ಪ ನೋಡುತ್ತಿದ್ದ. ಆತ ನೋಡಿ ತನ್ನ ಸಂಗಡಿಗರಿಗೆ ''ಮೇಷ್ಟ್ರು ನಮ್ಮ ಮನೇಲೇನೆ ಊಟ ಮಾಡ್ತಾರೆ'' ದಿನಾಲು ಎಂದು ಹೇಳುತ್ತಿದ್ದ ಸುದ್ದಿ ಊರಿನಲ್ಲಿ ಜನಗಳಿಂದ ಜನಕ್ಕೆ ಹಬ್ಬಿ ''ಕಾಡಣ್ಣ ಹೊಲೆಯರನ್ನೆಲ್ಲಾ ಮನೆಯೊಳಕ್ಕೆ ಸೇರಿಸಿಕೊಂಡು ಊರ್ಗೆ ಅವಮಾನ ಮಾಡ್ತಾ ಅವ್ನೆ'' ಎಂದು ಆತನಿಗೆ ಆಗದಿದ್ದವರು ಮಾತನಾಡುವುದಕ್ಕೆ ಶುರು ಮಾಡಿದ್ದರು.''[೩೧]

ನಮ್ಮ ಗ್ರಾಮೀಣ ಕುಟುಂಬಗಳು ಜಾತಿಯ ವಿಷಯದಲ್ಲಿ ಬದಲಾವಣೆ ಆಗುತ್ತಿದ್ದರೂ ಸಹ ಅವರ ಸುತ್ತಲಿನ ಪರಿಸರ ಅದಕ್ಕೆ ಅವಕಾಶ ಕೊಡದೇ ಇರುವುದನ್ನು ಗಮನಿಸಬಹುದು.

ಇವರದೇ ಇನ್ನೊಂದು ಕತೆಯಾದ 'ಕಲ್ಯಾಣಿ' ಕತೆಯಲ್ಲಿ ವ್ಯವಸ್ಥೆ ಮತ್ತು ಬದುಕಿನ ನೇರ ಚಿತ್ರಣವನ್ನು ಕಾಣಬಹುದು.

''ಮಧ್ಯಾಹ್ನ ಊಟ ಆದಮೇಲೆ ಸ್ವಲ್ಪ ಹೊತ್ತು ಬಾವಿ ಕಡೆಗೆ ತಿರುಗಾಡಿಕೊಂಡು ಬರುವುದು ಗೌಡರಿಗೆ ಮಾಮೂಲು ರೂಢಿ. ತುಂಬಾ ಫಲವತ್ತಾದ ಭೂಮಿಯಲ್ಲಿರುವ ಅವರ ಐದು ಎಕರೆ ತೆಂಗಿನ ತೋಪಿನ ನಡುವೆ ಇರುವ ಅವರ ಬಾವಿ ದೂರಕ್ಕೆ ಕಾಣುವುದಿಲ್ಲ. ಊರಿನಲ್ಲಿ ತುಂಬಿದ ಕೊಡ ಎಂದೇ ಖ್ಯಾತಿಯಾಗಿರುವ ಗೌಡರು ಅಪ್ಪಟ ಗಾಂಧಿವಾದಿಗಳು. ತಮ್ಮ ಉಡಿಗೆ ತೊಡಿಗೆಯಲ್ಲಿ ಸದಾ ಖಾಧಿಧಾರಿ. ಊಟದಲ್ಲಿ ಸಸ್ಯಾಹಾರಿ, ಉಪಚಾರದಲ್ಲಿ ಸರಳ ಜೀವಿ. ಹಾಗೆ ತಿರುಗಾಡುತ್ತಾ ಬಂದ ಗೌಡರು ಬಾವಿಯ ಬಳಗೆ ಬಂದರು. ಅಲ್ಲಿ ಕೂತಿದ್ದ ಕಲ್ಯಾಣಿ ಮತ್ತು ಆಕೆಯ ಮಕ್ಕಳನ್ನು ಕಂಡು ಬೆರಗಾದರು. ಹತ್ತಿರ ಬಂದು ಆಕೆಯನ್ನು ಅನುಮಾನದಿಂದಲೇ, ''ಯಾರಮ್ಮಾ ಅದು? ಯಾಕೆ ಕುಳಿತಿದ್ದಿ, ಇಷ್ಟೊತ್ತಲ್ಲಿ ಮಕ್ಕಳ ಜೊತೆ ಒಬ್ಬಳೇ!'' ಎಂದು ಕೇಳಿದರು. ಕಲ್ಯಾಣಿ ಗಾಬರಿಯಿಂದಲೇ ''ನಾನು ಕಲ್ಯಾಣಿ'' ಎಂದಳು ''ಗೌಡರು ಗೊತ್ತು ನೀ ಕಲ್ಯಾಣಿ ಅಂತ ಯಾಕೆ ಇಲ್ಲಿ?'' ಎಂದರು. ಗಂಗೆ ಪೂಜೆ ಮಾಡಾನ ಅಂತ ಬಂದೆ'' ಎಂದಳು. ಅವಳ ದನಿಯಲ್ಲಿ ಕಂಪನವಿದ್ದದ್ದನ್ನು ಗೌಡರು ಗುರುತಿಸಿದರು. ಅವರ ಅನುಮಾನ ಗಟ್ಟಿಯಾಯಿತು. ದೂರದಲ್ಲಿ ಹೂವು ಕೀಳುತ್ತಿದ್ದ ಮಕ್ಕಳು ಓಡಿ ಬಂದು ತನ್ನ ಅವ್ವನ ಸೆರಗಿಗೆ ಆತುಕೊಂಡು ನಿಂತವು. ಗೌಡರು ಆಕೆಯ ಮಕ್ಕಳನ್ನು ನೋಡುತ್ತಾ ''ರಾತ್ರಿನೂ ನಿನ್ನ ಗಂಡ ಕುಡಿದು ಬಂದು ಊರು ಮುಂದೆ ಬಿದ್ದಿದ್ನಂತೆ ಅವನಿಗೆ ದೇವರು ಯಾವತ್ತು ಒಳ್ಳೆ ಬುದ್ಧಿ ಕೊಟ್ಟಾನೋ ನಾಕಾಣೆ'' ಎಂದರು. ಆದರೆ ಕಲ್ಯಾಣಿಗೆ ತನ್ನ ಗಂಡನ ಬಗ್ಗೆ ಅಪಾರ ಅಭಿಮಾನ. ಆತ ತನ್ನನ್ನು ಯಾವತ್ತೂ ಹೊಡೆದದ್ದಾಗಲೀ, ಬೈದದ್ದಾಗಲೀ ಇಲ್ಲ. ಆತ ಕುಡಿದಾಗ ಮಕ್ಕಳನ್ನು ಬಹುವಾಗಿ ಮುದ್ದಾಡುತ್ತಿದ್ದ. ಮಕ್ಕಳಿಗೂ ಒಂದು ದಿನವೂ ಆತ ಗದರಿಸಿದ್ದಿಲ್ಲ. ಆತನ ಆ ದಯಾಗುಣವೇ ಆಕೆಯ ಕರುಳನ್ನು ಕರಗಿಸುತ್ತಿತ್ತು. ಕಲ್ಯಾಣಿಗೆ ಗೌಡರ ಬಳಿ ತನ್ನ ಉದ್ದೇಶವನ್ನು ಮುಚ್ಚಿಡಲು ಆಗಲಿಲ್ಲ. ಭೂಮಿಗೆ ಕಣ್ಣೀರು ಕರೆಯುತ್ತಾ ನಿಂತಳು. ತನ್ನ ಆತ್ಮಹತ್ಯೆಯ ನಿರ್ಧಾರವನ್ನು ಗೌಡರಿಗೆ

ತಿಳಿಸಿದಳು. ಗೌಡರಿಗೆ ಕೋಪ ಬಂತು. ಆಕೆಯನ್ನು ಆಕೆಯ ಮಕ್ಕಳನ್ನು ದಿಟ್ಟಿಸುತ್ತಾ "ಕಲ್ಯಾಣಿ ನೀನು ವಿದ್ಯಾವಂತೆಯಂತೆ. ನೀನು ನಾಲ್ಕು ಜನಕ್ಕೆ ಹೇಳುವಂತಹವಳು. ಅಂತಹದ್ದರಲ್ಲಿ ನೀನೇ ಇಂತಹ ಹೇಡಿ ಕೆಲಸ ಮಾಡುವುದಕ್ಕೆ ಹೊರಟಿದ್ದಿ ಅಂದರೆ, ಇದು ತುಂಬಾ ಅವಮಾನದ ಕೆಲಸ" ಎಂದರು ಗೌಡರು.

ಕಲ್ಯಾಣಿ ಮೂಕಳಾಗಿ ನಿಂತಿದ್ದಳು. "ಈ ಭೂಮಿ ಈ ಆಕಾಶ ತುಂಬಾ ವಿಶಾಲವಾಗಿದೆ ಕಣಮ್ಮ. ನೀನು ಪ್ರಾಣ ತೆಗೆದುಕೊಳ್ಳುವಂತಹ ಅವಮಾನದ ಕೆಲಸವನ್ನೇನೂ ಈ ಊರ್‍ನಲ್ಲಿ ಮಾಡಿಲ್ಲವಮ್ಮ. ನೀನು ಮನಸ್ಸು ಗಟ್ಟಿಮಾಡಿದರೆ ನಿನ್ನ ಈ ಮುದ್ದು ಮಕ್ಕಳಿಗೆ ಎಲ್ಲಿ ಬೇಕಾದರೂ ದುಡಿದು ಹಾಕಬಹುದು" ಎಂದು ಗೌಡರು ಆಕೆಯ ಮೇಲೆರಗಿ, ಮಕ್ಕಳ ಮೈದಡವಿದರು. ಗೌಡರ ಮಾತಿಗೆ ಕಲ್ಯಾಣಿಯ ಬಾಯಿ ಕಟ್ಟಿತು. ಆದರೆ ಕಲ್ಯಾಣಿಗೆ ಈ ಬದುಕು ಸಾಕು ಅನ್ನಿಸಿತ್ತು. ಗೌಡರು ಆಕೆಯನ್ನು ಬದುಕಿನತ್ತ ಸೆಳೆಯುತ್ತಾ, "ಕಲ್ಯಾಣಿ ಈ ಊರಿನಲ್ಲಿ ಬದುಕಲು ನಿನಗೆ ಕಷ್ಟ ಅನ್ನಿಸಿದೆ. ನನಗೆ ಅದು ಗೊತ್ತು, ಆಸ್ತಿ, ಹಣ, ನೆಲೆ, ಘನತೆ, ಎಲ್ಲವನ್ನು ಕಳೆದುಕೊಂಡ ಸ್ಥಿತಿಯಲ್ಲಿದ್ದೀ ನೀನು. ನಿನ್ನ ಗಂಡನಿಗೆ ನಾನು ಅನೇಕ ಬಾರಿ ಕರೆಸಿ ಬುದ್ಧಿ ಹೇಳಿದೆ ಆದರೆ ಆತ ಈ ಜನ್ಮದಲ್ಲಿ ಸರಿಯಾಗುವಂತೆ ಕಾಣುವುದಿಲ್ಲ."[೩೨]

ಈ ಕತೆಯಲ್ಲಿ ಒಂದು ಹೆಣ್ಣು ಜೀವನದಲ್ಲಿ ಸಾಕಾಗಿ ಬೇಸತ್ತು ತಾನೂ ತನ್ನ ಮಕ್ಕಳೂ ಆತ್ಮಹತ್ಯೆ ಮಾಡಿ ಕೊಳ್ಳಬೇಕೆಂದು ಹೊರಟಾಗ ದೇವರಂತೆ ಮತ್ತೊಬ್ಬರು ಅರ್ಥ ಮಾಡಿಕೊಂಡು ಧೈರ್ಯ ಹೇಳಿ ಆಕೆಯನ್ನು ವಾಪಸ್ಸು ಕರೆದುಕೊಂಡು ಹೋಗುವ ಪ್ರಸಂಗ ಈ ಕತೆಯಲ್ಲಿದೆ. ನಮ್ಮ ಗ್ರಾಮೀಣರ ಸಹಕಾರ ಪದ್ಧತಿ ತುಂಬು ಬದುಕನ್ನು ನಾವು ಕಾಣಬಹುದು.



ಇತರ ನವ್ಯ ಕಥೆಗಾರರಿಗಿಂತ ದೇವನೂರ ಮಹಾದೇವರು ವಯಸ್ಸಿನಲ್ಲಿ ಅತ್ಯಂತ ಕಿರಿಯ ವ್ಯಕ್ತಿ. ಇವರ ಕಥಾ ಸಾಹಿತ್ಯ ಗಾತ್ರದ ದೃಷ್ಟಿಯಿಂದ ತುಂಬಾ ಚಿಕ್ಕದು. ಆದರೆ ಗುಣದ ದೃಷ್ಟಿಯಿಂದ ನೋಡಿದಾಗ ಇವರ ಕಥಾ ಸಾಹಿತ್ಯಕ್ಕೆ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ವಿಶಿಷ್ಟ ಸ್ಥಾನವಿದೆ. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅವರ 'ದ್ಯಾವನೂರು' ಕೃತಿಗೆ ಒಂದು ಅಪೂರ್ವವಾದ ಸ್ಥಾನವಿದೆ. ಹರಿಜನರಲ್ಲೇ ಇರುವ ಎರಡು ವರ್ಗದ ಜನರ ದೈನಂದಿನ ಬದುಕಿನ ವಿರೋಧಾಭಾಸಗಳನ್ನು ಜಮೀನುದಾರಿ ಪದ್ಧತಿಯ ಯಜಮಾನರ ಶೋಷಣೆ ಹಾಗೂ ಕ್ರೌರ್ಯಗಳನ್ನು, ವಿದ್ಯಾವಂತ ಹರಿಜನ ಯುವಕರ ಕ್ರಾಂತಿಕಾರಿ ಪ್ರತಿಭಟನೆಯನ್ನು ಅವಿದ್ಯಾವಂತ ಹರಿಜನ ವ್ಯಕ್ತಿಗಳ ಅಸಹಾಯಕತೆಯನ್ನು ಇವರ ಕಥೆಗಳು ಪ್ರಧಾನವಾಗಿ ಬಣ್ಣಿಸುತ್ತವೆ. ಜೀವಂತ ಬದುಕಿನೊಡನೆ ಮೈದಾಳುವ ಇಲ್ಲಿಯ ಕಲಾತ್ಮಕತೆ, ಅನುಭವ ಮತ್ತು ವಸ್ತು ಅಭಿವ್ಯಕ್ತಿಗಳ ಶಿಲ್ಪ. ಈ ಕಥೆಗಳ ಸಾಂದ್ರತೆ ಮತ್ತು ಸೌಷ್ಠವ, ಭಾಷೆಯ ಸೂಕ್ಷ್ಮತೆ ಮತ್ತು ಸಂಕೀರ್ಣತೆಗಳು ಆಧುನಿಕ ಕನ್ನಡ ಕಥಾ ಸಾಹಿತ್ಯಕ್ಕೆ ಹರಿದು ಬಂದ ವಿಶೇಷವಾದ ಸಾಂಸ್ಕೃತಿಕ ಕಾಳಜಿಗಳಾಗಿವೆ. ಇವರ ಕಥೆಗಳಲ್ಲಿ ಅತ್ಯಂತ ಪ್ರಭಾವಶಾಲಿಯಾದ ಕಥೆಯೆಂದರೆ 'ಗ್ರಸ್ತ' ಆದರೆ ಮಹಾದೇವರ ಸೃಷ್ಟಿಶೀಲ ಪ್ರತಿಭೆ ಅನೇಕ ಸಾಧ್ಯತೆಗಳೊಡನೆ ಪ್ರಕಟವಾಗುವುದು ನಿರೂಪಣಾ ಪ್ರಧಾನವಾದ ರಚನೆಗಳಲ್ಲಿಯೆ.

" 'ಗ್ರಸ್ತ' ಕಥೆಯ ಕಥಾ ನಾಯಕ ಕೆಳ ಜಾತಿಯ ವ್ಯಕ್ತಿ. ಆದರೆ ಆತ ವಿದ್ಯಾವಂತ. ಈ ಸಂಕೀರ್ಣತೆಯನ್ನು ಕಥೆಗಾರರು ಈ ಕಥೆಯಲ್ಲಿ ಹಿಡಿಯಲು ಪ್ರಯತ್ನಿಸಿದ್ದಾರೆ. 'ಗ್ರಸ್ತ' ಕತೆಯಲ್ಲಿ ನವ್ಯ ತಂತ್ರದ ಉತ್ತಮ

ಅಂಶಗಳನ್ನು ಕಾಣಬಹುದು. ಹೇಳಿದರೆ ಬರೀ ಮಾತಾಗಿ ಬಿಡುತ್ತವೆ. ಅನ್ನಿಸುತ್ತಿದ್ದುದ್ದನ್ನೆಲ್ಲಾ ಒಟ್ಟಾಗಿಸಿ ನೋಡಿದೆ, ನನಗೆ ನಿಜವಾಗಿ ಯಾರೂ ಇಲ್ಲ ಅನ್ನಿಸುತ್ತೆ. ಇರೊದೆಲ್ಲ ಸುಳ್ಳು ಅನ್ನಿಸುತ್ತೆ. ನೀನು ಎಲ್ಲ ಅನ್ನಿಸುತ್ತಿ, ಅವ್ವ, ಅಕ್ಕ, ತಂಗಿ, ಮಗು, ಹೆಂಡತಿ, ಗೆಳತಿ ಎಲ್ಲ ತುಂಬ ಅಸಹಜವಾಗಿ ಕಂಡವು. ಅವಳಿಗೆ ಏನು ಅನಿಸಬಹುದು ಅಂತ ಅನುಮಾನ ಬಂತು. "ಹೀಗೆ ಪದೇ ಪದೇ ನೋಡುವುದು ಬೇಡಿ, ಗುಲ್ಲಾಗುತ್ತೆ" ಅಂದಳು. ಬರದ ನಗುವನ್ನಾದರೂ ಬರಿಸಿಕೊಂಡು ನಗಬೇಕು, ಅವಳು, ಅವಳ ಅಪ್ಪ, ಅಮ್ಮ, ಕತ್ತರಿಸಿ ಇಟ್ಟಿರುವ ಜಾತಿ, ಬಂಧು ಬಳಗ ಇವುಗಳ ನಡುವೆ ನಾನು ಅವಳು ಹದ್ದುಗಳಿಗೆ ಎಸೆದ ಹೆಣಗಳ ಹಾಗೆ..." (ಗ್ರಸ್ತ) ಹೆಸರಿಲ್ಲದ ನಾಯಕ ಈತ. ತಾನು ಪ್ರೀತಿಸಿದ ಹುಡುಗಿಯೇ ಅವನಿಗೆ ಎಲ್ಲವೂ. ಆದರೆ ಅವನಿಗೆ ಎಲ್ಲವೂ, ಆದರೆ ಅವನಿಗೆ ಅದು ದಕ್ಕುವುದಿಲ್ಲ."[೩೩]

"ಅವನು ವಿದ್ಯಾವಂತ ತರುಣ. ತಾನು ಇದ್ದ ನೌಕರಿಯನ್ನು ಬಿಟ್ಟು ಗ್ರಾಮಕ್ಕೆ ಬಂದಿದ್ದಾನೆ. ಅವನಿಗಿಂತಲೂ ಮುಂದಾಗಿ ಅವನು ನೌಕರಿ ಬಿಟ್ಟ ಸುದ್ದಿ ಮನೆಗೆ ಮುಟ್ಟಿದೆ. ಅದರ ಹಿನ್ನೆಲೆಯ ಸ್ವರೂಪವೂ ತಿಳಿದುಬಂದಿದೆ. ತಾಯಿ ಗೌಡರ ಹಟ್ಟಿಗೆ ಹೋಗಿ ಬಾ ಎಂದು ಹೇಳಿದ್ದಾಳೆ. ಆದರೆ ಅವನು ಇನ್ನೂ ಹೋಗಿಲ್ಲ.

ದಿಕ್ಕು ತೋಚದಂತೆ ಕವಿದ ಆಲೋಚನೆಗಳ ಒತ್ತಡವನ್ನು ತಾಳಲಾಗದೆ ಎದ್ದು ನಿಂತ. ಅತ್ತಿಂದಿತ್ತ ಓಡಾಡತೊಡಗಿದ. ಗೋಡೆಯ ಮೇಲೆ ಇದ್ದ ಬಸವಣ್ಣ, ಶಿವ, ಅವನ ಅಪ್ಪ ಈ ಪಟಗಳನ್ನು ನೋಡಿದ. ಲಾಟೀನಿನ ಬೆಳಕಿನಲ್ಲಿ ಹಿಗ್ಗುತ್ತಾ, ಕುಗ್ಗುತ್ತಾ, ಇಲ್ಲವಾಗುತ್ತಾ ಬರುತ್ತಿದ್ದ ನೆರಳು ಸಹ ಅವನ ಉದ್ವಿಗ್ನ ಮನವನ್ನು ಕಸಿವಿಸಿಗೊಳಿಸುತ್ತಿದೆ. ತಾಯಿ ನಿದ್ರೆ ಮಾಡಿರಬೇಕು. ಇಲ್ಲವಾದರೆ 'ಗೌಡರ ಹಟ್ಟಿಗೆ ಹೊಗಲಿಲ್ಲವಾ' ಎಂದು ಕೇಳುತ್ತಿದ್ದಳು ಎಂದುಕೊಂಡ."[೩೪]

ಎಚ್.ನಾಗವೇಣಿಯವರ ಕಥಾ ಸಂಕಲನ 'ನಾಕನೇ ನೀರು' ಇವರ ಭಾಷೆ ತುಳು. ತುಳು ಸಂಸ್ಕೃತಿ - ಕತೆ, ಸುತ್ತಲ ಜನ ಅವರ ಬದುಕು ಇದೆಲ್ಲ ಶಾಶ್ವತ, ಕಣ್ಣ ಮುಂದಿನ ನಿತ್ಯದ ಸತ್ಯ ಎಂದು ಪ್ರಬಲವಾಗಿ ನಂಬಿಕೊಂಡಿದ್ದ ಅವರಿಗೆ ಕಲ್ಕತ್ತದಲ್ಲಿ ಇದು ಒಮ್ಮೆಲೆ ಮಾಯವಾದಂತಾಯ್ತು. ಇದು ಅವರ ಜಗತ್ತನ್ನು ಒಂಟಿ ಮಾಡುತ್ತಾ ಹೋಯಿತು. ಮಾತಿನಿಂದ ಮೌನಕ್ಕೆ ಬಹಿರ್ಮುಖದಿಂದ ಅಂತರ್ಮುಖಕ್ಕೆ ಅವರು ನಡೆದರು. ಆ ಅಂತರ್ಮುಖತೆ ಅವರ ಕಥೆಗಳಿಗೆ ಜೀವ ತುಂಬಿದೆ ಎಂದು ಅವರು ಹೇಳಿಕೊಂಡಿದ್ದಾರೆ.

ಇವರ ಮೊದಲನೆಯ ಕತೆಯಾದ 'ಇನಾಮು' ಕಥೆಯಲ್ಲಿ ಗ್ರಾಮೀಣ ಬದುಕಿನ ನೇರ ಚಿತ್ರಣವನ್ನು ಕಾಣಬಹುದು.

"ಮುಂಡೇವು ಪೊದೆಗಳ ಸುತ್ತಮುತ್ತಲ ಸ್ಮಶಾನ ಮೌನ, ಕಾಸಿಬೊಗ್ಗುರನ ಮನದೊಳಗೆ ಪುಟಿದೇಳುತ್ತಿದ್ದ ಉತ್ಸಾಹವನ್ನು ಕ್ಷಣದಿಂದ ಕ್ಷಣಕ್ಕೆ ಇಮ್ಮಡಿಗೊಳಿಸುತ್ತಿತ್ತು. ಜ್ವರವೇರಿ ಬಾಡಿ ಮುದುಡಿ ಕೂತಿರುವ ಪುಂಡರ ಹಕ್ಕಿಗಳನ್ನು ಅಟ್ಟಿಸಿ...ಸೋತು ಬಸವಳಿಸಿ ಹೊಡೆದು ಕೊಲ್ಲುವ ಮೋಜು ಎಂತದ್ದು! ಆ ಮೋಜಿಗೆ ಮಾತ್ರವಲ್ಲ, ಆ ಹಕ್ಕಿಗಳ ರುಚಿಗೂ ಯಾವುದು ಸಮವಿದೆ! ಕೋಳಿಮಾಂಸ - ಕೊಕ್ಕರೆ ಮಾಂಸಕ್ಕಿಂತ ನೂರು ಪಟ್ಟು ರುಚಿಯಾದ ಮಾಂಸವದು. ಕಪ್ಪರ್ ರೊಟ್ಟಿ ಮಾಡಿ ಆ ಮಾಂಸದ ಗಸಿಯಲ್ಲಿ ಮುಳುಗಿಸಿ ತಿನ್ನಬೇಕು. ಜತೆಗೆ ಒಂದು ಕುಡಿಕೆ ಕಳ್ಳೂ ಇರಬೇಕು. ಆಹಾ! ಆ ಸಂಭ್ರಮ ಸೊಗಸು ನೆನಪಿಸಿಕೊಂಡೇ ಕಾಸಿಬೊಗ್ಗುರನ ಮೈ ಇಡಿ ಖುಷಿಯಿಂದ ಕಂಪಿಸಿಬಿಟ್ಟಿತ್ತು.

ಕಾಸಿ ಬೊಗ್ಗುರನಿನ್ನೂ ಕೂತೇ ಇದೆ. ಅಂವ ಹುಸೇನ್ ಬ್ಯಾರಿಯ 'ಹೆಣ' ಬುಗುರಿ ಮರದಡಿಗೆ ಬರುವುದಕ್ಕಿಂತ ಮುನ್ನ ಉದುರಿ ಬಿದ್ದಿದ್ದ ಹಣ್ಣುಗಳನ್ನು ಹೆಕ್ಕಿ ಬಿಟ್ಟು ಅದನ್ನು ಕೂರಿಕಟ್ಟದ ಕೂಕ್ರಮ್ಯಾಲಿಯ ಗೂಡಂಗಡಿಯಲ್ಲಿ ಮಾರುವುದಕ್ಕಿಟ್ಟು ಮತ್ತೆ ಪುಂಡದ ಹಕ್ಕಿಯನ್ನು ಹೊಡೆದು ಕೊಲ್ಲುವುದಕ್ಕೆ ಗದ್ದೆಯತ್ತ ಹೊರಡಬೇಕಿತ್ತು. ಬಣ್ಣಿಸಲಾಗದ ಸಂಭ್ರಮದ ಎಳೆಯೊಂದು ಆತನನ್ನು ಜಗ್ಗುತ್ತಿದ್ದಂತೆ ಆತ ಕೂತಲ್ಲಿಂದ ಎದ್ದು ನಿಂತಿದ್ದ."[೩೫]

ಒಟ್ಟಾರೆ ಸ್ವಾತಂತ್ರ್ಯೋತ್ತರ ಸಣ್ಣ ಕತೆಗಳಲ್ಲಿ ನಮ್ಮ ಗ್ರಾಮೀಣ ಕತೆಗಾರರು ಮೇಲೆ ಚರ್ಚಿಸಿದ ಎಲ್ಲ ವಿಷಯಗಳನ್ನು ಮನದಟ್ಟು ಮಾಡುವಲ್ಲಿ ಯಶಸ್ವಿಯಾಗಿದ್ದಾರೆ.

**ಅಡಿಟಿಪ್ಪಣಿಗಳು**

೧. ರಾಜಪ್ಪ ದಳವಾಯಿ, ಕನ್ನಡ ಸಾಹಿತ್ಯಕೋಶ, ೧೯೯೬, ಪುಟ ೯೨, ೯೩

೨. ಎನ್.ಕೆ.ಕೋದಂಡರಾಮ, ಕನ್ನಡ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ, ೧೯೯೬, ಪುಟ ೩೫೨, ೩೫೩

೩. ಕೆ.ವಿ.ನಾರಾಯಣ, ಬೇರು ಕಾಂಡ ಚಿಗುರು, ೧೯೯೭, ಪುಟ ೩೯೭, ೩೯೮

೪. ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೬೨-೧೯೮೫, ಪುಟ ೧೨೬, ೧೨೭

೫. ಅದೇ, ಪುಟ ೧೭೪

೬. ದೇವನೂರು ಮಹಾದೇವ, ದೇವನೂರು ಮಹಾದೇವ ಅವರ ಕೃತಿಗಳು, ೧೯೯೨, ಪುಟ ೩೬, ೩೭

೭. ಕರೀಗೌಡ ಬೀಚನಹಳ್ಳಿ, ಹೊತ್ತಿನ ಕಣ್ಣಿನ ಮಿಂಚು, ಮುನ್ನುಡಿ, x, xi ೧೯೯೬

೮. ಅದೇ, ಪುಟ ೨೬೭

೯. ಬಿ.ಆರ್.ಕೃಷ್ಣ, ಗ್ರಾಮೀಣ ಮತ್ತು ನಗರ ಸಮಾಜಶಾಸ್ತ್ರ, ೧೯೯೭ (ಎ.ಮು ೧೯೯೮) ಪುಟ ೫, ೬, ೭

೧೦. ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೫, ಪುಟ ೨

೧೧. ಅದೇ, ಪುಟ ೧೩೧

೧೨. ಅದೇ, ಪುಟ ೨೦೪, ೨೦೫

೧೩. ಅದೇ, ಪುಟ ೫೨, ೫೩

೧೪. ಕರೀಗೌಡ ಬೀಚನಹಳ್ಳಿ, ಹೊತ್ತಿನ ಕಣ್ಣಿನ ಮಿಂಚು, ೧೯೯೬, ಪುಟ ೨೪೮, ೩೪೯

೧೫. ದೇವನೂರು ಮಹಾದೇವ, ದೇವನೂರು ಮಹಾದೇವ ಅವರ ಕೃತಿಗಳು, ೧೯೯೨, ಪುಟ ೫

೧೬. ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೫, ಪುಟ ೩, ೪

೧೭. ಅದೇ, ಪುಟ ೯೦

೧೮. ಅದೇ, ಪುಟ ೧೦೦, ೧೦೧

೧೯. ಅದೇ, ಪುಟ ೮೭

೨೦. ಅದೇ, ಪುಟ ೧೩೨

೨೧. ಅದೇ, ಪುಟ ೧೯೮, ೧೯೯

೨೨. ಹಾ.ಮಾ.ನಾಯಕ, ಸಾಹಿತ್ಯ ವಾರ್ಷಿಕ ೧೯೭೪, ಪುಟ ೪೫

೨೩. ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೫, ಪುಟ ೨೨೪, ೨೨೫

೨೪. ಸ.ಚಿ.ರಮೇಶ, ಡಾ.ಬೆಸಗರಹಳ್ಳಿ ರಾಮಣ್ಣ, ೧೯೯೫, ಪುಟ ೨೦, ೨೧

೨೫. ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೫, ಪುಟ ೨೨೮

೨೬. ಅದೇ, ಪುಟ ೩೫

೨೭. ಅದೇ, ಪುಟ ೫೫, ೫೬

೨೮. ಕರೀಗೌಡ ಬೀಚನಹಳ್ಳಿ, ಹೊತ್ತಿನ ಕಣ್ಣಿನ ಮಿಂಚು, ೧೯೯೬, ಪುಟ ೨೧೪, ೨೧೫

೨೯. ಅದೇ, ಪುಟ ೩೪೬

೩೦. ಅದೇ, ಪುಟ ೨೯೨

೩೧. ಅದೇ, ಪುಟ ೨೭೫

೩೨. ಅದೇ, ಪುಟ ೨೩೭, ೨೩೮

೩೩. ಕರೀಗೌಡ ಬೀಚನಹಳ್ಳಿ, ವ್ಯಷ್ಟಿ ಮತ್ತು ಸಮಷ್ಟಿ, ೧೯೯೧, ಪುಟ ೨೨೭, ೨೨೮

೩೪. ಎಸ್.ಪಿ.ಶಂಕರನಾರಾಯಣ ರಾವ್, ದೇವನೂರ ಮಹದೇವ, ೧೯೯೭, ಪುಟ ೨

೩೫. ನಾಗವೇಣಿ, ಎಚ್., ನಾಕನೇ ನೀರು, ೧೯೯೭, ಪುಟ ೨

# ಅಧ್ಯಾಯ ೩

# ಸಾಮಾಜಿಕ ಮತ್ತು ರಾಜಕೀಯ ಬದಲಾವಣೆಗಳು

# ಅಧ್ಯಾಯ - ೩

# ಸಾಮಾಜಿಕ ಮತ್ತು ರಾಜಕೀಯ ಬದಲಾವಣೆಗಳು

ಈ ಹಿಂದಿನ ಅಧ್ಯಾಯದಲ್ಲಿ ಚರ್ಚಿಸಿರುವಂತೆ ನಗರ ಸಂಸ್ಕೃತಿಯ ಪ್ರಭಾವದಿಂದ ನಮ್ಮ ಗ್ರಾಮೀಣ ಪರಿಸರದಲ್ಲಿ ಅನೇಕ ರೀತಿಯಾದ ಸಾಮಾಜಿಕ ಮತ್ತು ರಾಜಕೀಯ ಬದಲಾವಣೆಗಳು ಉಂಟಾದದ್ದು ನಿಜ. ಆದರೂ ಗ್ರಾಮ ಸಮಾಜ ತನ್ನೆಲ್ಲ ಮೂಲ ಸ್ವರೂಪವನ್ನು ಬಿಟ್ಟುಕೊಡಲಿಲ್ಲ. ಎಷ್ಟೋ ಗ್ರಾಮಗಳು ನಗರಕ್ಕೆ ಹತ್ತಿರವಾಗಿದ್ದರೂ, ತಮ್ಮ ಬದುಕು ನಗರವನ್ನು ಅವಲಂಬಿಸಿದ್ದರೂ ಗ್ರಾಮೀಣರಾಗಿಯೇ ಉಳಿದಿರುವುದು ಗಮನಿಸುವಂಥ ಮುಖ್ಯ ಅಂಶ. ಅದಕ್ಕೆ ಕಾರಣ ಗ್ರಾಮ ಸಮಾಜ ವ್ಯವಸ್ಥೆಯು ಬಹಳ ಗಂಭೀರವಾದುದು. ನಗರದ ಬದುಕು ಆರ್ಥಿಕ ಪ್ರಧಾನವಾಗಿ ಬದಲಾದಷ್ಟು ವೇಗವಾಗಿ ಗ್ರಾಮೀಣ ಬದುಕು ಆಗಲಿಲ್ಲ. ಇಲ್ಲಿ ಸಾಂಸ್ಕೃತಿಕ ನೆಲೆಯು ಬಹಳ ಭದ್ರವಾಗಿ ಬೇರೂರಿತ್ತು. ಏನೇ ಬದಲಾವಣೆಗಳು ಈ ಸಾಂಸ್ಕೃತಿಕ ಬುನಾದಿಯ ಮೇಲೆಯೇ ಆಗಬೇಕಾಗಿತ್ತು :

"ವೇದಗಳ ಕಾಲದಲ್ಲಿ ಮುಕ್ತ ವ್ಯವಸ್ಥೆಯಾಗಿದ್ದ ವರ್ಣ ವ್ಯವಸ್ಥೆಯು ಕಾಲಗತಿಯಲ್ಲಿ ವಿವಿಧ ಕಾರಣ ಗಳಿಂದಾಗಿ ಮುಚ್ಚಿದ ವ್ಯವಸ್ಥೆಯಾದ ಜಾತಿ ವ್ಯವಸ್ಥೆಯಾಗಿ ವಿಕೃತ ರೂಪ ಪಡೆಯಿತು. ಅಸ್ಪೃಶ್ಯರು ಎನಿಸಿಕೊಂಡಂತ ನಿಮ್ನ ಜಾತಿಗಳು ನಾನಾ ಬಗೆಯ ಸಮಸ್ಯೆಗಳಿಗೆ, ಸಂಕಷ್ಟಗಳಿಗೆ, ದೌರ್ಬಲ್ಯಗಳಿಗೆ, ಅನರ್ಹತೆಗಳಿಗೆ ಒಳಗಾದವು. ಅಸ್ಪೃಶ್ಯರಿಗೆ ಸವರ್ಣೀಯರು ವಾಸಿಸುವ ಸ್ಥಳಗಳಿಗೆ ಪ್ರವೇಶವಿರಲಿಲ್ಲ. ಪ್ರವೇಶಿಸಿದರೂ ಮನಬಂದಂತೆ, ಮನ ಬಂದ ಸಂದರ್ಭದಲ್ಲಿ ಹೇಗೊ ಹಾಗೆ ಪ್ರವೇಶಿಸಲು ಅವಕಾಶವಿರಲಿಲ್ಲ.

ಜಾತಿಪದ್ಧತಿಯ ಕಲುಷಿತ ಕಟ್ಟುಪಾಡುಗಳ ಪ್ರಕಾರ ಅಸ್ಪೃಶ್ಯರಿಗೆ ಸಾಮಾಜಿಕ ವ್ಯವಸ್ಥೆಯಲ್ಲಿ ಅತ್ಯಂತ ಕೆಳಮಟ್ಟದ ಸ್ಥಾನಮಾನವನ್ನು ನೀಡಲಾಗಿದೆ. ಅಸ್ಪೃಶ್ಯತೆಯ ನಿವಾರಣೆಯಲ್ಲಿ ಆಧುನಿಕತೆಯ ಪ್ರಭಾವ ಅಷ್ಟಿಷ್ಟಲ್ಲ. ಶತ ಶತಮಾನಗಳವರೆಗೆ ಬಹಳವಾಗಿ ಜಿಡ್ಡು ಹಿಡಿದುಕೊಂಡಿದ್ದ ಸಾಂಪ್ರದಾಯಿಕ ಹಿಂದೂ ಸಮಾಜವು ಭಾರತದಲ್ಲಿ ಆಧುನೀಕರಣ ಅಂಕುರಿಸತೊಡಗಿದಂತೆ, ಅದು ಹೆಚ್ಚು ಹೆಚ್ಚಾಗಿ ಪ್ರಸಾರಗೊಂಡಂತೆ ತಮ್ಮ ಸಾಂಪ್ರದಾಯಿಕ ಶೈಲಿಯಲ್ಲಿ ಗಣನೀಯವಾಗಿ ಪರಿವರ್ತನೆ ಮಾಡಿಕೊಳ್ಳುವುದು ಅಗತ್ಯವೂ ಅನಿವಾರ್ಯವೂ ಆಯಿತು. ಆ ನಿಟ್ಟಿನಲ್ಲಿ ಕಾಲ ಮತ್ತು ಪರಿಸ್ಥಿತಿಗಳು ಒತ್ತಡವನ್ನುಂಟು ಮಾಡತೊಡಗಿದವು.

ಬ್ರಿಟಿಷರು ತಮ್ಮ ಆಳ್ವಿಕೆಯ ಅವಧಿಯಲ್ಲಿ ಆಗುಮಾಡಿದ ಆಂಗ್ಲ ಭಾಷಾ ಶಿಕ್ಷಣ, ಇಂಗ್ಲಿಷ್ ಭಾಷಾ ಸಾಹಿತ್ಯ, ಕಾನೂನು ವ್ಯವಸ್ಥೆ ಕಾನೂನು ಆಧಾರಿತ ಆಡಳಿತ ವ್ಯವಸ್ಥೆ, ಉದ್ದಿಮೆ ಆಧಾರಿತ ಅರ್ಥ ವ್ಯವಸ್ಥೆ ಪರಿಚಯಿಸಿದ ಪ್ರಜಾಸತ್ತಾತ್ಮಕ ಮೌಲ್ಯಗಳು ಮೊದಲಾದವುಗಳು ಅಸ್ಪೃಶ್ಯರು ಜಾಗೃತರಾಗಲು ಮತ್ತು ಅವರ ಬಗ್ಗೆ ಇತರರು ಅಪಾರ ಅನುಕಂಪವುಳ್ಳವರಾಗಿ ವ್ಯವಹರಿಸಲು ಪ್ರೇರೇಪಿಸಿದವು. ಮನಬಂದ ಶಿಕ್ಷಣ ಹಾಗೂ ತರಬೇತಿ ಪಡೆದು, ಮನಬಂದ ಕಾಯಕ ಅನುಸರಿಸುತ್ತಾ, ತೆರೆದ ವ್ಯವಸ್ಥೆಯಲ್ಲಿ ಸ್ವತಂತ್ರ ಹಕ್ಕಿಗಳೋಪಾದಿಯಲ್ಲಿ ವಿಹರಿಸುತ್ತಾ ಜೀವನ ನಿರ್ವಹಣೆ ಮಾಡಲು ಅವಕಾಶ ಮಾಡಿಕೊಟ್ಟಿದ್ದು ಅವರು ಹೆಚ್ಚು ಹೆಚ್ಚು ಆತ್ಮವಿಶ್ವಾಸ ಹಾಗೂ ಧೈರ್ಯದಿಂದ ಮುನ್ನುಗ್ಗಲು ಕಾರಣವಾಗಿವೆ."[೧]

ಆಧುನಿಕತೆಯ ಪ್ರಭಾವದಿಂದ ಇಂದಿನ ಗ್ರಾಮಗಳಲ್ಲಿ ಸಾಮಾಜಿಕ ಮತ್ತು ರಾಜಕೀಯ ಬದಲಾವಣೆಗಳಾದವು. ಕಾರಣ ನಗರ ಕೇಂದ್ರಿತ ವ್ಯವಸ್ಥೆ ಹೆಚ್ಚು ಹೆಚ್ಚು ಕೇಂದ್ರೀಕರಣಗೊಂಡುದರಿಂದ ಇದು ಅನಿವಾರ್ಯವಾಗಿ ಉಂಟಾಯಿತು. ಇದನ್ನು ಕುರಿತಂತೆ ಈ ವ್ಯಾಖ್ಯಾನ ಅವಶ್ಯ ಗಮನಾರ್ಹ: "ಆಧುನಿಕತೆಯ ವಿಜ್ಞಾನ ಮತ್ತು ಕೈಗಾರಿಕೆಗಳು ನಮ್ಮ ಭೋಗಕ್ಕಾಗಿ ಒದಗಿಸಿದ ಸರಕುಗಳ ಮೂಲಕ ಬಂದಿದ್ದು ವ್ಯಕ್ತಿಯ ಬದುಕುವ ವಿಧಾನದಲ್ಲಿ ಹೊರರೂಪಿ ಮಾರ್ಪಾಟುಗಳನ್ನು ತಂದಿತು. ಸ್ಕೂಲು, ಹೋಟೆಲು, ಸೆಲೂನು, ಆಸ್ಪತ್ರೆ, ಕಾರ್ಖಾನೆ, ಪೊಲೀಸು, ಕೋರ್ಟು, ಬಸ್ಸು, ರಸ್ತೆ ಮೊದಲಾದ ಸಾರ್ವಜನಿಕ ಜಾಗಗಳಲ್ಲಿ ಬಂದು, ತಳಮಳವುಂಟುಮಾಡಿತು. ಆಧುನಿಕತೆಯು ಪಶ್ಚಿಮದ ಸಂಸ್ಕೃತಿಯ ಹೊರಗೂ, ಒಳಗೂ ಭೌತಿಕವಾಗಿ ಮತ್ತು ಮಾನಸಿಕವಾಗಿ ಒಂದೇ ಏಟಿಗೆ ಆಕ್ರಮಿಸಿತು."[೨]

ಸ್ವಾತಂತ್ರ್ಯ ಪೂರ್ವದಲ್ಲಿ ಗ್ರಾಮೀಣ ಜನತೆಯ ಜೀವನ ಕ್ರಮವನ್ನು ಅವಲೋಕಿಸಿದಾಗ ಜಾತಿ ಪದ್ಧತಿಯು ಒಂದು ಮುಖ್ಯ ವ್ಯವಸ್ಥೆಯಾಗಿದ್ದು ಕಂಡುಬರುತ್ತದೆ. ಎಲ್ಲರು ತಮಗಿಂತಲೂ ಹಿಂದಿನವರು ಅನುಸರಿಸಿದ ಪದ್ಧತಿಯನ್ನೇ ಮುಂದುವರೆಸಿಕೊಂಡು ಹೋಗುತ್ತಿದ್ದರು. ಎಷ್ಟೋ ಬಾರಿ ವಿದ್ಯಾಭ್ಯಾಸದ ಕಡೆಗೆ ಗಮನ ಹರಿಸದೆ ಇರುವುದು ಇವರ ಮೂಲ ನಿಷ್ಠೆಯನ್ನು ತೋರಿಸುತ್ತದೆ. ಕಾಲಕ್ರಮೇಣ ಈ ವ್ಯವಸ್ಥೆಯಲ್ಲಂತೂ ಪುರೋಹಿತಶಾಹಿ ಮತ್ತು ಜಮೀನ್ದಾರಿ ವ್ಯವಸ್ಥೆಯು ಹುಟ್ಟಿಕೊಂಡು ಜನರ ಮೇಲೆ ಯಥಾಸ್ಥಿತಿಯ ಮನೋಭಾವವನ್ನು ಹೇರಲಾರಂಭಿಸಿತ್ತು. ಇನ್ನು ರಾಜಕೀಯ ವಿಷಯಕ್ಕೆ ಸಂಬಂಧಿಸಿದಂತೆ ಜನರು ರಾಜಕೀಯ ವಿಷಯದ ಬಗ್ಗೆ ಯೋಚನೆ ಮಾಡುವ ಸ್ಥಿತಿಯಲ್ಲಿ ಇರಲಿಲ್ಲ. ವ್ಯವಸಾಯವೇ ಪ್ರಧಾನವಾಗಿರುವ ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ವ್ಯವಸಾಯವನ್ನು ಬಿಟ್ಟರೆ ಮತ್ತೆ ಕುಲಕಸುಬುಗಳಿಗೆ ಅನುಸಾರವಾಗಿ ಅವರು ತಮ್ಮ ಕಾರ್ಯ ಪ್ರವೃತ್ತರಾಗುತ್ತಿದ್ದರು. ಅದು ವಂಶಪರಂಪರಾಗತವಾಗಿ ಬಂದಿದ್ದಂಥ ಕಸುಬುಗಳು ಮುಂದುವರೆಯುತ್ತಿದ್ದವು.

ಈ ಮೇಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಸ್ವಾತಂತ್ರ್ಯಾನಂತರ ಗ್ರಾಮೀಣ ಜನತೆ ಜಾಗೃತರಾಗುತ್ತಿರುವುದನ್ನು ಅದಕ್ಕೆ ಸ್ಪಂದಿಸಿ ನಮ್ಮ ಗ್ರಾಮೀಣ ಕತೆಗಾರರು ತಮ್ಮ ಕತೆಗಳಲ್ಲಿ ತಾವು ನೋಡಿದ ಅನುಭವಗಳನ್ನು ಕತೆಗಳ ಮೂಲಕ ಸೂಕ್ಷ್ಮವಾಗಿ ಅಭಿವ್ಯಕ್ತಿಸಿದ್ದಾರೆ. ಸ್ವಾತಂತ್ರ್ಯಪೂರ್ವದಲ್ಲಿದ್ದ ಪರಿಸ್ಥಿತಿಯನ್ನು ಲೇಖಕರು ಪ್ರತಿಯೊಂದು ವಿಷಯವನ್ನು ಗ್ರಹಿಸಿ ಇಂಗ್ಲಿಷ್ ಭಾಷಾ ಶಿಕ್ಷಣ, ಕಾನೂನು

ವ್ಯವಸ್ಥೆ, ಆಡಳಿತ ವ್ಯವಸ್ಥೆಯಲ್ಲಿ ಸುಧಾರಣೆ, ಉದ್ದಿಮೆಗಳ ಬಗ್ಗೆ ಅರಿವು ಪ್ರಜಾಸತ್ತಾತ್ಮಕ ಮೌಲ್ಯಗಳು ಮೊದಲಾದವುಗಳ ಬಗ್ಗೆ ಅಸ್ಪೃಶ್ಯರು ಜಾಗೃತರಾಗಲು ಪ್ರೇರೇಪಿಸಿರುವ ಬಗ್ಗೆ ಮತ್ತು ಸ್ವಾತಂತ್ರ್ಯಾನಂತರ ಇವುಗಳನ್ನು ಉಪಯೋಗಿಸಿಕೊಂಡು ಅವರು ಮುಂದುವರಿದ ಬಗ್ಗೆ ವಿವರಿಸಿರುವುದನ್ನು ಗಮನಿಸಬಹುದಾಗಿದೆ.

ಸ್ವಾತಂತ್ರ್ಯಾನಂತರ ಆಧುನಿಕತೆಯ ಅರಿವು ಉಂಟಾಗಿರುವುದನ್ನು ಕ್ರಾಂತಿಕಾರಕ ಹೆಜ್ಜೆಗಳನ್ನು ಇಡುತ್ತಿರುವುದು ಕಂಡುಕೊಳ್ಳಲಾಗಿದೆ. ಈ ಮೇಲಿನ ಹೇಳಿಕೆಯನ್ನು ಗಮನಿಸಿದಾಗ ಲೇಖಕರು ನವ್ಯ ಕವಿಗಳ ಆಕ್ಷೇಪಣೆಯನ್ನು ಪ್ರಕಟಿಸುತ್ತಾರೆ. ಇದೂ ಸಹ ಅರ್ಥವತ್ತಾಗಿರುತ್ತದೆ. ಆಧುನಿಕತೆಯು ಮನುಷ್ಯ ಸಂಬಂಧಗಳ ಸಹಜ, ಆತ್ಮೀಯತೆಯನ್ನು ಹಾಳುಗೆಡವಿದೆ, ಯಾಂತ್ರಿಕಗೊಳಿಸಿದೆ. ಮನುಷ್ಯನ ಮಹತ್ವವನ್ನು ಸರಕು ಸಂಸ್ಕೃತಿ ಅವನನ್ನು ಕಸಿದುಕೊಂಡು ಅವನನ್ನು ಗುಲಾಮ ನನ್ನಾಗಿಸಿದೆ. "ಇಂಗ್ಲಿಷಿನವರು ತಂದ ಹೊಸ ವಿದ್ಯೆಯೂ ನಮ್ಮ ಸಂಸ್ಕೃತಿಯ ಬುಡವನ್ನು ಅಷ್ಟಿಷ್ಟು ಅಲ್ಲಾಡಿಸಿತು ಈ ದೇಶದ ಅಸಮಾನತವಾದಿ ಸಾಮಾಜಿಕ ಸ್ಥಿತಿಯ ವಿರುದ್ಧ ಪ್ರಶ್ನಿಸಲು, ಹೋರಾಡಲು, ವೈಚಾರಿಕ ಎಚ್ಚರವನ್ನು ಅರಿವನ್ನು ಕೊಟ್ಟ ಆಧುನಿಕತೆ ಚಾರಿತ್ರಿಕ ಅವಶ್ಯಕತೆ ಆಗಿದೆ. ಹೀಗೆ ಆಧುನಿಕತೆಯು ಭಾರತೀಯ ಸಾಮಾಜಿಕ ಆರ್ಥಿಕ ಬದುಕಿನೊಳಗೆ ಅನಂತ ಮುಖದಲ್ಲಿ ಕ್ರಿಯಾಶೀಲವಾಗಲು ಕಳೆದ ಶತಮಾನಗಳಲ್ಲಿ ಪ್ರಯೋಗ ನಡೆಸಿದೆ. ಕೀಳರಿಮೆ ಹುಟ್ಟಿಸಿದೆ. ಮನಸ್ಸನ್ನು ಬದಲಿಸಿದೆ ಉಳಿಸಿದೆ."[೩]

ಇವರ ಅಭಿಪ್ರಾಯದಲ್ಲಿ ಸ್ವಾತಂತ್ರ್ಯಾನಂತರದಲ್ಲಿ ಗ್ರಾಮೀಣ ಜನತೆಯ ಆಧುನಿಕತೆ ಮತ್ತು ಅದರಿಂದಾದ ಬದಲಾವಣೆಗಳನ್ನು ಸೂಚಿಸಿರುವುದು ಸಮಂಜಸವಾಗಿರುತ್ತದೆ.

ನಮ್ಮ "ನಾಗರಿಕ ಶೋಧಗಳು ಸಂಸ್ಕೃತಿಯನ್ನು ಅನಾಗರಿಕಗೊಳಿಸುತ್ತವೆ. ಬೇಕು ಬೇಡದ ಸವಲತ್ತುಗಳ ನಡುವೆ ಹೆಣ್ಣು ಗಂಡಿನ ಸಂಬಂಧಗಳು ರಮ್ಯವಾಗುತ್ತಿದೆ. ನಮ್ಮ ದೈನಂದಿನ ಬದುಕಿನೊಳಗೇ ಇರುವ ಸುವಾಸನೆಗೆ ಮಾರು ಹೋಗುತ್ತಿದ್ದೇವೆ. ನಾವು ಬದುಕುತ್ತಿರುವ ರೀತಿಗೂ ಹೊರಗಿನ ಪ್ರಪಂಚ ಓಡುತ್ತಿರುವ ರೀತಿಗೂ ದಿನೇ ದಿನೇ ಅಗಾಧ ಅಂತರ ಸೃಷ್ಟಿಯಾಗುತ್ತಿದೆ. ಈ ಕಾರಣದಿಂದಾಗಿ ಕೌಟುಂಬಿಕ ಘಟಕಗಳು ದ್ರೋಹದ ನೆಲೆಗಳಲ್ಲಿ ಪರಸ್ಪರ ಅನುಮಾನದಲ್ಲಿ ಕುಂಟುತ್ತಿವೆ. ಆಧುನಿಕತೆ ತರುತ್ತಿರುವ ಆಘಾತಕ್ಕೂ ಸಾಮರಸ್ಯ ಯಾಕೆ ಸಾಧ್ಯವಾಗುತ್ತಿಲ್ಲಾ ಎಂಬುದು ನಮ್ಮೆಲ್ಲ ಲೇಖಕರನ್ನು ಕಾಡಿದೆ. ಹಾಗೆಯೇ ನಾವು ಬದುಕುತ್ತಿರುವ ಆವರಣ ಮಾನವೀಯ ಗೊಳ್ಳುತ್ತಿಲ್ಲ. ಆಗಬೇಕು ಎಂದು ಶತಮಾನಗಳಿಂದಲೂ ಹೋರಾಟ ನಡೆಯುತ್ತಿದೆ. ಆದರೆ ವಾಸ್ತವದಲ್ಲಿ ಅದು ದಿನೇ ದಿನೇ ಹದಗೆಡುತ್ತಿದೆ. ಯಾಕೆ ಹೀಗೆ? ನಾವು ಸೃಷ್ಟಿಸುತ್ತಿರುವ ಯೋಜನೆಗಳು, ಓದಿನ ಹಿನ್ನೆಲೆಯಲ್ಲಿ ಅನಾವರಣವಾಗುತ್ತಿರುವ ವೈಚಾರಿಕ ಆಕೃತಿಗಳು ಬದುಕಿನಿಂದ ದೂರ ಸರಿಯುತ್ತಿವೆ. ಅಥವಾ ನಗರದಲ್ಲಿ ಕೇಂದ್ರೀಕೃತಗೊಳ್ಳುತ್ತಿವೆ. ಇಲ್ಲಿ ಸಂಬಂಧಪಟ್ಟವರು ಮಾತ್ರವೇ ಮುಂದುವರಿಯುತ್ತಿರುವ ನಿದರ್ಶನಗಳು ಹೇರಳವಾಗಿ ಸಿಗುತ್ತವೆ. ಮನುಷ್ಯ ನಗರದ ವೈಚಾರಿಕ ಬದುಕಿಗೆ ಭಾವುಕನಾಗಿ ಪ್ರತಿಕ್ರಿಯಿಸುತ್ತಿದ್ದಾನೆ. ಆಧುನಿಕತೆಯ ಸೌಲಭ್ಯಗಳನ್ನು ತಿರಸ್ಕರಿಸಿ ತನ್ನ ತವರನ್ನು ಸೇರಬೇಕೆಂದು ಪ್ರಬಲೇಚ್ಛೆ ಅಲ್ಲೊಂದು ಇಲ್ಲೊಂದು ಒಂಟಿಯಾಗಿ ಸಿಗಬಹುದೇನೋ ಇಂಥವೇ ಇಂದಿನ ಗ್ರಾಮೀಣ ಬದುಕಿಗೆ ನಿಷ್ಠೆಯಿಂದ ಸೃಜನಶೀಲ ಸೆಲೆಗಳನ್ನು ಒದಗಿಸುತ್ತಿವೆ."[೪]

ಈ ಮೇಲಿನ ಅಂಶವನ್ನು ಗಮನಿಸಿದಾಗ ಇಲ್ಲಿ ಲೇಖಕರು ಸ್ವಾತಂತ್ರ್ಯಾನಂತರ ಗ್ರಾಮೀಣ ಸಂಸ್ಕೃತಿಯಲ್ಲಿ ಅದ್ಭುತವಾಗಿ ಬದಲಾಗುತ್ತಿರುವುದನ್ನು ಮನನಾಟುವಂತೆ ಚಿತ್ರಿಸಿರುತ್ತಾರೆ.

ಮನುಷ್ಯನು ಸಮಾಜ ಜೀವಿ. ಆತ ಒಬ್ಬನೇ ಬಾಳಲಾರ. ಆದ್ದರಿಂದ ಅವನು ಒಂದು ಸಮಾಜ ಇಲ್ಲವೇ ಸಮೂಹದಲ್ಲಿ ಒಂದುಗೂಡಿ ಆತ ಬೆಳೆಯುತ್ತಾನೆ. ಸಮೂಹದ ಸದಸ್ಯರ ಸಹಕಾರ ಮತ್ತು ಪರಸ್ಪರ ಪ್ರಕ್ರಿಯೆಯ ಪರಿಧಿಯಲ್ಲೇ ಜೀವಿಸಬೇಕಾಗುತ್ತದೆ. ಬಾಳಬೇಕಾಗುತ್ತದೆ. ಶಿಕ್ಷಣ ಸಮೂಹದ ಒಂದು ಭಾಗವಾಗಿದೆ. ಇದು ಇತ್ತೀಚೆಗೆ ಬೆಳೆದು ಪ್ರತ್ಯೇಕ ವಿಷಯವಾಗಿ ಮಹತ್ವ ಪಡೆದಿದೆ. ಶಿಕ್ಷಣದಿಂದ ಸಾಮಾಜಿಕ ಬದಲಾವಣೆಯನ್ನು ಕಾಣಬಹುದು. ಇಲ್ಲಿ ಸಾಮಾಜಿಕ ಸಂಬಂಧಗಳ ಅಭ್ಯಾಸವೂ ನಡೆಯುತ್ತದೆ. ಶಿಕ್ಷಕ ಮತ್ತು ವಿದ್ಯಾರ್ಥಿಯ ಸಂಬಂಧ ಸಮಾಜದಲ್ಲಿ ಶಿಕ್ಷಕನ ಸ್ಥಾನಮಾನ ಮುಂತಾದವು ಮಹತ್ವದ ಸಂಗತಿಗಳಾಗಿವೆ. ಮನುಷ್ಯ ಸಮಾಜ ಜೀವಿಯಾಗಿರುವುದರಿಂದ ಅವನು ಶಿಕ್ಷಣ ಪಡೆಯುವಾಗ ಹಾಗೂ ಪಡೆದ ನಂತರ ಸಮಾಜದಲ್ಲಿಯೇ ಬಾಳಬೇಕಾಗುತ್ತದೆ. ಆದ್ದರಿಂದ ಮನುಷ್ಯ ಸಮಾಜದ ಸಮರ್ಥ ಪ್ರಜೆಯಾಗಿ ಬಾಳಲು ಅವನಿಗೆ ಶಿಕ್ಷಣ ಹೆಚ್ಚಿನ ಸಹಾಯ ಒದಗಿಸುತ್ತದೆ.

''ನವೋದಯಪೂರ್ವ ಅಥವಾ ನವೋದಯದ ಪ್ರಥಮ ಘಟ್ಟದಲ್ಲಿಯೇ ಕತೆ ಮತ್ತು ಕಾದಂಬರಿ ಮೊಳಕೆ ಇಟ್ಟವು. ಸಣ್ಣಕಥೆ ಭಾರತಕ್ಕಾಗಲಿ ಕನ್ನಡ ನಾಡಿಗಾಗಲಿ ಹೊಸದಲ್ಲ ಎಂಬ ಮಾತು ನಿಜ. ಪಂಚತಂತ್ರದ ಕಥೆಗಳು, ಉಪನಿಷತ್ತಿನ ಕಥೆಗಳು, ಜಾತಕದ ಕಥೆಗಳು ಈ ನಾಡಿನವರಿಗೆ ಸುಪರಿಚಿತ. ಆದರೆ ಸಾಹಿತ್ಯದ ಒಂದು ವಿಶಿಷ್ಟ ರೂಪವಾಗಿ ಸಣ್ಣಕಥೆ ಅರಳಿದ್ದು ಪಾಶ್ಚಾತ್ಯರಲ್ಲಿ. ಪ್ರಾಯಶಃ ಕನ್ನಡದಲ್ಲಿ ಮೊದಲು ಸಣ್ಣ ಕಥೆಗಳನ್ನು ಬರೆದವರು ಪಂಜೆಮಂಗೇಶರಾಯರು. ಮಾಸ್ತಿಯವರ ಸಣ್ಣ ಕಥೆಗಳು ೧೯೧೮-೧೯೧೯ರ ಹೊತ್ತಿಗೆ ಪ್ರಕಟವಾಗಲು ಪ್ರಾರಂಭವಾದಂತೆ ಕಾಣುತ್ತದೆ.''[೫]

ಹೀಗೆ ಬೆಸಗರಹಳ್ಳಿ ರಾಮಣ್ಣನವರ ಮಾತಿನಲ್ಲಿ ಹೇಳುವುದಾದರೆ ಗ್ರಾಮಾಂತರ ಪ್ರದೇಶದ ರಾಜಕೀಯದಲ್ಲಿಯೂ ಇತ್ತೀಚೆಗೆ ತನ್ಮೂಲಕ ಮನುಷ್ಯನ ಸಣ್ಣತನ ಪ್ರಕಾಶಿತಗೊಳ್ಳುತ್ತಲಿದೆ. ರಾಜಕೀಯ ಪ್ರಭಾವ ಕ್ಷಿಪ್ರ ಮತ್ತು ಕ್ಷಣಿಕ ಸಾಹಿತ್ಯದ ಪರಿಣಾಮ ದೀರ್ಘ ಮತ್ತು ಶಾಶ್ವತ. ರಾಜಕೀಯವನ್ನು ಬಿರುಮಳೆಗೂ, ಸಾಹಿತ್ಯವನ್ನು ಸೋನೆಮಳೆಗೂ ಹೋಲಿಸಬಹುದು. ಬಿರುಮಳೆ ಬಿದ್ದು ಭೂಮಿ ಕುಡಿಯುವುದಕ್ಕೆ ಮೊದಲೆ ಹರಿದು ಹೋಗಿ ಕೊರಕಲು ನಿರ್ಮಿಸುತ್ತದೆ. ಸೋನೆ ಮಳೆ ಮಣ್ಣನ್ನು ಸವೆಸದೆ ಅದರ ಮೇಲೆ ಹಸುರು ಹುಟ್ಟಿ ಕಂಗೊಳಿಸುವಂತೆ ಮಾಡುತ್ತದೆ. ಹೀಗೆ ಆಧುನಿಕತೆ, ಶಿಕ್ಷಣ, ರಾಜಕಾರಣ ಇವುಗಳನ್ನು ಮುಂದಿನ ಉಪ ಅಧ್ಯಾಯಗಳಲ್ಲಿ ವಿವರವಾಗಿ ತಿಳಿಸುವ ಪ್ರಯತ್ನ ಮಾಡಿದ್ದೇನೆ.

## ೩. ೧. ಆಧುನಿಕತೆಯ ಪ್ರಭಾವ

ಕನ್ನಡದಲ್ಲಿ ''ಆಧುನಿಕತೆ' ಎಂಬ ಶಬ್ದವನ್ನು ನಗರಕ್ಕೆ ಸಂಬಂಧಿಸಿದುದು, ಗ್ರಾಮೀಣವಲ್ಲದ್ದು, ಇತ್ತೀಚಿನದು, ವಿದ್ಯಾವಂತರ, ಶಿಷ್ಟರ ಜಗತ್ತಿನದು, ವೈಚಾರಿಕವಾದುದು, ಪ್ರಗತಿಪರವಾದುದು, ವೈಜ್ಞಾನಿಕವಾದುದು ಇತ್ಯಾದಿ ಏನೆಲ್ಲ ಅರ್ಥಗಳಲ್ಲಿ ಬಳಸಲಾಗುತ್ತಿದೆ. ಹಾಗೆ ನೋಡಿದರೆ ಈ ಎಲ್ಲಾ ಅರ್ಥಗಳೂ ಪರಸ್ಪರ ಸಂಬಂಧವುಳ್ಳವೇ ಆಗಿವೆ ಹಾಗೂ ಎಲ್ಲಾ ಅರ್ಥಗಳನ್ನೊಳಗೊಂಡ ಇಡೀ ಆಧುನಿಕತೆಯ

ಪರಿಕಲ್ಪನೆಯೇ ವಸಾಹತೀಕರಣ, ಕೈಗಾರಿಕೀಕರಣ, ನಗರೀಕರಣಗಳ ಜತೆಯಲ್ಲಿ ನಮ್ಮ ಅನುಭವವಾಗಿರುವಂತದ್ದಾಗಿದೆ. ಮೊದಲನೆಯದಾಗಿ ಆಧುನಿಕತೆಯು ವಿಜ್ಞಾನ ಮತ್ತು ಕೈಗಾರಿಕೆಗಳು ನಮ್ಮ ಭೋಗಕ್ಕಾಗಿ ಒದಗಿಸಿದ ಸರಕುಗಳ ಮೂಲಕ ಬಂದಿದ್ದು ವ್ಯಕ್ತಿಯ ಬದುಕುವ ವಿಧಾನದಲ್ಲಿ ಹೊರರೂಪೀ ಮಾರ್ಪಾಟುಗಳನ್ನು ತಂದಿತು. ಎರಡನೆಯದಾಗಿ ಸ್ಕೂಲು, ಹೋಟೆಲು, ಸೆಲೂನು, ಆಸ್ಪತ್ರೆ, ಕಾರ್ಖಾನೆ, ಪೊಲೀಸು, ಕೋರ್ಟು, ಬಸ್ಸು, ರಸ್ತೆ ಮೊದಲಾದ ಸಾರ್ವಜನಿಕ ಜಾಗಗಳ ರೂಪದಲ್ಲಿ ಬಂದು ನಿಜವಾಗಿ ತಳಮಳವುಂಟು ಮಾಡಿತು. ಹಾಗೂ ನಮ್ಮ ಆಲೋಚನಾ ವಿಧಾನದಲ್ಲಿ ನಿರ್ಣಾಯಕವಾದ ಮಾರ್ಪಾಟು ತಂದಿತು. ಶಿಕ್ಷಣ ಮತ್ತು ವೈಚಾರಿಕತೆಗಳ ರೂಪದಲ್ಲಿ ಬಂದಂಥ ಆಧುನಿಕತೆಯು ಅಂತಿಮವಾಗಿ ಮಾಡಿದ ಚಲನೆ ಇನ್ನೂ ಹೆಚ್ಚಿನದು. ಹೀಗೆ ಆಧುನಿಕತೆ ಅಂದರೆ ಪಶ್ಚಿಮದ ಸಂಸ್ಕೃತಿಯ, ಹೊರಗೂ, ಒಳಗೂ, ಭೌತಿಕವಾಗಿಯೂ, ಮಾನಸಿಕವಾಗಿಯೂ ಒಂದೇ ಏಟಿಗೆ ಆಕ್ರಮಿಸಿತು."[೬]

ಸ್ವಾತಂತ್ರ್ಯಾನಂತರ ಗ್ರಾಮೀಣ ಸಂಸ್ಕೃತಿಯಲ್ಲಿ ಆಧುನಿಕತೆಯ ಪ್ರಭಾವ ತುಂಬಾ ವಿಪರೀತವಾಗಿಯೇ ಆಗುತ್ತಿರುವುದನ್ನು ಸಂಬಂಧಿಸಿದ ಲೇಖಕರು ಅರ್ಥವತ್ತಾಗಿ ವಿವರಿಸಿರುತ್ತಾರೆ. ಇದರಲ್ಲಿ ಸಣ್ಣ ಕತೆಗಳ ಪ್ರಭಾವ ಮತ್ತು ಬದಲಾವಣೆಗಳನ್ನು ಗಮನಿಸಬಹುದು. ವಸಾಹತುಶಾಹಿಯ ಆಳ್ವಿಕೆಯೊಡನೆ ಬಂದ ಆಧುನಿಕತೆಯು ತನ್ನ ವಸಾಹತು ದೇಶದ ಸಮಾಜಗಳನ್ನು ಸುಲಭವಾಗಿ ಮಣಿಸಿತು. ವಿಜ್ಞಾನದ-ವೈಜ್ಞಾನಿಕತೆಯ ಶಕ್ತಿಯೊಂದಿಗೆ ಪ್ರಬಲವಾಗಿದ್ದ ಇದರೆದುರು ಅಸ್ಪೃಶ್ಯತೆ ಜಾತಿ ಪದ್ಧತಿ ವರ್ಣಾಶ್ರಮ ಧರ್ಮ, ಸ್ತ್ರೀ ವಿರೋಧಿ ನಿಲುವುಗಳಿಂದ ಎಲ್ಲಾ ತಪ್ಪುಗಳನ್ನು ಮಾಡಿ ಮುಗಿಸಿ ಅಪರಾಧಿಯಂತೆ ಕೂತಿದ್ದ ತನ್ನೆಲ್ಲಾ ಸೃಜನಶೀಲ ಚೈತನ್ಯಗಳನ್ನು ಬತ್ತಿಸಿಕೊಂಡು ಗೊಡ್ಡಾಗಿದ್ದ, ಭಾರತದಂತ ದೇಶಗಳು ಬಹಳ ಸಲೀಸಾಗಿ ಸೋತವು. ಹಾಗೆ ಕಂಡರೆ ಭಾರತೀಯ ಸಮಾಜಕ್ಕೆ ಪಾಶ್ಚಾತ್ಯ ಆಧುನಿಕತೆಯ ಸ್ಪರ್ಶವು ಸಾವು ಮತ್ತು ಮರುಹುಟ್ಟುಗಳ ಅನುಭವವಾಗಿತ್ತು. ಇದು ಭಾರತದ ಕತೆ ಮಾತ್ರವಲ್ಲ, ಹೆಚ್ಚೂ ಕಡಿಮೆ ವಸಾಹತುಗಳಾದ ಎಲ್ಲ ಮೂರನೇ ದೇಶಗಳ ಕಥೆ: ಬುಡಕಟ್ಟು ಸಂಸ್ಕೃತಿಯು ಮಕ್ಕಳನ್ನು ಕೊಲ್ಲುವಷ್ಟು ಅಮಾನವೀಯ ಆಚರಣೆಗಳಿದ್ದ ಆಫ್ರಿಕನ್ ದೇಶಗಳಲ್ಲೂ, ಕೋವಿ-ಬೈಬಲ್ಲು- ಇಂಗ್ಲೀಷುಗಳನ್ನು ತಂದು ಆಧುನಿಕ ಬಿಳಿಯರು ಅವರೆಲ್ಲ ಸಂಪತ್ತುಗಳಿಗೆ ಒಡೆಯರಾಗಿಬಿಟ್ಟರು. ಸಂಪತ್ತನ್ನು ಸುಲಿದಿದ್ದು ನಿಜ, ಆದರೆ ಹೊಸತೊಂದು ತಿಳುವಳಿಕೆಗೆ ಕಾರಣವಾಗಿದ್ದು ಕೂಡ ನಿಜವೆ. ಅಚಿಬೆಯಂಥ ಲೇಖಕರು ಈ ವಿರೋಧಾಭಾಸ ವನ್ನು, ಕುವೆಂಪು ಅವರಂತೆಯೇ ಸರಳೀಕರಿಸಿದಂತೆ ಹಿಡಿಯುತ್ತಾರೆ. ಆಧುನಿಕತೆಯ ವಿರೋಧಿಯಾದ ಒಕ್ವಾಂ ಕೊ, ತನ್ನ ಮಗನೇ ತನ್ನ ಇಷ್ಟಕ್ಕೆ ವಿರುದ್ಧವಾಗಿ ಚರ್ಚಿಗೆ ಚರ್ಚಿನ ಶಾಲೆಗೆ ಹೋಗುವುದನ್ನು 'ಥಿಂಗ್ಸ್ ಫಾಲ್ ಅಪಾರ್ಟ್' ನಲ್ಲಿ ನೋಡಬೇಕಾಗುತ್ತದೆ. 'ಬಸು'ಗಳೆಂಬ ಅಸ್ಪೃಶ್ಯರನ್ನು ಕರುಣೆಯಿಂದ ಅಪ್ಪಿಕೊಂಡ ಚರ್ಚಿನೆದುರು ಮಕ್ಕಳನ್ನು ಕೊಲ್ಲುವ ಸಂಸ್ಕೃತಿಯು ಸೋಲುತ್ತದೆ.

"ಆಧುನಿಕತೆಯು ಗ್ರಾಮ ಜಗತ್ತಿನ ಮುಗ್ಧತೆಯನ್ನು ಶಾಂತಿಯನ್ನು ನಾಶ ಮಾಡಿದೆ - ಎಂಬ ಮಧ್ಯಮ ವರ್ಗದ ಸೌಮ್ಯ ಕವಿಗಳ ಆಕ್ಷೇಪಣೆ."[೭]

ಇಂಗ್ಲಿಷಿನವರು ತಂದ ಹೊಸ ವಿಜ್ಞಾನ ವಿದ್ಯೆಯು ನಮ್ಮ ಸಂಸ್ಕೃತಿಯ ಬುಡವನ್ನು ಅಷ್ಟಿಷ್ಟು ಅಲ್ಲಾಡಿಸಿತು. ಕ್ರಿಶ್ಚಿಯನ್, ಪಾದರಿಗಳು ನಮ್ಮ ಮತಾಚಾರಗಳನ್ನು ಕುರಿತು ಮಾಡಿದ ದೋಷೋದ್ಘಾಟನೆಯ ಮಾತು

ಹಾಗಿರಲಿ, ಅದಕ್ಕಿಂತ ಹೆಚ್ಚು ಪ್ರಭಾವಶಾಲಿಯಾದದ್ದು ಇಂಗ್ಲೀಷಿನೊಡನೆ ನಮ್ಮಲ್ಲಿಗೆ ಬಂದ ವಿಜ್ಞಾನ ಶಾಸ್ತ್ರ.

ಈ ದೇಶದ ಅಸಮಾನತವಾದಿ ಸಾಮಾಜಿಕ ಸ್ಥಿತಿಯ ವಿರುದ್ಧ ಪ್ರಶ್ನಿಸಲು, ಹೋರಾಡಲು ವೈಚಾರಿಕ ಅರಿವನ್ನು ಕೊಟ್ಟ ಆಧುನಿಕತೆಯ ಚಾರಿತ್ರಿಕ ಅವಶ್ಯಕತೆ ಆಗಿದೆ. ಈ ಆಧುನಿಕತೆ ಬರದಿರದಿದ್ದರೆ ಇಲ್ಲಿ ಚಲನೆಯೇ ಸಾಧ್ಯವಿರಲಿಲ್ಲ, ಎಂಬ ಸ್ವಾಗತಿಸುವ ನಿಲುವು, ಇದು ಎಲ್ಲಾ ಪ್ರಗತಿಪರ ಲೇಖಕರಲ್ಲಿ, ಅದರಲ್ಲೂ, ಮುಖ್ಯವಾಗಿ 'ಕೆಳ' ವರ್ಗದಿಂದ ಬಂದ ಲೇಖಕರಲ್ಲಿ ಕಾಣಿಸಿಕೊಳ್ಳುತ್ತದೆ.

ಆಧುನಿಕತೆಯು ಭಾರತೀಯ ಸಾಮಾಜಿಕ-ಆರ್ಥಿಕ ಬದುಕಿನೊಳಗೆ ಅನಂತ ಮುಖದಲ್ಲಿ ಕ್ರಿಯಾಶೀಲವಾಗಲು ಕಳೆದ ಶತಮಾನದಿಂದಲೂ ಪ್ರಯೋಗ ನಡೆಸಿದೆ. ಎಷ್ಟೋಬಾರಿ ಕೀಳರಿಮೆ ಹುಟ್ಟಿಸಿದೆ, ಅಪಮಾನ ಕಳೆದಿದೆ, ಮನಸ್ಸನ್ನು ಬದಲಿಸಿದೆ, ಬದಲಾಗದಂತೆ ಉಳಿಸಿದೆ, ಸ್ವಾಗತಗೊಂಡಿದೆ, ವಿರೋಧಕ್ಕೆ ಗುರಿಯಾಗಿದೆ, ಇದೆಲ್ಲಾ ಕಳೆದುಹೋದ ಕಾಲದ ಕಥೆಯೇನಲ್ಲ. ಈ ಆಧುನಿಕತೆಯನ್ನು ತಂದ ಜನ ಈ ದೇಶ ಬಿಟ್ಟು ಹೋದರೂ, ತಾನು ಉಳಿದುಕೊಂಡು ನಮ್ಮನ್ನು ಆಡಿಸುತ್ತಿದೆ. ಒಂದು ರೀತಿಯಲ್ಲಿ ದಾಸ್ಯವನ್ನೂ ಬಿಡುಗಡೆಯನ್ನೂ, ಒಟ್ಟಿಗೆ ತಂದ ಇದನ್ನು ಕನ್ನಡದ ಸೃಜನಶೀಲತೆಯು ಶೋಧಿಸುತ್ತದೆ.

"ನಾಗರಿಕ ಶೋಧಗಳು ಸಂಸ್ಕೃತಿಯನ್ನು ಅನಾಗರಿಕಗೊಳಿಸುತ್ತವೆ. ಬೇಕು ಬೇಡದ ಸವಲತ್ತುಗಳ ನಡುವೆ ಹೆಣ್ಣು ಗಂಡಿನ ಸಂಬಂಧಗಳು ರಮ್ಯವಾಗುತ್ತಿದೆ. ನಮ್ಮ ದೈನಂದಿನ ಬದುಕಿನೊಳಗೆ ಇರುವ ಸುವಾಸನೆಗೆ ಮಾರು ಹೋಗುತ್ತಿದ್ದೇವೆ. ನಾವು ಬದುಕುತ್ತಿರುವ ರೀತಿಗೂ ಹೊರಗಿನ ಪ್ರಪಂಚ ಓಡುತ್ತಿರುವ ರೀತಿಗೂ ದಿನೇ ದಿನೇ ಅಗಾಧ ಅಂತರ ಸೃಷ್ಟಿಯಾಗುತ್ತಿದೆ. ಈ ಕಾರಣದಿಂದಾಗಿ ಕೌಟುಂಬಿಕ ಘಟಕಗಳು ದ್ರೋಹದ ನೆಲೆಗಳಲ್ಲಿ ಪರಸ್ಪರ ಅನುಮಾನದಲ್ಲಿ ಕುಂಟುತ್ತಿವೆ. ಆಧುನಿಕತೆ ತರುತ್ತಿರುವ ಆಘಾತಕ್ಕೂ ಸಾಮರಸ್ಯ ಯಾಕೆ ಸಾಧ್ಯವಾಗುತ್ತಿಲ್ಲಾ ಎಂಬುದು ನಮ್ಮೆಲ್ಲ ಲೇಖಕರನ್ನು ಕಾಡಿದೆ. ಹಾಗೆಯೇ ನಾವು ಬದುಕುತ್ತಿರುವ ಆವರಣ ಮಾನವೀಯಗೊಳ್ಳುತ್ತಿಲ್ಲ. ಆಗಬೇಕು ಎಂದು ಶತಮಾನಗಳಿಂದಲೂ ಹೋರಾಟ ನಡೆಯುತ್ತಿದೆ.

ಆದರೆ ವಾಸ್ತವದಲ್ಲಿ ಅದು ದಿನೇ ದಿನೇ ಹದಗೆಡುತ್ತಿದೆ ಯಾಕೆ ಹೀಗೆ? ನಾವು ಸೃಷ್ಟಿಸುತ್ತಿರುವ ಯೋಜನೆಗಳು, ಒದಿನ ಹಿನ್ನೆಲೆಯಲ್ಲಿ ಅನಾವರಣವಾಗುತ್ತಿರುವ ವೈಚಾರಿಕ ಆಕೃತಿಗಳು ಬದುಕಿನಿಂದ ದೂರ ಸರಿಯುತ್ತಿವೆ. ಅಥವಾ ನಗರದಲ್ಲಿ ಕೇಂದ್ರೀಕೃತಗೊಳ್ಳುತ್ತಿವೆ. ಇಲ್ಲಿ ಸಂಬಂಧ ಪಟ್ಟವರು ಮಾತ್ರವೇ ಮುಂದುವರಿಯುತ್ತಿರುವ ನಿದರ್ಶನಗಳು ಹೇರಳವಾಗಿ ಸಿಗುತ್ತವೆ. ನಗರದ ವೈಚಾರಿಕ ಗ್ರಾಮೀಣ ಬದುಕಿಗೆ ಬಾವುಕವಾಗಿ ಪ್ರತಿಕ್ರಿಯಿಸುತ್ತಿದ್ದಾನೆ. ಆಧುನಿಕತೆಯ ಸೌಲಭ್ಯಗಳನ್ನು ತಿರಸ್ಕರಿಸಿ ತನ್ನ ತವರನ್ನು ಸೇರಬೇಕೆಂದು ಪ್ರಭಲೇಚ್ಛೆ ಅಲ್ಲೊಂದು ಇಲ್ಲೊಂದು ಒಂಟಿಯಾಗಿ ಸಿಗಬಹುದೇನೋ? ಇಂಥವೇ ಇಂದಿನ ಗ್ರಾಮೀಣ ಬದುಕಿಗೆ ನಿಷ್ಠೆಯಿಂದ ಸೃಜನಶೀಲ ಸೆಲೆಗಳನ್ನು ಒದಗಿಸುತ್ತಿವೆ."[೮]

ಆಧುನಿಕತೆ ನಗರ ಸಂಸ್ಕೃತಿಗಷ್ಟೇ ಸೀಮಿತವಾಗಿಲ್ಲ. ಅದು ನಮ್ಮ ಗ್ರಾಮೀಣ ಸಂಸ್ಕೃತಿಯ ಮೇಲೂ ತನ್ನ ಪ್ರಭಾವ ಬೀರಿರುವುದನ್ನು ಕಾಣಬಹುದು. ಇದು ವಿದ್ಯಾವಂತರ, ಶಿಷ್ಟರ ಜಗತ್ತಿನದು. ಮಾತ್ರವಲ್ಲ ಸಾಮಾನ್ಯ ಗ್ರಾಮೀಣ ಜನರ ಜೀವನ ಕ್ರಮದಲ್ಲಿ ತನ್ನ ಹೊಸ ಛಾಪು ಮೂಡಿಸಿರುವುದನ್ನು ಕಾಣಬಹುದು.

ಆಧುನಿಕತೆ ನಮ್ಮ ಗ್ರಾಮೀಣ ಜನರ ಮುಗ್ಧತೆಯ ಮೇಲೆ ಹೆಚ್ಚು ಪರಿಣಾಮ ಬೀರಿದೆ. ಈ ಆಧುನಿಕತೆಯಿಂದ ನಮ್ಮ ಗ್ರಾಮೀಣ ಜನರ ಮಾನವ ಸಂಬಂಧಗಳಲ್ಲಿ ಬಿರುಕುಗಳನ್ನು ಕಾಣಬಹುದು. ಸಾಂಸ್ಕೃತಿಕವಾಗಿ ಆಧುನಿಕತೆ ಗ್ರಾಮೀಣ ಜನರಲ್ಲಿ ಮಾನವೀಯ ಸಂಬಂಧಗಳ ಬಗ್ಗೆ ಅನೇಕ ಬಿರುಕುಗಳನ್ನು ಕಾಣುತ್ತೇವೆ. ಇಂಗ್ಲೀಷ್ ಶಿಕ್ಷಣ ನಮ್ಮ ಗ್ರಾಮೀಣ ಜನರಲ್ಲಿ ಹೊಸ ಬಗೆಯ ಬದಲಾವಣೆ ಮಾಡಿದೆ.

ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಆಧುನಿಕತೆಯ ಮುಂದುವರಿಕೆಯನ್ನು ಗಮನಿಸಿದಾಗ ನಮ್ಮ ದೇಶದ ಗ್ರಾಮದ ಅಸಮಾನತಾವಾದಿ ಸಾಮಾಜಿಕ ಸ್ಥಿತಿಯ ವಿರುದ್ಧ ಪ್ರಶ್ನಿಸಲು, ಹೋರಾಡಲು ವೈಚಾರಿಕ ಅರಿವನ್ನು ಕೊಟ್ಟ ಆಧುನಿಕತೆಯ ಚಾರಿತ್ರಿಕ ಅವಶ್ಯಕತೆಯೇ ಆಗಿದೆ ಎಂದು ಹೇಳಬಹುದು. ಹೀಗೆ ಆಧುನಿಕತೆಯು ನಮ್ಮ ಗ್ರಾಮೀಣ ಸಾಮಾಜಿಕ ಆರ್ಥಿಕ ಬದುಕಿನೊಳಗೆ ಅನಂತ ಮುಖದಲ್ಲಿ ಕ್ರಿಯಾಶೀಲವಾಗಲು ಕಳೆದ ಶತಮಾನಗಳಲ್ಲಿ ಅನೇಕ ಲೇಖಕರು ಪ್ರಯೋಗ ನಡೆಸಿದ್ದಾರೆ.

ನಮ್ಮ ಗ್ರಾಮೀಣ ಕತೆಗಾರರ ಕತೆಗಳಲ್ಲಿ ಆಧುನಿಕತೆಯ ಅಂಶಗಳನ್ನು ಗಮನಿಸಿದಾಗ ಆಧುನಿಕತೆ ಗ್ರಾಮೀಣ ಪರಿಸರವನ್ನು ದಿದೇ ದಿನೇ ಹದಗೆಡುವಂತೆ ಮಾಡುತ್ತಿದೆ. ಓದಿನ ಹಿನ್ನೆಲೆಯಲ್ಲಿ ಗ್ರಾಮೀಣ ಜನರು ತಮ್ಮ ಮೂಲ ಸ್ವರೂಪವನ್ನು ಕಳೆದುಕೊಳ್ಳುತ್ತಿದ್ದಾರೆ. ನಗರ ಸಂಸ್ಕೃತಿಗೆ ನಮ್ಮ ಗ್ರಾಮೀಣ ಜನರು ಹೆಚ್ಚು ಮಾರು ಹೋಗುತ್ತಿದ್ದಾರೆ. ನಮ್ಮ ಗ್ರಾಮೀಣ ಜನತೆ ನಗರದ ವೈಚಾರಿಕ ಬದುಕಿಗೆ ಭಾವುಕವಾಗಿ ಪ್ರತಿಕ್ರಿಯಿಸುತ್ತಿರುವುದನ್ನು ಕಾಣಬಹುದು. ನಮ್ಮ ನಗರದ ಆಧುನಿಕತೆಯ ಸೌಲಭ್ಯಗಳನ್ನು ತಿರಸ್ಕರಿಸಿ ತನ್ನ ತವರನ್ನು ಸೇರಬೇಕೆಂಬ ಆಸೆ ಅಲ್ಲೊಂದು ಇಲ್ಲೊಂದು ಕಾಣುತ್ತೇವೆ. ಇಂತಹವೇ ಇಂದಿನ ಗ್ರಾಮೀಣ ಬದುಕಿಗೆ ನಿಷ್ಠೆಯಿಂದ ಸೃಜನಶೀಲ ಸೆಲೆಗಳನ್ನು ಒದಗಿಸುತ್ತವೆ. ಅಂತಹ ಅಂಶಗಳನ್ನು ಗ್ರಾಮೀಣ ಕತೆಗಾರರ ಕತೆಗಳ ಮೂಲಕ ಈ ಕೆಳಕಂಡಂತೆ ಗುರುತಿಸಲಾಗಿದೆ.

ಆಧುನಿಕತೆಯ ಪ್ರಭಾವವನ್ನು ಬೆಸಗರಹಳ್ಳಿ ರಾಮಣ್ಣನವರ ಕಥೆಯಾದ "ಜ್ವಾಲೆಯ ನಡುವೆ" ಕತೆಯಲ್ಲಿ ಕಾಣಬಹುದು. ಅವರು ಒಂದು ದಿನ ರೈಲಿನಲ್ಲಿ ಪ್ರಯಾಣ ಮಾಡುವಾಗ ತಮಗೆ ಆದ ಅನುಭವವನ್ನು ಈ ಕತೆಯ ಮೂಲಕ ಹೇಳಲು ಹೊರಟಿದ್ದಾರೆ. ಸ್ವಾತಂತ್ರ್ಯಾನಂತರದಲ್ಲಿ ನಮ್ಮ ಸಾರಿಗೆ ಮತ್ತು ಸಂಪರ್ಕ ವ್ಯವಸ್ಥೆಯಲ್ಲಿ ಅನೇಕ ಬಗೆಯಾದ ಬದಲಾವಣೆಗಳನ್ನು ಕಾಣಬಹುದು. ಅದರಲ್ಲಿ ಸಾರಿಗೆ ಆಧುನಿಕತೆಯ ಪ್ರಭಾವದಿಂದಾಗಿ ನಮ್ಮ ಗ್ರಾಮೀಣ ಜನರು ಗ್ರಾಮಗಳನ್ನು ಬಿಟ್ಟು ನಗರಗಳಿಗೆ ಹೋಗಲು ಪ್ರಾರಂಭಿಸಿದರು. ರೈಲು ಒಂದು ಸಾರಿಗೆ ವ್ಯವಸ್ಥೆ ಯಾಯಿತು. ಅದು ನಮ್ಮ ಗ್ರಾಮೀಣ ಜನರ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರತೊಡಗಿತು. ಶಿಕ್ಷಣ ಮುಖ್ಯವಾಗಿ ನಮ್ಮ ಗ್ರಾಮೀಣ ಜನರನ್ನು ಹೆಚ್ಚು ಆಕರ್ಷಣೆಗೆ ಒಳಗು ಮಾಡಿತು. ಲೇಖಕರು ಆಧುನಿಕತೆಯ ಪ್ರಭಾವದಿಂದ ಒಂದು ದಿನ ರೈಲಿನಲ್ಲಿ ಪ್ರಯಾಣಿಸುತ್ತಿರುವಾಗ ಅಲ್ಲಿ ಯಾವ ಯಾವ ರೀತಿಯ ಜನರು ಇದ್ದರೆಂಬುದನ್ನು ವಿಶ್ಲೇಷಣೆಗೆ ಒಳಗು ಮಾಡುತ್ತಾರೆ :

"ರೈಲು ಹೊರಡುವ ಚಿನ್ಹೆ ತೋರಿತು-ಸಿಳ್ಳು ಆಯಿತು.

ಕಿಡಿಯೊಂದು ನನ್ನ ಬಲ ಕಣ್ಣು ಹೊಕ್ಕು ರುಚಿ ಮುಟ್ಟಿಸಿದುದರಿಂದ ನಾನು ಉಜ್ಜಲಾರಂಭಿಸಿದೆ. ಮುದುಕ "ಉಜ್ಜಬೇಡಿ ಹಾಗೆ .... ಪಟಪಟನೆ ರೆಪ್ಪೆ ಆಡಿಸಿ.... ಏನಾದರೂ ಇಜ್ಜಲು ಚೂರಾಗಿದ್ರೆ ಹೊರಕ್ಕೆ ಬರುತ್ತೆ....

ತಮ್ಮ ಊರು ಯಾವುದು ಸ್ವಾಮಿ? ಅಂದ ನನಗೂ ಬೇಸರವಾಗಿತ್ತು. ಬುದ್ಧಿಯೆಲ್ಲಾ ಕೋಳಿಯ ಕಾಲಿಗೆ ಸಿಕ್ಕಿದ ಕಸದ ಗುಡ್ಡೆಯಾಗಿತ್ತು. ಮುದುಕನ ವಿಚಾರದಲ್ಲಿ ಆಸಕ್ತಿ ಬೆಳೆಸಿಕೊಳ್ಳಬೇಕು ಎಂದು ಮನಸ್ಸು ಮಾಡಿ.

"ನಾನು ಮಂಡ್ಯದ ಕಡೆಯವನು. ಮೈಸೂರಿನಲ್ಲಿ ಇದೀನಿ ಮೆಡಿಕಲ್ ಕಾಲೇಜಿನಲ್ಲಿ ಓದ್ತಾ ಇದೀನಿ" ಅಂದೆ ಮುದುಕ "ಹೋ ಹಾಗೋ... ನಾನು ಮಂಡ್ಯದವನೆ... ಇಲ್ಲೆ ನಂಜನಗೂಡಿಗೆ ಹೋಗಿದ್ದೆ ದೇವಸ್ಥಾನಕ್ಕೆ... ಇವನ ಹರಕೆ ತೀರಿಸಲು" ಎಂದು ಮೊಮ್ಮಗನ ಗುಂಡು ಬುರುಡೆಯ ಮೇಲೆ ಕೈ ಆಡಿಸಿದ. ನನಗೆ ನಗು ಬಂತು."

ಇವರದೇ ಇನ್ನೊಂದು ಕತೆಯಾದ ಕಕರನ ಯುಗಾದಿ ಕತೆಯಲ್ಲಿ ಈ ಆಧುನಿಕತೆಯ ಪ್ರಭಾವವು ವಿಶಿಷ್ಟವಾಗಿ ಚಿತ್ರಿತವಾಗಿದೆ. ಕಕರ ಬಡವ, ತನ್ನ ಮಗಳು ಬಸುರಿ ಹೆಂಗಸು. ಅವಳನ್ನು ನೋಡಲು ಒಬ್ಬಳು ನರ್ಸ್ ಬರುತ್ತಾಳೆ. ಆ ಸಮಯದಲ್ಲಿ ಅವನ ಹತ್ತಿರ ದುಡ್ಡು ಇರುವುದಿಲ್ಲಾ. ಮಗಳಿಗೆ ಸರಿಯಾದ ಚಿಕಿತ್ಸೆ ಕೊಡದಿದ್ದರೆ ಮಗಳು ಬದುಕುವ ಸ್ಥಿತಿಯಲ್ಲಿ ಇರುವುದಿಲ್ಲಾ- ಸ್ವಾತಂತ್ರ್ಯಾನಂತರದಲ್ಲಿ ನಮ್ಮ ಹಳ್ಳಿಗಳಲ್ಲಿ ಅನೇಕ ರೀತಿಯಾದ ಬದಲಾವಣೆಗಳನ್ನು ಕಾಣಬಹುದು. ಒಂದೊಂದು ಊರಿಗೆ ಒಂದೊಂದು ಸರ್ಕಾರಿ ಆಸ್ಪತ್ರೆಗಳು ಬರತೊಡಗಿದವು. ಬಂದರೂ ಸಹ ಅಲ್ಲಲ್ಲಿ ಅವ್ಯವಸ್ಥೆಯನ್ನು ಕಾಣಬಹುದು. ಇದರಿಂದ ಬಡವನಾದ ಕಕರ ಯಾವ ರೀತಿಯಾದ ಸಂಕಟವನ್ನು ಅನುಭವಿಸುತ್ತಿದ್ದಾನೆ ಎಂಬುದನ್ನು ಗುರುತಿಸಿದ್ದೇನೆ.

ಕಕರನ ಮಗಳಿಗೆ ಹೆರಿಗೆ ನೋವು ಕಾಣಿಸಿಕೊಂಡ ಸಂದರ್ಭದಲ್ಲಿ ನೋವು ಅನುಭವಿಸುವುದನ್ನು ಕೇಳಿ ನೆರೆಹೊರೆಯ ಜನರು ಇವನ ಮನೆಯ ಮುಂದೆ ನೆರೆದಿರುತ್ತಾರೆ. ಮೇಲೆ ಈಗಾಗಲೇ ತಿಳಿಸಿರುವಂತೆ ಈ ಗ್ರಾಮದಲ್ಲಿ ಸರ್ಕಾರಿ ಆಸ್ಪತ್ರೆ ಇದ್ದು ಅಲ್ಲಿ ನೆರೆದಿರುವವರಲ್ಲಿ ಯಾರೋ ಒಬ್ಬರು ಆಸ್ಪತ್ರೆಯ ನರಸಮ್ಮನಿಗೆ ವಿಷಯ ತಿಳಿಸಿ, ನರಸಮ್ಮನನ್ನು ಕರೆಸುತ್ತಾರೆ. ನಾಗಿಗೆ ಉದರಬೇನೆ ಕಾಣಿಸಿಕೊಂಡ ವಿಷಯ ಊರ ಹೊರಗಡೆ ಇದ್ದ ಕಕರನಿಗೆ ತಿಳಿದು ಕೂಡಲೇ ಗಾಬರಿಗೊಂಡು ವೇಗದಿಂದ ಮನೆಗೆ ಬರುತ್ತಾನೆ. ಮನೆಯ ಮುಂದೆ ಜನ ನೆರೆದಿರುವುದನ್ನು ನೋಡುತ್ತಾನೆ. ತನ್ನ ಮಗಳ ಬಸಿರು ಅಸಹಜ ಸ್ಥಿತಿಯದಾಗಿದ್ದರು ಸಹ ಮಗಳು ಎಂಬ ಮಮಕಾರದಿಂದ ನರಸಮ್ಮನನ್ನು ತನ್ನ ಮಗಳು ನೋವಿನಿಂದ ಗೋಳಾಡುವುದನ್ನು ತಪ್ಪಿಸಿ, ಹೆರಿಗೆ ಮಾಡಿಸಬೇಕೆಂದು ಅಂಗಲಾಚಿ ಬೇಡಿಕೊಳ್ಳುತ್ತಾನೆ. ನರಸಮ್ಮ ಇಲ್ಲಿ ತನ್ನ ಪ್ರಭಾವವನ್ನು ಬೀರುತ್ತಾಳೆ. ಈ ಹೆರಿಗೆ ನಿರ್ವಹಿಸಲು ಕಕರನನ್ನು ಹಣ ಕೇಳುತ್ತಾಳೆ. ಆ ಸಂದರ್ಭದಲ್ಲಿ ಬಡವನಾದ ಕಕರನ ಹತ್ತಿರ ಹಣ ಇರುವುದಿಲ್ಲ. ಆಗ ಬೇರೆ ದಾರಿ ಇಲ್ಲದೆ ಇದಕ್ಕೆ ಏನಾದರೂ ಪರಿಹಾರ ಕೊಡವ್ವ ಎಂದು ಕಕರ ನರಸಮ್ಮನನ್ನು ಕೇಳಿಕೊಳ್ಳುತ್ತಾನೆ. ಈ ನಿನ್ನ ಉಪಕಾರವನ್ನು ನನ್ನ ಜೀವ ಇರುವ ತನಕ ಮರೆಯುವುದಿಲ್ಲ ಎಂದು ಕೇಳಿಕೊಂಡಾಗ ನರಸಮ್ಮ ಪರಿಸ್ಥಿತಿಯನ್ನು ವಿವರಿಸುತ್ತಾಳೆ. ನಾಗಿಯು ತುಂಬಾ ಅಶಕ್ತಳಾಗಿದ್ದಾಳೆ ಅವಳಿಗೆ ಗ್ಲೂಕೋಸ್ ಹಾಕಬೇಕಾಗಿರುವುದರಿಂದ ಮತ್ತು ಮನೆಯಲ್ಲಿ ಹೆರಿಗೆ ಮಾಡಲು ಸಾಧ್ಯವಿಲ್ಲ, ಚೊಚ್ಚಲ ಹೆರಿಗೆಯಾದ್ದರಿಂದ ಆಸ್ಪತ್ರೆಯಲ್ಲೇ ಆಗಬೇಕು. ಇಂಜಕ್ಷನ್ ಔಷಧಿಗೆಂದು ಅರವತ್ತು ರೂಪಾಯಿ ಹಣ ಖರ್ಚಾಗುತ್ತದೆ ಎಂದು ಹೇಳಿದಾಗ ಕಕರ ಕಕ್ಕಾಬಿಕ್ಕಿಯಾಗುತ್ತಾನೆ. ಆರು ರೂಪಾಯಿಯೂ ಇಲ್ಲದ ಕಕರ ಅರವತ್ತು ರೂಪಾಯಿ ಹೇಗೆ ಹೊಂದಿಸಿಯಾನು? ಆಗ ಯುಗಾದಿ ಹಬ್ಬಕ್ಕೆಂದು ಜೋಯಿಸರ ಬಳಿ ಸಾಲ

ಕೇಳಿರುತ್ತಾನೆ. ಆ ಹಣ ಇದಕ್ಕೆ ಆಗಲಿ ಎಂದು ಹೇಳಿ ಇಪ್ಪತ್ತೈದು ರೂಪಾಯಿ ಕೊಡುತ್ತೇನೆ ತನ್ನ ಮಗಳನ್ನು ಈ ಕಷ್ಟದಿಂದ ಪಾರು ಮಾಡಿ ಎಂದು ಗೋಗರಿಯುತ್ತಾನೆ. ಆಗ ನರಸಮ್ಮ ಕನಿಕರದಿಂದ ಯೋಚಿಸಿ ಒಪ್ಪಿಗೆ ಸೂಚಿಸಿ ಆಸ್ಪತ್ರೆಗೆ ಕರೆದುಕೊಂಡು ಬನ್ನಿ ಎಂದು ಹೇಳಿ ಹೊರಡುತ್ತಾಳೆ.

ಇಲ್ಲಿ ಗ್ರಾಮದಲ್ಲೇ ಸರ್ಕಾರಿ ಆಸ್ಪತ್ರೆ ಇದ್ದರೂ ಸಹ ಈಗಿನ ವ್ಯವಸ್ಥೆಯಲ್ಲಿ ಬಡವರಿಗೆ ಹಣ ಬಿಚ್ಚದ ಹೊರತು ಯಾವುದೇ ಸೌಲಭ್ಯ ಬೇಕಾದ ಸಂದರ್ಭದಲ್ಲಿ ದೊರಕಲಾರವು ಎಂಬ ಸತ್ಯಸಂಗತಿಯನ್ನು ಕಾಣಬಹುದು. ಬಡವರು ಇಂಥಹ ಸಂದರ್ಭಗಳಲ್ಲಿ ಹಣವಿಲ್ಲದೇ ಅನುಭವಿಸುವ ಸಂಕಟವನ್ನು ಇಲ್ಲಿ ಗಮನಿಸಬಹುದಾಗಿದೆ.

ಇವರದೇ ಮತ್ತೊಂದು ಕತೆಯಾದ "ಸಂತೆಯೊಳಗೊಂದು ಮನೆಯ ಮಾಡಿ" ಎಂಬುದರಲ್ಲಿ ಬರುವ ಬಿಸಿಲಿನ ಮಗನಿಗೆ ಯಾರೋ ಸೈಕಲ್ ಹರಿಸಿ ಪೆಟ್ಟು ಮಾಡಿದಾಗ ಡಾಕ್ಟರು ಇದನ್ನು ನೋಡಿ ಇಲ್ಲಿ ಆಗುವುದಿಲ್ಲಾ ನಗರಕ್ಕೆ ಕರೆದುಕೊಂಡು ಹೋಗಿ ಎಂದು ಹೇಳಿದಾಗ ಬಡವನಾದ ಬಿಸಿಲನ ಹತ್ತಿರ ದುಡ್ಡು ಇರುವುದಿಲ್ಲ. ಮಗನನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗಲು ಹಿಂದೆ ಮುಂದೆ ನೋಡುತ್ತಾನೆ. ಅದರ ವಿವರಣೆ ಈ ಕೆಳಕಂಡಂತೆ ಇದೆ. ಪುಟ್ಟಣ್ಣ ಡಾಕ್ಟರ ರೂಂನಿಂದ ಹೊರಕ್ಕೆ ಬಂದ ಕೂಡಲೆ ಬಿಸಿಲ ಕುತೂಹಲ ತಡೆಯಲಾರದೆ ಏನೆಂದು ಕೇಳಿ ವಿಷಯ ಸ್ಪಷ್ಟವಾಗಿ ಗೊತ್ತಾದಾಗ "ಇನ್ನು ಮುಂದಕ್ಕೆ ಏನು ಮಾಡ್ಲಪ್ಪ ಶಿವನೇ" ಎಂದು ಸುಸ್ತಾಗಿ ತಲೆಗೆ ಕೈಕೊಟ್ಟು ಕುಳಿತು ಬಿಟ್ಟ. ಪುಟ್ಟಣ್ಣ ರೇಗಿ ಕಿಡಿ ಕಿಡಿ ಆದ. "ಏಳ್ಲ ಮ್ಯಾಕೆ ದೇವ್ರು ಮಾಡದಂಗಾಯ್ತದೆ. ಡಿಸ್ಟಿಕ್ ಆಸ್ಪತ್ರೆ ಏನು ಬೊ ದೂರದಲ್ಲದ" ಎಂದು ಡಾಕ್ಟರ ಬಳಿ ರಾಜನ ಕಾಯಿಲೆಯ ವಿಷಯ ಎಲ್ಲವನ್ನು ಬರೆಯಿಸಿಕೊಂಡು "ನಡೀ ನಾನು ನೀನು ಇಬ್ಬರೂ ಹುಡುಗ್ನ ಕರ್ಕೊಂಡು ಹೋಗಾನ, ಹೊಂಬಾಳೆ ನೀನು ಅರಸಿ ಕರ್ಕೊಂಡು ಮನೆಗೋಗು"ಎಂದು ಹೇಳಿದಾಗ ಬಿಸಿಲ ಏನೇನೋ ಗಾಢವಾಗಿ ಯೋಚಿಸುತ್ತಿರುವುದನ್ನು ಕಂಡು ಪುಟ್ಟನಿಗೆ ಇನ್ನಷ್ಟು ರೇಗಿತು.

"ಲೋ! ಏನು ಯೋಚ್ನೆ ಮಾಡ್ತಾ ಇದ್ದಿ?"

"ನನ್ನ ತಾವ ಬರೀ ಆರು ರೂಪಾಯಿ ಅದೆ?"

"ನನ್ನ ತಾವೂ ಒಂದೆರಡು ರೂಪಾಯಿ ಅದೆ. ದೇವ್ರು ಮಾಡದಂಗಾಯ್ತದೆ. ನೋಡು ಬಸ್ಸು ಬತ್ತಾ ಅದೆ. ನಡೀ ರಾಜನ್ನ ಎತ್ತುಕೋ. ನಾವು ಬತ್ತೀವಿ ಸ್ವಾಮಿ" ಎಂದು ಪುಟ್ಟಣ್ಣ ಬಸ್‌ಸ್ಟಾಂಡಿಗೆ ರಾಜನನ್ನು ಎತ್ತಿಸಿಕೊಂಡು ನಡೆದ. ಹೊಂಬಾಳೆಗೆ ರಾಜನಿಗೆ ಏನೂ ಆಗೋದಿಲ್ಲ ಎಂದು ಧೈರ್ಯ ಹೇಳಿದ.

ಡಿಸ್ಟಿಕ್ಟ್‌ನ ದೊಡ್ಡಾಸ್ಪತ್ರೆಯಲ್ಲಿ ರಾಜನನ್ನು ಪರೀಕ್ಷೆ ಮಾಡಿ ಕಾಯಿಲೆ ಮೀರಿದೆ ಎಂದೂ ಏನಿದ್ದರೂ ಹುಡಗನನ್ನು ಬೆಂಗಳೂರಿನ ಮಾನಸಿಕ ಆಸ್ಪತ್ರೆಗೆ ಕರೆದುಕೊಂಡು ಹೋಗಿ ಮೆದುಳು ಮತ್ತು ನರಗಳ ತಜ್ಞರಿಗೆ ಕೂಡಲೇ ತೋರಿಸಬೇಕೆಂದೂ ಬರೆದು ಕೊಟ್ಟರು. ಪುಟ್ಟಣ್ಣನಿಗೆ ಕಣ್ಣುಕಟ್ಟಿ ಕಾಡಿಗೆ ಬಿಟ್ಟಂತಾಯಿತು. ಬೆಂಗಳೂರು ಎಂದ ತಕ್ಷಣವೇ ಅವನಿಗೆ ಎದೆ ಒಡೆದು ಹೋಯಿತು. ಬೆಂಗಳೂರಿನ ಯಾವ ಮೂಲೆಯಲ್ಲಿ

ಹುಡುಕುವುದು ಮೆದುಳಿಗೆ ಬೇರೆ, ಕಣ್ಣಿಗೆ ಬೇರೆ, ಎದೆಗೆ ಬೇರೆ. ಡಾಕ್ಟರುಗಳು ಅಂದರೆ ಇದೇನಪ್ಪ ಹೀಗೆ ಎಂದು ಈ ವ್ಯವಸ್ಥೆಯನ್ನು ನೋಡಿ ಅಸಹಾಯಕ ನಿಟ್ಟುಸಿರು ಬಿಟ್ಟ: ಧೈರ್ಯಮಾಡಿ ದೊಡ್ಡ ಡಾಕ್ಟರನ್ನು ಕಂಡು ಆಸ್ಪತ್ರೆಯ ವ್ಯಾನನ್ನು ಬೆಂಗಳೂರಿಗೆ ಕಳುಹಿಸಿ ಕೊಡಬೇಕೆಂದು ಕೇಳಿದ."[೧೦]

ಕರೀಗೌಡ ಬೀಚನಹಳ್ಳಿಯವರ "ಒಂದು ಬೆಳದಿಂಗಳ ರಾತ್ರಿ" ಕತೆಯಲ್ಲಿ ಆಧುನಿಕತೆಯ ಪ್ರಭಾವವನ್ನು ಕೆಲವು ಸಂದರ್ಭದೊಂದಿಗೆ ವಿವರಿಸಲಾಗಿದೆ. "ದೋಣಿಯ ಒಳಗಡೆ ಇಟ್ಟಿದ್ದ ದೀಪವು ಮಂದ ಪ್ರಭೆಯನ್ನು ಸೂಸುತ್ತಿತ್ತು. ಆ ದೀಪದ ಬೆಳಕು ಬೆಳದಿಂಗಳು ಮುಂದೆ ಬಚ್ಚಿಟ್ಟುಕೊಂಡು ನಿದ್ರಾಸ್ಥಿತಿಯನ್ನು ಅನುಭವಿಸುತ್ತಿರುವಂತೆ ಕಾಣುತ್ತಿತ್ತು. ಅಲ್ಲಿ ಯಾವುದೇ ರೀತಿಯ ದನಿಗಳೂ ಕೇಳಿ ಬರುತ್ತಿರಲಿಲ್ಲ. ಆದ್ದರಿಂದ ಅದೊಂದು ನಿರ್ಜನ ಪ್ರದೇಶವೆಂಬಂತೆ ಕಾಣುತ್ತಿತ್ತು. ಆದರೆ ವಾಸ್ತವವಾಗಿ ದೋಣಿಯಲ್ಲಿ ಕೆಲವು ಜನಗಳು ಇದ್ದರು.

ಆಗಲೇ ಇಬ್ಬರು ಪ್ರಯಾಣಿಕರು ದೋಣಿಯಲ್ಲಿ ಮಲಗುವ ಕೋಣೆಯಲ್ಲಿ ಕೂತಿದ್ದರು. ಜೊತೆಗೆ ಅಲ್ಲಿ ಒಬ್ಬ ಪುಟ್ಟ ಬಾಲಕ ದೋಣಿಯ ಮುಂಭಾಗದ ಮೂತಿಯ ಮೇಲೆ ಕೂತು ತೂಕಡಿಸುತ್ತಿದ್ದ. ಅಂಬಿಗ ದೋಣಿಯ ಹಿಂಭಾಗದ ಮೂತಿಯ ಮೇಲೆ ಕೂತು ನಿರಾತಂಕವಾಗಿ ಧೂಮಪಾನ ಮಾಡುತ್ತಿದ್ದ. ಅಲ್ಲಿ ನಿಶ್ಶಬ್ದತೆ ಆವರಿಸಿತ್ತು.

ದೋಣಿ ನಿತ್ಯ ನಿಗದಿತ ವೇಳೆಗೆ ಸರಿಯಾಗಿ ಹೊರಡುತ್ತಿತ್ತು. ಅದರಲ್ಲಿ ಪ್ರಯಾಣ ಮಾಡುವ ಪ್ರಯಾಣಿಕರೆಲ್ಲಾ ಖಾಯಂ ಗಿರಾಕಿಗಳು. ಪ್ರತಿದಿನ ಮುಸ್ಸಂಜೆಯಲ್ಲಿ ಆ ದೋಣಿ ಹಳ್ಳಿಯ ಕಡೆಯಿಂದ ಪಟ್ಟಣಕ್ಕೆ ಹೊರಡುತ್ತಿತ್ತು. ಮತ್ತು ಮಾರನೆ ದಿನ ಬೆಳಿಗ್ಗೆಗೆ ಅದು ಪಟ್ಟಣದಿಂದ ಹಳ್ಳಿಯ ಕಡೆಗೆ ಹಿಂತಿರುಗುತ್ತಿತ್ತು. ಆದರೆ ಈ ನಿಶ್ಚಿತ ದಿನಚರಿ ಎಲ್ಲೋ ಒಮ್ಮೊಮ್ಮೆ ಮಾತ್ರ ಬದಲಾಗುತ್ತಿತ್ತು.

ಆ ಖಾಯಂ ಗಿರಾಕಿಗಳು ತಾವು ಹೋಗಿ ಬರುವ ವೇಳೆಗೆ ಅನುಗುಣವಾಗಿ ವಾರದ ಮೇಲೆ ದೋಣಿಯನ್ನು ಒಪ್ಪಂದದ ಮೇರೆಗೆ ತೆಗೆದುಕೊಳ್ಳುತ್ತಿದ್ದರು. ಆದ್ದರಿಂದ ಯಾರೇ ಹೇಳಲಿ ಬಿಡಲಿ ಅವರು ದೋಣಿಯಲ್ಲಿದ್ದ ತಂತಮ್ಮ ಕೋಣೆಯಲ್ಲಿ ಬಂದು ಮಲಗಿ ಮರಿನಿದ್ದೆ ತೆಗೆಯುತ್ತಿದ್ದರು. ದೋಣಿಯು ಪಟ್ಟಣದ ಸಮೀಪ ತಲುಪಿದ ಕೂಡಲೇ ಅವರೆಲ್ಲಾ ಎದ್ದೇಳುತ್ತಿದ್ದರು."[೧೧]

ಸ್ವಾತಂತ್ರ್ಯಾನಂತರದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಅಷ್ಟಾಗಿ ಬಸ್ಸುಗಳ ಅನುಕೂಲ ಇಲ್ಲದೆ ಇದ್ದುದರಿಂದ ಜನರು ಗ್ರಾಮಗಳಿಂದ ನಗರಕ್ಕೆ ಹೋಗಲು ನದಿಯನ್ನು ದೋಣಿಗಳ ಮೂಲಕ ದಾಟುತ್ತಿದ್ದರು. ನಮ್ಮ ಕತೆಗಾರರು ತಮ್ಮ ಕತೆಗಳ ಮೂಲಕ ಆಧುನಿಕತೆಯ ವಿಪರೀತ ಪ್ರಭಾವವನ್ನು ವ್ಯಕ್ತಪಡಿಸಿರುತ್ತಾರೆ. ಇವರದೇ ಇನ್ನೊಂದು ಕತೆಯಾದ "ನೆನಪಲ್ಲ ವಾಸ್ತವ" ಕತೆಯಲ್ಲಿ ಆಗತಾನೆ ತಗ್ಗಳ್ಳಿಗೆ ಹೊಸದಾಗಿ ಪಾಠಶಾಲೆ ಬಂದಿರುತ್ತದೆ. ಇದರಿಂದ ಜನರಿಗೆ ಅನೇಕ ರೀತಿಯ ಕುತೂಹಲವುಂಟಾಗಿ ಎಲ್ಲರೂ ತಮ್ಮ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಾರೆ. ಶಾಲೆಯ ಮಾಸ್ತರಿಗೆ ಕಾಡಣ್ಣನವರ ಮನೆಯಲ್ಲಿ ಉಳಿದುಕೊಳ್ಳಲು ವ್ಯವಸ್ಥೆಯನ್ನು ಮಾಡುತ್ತಾರೆ. ಅದರ ವಿವರಣೆ ಈ ರೀತಿಯಾಗಿದೆ :

“ಮಾಸ್ತರು ಕಾಡಣ್ಣನವರ ಮನೆಯಲ್ಲಿ ಉಳಿದು ಕೊಂಡಿದ್ದರಿಂದ ಅವರ ಮಗ ಬಿ.ಕೆ.ಕರಿಯಪ್ಪ ಅವರ ರೂಮಿಗೆ ಹೋಗಿ ಬಂದಾಗಲೆಲ್ಲಾ ಒಂದೊಂದು ತರಾವರಿ ಕಥೆಯನ್ನು ತನ್ನ ಸಂಗಡಿಗರಿಗೆ ಹೇಳುತ್ತಿದ್ದ. ಮಾಸ್ತರ ರೂಮಿನಲ್ಲಿದ್ದ ಹಾಸಿಗೆ, ಹಳೆಟ್ರಂಕು, ಕನ್ನಡಿ, ಪೌಡರು, ಬಾಚಣಿಗೆ, ಪ್ಯಾಂಟು, ಕೋಟು, ಷೂ, ಟೋಪಿ, ಸ್ಟವ್ ಮುಂತಾದ ಸಾಮಾನುಗಳನ್ನೆಲ್ಲಾ, ಆತ ತನ್ನ ಸಂಗಡಿಗರಿಗೆ ಬಣ್ಣಿಸುತ್ತಿದ್ದ. ತಾನು ಹೋದಾಗಲೆಲ್ಲಾ ಅವರು ತನಗೆ ಏನಾದರೂ ಸಿಹಿತಿಂಡಿ ಕೊಡುವುದನ್ನು ತನಗೆ ಅವರು ಪಾಠ ಹೇಳಿಕೊಡುವುದನ್ನೂ ಬಂದು ವಿವರಿಸುತ್ತಿದ್ದ. ಹಾಗೆಯೇ ಗೊಂಬೆ ರಾಮಣ್ಣನ ಹೆಂಡತಿ ರಾಧೆಯ ಮನೆಯಲ್ಲಿದ್ದ ಅವಳ ಸೌಂದರ್ಯ ಸಾಧನೆಗಳ ಬಗ್ಗೆ ಮತ್ತು ಅವಳ ಉಡಿಗೆ ತೊಡಿಗೆಗಳ ಬಗ್ಗೆ ಕರಿಯಪ್ಪ ವಿವರಿಸುತ್ತಿದ್ದರೆ ಅವನ ಜೊತೆಗಾರರು ಕಿವಿ ಬಾಯಿ ತೆರೆದು ನಿಲ್ಲುತ್ತಿದ್ದರು. ತಂತಮ್ಮ ಮನೆಗಳಲ್ಲಿ ಕಾಣದಿದ್ದ ಉಡುಪುಗಳ ಬಗ್ಗೆ ಅವರಿಗೆಲ್ಲಾ ಕುತೂಹಲ.”[೧೨]

ಸ್ವಾತಂತ್ರ್ಯಾನಂತರದಲ್ಲಿ ಗ್ರಾಮೀಣ ಸಂಸ್ಕೃತಿಯಲ್ಲಿ ಆಧುನಿಕತೆಯ ಪ್ರಭಾವದಿಂದ ವಿದ್ಯಾಭ್ಯಾಸದ ಬಗ್ಗೆ ಉತ್ಸಾಹ ತೋರಿ ಮಕ್ಕಳನ್ನು ಸಂತೋಷದಿಂದ ಶಾಲೆಗೆ ಕಳುಹಿಸುವುದನ್ನು ಕಾಣಬಹುದು. ಇದರ ಜೊತೆಗೆ ಅವರ ದೈನಂದಿನ ಬದುಕಿನಲ್ಲಿ ವೇಷಭೂಷಣ ಮತ್ತು ಸೌಂದರ್ಯ ಸಾದನಗಳ ಬಗ್ಗೆ ಕುತೂಹಲ ವ್ಯಕ್ತಪಡಿಸುವುದನ್ನು ಇಲ್ಲಿ ಲೇಖಕರು ಕಾಡಣ್ಣ ಮಾಸ್ತರ ಪಾತ್ರದ ಮೂಲಕ ಉತ್ತಮವಾಗಿ ವ್ಯಕ್ತಪಡಿಸಿರುವುದು ಕಂಡುಬರುತ್ತದೆ. ಇವರದೇ ಇನ್ನೊಂದು ಕತೆಯಾದ ‘ಗೌರಿ’ ಕತೆಯಲ್ಲಿ ಆಧುನಿಕತೆಯ ಪ್ರಭಾವವನ್ನು ಕಾಣಬಹುದು. ಅದರ ವಿವರಣೆ ಈ ಕೆಳಕಂಡಂತೆ ಇದೆ :

“ಇಲ್ಲಿಗೆ ಸುಮಾರು ಇಪ್ಪತ್ತೈದು ವರ್ಷಗಳ ಕೆಳಗೆ ಪೇಟೆಯಿಂದ ನಮ್ಮ ಊರಿಗೆ ಬೊಂಡದ ಗುಂಡಮ್ಮ ಅಂತ ಒಬ್ಬಳು ಮುದುಕಿ ವಾರಕ್ಕೊಂದು ಸಲ ಪ್ರತಿ ಶನಿವಾರ ತಪ್ಪದೆ ವ್ಯಾಪಾರಕ್ಕೆ ಬರುತ್ತಿದ್ದಳು. ನಮ್ಮಳ್ಳಿಗೂ ಪೇಟೆಗೂ ನಾಕು ಮೈಲಿ ದೂರವಿತ್ತು. ಆಕೆ ಕಾಲು ದಾರಿಯಲ್ಲಿ ಬೆಳಿಗ್ಗೆ ಹೊತ್ತು ನಡೆದು ನಮ್ಮೂರಿಗೆ ಬರುತ್ತಿದ್ದಳು.

ಬಂದು ಊರಿನಲ್ಲೆಲ್ಲಾ ತನ್ನ ಪುಟ್ಟಿಯಲ್ಲಿ ಹೊತ್ತುತಂದ ಎಲೆ, ಅಡಿಕೆ, ಲವಂಗ, ಏಲಕ್ಕಿ, ಕಡ್ಡಿಪುಡಿ, ಬೆಂಕಿಪೊಟ್ಟಣ, ಬೀಡಿ, ಸಿಗರೇಟ್, ಹೊಗೆಸೊಪ್ಪು, ಕಾಯಿ ಮಿಠಾಯಿ, ವಡೆ, ಬೋಂಡ, ಸಕ್ಕರೆ ಮಿಠಾಯಿ, ಚಕ್ಕುಲಿ, ಹೀಗೆ ಬಗೆ ಬಗೆಯ ತಿಂಡಿ ತಿನಿಸುಗಳನ್ನು ಮಾರಾಟ ಮಾಡಿ ಹೋಗುತ್ತಿದ್ದಳು. ಅತ್ತೆ ಕಾಣದಂತೆ ಸೊಸೆಯ ವ್ಯಾಪಾರ, ಸೊಸೆ ಕಾಣದಂತೆ ಅತ್ತೆಯ ವ್ಯಾಪಾರ ಹೀಗೆ ಬಗೆ ಬಗೆಯಲ್ಲಿ ನಮ್ಮೂರಿನ ಜನ ಕಂಡಂಗೆ, ಕಾಣದಂಗೆಲ್ಲಾ ಆಕೆಯ ಹತ್ತಿರ ವ್ಯಾಪಾರ, ವ್ಯವಹಾರ, ನಡೆಸುತ್ತಿದ್ದ ಸಂಗತಿಯ ಬಗ್ಗೆ ಮತ್ತು ತಾವು ಕೊಂಡುಕೊಂಡ ವಸ್ತುಗಳಿಗೆ ಭತ್ತ, ರಾಗಿಯಿಂದ ಹಿಡಿದು ಹಣದ ತನಕ ಕೊಡುತ್ತಿದ್ದುದನ್ನು ಕಂಡಿದ್ದೆ. ಆಕೆ ಭತ್ತ ರಾಗಿ ಮೂಟೆಗಟ್ಟಲೆಯಾದಾಗ ಅದನ್ನು ಪೇಟೆಯಿಂದ ಬಂದು ತೆಗೆದುಕೊಂಡು ಹೋಗಲು ತನ್ನವರ ಕಳುಹಿಸುವುದಾಗಿ ಹೇಳಿ ತನಗೆ ಗೊತ್ತಿದ್ದವರ ಮನೆಯಲ್ಲಿ ಇಟ್ಟು ತೆರಳುತ್ತಿದ್ದಳು. ಅವಳು ಬೆಳಿಗ್ಗೆಯೇ ಬರುತ್ತಿದ್ದುದು ವಾಡಿಕೆಯಾಗಿತ್ತು. ಜನ ಕುಯಿಲಿನ ನಂತರ ಎಲ್ಲರೂ ತಂತಮ್ಮ ಹೊಲಗದ್ದೆಗಳಿಗೆ ಕೆಲಸಕ್ಕೆ ಹೊರಟು ಹೋಗುತ್ತಾರೆಂಬುದು ಆಕೆಗೆ ತಿಳಿದಿತ್ತು. ಆದ್ದರಿಂದ ಆಕೆ ಬೆಳಿಗ್ಗೆಯೇ ಬಂದು ತನ್ನ ವ್ಯಾಪಾರವನ್ನೆಲ್ಲಾ ಮುಗಿಸಿಕೊಂಡು ಹೋಗುವುದೇ ಸರಿ ಎಂಬುದನ್ನು ತನ್ನ ಅನುಭವದಿಂದ ಕಂಡುಕೊಂಡಿದ್ದಳು.”[೧೩]

ನಮ್ಮ ಗ್ರಾಮೀಣ ಜನರು ಆರ್ಥಿಕವಾಗಿ ಹಿಂದುಳಿದಿದ್ದರೂ ಸಹ ಕೊಂಡ ವಸ್ತುಗಳಿಗೆ ಬದಲಾಗಿ ಧಾನ್ಯಗಳನ್ನು ನೀಡಿ ಆ ವಸ್ತುಗಳನ್ನು ಪಡೆಯುವುದರ ಮೂಲಕ ಆಧುನಿಕತೆಯನ್ನು ಸ್ವಾಗತಿಸುವುದನ್ನು ಈ ಕತೆಯಲ್ಲಿ ಲೇಖಕರು ವ್ಯಕ್ತಪಡಿಸಿರುವುದು ತುಂಬಾ ಸಮಂಜಸವಾಗಿದೆ.

ಗ್ರಾಮೀಣ ಜನರು ಆಧುನಿಕತೆಗೆ ಮಾರುಹೋಗಿ ತಮಗೆ ಬೇಕಾದ ವಸ್ತುಗಳನ್ನು ಗುಂಡಮ್ಮನಿಂದ ಪಡೆಯುತ್ತಿದ್ದುದನ್ನು ನಾವಿಲ್ಲಿ ಕಾಣಬಹುದು.

ಇವರದೇ ಇನ್ನೊಂದು ಕತೆಯಾದ 'ಅವಶೇಷ'ದಲ್ಲಿ ಆಧುನಿಕತೆಯ ಪ್ರಭಾವವನ್ನು ಕಾಣಬಹುದು. ಈ ಕತೆಯ ಸಂದರ್ಭವನ್ನು ಈ ಕೆಳಕಂಡಂತೆ ಗುರುತಿಸಲಾಗಿದೆ.

"ಹೀಗಿರುವಾಗ ಹದಿನೈದು ದಿನಕ್ಕೆ ಸರಿಯಾಗಿ ಒಂದು ದಿನ ಬೆಳಿಗ್ಗೆ ಕುಯಿಲು ಹೊತ್ತಿಗೆ ಎಲ್ಲಿಂದಲೋ ಏನೋ, ಒಂದು ಬುಲ್ಡೋಜರ್, ಒಂದು ಕ್ರೇನ್, ಊರು ಮುಂದಿನ ಬಸಪ್ಪನ ಹೋಟಲ್ಲಿನ ಮುಂದೆ ಬಂದು ನಿಂತವು. ಅವುಗಳ ಹಿಂದೆ ಒಂದು ಜೀಪೂ ಬಂದಿತು. ಎಲ್ಲರೂ ವಾಹನದಿಂದ ಕೆಳಕ್ಕೆ ಇಳಿದರು. ಆ ಅಪರಿಚಿತರನ್ನು ಬಸಪ್ಪನ ಹೋಟಲಿನಲ್ಲಿ ಕೂತಿದ್ದ ಜನ ಕಂಗಾಲಾಗಿ ನೋಡ ತೊಡಗಿದರು. ಅವರ ನಡುವೆ ತಮ್ಮ ಊರಿನ ಬ್ರಾಹ್ಮಣ ಕೇರಿಯ ಸುಬ್ಬಾಭಟ್ಟರ ಮಗ ರಮೇಶನೂ ಜೀಪಿನಿಂದ ಇಳಿದಿದ್ದನ್ನು ಬಸಪ್ಪ ನೋಡಿ ಬೆರಗಾದ. ಅವನ ಜೊತೆ ಒಬ್ಬ ಗಡ್ಡ ಬಿಟ್ಟು ಕನ್ನಡಕ ಹಾಕಿ, ಹೆಗಲಿಗೆ ಒಂದು ಕ್ಯಾಮರಾವನ್ನು ನೇತು ಹಾಕಿಕೊಂಡು ನಿಂತಿದ್ದ, ಇನ್ನೊಬ್ಬ ಧಡೂತಿ ಮನುಷ್ಯ ಹೊಟ್ಟೆ ಮೇಲಿನಿಂದ ಕೆಳಕ್ಕೆ ಜಾರಿ ಹೋಗುತ್ತಿದ್ದ ಪ್ಯಾಂಟನ್ನು ಮೇಲಕ್ಕೆ ಎಳೆದು ನಿಲ್ಲಿಸುತ್ತಿದ್ದ, ಇದನ್ನೆಲ್ಲಾ ನೋಡಿ ಬಸಪ್ಪ ಇದೆಲ್ಲಾ ಬ್ರಾಹ್ಮಣ ಪಿಳ್ಳೆ ರಮೇಶನದೇ ಕಿತಾಪತಿ. ಈ ಊರಿಗೆ ಏನೋ ಕೇಡುಗಾಲ ಬಂತು. ನನಗೆ ಯಾಕೆ ಇವರ ಸಹವಾಸ" ಎಂದು ಮನಸ್ಸಿನಲ್ಲೆ ಲೆಕ್ಕ ಹಾಕಿದ. ರಮೇಶ ಮಾದೇವಪ್ಪನ ಹೊಲದ ಕಡೆ ಹೋಗುವ ದಾರಿಯನ್ನು ಅವರಿಗೆಲ್ಲಾ ತೋರಿಸಿದ. ಮತ್ತೆ ಎಲ್ಲರೂ ವಾಹನವನ್ನು ಚಕಚಕನೆ ಹತ್ತಿದರು."[೧೪]

ಆಧುನಿಕತೆಯ ಪ್ರಭಾವದಿಂದ ನಮ್ಮ ಗ್ರಾಮಗಳಲ್ಲಿ ಹೇಗೆ ತೀವ್ರ ಬದಲಾವಣೆಗಳು ಆಗುತ್ತಿದ್ದವೆಂದು ನಮ್ಮ ಕತೆಗಾರರು ಸಂಕ್ಷಿಪ್ತವಾಗಿ ತಿಳಿಸಿದ್ದಾರೆ. ಹೊಸದನ್ನು ಸ್ವೀಕರಿಸುವುದಕ್ಕೆ ನಮ್ಮ ಗ್ರಾಮೀಣ ಜನರು ಕಾತರರಾಗಿದ್ದರೆಂದು ಇದರಿಂದ ತಿಳಿಯುತ್ತದೆ. ಎಸ್.ಕೆ.ಕೋದಂಡರಾಮ ಇವರ ಮಾತಿನಲ್ಲಿ ಹೇಳುವುದಾದರೆ "ನಾಗರಿಕ ಶೋಧಗಳು ಸಂಸ್ಕೃತಿ ಯನ್ನು ಅನಾಗರಿಕಗೊಳಿಸುತ್ತವೆ. ಬೇಕುಬೇಡದ ಸವಲತ್ತುಗಳ ನಡುವೆ ಹೆಣ್ಣುಗಂಡಿನ ಸಂಬಂಧಗಳು ರಮ್ಯವಾಗುತ್ತಿದೆ. ನಮ್ಮ ದೈನಂದಿನ ಬದುಕಿನೊಳಗೇ ಇರುವ ಸುವಾಸನೆಗೆ ಬೆನ್ನುಕೊಟ್ಟು ಯಾಂತ್ರಿಕ ಜಗತ್ತು ಸೃಷ್ಟಿಸುತ್ತಿರುವ ನಕಲಿ ವಾಸನೆಗೆ ಮಾರುಹೋಗುತ್ತಿದ್ದೇವೆ. ನಾವು ಬದುಕುತ್ತಿರುವ ರೀತಿಗೂ ಹೊರಗಿನ ಪ್ರಪಂಚ ಓಡುತ್ತಿರುವ ರೀತಿಗೂ ದಿನೇದಿನೇ ಅಗಾಧ ಅಂತರ ಸೃಷ್ಟಿಯಾಗುತ್ತಿದೆ. ಈ ಕಾರಣದಿಂದಾಗಿ ಕೌಟುಂಬಿಕ ಘಟಕಗಳು ದ್ರೋಹದ ನೆಲೆಗಳಲ್ಲಿ ಪರಸ್ಪರ ಅನುಮಾನದಲ್ಲಿ ಕುಂಟುತ್ತಿವೆ. ಆಧುನಿಕತೆ ತರುತ್ತಿರುವ ಆಘಾತಕ್ಕೂ ಸಾಮರಸ್ಯ ಯಾಕೆ ಸಾಧ್ಯವಾಗುತ್ತಿಲ್ಲ ಎಂಬುದು ನಮ್ಮೆಲ್ಲ ಲೇಖಕರನ್ನು ಕಾಡಿದೆ. ಹಾಗೆಯೇ ನಾವು ಬದುಕುತ್ತಿರುವ ಆವರಣ ಮಾನವೀಯ ಗೊಳ್ಳುತ್ತಿಲ್ಲ. ಬದಲಾವಣೆ ಆಗಬೇಕು ಎಂದು ಶತಮಾನಗಳಿಂದಲೂ ಹೋರಾಟ ನಡೆಯುತ್ತಿದೆ. ಆದರೆ

ವಾಸ್ತವದಲ್ಲಿ ಅದು ದಿನೇ ದಿನೇ ಹದಗೆಡುತ್ತಿದೆ. ಯಾಕೆ ಹೀಗೆ? ನಾವು ಸೃಷ್ಟಿಸುತ್ತಿರುವ ಯೋಜನೆಗಳು ಓದಿನ ಹಿನ್ನೆಲೆಯಲ್ಲಿ ಅನಾವರಣವಾಗುತ್ತಿರುವ ವೈಚಾರಿಕ ಆಕೃತಿಗಳು ಬದುಕಿನಿಂದ ದೂರ ಸರಿಯುತ್ತಿವೆ. ಅಥವಾ ನಗರದಲ್ಲಿ ಕೇಂದ್ರೀಕೃತಗೊಳ್ಳುತ್ತಿವೆ. ಇಲ್ಲಿ ಸಂಬಂಧ ಪಟ್ಟವರು ಮಾತ್ರವೇ ಮುಂದುವರಿಯುತ್ತಿರುವ ನಿದರ್ಶನಗಳು ಹೇರಳವಾಗಿ ಸಿಗುತ್ತವೆ. ನಗರದ ವೈಚಾರಿಕ ಗ್ರಾಮೀಣ ಬದುಕಿಗೆ ಭಾವುಕವಾಗಿ ಪ್ರತಿಕ್ರಿಯಿಸುತ್ತಿದ್ದಾನೆ. ಆಧುನಿಕತೆಯ ಸೌಲಭ್ಯಗಳನ್ನು ತಿರಸ್ಕರಿಸಿ ತನ್ನ ತವರನ್ನು ಸೇರಬೇಕೆಂಬ ಪ್ರಭಲೇಚ್ಛೆ ಅಲ್ಲೊಂದು ಇಲ್ಲೊಂದು ಒಂಟಿಯಾಗಿ ಸಿಗಬಹುದೇನೋ; ಇಂಥವೇ ಇಂದಿನ ಗ್ರಾಮೀಣ ಬದುಕಿಗೆ ನಿಷ್ಠೆಯಿಂದ ಸೃಜನಶೀಲ ನೆಲೆಗಳನ್ನು ಒದಗಿಸುತ್ತದೆ.''[೧೫]

ಈ ಮೇಲಿನ ಅಭಿಪ್ರಾಯವು ತುಂಬಾ ಸಮಯೋಚಿತವಾಗಿದೆ. ಸ್ವತಂತ್ರ ಭಾರತದಲ್ಲಿ ಜನತೆ ಹಕ್ಕುಗಳನ್ನು ತೀರಾ ವೈಯಕ್ತಿಕ ಲಾಭವಾಗಿಸಿಕೊಂಡಿದ್ದಾರೆ. ಅಲ್ಪ ಸಂಖ್ಯಾತ ನಗರಗಳು ಭಾರತದ ಸಮಗ್ರ ವ್ಯಾಖ್ಯಾನ ಮಾಡಲು ಹೊರಟಿವೆ. ಅನುಭವವಿಲ್ಲದ ನಗರದ ವಿಚಾರವಂತರು ಮಂಡಿಸುವ ವಿಚಾರಗಳು ಗ್ರಾಮೀಣ ಪ್ರದೇಶಗಳ ಕೂಡು ಬದುಕಿನ ಸ್ತರಕ್ಕೆ ಹೊಂದುವುದಿಲ್ಲವೆಂಬುದನ್ನು ಈ ವ್ಯಾಖ್ಯಾನ ಸ್ಪಷ್ಟವಾಗಿ ನಿರೂಪಿಸುತ್ತದೆ.

ತಮ್ಮ 'ಅಬಚೂರಿನ ಪೋಸ್ಟಾಫೀಸು' ಕಥಾ ಸಂಕಲನದ ಮುನ್ನುಡಿ ರೂಪದ ಹೊಸ ದಿಗಂತದ ಕಡೆಗೆ ಬರಹದಲ್ಲಿ ತೇಜಸ್ವಿ ಅವರು ಕೂಡ ನವ್ಯ ಸಾಹಿತ್ಯದ ಸಾಂಕೇತಿಕ ಶೈಲಿ, ತಂತ್ರ, ಕ್ರಾಂತಿ, ಕಾರಕತನಗಳ ಬಗ್ಗೆ ತಮ್ಮದೇ ಆದ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಶಿಕ್ಷಣ, ಸಾಹಿತ್ಯ, ಮಾಧ್ಯಮ, ಪಠ್ಯ, ಸಂಸ್ಕೃತಿ, ಬರವಣಿಗೆಯಲ್ಲಿ ಶಿಸ್ತು, ಗ್ರಾಮ ಜೀವನದ ಅಭಿವ್ಯಕ್ತಿ, ಮೌಲ್ಯಗಳು, ಇವುಗಳ ಬಗ್ಗೆ ಸಾಮಾಜಿಕವಾಗಿ, ರಾಜಕೀಯವಾಗಿ, ತಾತ್ವಿಕವಾಗಿ, ಸಮಗ್ರವಾಗಿ ಬದಲಾವಣೆಯಾಗುವುದರಿಂದ ಮಾತ್ರವೇ ನಿಜವಾದ ಸಾಹಿತ್ಯ ಹೊರಬರುತ್ತದೆ ಎಂದು ವಿವೇಚಿಸಿದ್ದಾರೆ.

ಎಪ್ಪತ್ತರ ದಶಕದ ಆದಿಯಲ್ಲಿ ಬರೆದ ತೇಜಸ್ವಿಯವರ ಈ ಎಲ್ಲಾ ಕಥೆಗಳಿಗೆ ಸಂಬಂಧಿಸಿದಂತೆ ಕೆಲವು ಸಾಮಾನ್ಯವಾದ ಅಂಶಗಳನ್ನು ಹೀಗೆ ಹೇಳಬಹುದು: ಕಥೆ ಹೇಳುವಿಕೆ ಮತ್ತು ನೇರ ನಿರೂಪಣೆ ಈ ಕಥೆಗಳ ತಂತ್ರವಾಗಿದೆ. ಆಧುನಿಕ ನಾಗರಿಕತೆಯ ಆಕ್ರಮಣದಿಂದ ಉಂಟಾಗುವ ಅವಾಂತರವಿದೆ. ತನ್ನ ಸುತ್ತಲಿನ ಬದುಕಿನ ಬೇಡಿಕೆ, ನಂಬಿಕೆ, ನಾಗರಿಕತೆಯ ಹಂಬಲ ಇವುಗಳಿಗೂ ವ್ಯಕ್ತಿಯ ಪ್ರತಿಭೆ, ಪಾಡುಗಳಿಗೂ, ಇರುವ ಸಂಬಂಧವನ್ನು ಇಲ್ಲಿಯ ಕಥೆಗಳು ಕಾಣಿಸುತ್ತವೆ. ಪ್ರಧಾನವಾಗಿ ಇಲ್ಲಿಯ ಕಥೆಗಳು ಪರಿಣಾಮದಲ್ಲಿ ದುರಂತದ ತೀವ್ರತೆಯನ್ನೂ, ಭಾವುಕ ಸ್ಥಿತಿಯನ್ನೂ, ಹಾಸ್ಯದ ಪ್ರವೃತ್ತಿಯನ್ನೂ ಪ್ರಕಟಿಸುತ್ತವೆ.

''ಅಬಚೂರಿನ ಪೋಸ್ಟಾಫೀಸು'' ಕತೆಯ ಆಶಯ ದುರಂತ ಮತ್ತು ವಿನೋದ ಎರಡನ್ನು ಒಟ್ಟೊಟ್ಟಿಗೆ ಒಳಗೊಂಡಿದೆ. ಅಬಚೂರಿಗೆ ಹೊಸದಾಗಿ ಬಂದ ಪೋಸ್ಟಾಫೀಸಿಗೆ ಹಂಗಾಮಿ ಪೋಸ್ಟ್ ಮಾಸ್ತರನಾಗಿ ನೇಮಕವಾದ ಬೋಬಣ್ಣನ ನೆಮ್ಮದಿಯಿಂದ ಇದ್ದ ಸಂಸಾರದಲ್ಲಿ ಅಶಾಂತಿಯ ಅಲೆಗಳು ಹುಟ್ಟಿ ಆತನನ್ನು ಅತ್ಯಂತ ಅಸಂತೋಷಕ್ಕೂ ತೊಂದರೆಗೂ ಒಳಗು ಮಾಡುವುದು ಈ ಕಥೆಯ ವಸ್ತು. ಪೋಸ್ಟಾಫೀಸಿನಿಂದ ಹಳ್ಳಿಯ ಜೀವನದಲ್ಲಿ ಅನೇಕ ಬದಲಾವಣೆಗಳು ಆಗುತ್ತವೆ. ಆಧುನಿಕ ನಾಗರಿಕತೆಯ ಪ್ರವೇಶಕ್ಕೆ ಈ ಪೋಸ್ಟಾಫೀಸು ಪ್ರತೀಕವಾಗಿದೆ. ಅದರಿಂದ ಆಗುವ, ಆಗಬೇಕಾಗಿರುವ ಪರಿಣಾಮಗಳು, ನಾಗರಿಕತೆಯಿಂದ

ದೂರ ನಿಂತ ಸಮಾಜದಲ್ಲಿ ಗೊಂದಲಮಯ, ಅಸಮಾಧಾನ, ಮನಸ್ತಾಪಗಳು, ಬೋಬಣ್ಣ ಹಾಗೂ ಅವನ ಹೆಂಡತಿಯ ನಡುವಿನ ಅಸಹಕಾರ ವರ್ತನೆ, ಅತ್ತೆ ಮಾಚಮ್ಮನ ದರ್ಪ ಇವೆಲ್ಲಾ ಈ ಕಥೆಯ ಸೂಕ್ಷ್ಮವಾದ ಅಂಶಗಳಾಗಿವೆ. ಬೋಬಣ್ಣನ ಸಂಸಾರದಲ್ಲಿ ಇದರಿಂದ ಉಂಟಾದ ಅಶಾಂತಿ ಕೊನೆಗೆ ಇಡೀ ಅಬಚೂರಿನ ಜನತೆಯನ್ನೇ ತನ್ನ ತೆಕ್ಕೆಗೆ ತೆಗೆದುಕೊಂಡು ಬೋಬಣ್ಣ ಅಬಚೂರಿನಿಂದ ಓಡಿ ಹೋಗುವ ಪ್ರಸಂಗದೊಂದಿಗೆ ಕಥೆ ಮುಗಿಯುತ್ತದೆ. ಆತನನ್ನು ಅಡ್ಡಗಟ್ಟಲು ಬಂದ ಜನಗಳನ್ನೆಲ್ಲಾ ಸಿಟ್ಟಿನಲ್ಲಿ ಮುಷ್ಠಿಯಿಂದ ಮೋರೆಗೆ ಗುದ್ದಿ ಓಡಿ ಓಡಿ ಹಿಂದಕ್ಕೆ ನೋಡದೆ ಕತ್ತಲಿಲ್ಲ ಕರಗಿ ಹೋಗುವ ಆತನ ದೃಶ್ಯ ದುರಂತಮಯವಾದುದು. ಕೊನೆಗೆ ಪೋಸ್ಟಾಫೀಸನ್ನು ವಿದ್ಯುಕ್ತವಾಗಿ ಮುಚ್ಚಲಾಗುತ್ತದೆ. ಕಾವೇರಿ ಮತ್ತು ಮಾಚಮ್ಮನಿಗೆ ತೋಟದ ಕೆಲಸವೇ ಗಟ್ಟಿ. ಬೋಬಣ್ಣನನ್ನು ಕೊನೆಗೆ ಪಶು ಸಮಾನವಾಗಿ ನಡೆಸಿಕೊಳ್ಳುವ ಸಮಾಜದ ಬಗ್ಗೆ, ಪರಿಸರದ ಬಗ್ಗೆ, ತೀವ್ರವಾದ ವಿಷಾದ, ಸಿಟ್ಟು ಕಥೆಯೊಳಗೆ ಮೌನವಾಗಿ ಹರಿಯುವ ಅಂಶಗಳು. ಇದು ಜೀವನದ ಅಸಂಬದ್ಧತೆಯನ್ನು ಹೃದ್ಯವಾಗಿ ಶೋಧಿಸುತ್ತದೆ."[೧೬]

ಕರೀಗೌಡ ಬೀಚನಹಳ್ಳಿಯವರು ತೇಜಸ್ವಿಯವರ ಅಬಚೂರಿನ ಪೋಸ್ಟಾಫೀಸು ಕತೆಯಲ್ಲಿ ಬರುವ ಬೋಬಣ್ಣನ ಪಾತ್ರದ ಮೂಲಕ ಆಧುನಿಕತೆಯಿಂದ ನಮ್ಮ ಗ್ರಾಮಗಳಲ್ಲಿ ಆಗುವ ಬದಲಾವಣೆಗಳನ್ನು ಸ್ವಾರಸ್ಯವಾಗಿ ಚಿತ್ರಿಸಿರುವುದನ್ನು ಸಂದರ್ಭಕ್ಕನುಗುಣವಾಗಿ ಚಿತ್ರಿಸಿರುವುದನ್ನು ಕಾಣಬಹುದು.

ಇವರದೇ ಕತೆಯಾದ "ತುಕ್ಕೋಜಿ" ಕಥೆಯಲ್ಲಿಯೂ ಆಧುನಿಕತೆಯ ವಿಪರೀತ ಪ್ರಭಾವವನ್ನು ಕಾಣಬಹುದು. ಹೊಸ ನಾಗರಿಕತೆಯ ಪ್ರವೇಶದಿಂದ ಹಳ್ಳಿಯ ಜನಗಳಲ್ಲಿ ಆಗುವ ಪರಿಣಾಮದ ಚಿತ್ರಣ ಈ ಕತೆಯಲ್ಲಿದೆ. ಆದರೆ ಇಲ್ಲಿ ದುರಂತವಾಗಬಹುದಾಗಿದ್ದ ವಸ್ತು ವಿನ್ಯಾಸವು ತುಕ್ಕೋಜಿಯನ್ನು ಭಾವುಕ ಸ್ಥಿತಿಗೆ ಕೊಂಡೊಯ್ಯುವ ರೀತಿಯ ಬರವಣಿಗೆಯ ಪ್ರಯೋಗವಿದೆ. ಇಲ್ಲಿ ತುಕ್ಕೋಜಿಯ ವೈಯಕ್ತಿಕ ಜೀವನದಲ್ಲೂ ಅಶಾಂತಿ ಇದೆ. ಆತನಿಗೆ "ಚಿತ್ತಸ್ವಾಸ್ಥ್ಯ ಕೆಡಲು ಹೋಗಿ ಅವನು ಇಡೀ ಗುರುಗಳ್ಳಿ ಪೇಟೆಯ ರೀವಿಯನ್ನೇ ಅಗೋಚರವಾಗಿ ಕೆಡಿಸತೊಡಗಿದನು. ವೈಯಕ್ತಿಕವಾದ ದುರಂತಗಳು ಹೇಗೆ ಇಡೀ ಒಂದು ಸಮಾಜದ ಮೇಲೆ ಪರಿಣಾಮ ಬೀರಬಲ್ಲವು ಎಂಬುದು ತೇಜಸ್ವಿಯವರ ಬಹುಪಾಲು ಕಥೆಗಳ ಹಿಂದಿರುವ ಧ್ವನಿ. 'ತುಕ್ಕೋಜಿ' ಕಥೆ ಆರಂಭವಾಗುವುದೇ ಗುರುಗಳ್ಳಿಯ ಬದಲಾವಣೆಯ ವರ್ಣನೆಯ ಮೂಲಕ. ಆದರೆ ಇನ್ನೂ ಹೇಮಾವತಿ ನದಿಗೆ ಇನ್ನೊಂದು ರೈಲು ಸೇತುವೆ, ಗುರುಗಳ್ಳಿಯಲ್ಲಿ ಒಂದು ರೈಲು ಸೇತುವೆ, ಗುರುಗಳ್ಳಿಯಲ್ಲಿ ಒಂದು ರೈಲು ನಿಲ್ದಾಣ ಆಗಬೇಕಿತ್ತು, ಆ ಕೆಲಸವೂ ಭರದಿಂದ ಸಾಗಿತ್ತು. ಆ ಜವಾಬ್ದಾರಿಯನ್ನು ಆತ ನೀಗಬೇಕಾಗಿತ್ತು. ಆತನ ಮನೆತನ ದರ್ಜಿಯದು. ಅವನ ತಂದೆ ಹಾಸನದ ಹೆಸರಾಂತ ಬಟ್ಟೆ ವ್ಯಾಪಾರಿ. ತುಕ್ಕೋಜಿ ತನಗೆ ವರದಕ್ಷಿಣೆ ಸಹಿತವಾಗಿ ಬಂದ ಹೆಣ್ಣುಗಳನ್ನೆಲ್ಲಾ ತಿರಸ್ಕರಿಸಿ ತಾನು ಇಷ್ಟಪಟ್ಟು ಮದುವೆಯಾದ ಹೆಂಡತಿಯೊಂದಿಗೆ ಹೊಸದಾಗಿ ಪೇಟೆಯಾಗಿ ರೂಪುಗೊಳ್ಳುತ್ತಿದ್ದ, ಗುರುಗಳ್ಳಿಗೆ ಆತ ಬಂದು ನೆಲೆಸಿದ್ದನು. ಆತನಲ್ಲಿ ಹಣವಿಲ್ಲದಿದ್ದರೂ, ಅವನಿಗೆ ತಾನು, ತನ್ನ ಹೆಂಡತಿ ಬದುಕ ಬಲ್ಲೆವು ಎಂಬ ಛಲ ಇತ್ತು. ಇದಕ್ಕೆ ಮುಖ್ಯ ಕಾರಣ ಆತನಲ್ಲಿ ಅನುವಂಶಿಕವಾಗಿ ಬಂದಿದ್ದ ಹೊಲಿಗೆ ವಿದ್ಯೆ. ಈ ಅಭಿಮಾನದಿಂದ ಆತ ಒಬ್ಬ ಉತ್ತಮ ಟೈಲರ್ ಎಂದು ಅಲ್ಲಿ ಖ್ಯಾತಿ ಪಡೆದಿದ್ದ. ಕಾಲೇಜಿನ ಹುಡುಗ ಹುಡುಗಿಯರು ಅವನ ಖಾಯಂ ಗಿರಾಕಿಗಳಾಗಿದ್ದರು. ಅದರ ಜೊತೆಗೆ ತನ್ನ ಹೆಂಡತಿಯ ಏಕಾಗ್ರತೆಯು

ಸೇರಿ ಆತನಲ್ಲಿ ಆತ್ಮವಿಶ್ವಾಸವನ್ನು ಮೂಡಿಸಿತ್ತು. ಆತನಲ್ಲಿ ಶ್ರದ್ಧೆಯನ್ನು, ಶಿಸ್ತನ್ನೂ ಪ್ರೇರೇಪಿಸಿತ್ತು. ಆತ ತನ್ನ ಹೆಂಡತಿ ಅದೃಷ್ಟ ದೇವತೆ ಎಂದು ತಿಳಿದಿದ್ದನು. ಅಲ್ಲಿ ಅಂಗಡಿ ತೆಗೆದು ಮನೆ ಹಿಡಿದಾಗ ಆತನಿಗೆ ತಾನೊಬ್ಬ ಅತ್ಯಂತ ಕ್ಷುದ್ರನೂ, ನಿರ್ಬಲನೂ ಅನ್ನಿಸಿತ್ತು. ಆದರೆ ಅದು ಬರು ಬರುತ್ತಾ ಮಾಯವಾಗಿ ಅವನಲ್ಲಿ ಆತ್ಮವಿಶ್ವಾಸ ಮೂಡಿತ್ತು. ತವರಿನವರ ಮೇಲಿದ್ದ ಸಿಟ್ಟು ಕಡಿಮೆಯಾಯಿತು. ಅವರಿಬ್ಬರ ಪ್ರೇಮದ ಭಾವುಕ ಸ್ಥಿತಿಗೆ ಸಂಕೇತ ಎಂಬಂತೆ ಮಗ ಹುಟ್ಟಿದ. ಈ ಮಗು ಹುಟ್ಟಿದ ಮೇಲೆಯೆ ಅವರ ಸಂಸಾರದಲ್ಲಿ ಅಸಮಾಧಾನ, ಅಶಾಂತಿ, ಹುಟ್ಟಿಕೊಂಡಿದ್ದು. ಅವರಿಬ್ಬರ ಕೆಲಸದ ನಡುವೆ ಮಗು ಅಡ್ಡವಾಯಿತು. ಅದರಿಂದ ಆತ ತನ್ನ ಟೈಲರಿಂಗ್ ಕೆಲಸದಲ್ಲಿದ್ದ ಏಕಾಗ್ರತೆಯನ್ನು ಕಳೆದುಕೊಳ್ಳುತ್ತಾ ಹೋದ. ಆಕೆಗಾಗಿ ಎಲ್ಲವನ್ನೂ ತ್ಯಾಗ ಮಾಡಿದ್ದು ಬರೀ ವ್ಯರ್ಥ ಅನ್ನಿಸಿತು. ಇದು ಸಂಸಾರದಲ್ಲಿ ದೊಡ್ಡ ಅಶಾಂತಿಗೆ ಎಡೆ ಮಾಡಿಕೊಟ್ಟಿತು. ಹೆಂಡತಿಯ ಮೇಲೆ ಉಗ್ರವಾಗಿ ರೇಗ ತೊಡಗಿದ. ತನ್ನ ಹೆಂಡತಿ ಸರೋಜ ತನ್ನನ್ನು ತಾನಲ್ಲದ ಯಾವುದೋ ವ್ಯಕ್ತಿತ್ವಕ್ಕಾಗಿ ಪ್ರೀತಿಸುತ್ತಿದ್ದಾಳೆಂದು, ಆತ ಅನುಮಾನಿಸಿ ಗುಮಾನಿಪಡಲು ಶುರು ಮಾಡಿದ. ಹೀಗೆ ತುಕ್ಕೋಜಿಯ ಸ್ವಂತ ದುರಂತ ಈ ರೀತಿ ಸಾಗುತ್ತಿರಬೇಕಾದರೆ ಮಗು ಕಿಟ್ಟಿಯೊಡನೆ ಗುರುಗಳ್ಳಿಯೂ ಬೆಳೆಯುತ್ತಾ ಸಾಗಿತ್ತು. ದಿನ ಬೆಳಗಾದರೆ ಕಾಲೇಜಿನ ಹುಡುಗ, ಹುಡುಗಿಯರಿಂದ, ಉಪ್ಯಾಧ್ಯಾಯರಿಂದ ಬೇರೆ ಗಿರಾಕಿಗಳಿಂದ ತನ್ನ ಹೊಲಿಗೆಯ ಸೋಲಿನ ಬಗ್ಗೆ ನಿಂದನೆಯ ಮಾತುಗಳನ್ನು ಕೇಳಬೇಕಾಗಿ ಬಂತು. ಒಬ್ಬ ಉಪಾಧ್ಯಾಯನಂತೂ ಆತನಿಗೆ ಬೈದು ಟೈಲರ್ ಕೆಲಸ ನಿಲ್ಲಿಸುವುದೇ ಸೂಕ್ತವೆಂದು ಹೇಳಿ ಹೋದಾಗ ತುಕ್ಕೋಜಿಗೆ ತುಂಬಾ ದುಃಖವಾಯಿತು. ಆಗ ಅವನಿಗೆ ತಾನು ಜೀವನದಲ್ಲಿ ಸಂಪೂರ್ಣವಾಗಿ ಸೋತು ಹೋದೆನು ಅನ್ನಿಸಿತು.

ತುಕ್ಕೋಜಿಯ ಸಂಸಾರ ಹೀಗೆ ಸಾಗಿರಬೇಕಾದರೆ, ನಾಗರಿಕತೆಯ ಛಂದಸ್ಸನ್ನು ಆತ ಅರ್ಥಮಾಡಿಕೊಳ್ಳದೆ ಹಾಳು ಮಾಡತೊಡಗಿದ್ದ ಈ ಸಂದರ್ಭದಲ್ಲಿ ಗುರುಗಳ್ಳಿ ಹಳದಿ ಬಣ್ಣದ ವಿಚಿತ್ರ ಸ್ವರೂಪದ ಬೃಹತ್ ಯಂತ್ರವೊಂದು ಆಗಮಿಸಿದಾಗ ತುಕ್ಕೋಜಿಯ ಕಥೆಗೆ ಹೊಸ ತಿರುವು ಬರುತ್ತದೆ. ರೈಲು ರಸ್ತೆಯ ನಿರ್ಮಾಣಕ್ಕೊ, ಸೇತುವೆಯ ನಿರ್ಮಾಣಕ್ಕೊ, ಆಗಮಿಸಿದ್ದ ಯಂತ್ರ ಅದು. ಆ ಯಂತ್ರ ಗುರುಗಳ್ಳಿಯಲ್ಲೆಲ್ಲಾ ವಿಚಿತ್ರವಾಗಿ ಓಡಾಡುತ್ತಿದ್ದಾಗ ಕಿಟ್ಟಿಗೆ ಕುತೂಹಲ. ಅದರಲ್ಲಿ ಹೋಗಿ ಕೂರುವ ಬಯಕೆ ಆತನದು. ಅದನ್ನು ಕಂಡು ಒಮ್ಮೆ ರಸ್ತೆಗೆ ಅಡ್ಡ ಬಂದ ಕಿಟ್ಟಿಯನ್ನು ಕಂಡು ಆ ಯಂತ್ರದ ಡ್ರೈವರ್ ಇಳಿದು ಬಂದು ತುಕ್ಕೋಜಿಗೆ ಮಕ್ಕಳನ್ನು ರಸ್ತೆಗೆ ಬಿಡಬಾರದು ಅಂಥ ಹೇಳಿ ಹೋದಾಗ ತುಕ್ಕೋಜಿ ಹೆಂಡತಿಯ ಮೇಲೆ ರೇಗುತ್ತಾನೆ. "ಯೋಗ್ಯತೆಗೆ ತಕ್ಕಂತೆ ಮಕ್ಕಳು ಹುಟ್ಟುತ್ತವೆ" ಎಂದು ತುಕ್ಕೋಜಿ ಆತ್ಮನಿಂದನೆ ಮಾಡಿಕೊಳ್ಳುತ್ತಾನೆ. ಇನ್ನೊಂದು ದಿನ ಅದೇ ಡ್ರೈವರ್ ಆ ಬಾಲಕನನ್ನು ಕರೆದುಕೊಂಡು ಹೋಗುತ್ತಾನೆ. ಆಗ ಆತನ ಮುಖದಲ್ಲಿದ್ದ ಅವರ್ಣನೀಯವಾದ ಸಹಾನುಭೂತಿಯು ತುಕ್ಕೋಜಿ ಸರೋಜಳಿಗೆ ಆತನ ಬಗ್ಗೆ ಅನುಮಾನವನ್ನು ಹುಟ್ಟಿಸುವುದಿಲ್ಲ. ಅವನ ಮುಖದಲ್ಲಿ ರೋಷವಾಗಲಿ, ಅಸಹನೆಯಾಗಲಿ ಇರಲಿಲ್ಲ. ಅದನ್ನು ಕಂಡು ಗಂಡ ಹೆಂಡತಿಯರಿಬ್ಬರೂ ಇವನು ನಮಗೆ ಬೇಡ ಕರೆದುಕೊಂಡು ಹೋಗಿ ಇವನಿಂದ ನಮಗೆ ಬೈಯ್ಗಳು ತಿಂದು ತಿಂದು ಸಾಕಾಗಿ ಹೋಗಿದೆ" ಎಂದು ಹೇಳುತ್ತಾರೆ. ಆತ ಕರೆದುಕೊಂಡು ಹೋದ ಮೇಲೆ ಇಬ್ಬರ ನಡುವೆಯೂ ಅಸಹನೀಯವಾದ ಮೌನ ಆವರಿಸುತ್ತದೆ. ಸರೋಜಳಿಗೆ ಗಾಬರಿ ಶುರುವಾಗುತ್ತದೆ. ಮಕ್ಕಳನ್ನು

ಹಿಡಿಯುತ್ತಿದ್ದಾರೆಂಬ ಕೇಳಿದ್ದ ವದಂತಿಯು ನೆನಪಾಗಿ ಆಕೆಯನ್ನು ಭಯಂಕರವಾಗಿ ಕಾಡಿಸುತ್ತದೆ. ಅಳತೊಡಗುತ್ತಾಳೆ. ಆಗ ತುಕ್ಕೋಜಿಗೆ ದಿಗ್ಭ್ರಾಂತಿ ಆರಂಭವಾಗುತ್ತದೆ. ತನ್ನ ಕರ್ಮಗಳಿಗೆ ಆತ್ಮಾವಹೇಳನ ಮಾಡಿಕೊಳ್ಳುತ್ತಾನೆ. ಹುಡುಗನಿಗೆ ಬುದ್ಧಿ ಕಲಿಸಲು ಹೋಗಿ ಬುದ್ಧಿ ಭ್ರಮಣೆ ಆಯಿತಲ್ಲ ಅನಿಸುತ್ತದೆ. ಆತನಿಗೆ ಇನ್ನೇನು ಮಗುವನ್ನು ಆತ ಕರೆದುಕೊಂಡು ಬರಬಹುದೆಂದು ಕಾಯುತ್ತಾನೆ. ಗಂಡ ಹೆಂಡತಿಯರಿಬ್ಬರಿಗೂ ಕಿಟ್ಟುವನ್ನು ತಮ್ಮ ಜೀವನದಲ್ಲಿ ತಮ್ಮ ಜಗಳದ ಮಾಧ್ಯಮವನ್ನಾಗಿ ಮಾಡಿಕೊಂಡು ಒಬ್ಬರ ಮೇಲೊಬ್ಬರು ಮುಯ್ಯಿ ತೀರಿಸಲು ಉಪಯೋಗಿಸಿದುದಕ್ಕೆ ಇಬ್ಬರಿಗೂ ಪಶ್ಚಾತ್ತಾಪವಾಗತೊಡಗಿತು.'' ಆಗ ಆತನನ್ನು ಪಡೆಯುವ ಬಗ್ಗೆ ಹಲವು ಬಗೆಯಲ್ಲಿ ಯೋಚಿಸುತ್ತಾರೆ. ಸರೋಜಳಿಗೆ ಡ್ರೈವರ್‌ನ ವಿವರ ತಿಳಿಯುವ ಆಸೆಯಾದರೆ, ತುಕ್ಕೋಜಿಗೆ ಪೋಲಿಸ್ ಸ್ಟೇಷನ್‌ಗೆ ಹೋಗಿ ತಿಳಿಸಬೇಕು ಅನ್ನಿಸುತ್ತದೆ. ಆದರೆ ಮತ್ತೊಂದು ಕ್ಷಣದಲ್ಲಿ, ಧೂಳಿನಿಂದಲೇ ಉದ್ಭವಿಸಿದ ಮರೀಚಿಕೆಯೋ ಎಂಬಂತೆ ಸನಿಹದಲ್ಲೆ ಆ ಹಳದಿ ಕಲರ್ ಯಂತ್ರ ರಸ್ತೆಯ ಮೇಲೆ ಪಕ್ಕನೆ ಕಾಣಿಸಿದಾಗ ಇಬ್ಬರಿಗೂ ಸಂತೋಷವಾಗುತ್ತದೆ. ಆ ಡ್ರೈವರ್ ಯಂತ್ರ ನಿಲ್ಲಿಸಿ ಕಿಟ್ಟುವನ್ನು ಎತ್ತಿಕೊಂಡು ಬಂದಾಗ ಗಂಡ ಹೆಂಡತಿಯರಿಬ್ಬರ ಕಣ್ಣಿಗೆ ಹಬ್ಬವಾಗುತ್ತದೆ. ತಮ್ಮನ್ನು ಆವರಿಸಿದ್ದ ಭ್ರಾಂತಿ, ಸಂದೇಹಗಳ ಬಗೆಗೆ ತಮಗೆ ನಾಚಿಕೆಯಾಗುತ್ತದೆ. ಗಂಡ ಹೆಂಡತಿಯರಿಬ್ಬರೂ ಭಾವುಕ ಸ್ಥಿತಿಯನ್ನು ಮುಟ್ಟುವಲ್ಲಿಗೆ ಕಥೆ ನಿಲ್ಲುತ್ತದೆ.''[೧೭]

ತೇಜಸ್ವಿಯವರ ತುಕ್ಕೋಜಿ ಕತೆಯ ಬಗ್ಗೆ ಡಾ. ಕರೀಗೌಡ ಬೀಚನಹಳ್ಳಿಯವರು ವಿಮರ್ಶಿಸಿರುವಂತೆ ಆಧುನಿಕತೆಯ ಪ್ರಭಾವ ತುಕ್ಕೋಜಿಯು ಪಟ್ಟಣದ ಪರಿಸರದಲ್ಲಿ ಹುಟ್ಟಿ ಬೆಳೆದರೂ ಗ್ರಾಮೀಣ ಜೀವನವನ್ನು ಆರಿಸಿಕೊಳ್ಳುತ್ತಾನೆ. ಇದರಲ್ಲಿ ಅವನ ಆಧುನಿಕ ಜೀವನಕ್ರಮದಲ್ಲಿ ಆದ ಏರುಪೇರುಗಳನ್ನು ಕಾಣಬಹುದು.

ಇವರದೇ ಇನ್ನೊಂದು ಕತೆಯಾದ ''ಕುಬಿ ಮತ್ತು ಇಯಾಲ'' ಕಥೆಯಲ್ಲಿ ಆಧುನಿಕತೆಯ ಪ್ರಭಾವವನ್ನು ಕಾಣಬಹುದು. ''ಇದು ಸಮಾಜದ ಅವನತಿಯನ್ನು ಚಿತ್ರಿಸುವ ಕಥೆಯಾಗಿದೆ. ''ಕುಬಿ ಮತ್ತು ಇಯಾಲ'' ಈ ಅವನತಿಯು ಬರೀ ವಿಚಾರವಾದಿ ಕುಬಿ ಡಾಕ್ಟರ್ ಅಥವಾ ಮುಗ್ಧ ಇಯಾಲಳು ಅವನತಿ ಮಾತ್ರವಾಗದೆ ಇಡೀ ಒಂದು ನಿರ್ದಿಷ್ಟ ಸಮಾಜದ ಅವನತಿಯೂ ಆಗಿದೆ. ಕುಬಿ ಡಾಕ್ಟರು ರೋಗದ ವಿರುದ್ಧ ಹೋರಾಡುವುದೆಂದರೆ ಭೈರಾಪುರದ ಜನರ ಅಜ್ಞಾನ, ಮೌಢ್ಯತೆಯ ವಿರುದ್ಧ ಹೋರಾಡುವುದೆಂದು ಭಾವಿಸುತ್ತಾನೆ. ಜ್ಞಾನ ತನ್ನೊಡನೆ ಅಜ್ಞಾನವನ್ನು ಒಯ್ಯುವುದು ಅದರ ಅನುವಂಶಿಕ ಗುಣವೋ ಅಥವಾ ಇದೊಂದು ಚಾರಿತ್ರಿಕವಾದ ದುರಂತವೋ ಯಾರು ಬಲ್ಲರು? ''ಎಂಬುದು ಕುಬಿಯ ನಿಲುವು. ಮೌಢ್ಯ ತುಂಬಿರುವ ಸಮಾಜದೊಂದಿಗೆ ಅವನ ಸಂವಾದ ಕಡಿದು ಬೀಳುತ್ತದೆ. ಆದ್ದರಿಂದ ಕುಬಿಯ ವಿಚಾರವಾದವು ಸಮಾಜದೊಡನೆ ಸಂವಹನ ಸಾಧಿಸದೆ ವಿಫಲವಾಗುತ್ತದೆ. ಇದರ ದುರಂತವೇ ಈ ಕಥೆಯ ಕೇಂದ್ರ ಬಿಂದು. ಕುಬಿಯ ಸೋಲು ಒಂದು ವಿಷಾದದ ದನಿಯಾಗಿದೆ. ಭೈರಾಪುರದ ಜನರ ಮೂಢನಂಬಿಕೆಯು ಕುಬಿಯ ವಿಚಾರವಾದದಿಂದ ಬದಲಾಗದಂತ ಶಾಶ್ವತ ವಸ್ತುಸ್ಥಿತಿ ಅದು. ಆ ಸ್ಥಿತಿಯು ಹಾಗೆಯೇ ಮುಂದುವರಿಯು ವಂತಹುದು ಎಂಬ ನಿಲುವನ್ನು ಸಹ ಈ ಕಥೆ ಪ್ರಕಟಿಸುತ್ತದೆ. ಈ ನಿರ್ದಿಷ್ಟ ಸಾಮಾಜಿಕ ಸನ್ನಿವೇಶದಲ್ಲಿ ವಿಚಾರವಾದದ ಅಸಹಾಯಕತೆಯನ್ನು ಈ ಕತೆ ಧ್ವನಿಸುತ್ತದೆ. ಕಥೆಯಲ್ಲಿಯೇ ಇದಕ್ಕೆ ಹಿನ್ನೆಲೆಯಾಗಿ ಬೆಳೆದಿರುವ ಮಾತುಗಳನ್ನು ಪರಿಭಾವಿಸಿದರೆ ಇದು ಇನ್ನಷ್ಟು ಸ್ಪಷ್ಟವಾಗುತ್ತದೆ.

"ದೂಪದ ಮರದ ಕಲ್ಲುಬಂಡೆ ಶಾಶ್ವತವಾಗುತ್ತದೆ " ಮತ್ತು ಕುಬಿ ಡಾಕ್ಟರು ಸತ್ತ ಲೋರಿಯ ಹೆಣದ ಮೇಲೆ ಅವನ ಪ್ರೇತವನ್ನು ಆವಾಹನೆ ಮಾಡಿ ಎಲ್ಲ ಸತ್ಯಗಳನ್ನು ಕೇಳಿ ತಿಳಿದರು. ಮಹಾಸತ್ಯನಿಷ್ಠ ಕುಬಿ ಡಾಕ್ಟರು ಎಂದರೆ ಧೈಯ್ಯ, ಪ್ರೇತ, ಪಿಶಾಚಿಗಳು ತಗ್ಗಿ ನಡೆಯುತ್ತವೆ ಹೀಗೆಲ್ಲಾ ಆಲೋಚಿಸಿ ಜನ ದೂಪದ ಮರದ ಬಂಡೆಯನ್ನು ಕುಬಿ ಡಾಕ್ಟರನ್ನು ಕೊಂಡಾಡತೊಡಗಿದರು. ಕುಬಿ ತಾನು ಯಾವುದನ್ನು ನಂಬದೆ ವಿರೋಧಿಸಿ ತಿರಸ್ಕರಿಸಿದ್ದನೋ ಅದನ್ನೇ ಗೂಢವಾಗಿ ಇನ್ನೊಂದು ಕಡೆಯಿಂದ ಪ್ರತಿಪಾದಿಸುತ್ತಲೂ ಬಂದುದು ಕಾಲ ಪುರುಷನ ಅಪಹಾಸ್ಯ. ಇತಿಹಾಸದ ವ್ಯಂಗ್ಯ ಇಯಾಲಳ ಕೊಲೆ ಕೂಡ ದುರಂತವಾದುದು. ಆಕೆಯ ಸಾವಿನ ಸುತ್ತ ಕಥೆಯು ಬೆಳೆಯುತ್ತಾ, ನಿಗೂಢವಾಗುತ್ತಾ ಸಾಗುತ್ತದೆ. ಇಡೀ ಸಮಾಜವೇ ಆಕೆಯ ಸಾವಿಗೆ ಕಾರಣ. ಕಥೆಯಲ್ಲಿ ಬರುವ ಅನಿವಾರ್ಯ ಅಂಗಗಳಾದ ಅಧಿಕಾರಿಗಳ ಕರ್ತವ್ಯಭ್ರಷ್ಟತೆ, ಪುಡಾರಿ ರಾಜಕಾರಣಿಗಳ ಸ್ವಾರ್ಥ, ದೀನದಲಿತರ, ಹಮಾಲಿಗಳ, ಅಸಹನೀಯವಾದ ಬಾಳಿನ ಚಿತ್ರಗಳೆಲ್ಲಾ ಆ ಸಮಾಜದ ವಾಸ್ತವ ಚಿತ್ರಗಳೇ ಆಗಿವೆ. ಅದು ಸ್ವಲ್ಪ ನಾಗರೀಕವಾದ ಸಮಾಜವಾದರೂ ಅದರಲ್ಲಿರುವ ಕರಾಳ ಸ್ವರೂಪಗಳು ರೋಮಾಂಚನ ವಾದುವುಗಳು. ನಾಗರಿಕ, ಅನಾಗರಿಕ ಸಮಾಜಗಳಲ್ಲಿರುವ ಜನರಗುಣ ಸ್ವಭಾವಗಳು ಮೂಲತಃ ಒಂದೇ ಎಂಬುದು ಸಹ ಇದರಿಂದ ತಿಳಿದು ಬರುತ್ತದೆ."[೧೮]

ಇಲ್ಲಿ ಆಧುನಿಕತೆಯ ಪ್ರವೇಶದಿಂದ ಕುಬಿ ಡಾಕ್ಟರಾಗಿ ಗುರುಗಳ್ಳಿಗೆ ಬರುತ್ತಾನೆ. ಒಂದು ಕತೆ ಕುಬಿ ಡಾಕ್ಟರು ಬಂದಿದ್ದು ಎಲ್ಲರಿಗೂ ಸಂತೋಷದ ವಿಷಯವಾಗುತ್ತದೆ. ಮತ್ತು ಇಯಾಲ ಎಂಬ ಕಿರಿಯ ವಯಸ್ಸಿನ ಮುಗ್ಧ ಹುಡುಗಿ ಯಾರದೋ ಮನಸ್ಸಿನ ವಿಕೃತ ಸಂಪ್ರದಾಯಕ್ಕೆ ಬಲಿಪಶುವಾಗುತ್ತಾಳೆ. ಆ ಹುಡುಗಿಯ ಸಾವಿನ ಬಗ್ಗೆ ತಿಳಿದುಕೊಳ್ಳಲು ಕುಬಿ ಡಾಕ್ಟರು ಮುಂದಾಗುತ್ತಾರೆ. ಆ ಮೌಢ್ಯತೆಯ ಜೊತೆಯಲ್ಲಿಯೇ ಜನರಿಗೆ ಸತ್ಯವನ್ನು ತಿಳಿಸಿ ಡಾಕ್ಟರು ಅದರೊಳಗೆ ಸಿಕ್ಕಿ ಹಾಕಿಕೊಳ್ಳುವುದನ್ನು ಕಾಣಬಹುದು.

ಕುಸುಮಾ ಅವರ 'ಪ್ರಕೃತಿ ' ಸಮಗ್ರ ಕತೆಗಳ ಸಂಕಲನದ 'ಸಹಪಾಠಿಗಳು ' ಕತೆಯಲ್ಲಿ ಆಧುನಿಕತೆಯ ಪ್ರಭಾವವನ್ನು ಕಾಣಬಹುದು. ಆ ಸಂದರ್ಭದ ವಿವರಣೆ ಈ ಕೆಳಕಂಡಂತೆ ಇದೆ. ಇದರಲ್ಲಿ ಆಧುನಿಕತೆಯ ಪ್ರಭಾವದಿಂದ ನಮ್ಮ ಹಳ್ಳಿಗಳಲ್ಲಿ ಯಾವ ರೀತಿಯ ಬದಲಾವಣೆಯಾಗುತ್ತಿತ್ತು ಎಂಬುದನ್ನು ಕಾಣಬಹುದು.

"ಬೈಲಸಂದ್ರಕ್ಕೆ ದೊಡ್ಡಿ, ಬೇವಿನಹಳ್ಳಿ, ಮಾಕಳಿ ಮುಂತಾದ ಊರುಗಳಿಂದ ಮಕ್ಕಳು ಶಾಲೆಗೆ ಬರುತ್ತಿದ್ದರು. ಬೈಲಸಂದ್ರ ಸುಮಾರು ನಾನೂರು ಮನೆಗಳ ಗ್ರಾಮವಾದ್ದರಿಂದ ಸುತ್ತಮುತ್ತಲ ಊರುಗಳಿಗೂ ಕೇಂದ್ರವಾಗಿತ್ತು. ಹಾಲಿನ ಡೈರಿ, ಫ್ಲೋರ್ ಮಿಲ್, ಸಬ್ ಪೋಸ್ಟಾಫೀಸು ಮುಂತಾದ ಅನುಕೂಲಗಳನ್ನು ಹೊಂದಿತ್ತು. ಪಕ್ಕದಲ್ಲೇ ಒಂದು ಮೈಲಿ ದೂರದಲ್ಲಿ ಒಂದು ದೊಡ್ಡ ಕೆರೆ ಇತ್ತು. ಅಲ್ಲಿಂದ ನಾಲೆಗಳು ಈ ಊರಿನ ಮೂಲಕ ಮುಂದಿನ ಊರುಗಳಿಗೆ ಹಾದು ಹೋಗಿದ್ದವು. ಆದ್ದರಿಂದ ಊರಿಗೆ ನೀರಾವರಿ ಸೌಲಭ್ಯವೂ ಇತ್ತು. ಅಲ್ಲಿಗೆ ಬಟ್ಟೆ ಹೊಲಿಯುವ ದರ್ಜಿ ಶಂಕರಣ್ಣನೂ ಬಂದು ಸೇರಿಕೊಂಡಿದ್ದ.

ಎರಡು ಖಾಸಗಿ ಬಸ್ಸುಗಳು ದೂರದ ಪಟ್ಟಣಕ್ಕೂ ಇಲ್ಲಿಗೂ ಇಲ್ಲಿಂದ ಮುಂದಿನ ಊರುಗಳಿಗೂ ಓಡಾಡುತ್ತಿದ್ದವು. ವೆಂಕಟೇಶ್ವರ ಸರ್ವೀಸ್ ಮತ್ತು ಗಣೇಶ ಟ್ರಾವೆಲ್ಸ್ ಎಂದು ಬೋರ್ಡುಗಳನ್ನು ಬರೆಸಿ ದೊಡ್ಡದಾಗಿ ಬಸ್ಸಿನ ಮುಂಭಾಗದಲ್ಲಿ ಹಾಕಿದ್ದರು. ಇವು ಒಂದು ದಿನ ಬಂದರೆ ಎರಡು ದಿನ ಬರುತ್ತಿರಲಿಲ್ಲ.

ರಿಪೇರಿ ಮಾಡಿ, ಮಾಡಿ, ಆ ಬಸ್ಸಿನ ಮಾಲೀಕರಿಗೂ ತಲೆ ಚಿಟ್ಟು ಹಿಡಿದಿತ್ತು. ಅವುಗಳನ್ನು ನೋಡಿಕೊಳ್ಳಲು ಬಸ್ಸಿನಲ್ಲಿ ಐದು ಜನರಿರುತ್ತಿದ್ದರು. ಅವುಗಳನ್ನು ಅತ್ತ ಗುಜರಿಗೂ ಹಾಕಲಾರದೆ, ಇತ್ತ ಊರುಗಳ ಮೇಲೆ ಓಡಿಸಲು ಆಗದೆ ಸಂಕಟ ಪಡುತ್ತಾ, 'ಬಂದಷ್ಟು ಬರಲಿ' ಅಂತ ಸಣ್ಣ ಪುಟ್ಟ ರಿಪೇರಿಗಳೊಡನೆ ಬಸ್ಸನ್ನು ಓಡಿಸುತ್ತಿದ್ದರು. ಊರಿನ ಮುಖ್ಯ ರಸ್ತೆ ಟಾರು ಕಂಡು ಎಷ್ಟೋ ವರ್ಷಗಳಾಗಿದ್ದವು. ಅದು ಕಿತ್ತು ಕೆಳಗೆ ಹಾಕಿದ್ದ ದಪ್ಪ ಜಲ್ಲಿ ಕಲ್ಲುಗಳೂ ಸಹ ಎದ್ದು ಬಂದು ಬಂಡಿಯ ಜಾಡಿನಂತಾಗಿತ್ತು. ಆಗಾಗ ರಸ್ತೆಯ ಗುಂಡಿಗಳನ್ನು ಜಲ್ಲಿ ಕಲ್ಲುಗಳಿಂದ ಮತ್ತು ಮಣ್ಣಿನಿಂದ ಮುಚ್ಚುವ ಕೆಲಸ ನಡೆಯುತ್ತಿತ್ತು. ಮಳೆಗಾಲದಲ್ಲಿ ರಸ್ತೆಯ ಪ್ರಯಾಣ ಶೋಚನೀಯ ಸ್ಥಿತಿ ತಲುಪುತ್ತಿತ್ತು. ಕೆಸರು ಮಣ್ಣು ಬೇಡವೆಂದರೂ ಬಟ್ಟೆಗೆ, ಮೈಯಿಗೆ ಮೆತ್ತಿಕೊಳ್ಳುತ್ತಿತ್ತು.

ಬೈಲಸಂದ್ರದಿಂದ ಒಂದರ್ಧ ಮೈಲಿ ಆಚೆ ಇರುವ ತೋಪಿನಲ್ಲಿ ಸಂತೆ ಕಟ್ಟುತ್ತಿತ್ತು. ಸಂತೆಯಲ್ಲಿ ತರಾವರಿ ಸಾಮಾನುಗಳು, ಆಡು, ಕುರಿ, ಕೋಳಿಗಳವ್ಯಾಪಾರ, ಬೆಳೆದ ದವಸ ಧಾನ್ಯಗಳು ಕೊಂಡುಕೊಳ್ಳುವಿಕೆ ವ್ಯಾಪಾರಗಳು ಜೋರಾಗಿ ನಡೆಯುತ್ತಿದ್ದವು. ಪಟ್ಟಣದಿಂದ ಟೀಪುಡಿ, ಕಾಫಿಪುಡಿ, ಬೆಲ್ಲ, ಬತ್ತಾಸು, ಪುರಿ, ಸಿಹಿತಿಂಡಿಗಳು, ಖಾರಾಶೇವು, ಖಾರದ ತಿಂಡಿಗಳಾದ ಚಕ್ಕುಲಿ, ಕೋಡುಬಳೆ, ಬ್ರೆಡ್, ಬನ್, ತರತರದ ಮಿಠಾಯಿ, ಎಲೆ, ಅಡಿಕೆ, ಬಾಚಣಿಕೆ, ಬಳೆ, ಟೇಪು ಮುಂತಾದವುಗಳನ್ನು ಕೆಲವು ವರ್ತಕರು ಒಂಟೆತ್ತಿನ ಗಾಡಿ ಅಥವಾ ಜೋಡೆತ್ತಿನ ಗಾಡಿಗಳಲ್ಲಿ ತಂದು ಮಾರುತ್ತಿದ್ದರು. ಇವಲ್ಲದೆ ಮಡಿಕೆ, ಕುಡಿಕೆಗಳು, ಎಮ್ಮೆ ಹಸುಕಟ್ಟುವ ದಾರಗಳು, ಹುರಿಗಳು, ಹಗ್ಗಗಳಾದಿಯಾಗಿ ರೈತರಿಗೆ ಬೇಕಾದ ಕಬ್ಬಿಣದ ವಸ್ತುಗಳು ಸಂತೆಯಲ್ಲಿ ಸಿಗುತ್ತಿದ್ದವು. ಸಂತೆಮಾಳದಲ್ಲಿ ಎರಡು ಹೋಟಲ್‌ಗಳು, ಸಂತೆಯದಿನ ಸದಾ ಗಿಜಿಗುಡುತ್ತಿದ್ದು, ಅಲ್ಲಿ ದೋಸೆ, ಇಡ್ಲಿ, ಬೋಂಡಾ, ವಡೆ, ಚಿತ್ರಾನ್ನ, ಉಪ್ಪಿಟ್ಟು, ಟೀ, ಕಾಫಿಗಳು ಮಾರಾಟ ಬರಾಟೆಯಲ್ಲಿ ನಡೆಯುತ್ತಿತ್ತು."[೧೯]

ಸ್ವಾತಂತ್ರ್ಯಪೂರ್ವದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಸಾರಿಗೆ ಸಂಪರ್ಕ ವ್ಯವಸ್ಥೆ ತುಂಬಾ ಕಡಿಮೆ ಇದ್ದುದು ಸ್ಪಷ್ಟವಾಗಿ ಕಂಡುಬರುವ ಸಂಗತಿ. ಆದರೆ ಸ್ವಾತಂತ್ರ್ಯಾನಂತರ ಗ್ರಾಮೀಣ ಪ್ರದೇಶಗಳಲ್ಲಿ ಬಸ್ಸುಗಳು ಬಂದು ಗ್ರಾಮೀಣ ಜನರ ಜೀವನ ಕ್ರಮದಲ್ಲಿ ಬದಲಾವಣೆಯನ್ನು ಕಾಣಬಹುದಾಗಿದೆ.

ದೇವನೂರು ಮಹಾದೇವರ "ಡಾಂಬರು ಬಂದುದು" ಕತೆಯಲ್ಲಿ ಆಧುನಿಕತೆಯ ಪ್ರಭಾವ ಹೀಗೆ ವರ್ಣಿತವಾಗಿರುವುದನ್ನು ಕಾಣಬಹುದು. "ಊರಿಂದ ಬಂಡಿ ಮಾತ್ರವೆ ಓಡಾಡಲು ಲಾಯಕ್ಕಾದ ಓಣಿಥರ ಹೊರಟ ಹಾದಿ ಮೂರು ಮೈಲಿ ಹೋಗಿ ಬಸ್ಸು ಓಡಾಡುವ ದೊಡ್ಡ ರಸ್ತೆಗೆ ಸೇರಿಕೊಳ್ಳುತ್ತದೆ. ದೊಡ್ಡ ರಸ್ತೆಯಿಂದ ಅದೇ ಹಾದಿ ಹಿಡಿದು ಹಿಂದಕ್ಕೆ ಬಂದರೆ ಕಳ್ಳಿ ಕವುಚಿಕೊಂಡ ಅದು ಗಪ್ಪನೆ ಊರವರೆಗೂ ಬಂದು ದೆವ್ವ ನಿಂತ ಅರಳಿ ಮರಗಳ ಬಳಸಿ, ಮುಂದೆ ಮೂರು ಸೆಲೆಯಾಗಿ ಒಡೆದುಕೊಂಡು ಊರೊಳಕ್ಕೆ ಧಾವಿಸುತ್ತದೆ. ಹಿಂಗೆ ಸೆಲೆ ಹೊಂಟ ಬೀದಿಯ ಅಕ್ಕಪಕ್ಕ ಒತ್ತೊತ್ತು ಹಟ್ಟಿಗಳು ತಕ್ಕೈಸಿಕೊಂಡಿದ್ದೂ ಉಸಿರಾಡಲೂ ಅಡಚಣೆ ಮಾಡುವಂತೆ ಮೊದಲ ನೋಟಕ್ಕೆ ಕಾಣಬರುತ್ತದೆ.

ಅದು ಯಾವುದಕ್ಕೂ ಹೇಳಿಕೊಳ್ಳುವಂಥ ಹಳ್ಳಿ ಅಲ್ಲ. ಎಣಿಸಿದರೆ ಹೆಚ್ಚೆಂದರೆ ಒಂಭತ್ತು ಮನೆಗಳು ಇದ್ದೀತು. ಎಲ್ಲ ಕಡೆ ಇರುವಂತೆ ಅಲ್ಲಿ ಒಂದು ತುಂಡು ಹೋಟಲ್ಲೂ ಇಲ್ಲ. ಇದ ಹಿಡಿದೇ ಊರ ಊಹಿಸಬಹುದು. ಮತ್ತು ಅಲ್ಲೆ ನಂಜನಗೂಡಲ್ಲೋ ಮೈಸೂರಲ್ಲೊ, ಎಸ್ಸೆಲ್ಸಿ ಹತ್ತಿಬಂದ ನಾಕಾರು ಜನರೂ ಉಂಟು. ಲಕುಮ, ರಾಜಪ್ಪ, ಮಾಧು, ಶಂಭು ಇವು ಇವರ ಹೆಸರುಗಳು.

ಈ ಹೆಸರಗಳಿಗೂ ಪಟೇಲರಿಗೂ ಅಷ್ಟಕ್ಕಷ್ಟೆ. ಇಂದು ಹುಟ್ಟಿದ ಈ ತುಂಡುಗಳು ತಮ್ಮ ಎದುರಾ ತಲೆ ಎತ್ತಿ ತಿರುಗುವುದನ್ನು ಅವರು ಹೇಗೆ ಸಹಿಸುವರು? ತಾವು ಕಂಡ ಹಾಗೆ ತಮ್ಮ ಅಪ್ಪನ ಕಾಲದಿಂದಲೂ ಆಗಿದ್ದಿಲ್ಲ. ಆ ಮಕ್ಕಳು ಮೇಲು ಜಾತಿ, ಕೀಳು ಜಾತಿ ಅನ್ನದೆ ಒಂದೆ ಹೊಟ್ಟೆಯಿಂದ ಬಿದ್ದಂತೆ ಹೊಲಾರ ಲಕುಮನೊಡನೆ ತಿರುಗುವುದರಿಂದ ಹಿಡಿದು ಅವರವರ ಅಪ್ಪಂದಿರ ಮೂಲಕ ಬೈಸಿದರು. ಅಪ್ಪಂದಿರ ಮಾತು ಕೇಳುತ್ತವೆಯೆ ಅವು? ಆ ಹೈಕಳು ಯಾವುದಾದರು ಹೆಣ್ಣು ಕೆಣಕಿ ಸಿಕ್ಕರೆ ಚಾವಡಿಗೆ ಎಳಸಿ ಬರೀ ನಿಕ್ಕರು ಮಾಡಿ ಕಂಬಕ್ಕೆ ಕಟ್ಟಿಸಿ ಸೆಬ್ಬದಲ್ಲಿ ಸಮಾ ಬಡಿಯುವಂಥ ಟೇಮಿಗೆ ಕಾದಿದ್ದಾರೆ. ಕೆಣಕದೆ ಇರುತ್ತಾವೆಯ ಎಂಬ ನಂಬಿಕೆಯು ಇದೆ. ಇಂಥ ಸಂದರ್ಭದಲ್ಲಿ ಊರ ರೋಡಿಗೆ ಮೇಲಿಂದ ಆರ್ಡರು ಬಂತು."[೨೦]

ಡಾ.ಕರೀಗೌಡ ಬೀಚನಹಳ್ಳಿಯವರು ಹೇಳುವ ಹಾಗೆ "ಮಹಾದೇವರ ಡಾಂಬರು ಬಂದುದು" ಕತೆ ಆಧುನಿಕತೆಯ ಆಕ್ರಮಣದಿಂದ ಹಳ್ಳಿಯಲ್ಲಿ ಆಗುವ ಆವಾಂತರವನ್ನು ಸಜೀವವಾಗಿ ಚಿತ್ರಿಸುತ್ತದೆ ಎಂಬುದಕ್ಕೆ ಮಿಗಿಲಾಗಿ, ಉಳ್ಳವರ ವಿರುದ್ಧ, ಜಾತಿ ನಿಷ್ಠುರ ವಿರುದ್ಧ, ವಿದ್ಯೆಯಿಂದ ಎಚ್ಚೆತ್ತ ಮನಸ್ಸುಗಳು ದಂಗೆ ಏಳುವ ಸಾಧ್ಯತೆಯನ್ನು ಈ ಕತೆ ಚಿತ್ರಿಸುತ್ತದೆ. ಯಾವುದಕ್ಕೂ ಹೇಳಿಕೊಳ್ಳದಂತಹ ಸುಮಾರು ಎಂಭತ್ತು ಮನೆಗಳಿರುವ ಒಂದು ಹಳ್ಳಿ. ಅಲ್ಲಿ ಹೋಟಲ್ಲಾಗಲಿ, ನಾಗರೀಕ ಸೂಚನೆಗಳಾಗಲಿ ಯಾವುದೂ ಇಲ್ಲ. ಆ ಹಳ್ಳಿಯಿಂದ ಬಸ್ಸು ಓಡಾಡುವ ದೊಡ್ಡ ರಸ್ತೆಗೆ ಮೂರು ಮೈಲಿ ದೂರದ ಓಣಿ ಥರದ ಹಾದಿಯಿದೆ. ಈ ಹಾದಿಯನ್ನು ವಿಸ್ತರಿಸಿ ರಸ್ತೆ ಮಾಡಬೇಕೆಂಬುದು ಊರಿನ ಪಟೇಲರ ಹಳೆಯ ಕನಸು ನನಸಾಗುತ್ತದೆ. ಏಳೆಂಟು ವರ್ಷಗಳ ಕೆಳಗೆ ಊರಿಗೆ ಮಿನಿಷ್ಟರನ್ನು ಕರೆಯಿಸಿ ಪಟೇಲರು ಸನ್ಮಾನ ಮಾಡಿದ್ದರು. ಅದರ ಪರಿಣಾಮದಿಂದ ಊರಿಗೆ ರಸ್ತೆ ಮುಂಜೂರಾಗಿ, ಅದಕ್ಕೆ ಡಾಂಬರು ಹಾಕಲು ಮಿಷನ್ನು ಬರುತ್ತದೆ. ಇದರ ಕಂಟ್ರಾಕ್ಟರ್ ಅನೇಕ ದಿನ ಪಟೇಲರು, ನಂಜನಗೂಡಿಗೆ ಅಲೆದದ್ದರಿಂದ ಅವರಿಗೆ ಅದು ಮಂಜೂರಾಗಿರುತ್ತದೆ. ಪಟೇಲರು ರಸ್ತೆ ಮಾಡಿಸಿ ಉಳಿಯುವ ಸರ್ಕಾರದ ಹಣದಲ್ಲಿ ದೇವಸ್ಥಾನ ಕಟ್ಟಿಸಬೇಕೆಂದು ನಿರ್ಧರಿಸಿರುವ ಸುದ್ದಿ ಎಲ್ಲಾ ಕಡೆ ಹಬ್ಬುತ್ತದೆ.

ಪಟೇಲರು ನಾಶವಾಗುತ್ತಿರುವ ದೇವಸ್ಥಾನವನ್ನು ಊರ್ಜಿತಗೊಳಿಸುವ ನಿರ್ಧಾರಕ್ಕೆ ಸಾಮಾಜಿಕವಾದ ಕಾರಣಗಳಿವೆ. ದೇವಸ್ಥಾನ ಅಸ್ಪೃಶ್ಯತೆಯ ಪಾಲನೆಗೆ ಸಂಕೇತ. ದೇವರು, ಧರ್ಮದ ಹೆಸರಿನಲ್ಲಿ ಜನರನ್ನು ಸುಲಿಯುವುದು ಸುಲಭವಾದ ಮಾರ್ಗ. ನಂಜನಗೂಡಲ್ಲೊ, ಮೈಸೂರಲ್ಲೊ ಎಸ್.ಎಸ್.ಎಲ್.ಸಿ.ವರೆಗೆ ಓದಿ ಬಂದಿರುವ ತನ್ನೂರಿನ ನಾಲ್ಕಾರು ಹುಡುಗರನ್ನು ಕಂಡರೆ ಪಟೇಲರಿಗೆ ಮೊದಲಿಂದಲೂ ದ್ವೇಷ. ಆ ಹುಡುಗರಾದ, ರಾಜಪ್ಪ, ಶಂಭು, ಮಾದು, ಲಕುಮ ಇವರು ಮೇಲು ಜಾತಿ ಅನ್ನದೆ ಒಟ್ಟಾಗಿರುವುದನ್ನು ಕಂಡರೆ ಪಟೇಲರಿಗೆ ಆಗದು. ಇವರಲ್ಲಿ ಲಕುಮ, ಹೊಲೆಯರ ಜಾತಿಯ ಹುಡುಗ. ಇವರನ್ನೆಲ್ಲಾ

ಒಟ್ಟುಗೂಡಿಸುವ ಸಾಮಾನ್ಯ ಅಂಶವೆಂದರೆ ಇವರಲ್ಲೆಲ್ಲಾ ಇರುವ ವಿದ್ಯೆ. ಪಟೇಲರು ಈ ಹುಡುಗನ ಜೊತೆ ತನ್ನ ಜಾತಿಯ ಹುಡುಗರು ಸೇರುವುದನ್ನು ಗಮನಿಸಿ ಅವರವರ ತಾಯ್ತಂದೆಗಳಿಗೆ ಹೇಳಿ ಬೈಸಿದ್ದರು. ಆದರೂ ಅವರು ಅವರ ಅಪ್ಪಂದಿರ ಮಾತುಗಳನ್ನು ಕೇಳುವ ಸ್ಥಿತಿಯಲ್ಲಿ ಇರದಿದ್ದುದನ್ನು ಪಟೇಲರು ಕಂಡು ಆ ಹುಡುಗರ ಊರಲ್ಲಿ ಯಾವುದಾದರೂ ಹೆಣ್ಣನ್ನು ಕೆಣಕಿ ಸಿಕ್ಕಿಕೊಂಡಾಗ ಅವರ ಚರ್ಮ ಸುಲಿದು ಬುದ್ಧಿ ಕಲಿಸಬೇಕೆಂಬ ಹುನ್ನಾರದಲ್ಲಿದ್ದರು. ಅವರು ಕೆಣಕದೆ ಇರುತ್ತಾರೆಯೆ ಎಂಬ ನಂಬಿಕೆಯೂ ಅವರಲ್ಲಿತ್ತು.

ಪಟೇಲರು ಮೂಲತಃ ವಿದ್ಯೆಯ ವಿರೋಧಿ, ವಿದ್ಯೆಯಿಂದ ಎಚ್ಚೆತ್ತ ಹುಡುಗರು ತಮ್ಮ ವಿರುದ್ಧ ತಿರುಗಿ ಬಿದ್ದಿರುವುದನ್ನು ಕಂಡು ಅವರು ಸರ್ಕಾರದಿಂದ ಮುಂಜೂರಾದ ಹಣದಲ್ಲಿ ಮಿಕ್ಕಿಸಿ ಶಾಲೆಯನ್ನು ಊರ್ಜಿತಗೊಳಿಸುವ ಬದಲು ದೇವಸ್ಥಾನವನ್ನು ಊರ್ಜಿತಗೊಳಿಸಲು ಹೊರಡುತ್ತಾರೆ. ಪಟೇಲರಿಗೆ ಜಾತೀಯತೆಯನ್ನು, ಅಜ್ಞಾನವನ್ನು ನಿಯಂತ್ರಿಸುವ ಶಕ್ತಿ ಇರುವುದು ದೇವಸ್ಥಾನಕ್ಕೆ ಮಾತ್ರ ಎಂಬುದರ ಸತ್ಯ ತಮ್ಮ ಅನುಭವದಿಂದ ತಿಳಿದಿದೆ. ಊರಿಗೆ ಬಂದ ಮಿಷನ್‌ನಿಂದ ಊರ ಮುಂದೆ ರಣರಂಗವೇ ಆಗಿದೆ. ಮಹಾದೇವರ ಹಿಂದಿನ ಕಥೆಗಳಲ್ಲಿ ದೆವ್ವದ ಥರ ಊರಿನ ಮುಂದೆ ನಿಂತಿದ್ದ ಅರಳಿಮರಗಳೆಲ್ಲಾ ಈ ರಸ್ತೆಯ ಕಾರಣದಿಂದ ಮಿಷನ್ನು ಎಲ್ಲವನ್ನು ನಾಶಮಾಡಿದೆ. ಊರಿನ ಶಾಲೆಯ ಮಕ್ಕಳಿಗೆ, ದೊಡ್ಡವರಿಗೆ, ಎಲ್ಲರಿಗೂ ಈ ಯಂತ್ರ, ಟಾರು, ಇದೆಲ್ಲಾ ಕುತೂಹಲದ ವಸ್ತುಗಳಾಗಿವೆ. ಶಾಲೆಯ ಮಕ್ಕಳು ಶಾಲೆ ಬಿಡುವುದೆ ತಡ ಅವೆಲ್ಲಾ ಟಾರು ಇಟ್ಟಿರುವ ಜಾಗದಲ್ಲಿ ಆಡತೊಡಗುತ್ತವೆ. ಅಲ್ಲಿ ನಡೆಯುತ್ತಿರುವ ಕೆಲಸವ ಕಂಡು ಪಟೇಲರು ಸಂತಸದಲ್ಲಿದ್ದಾರೆ.

ಆದರೆ ಶಂಭು, ಮಾದು, ರಾಜಪ್ಪ, ಲಕುಮರಿಗೆ, ಪಟೇಲರು ಸರ್ಕಾರದ ಹಣ ಉಳಿಸಿ ದೇವಸ್ಥಾನ ಊರ್ಜಿತಗೊಳಿಸಲು ಉದ್ದೇಶಿಸಿರುವುದನ್ನು ತಪ್ಪಿಸಬೇಕೆಂದೆ ಅನ್ನಿಸುತ್ತದೆ. ಪತ್ರಿಕೆಯೊಂದಕ್ಕೆ ಪಟೇಲರ ಉದ್ದೇಶವನ್ನು ಖಂಡಿಸಿ "ಸರ್ಕಾರಿ ಹಣದ ದುರುಪಯೋಗ ಇಂತಹುದು ಆಗದಂತೆ ತಡೆಗಟ್ಟಬೇಕೆಂದು" ಪತ್ರ ಬರೆಯುತ್ತಾರೆ. ಪತ್ರವನ್ನು ಪಟೇಲರು ಓದಿ ಉರಿದು ಕೆಂಡವಾಗುತ್ತಾರೆ. ನ್ಯಾಯಕ್ಕೆ ಸೇರಿಸುತ್ತಾರೆ. ನ್ಯಾಯದಲ್ಲಿ ಊರಿನವರೆಲ್ಲಾ ಪಟೇಲರ ಪರವಾಗಿಯೇ ವಾದ ಮಾಡುತ್ತಾರೆ. ಆ ಹುಡುಗರನ್ನೆಲ್ಲಾ ಹೀನಾಮಾನವಾಗಿ ಬೈಯುತ್ತಾರೆ. ಅವರಿಗೆ ದೇವರು, ದಿಂಡರು, ತಂದೆ, ತಾಯಿ ಯಾರು ಇಲ್ಲವೆಂದೂ ಹಿಯ್ಯಾಳಿಸುತ್ತಾರೆ. ಕೊನೆಗೆ ಪಟೇಲರಿಗೂ ಆ ಹುಡುಗರಿಗೂ ಗಲಾಟೆ ಪ್ರಾರಂಭವಾಗಿ ಕೊನೆಯಾಗುತ್ತದೆ. ಬೆಳಿಗ್ಗೆಗೆ ಗೌಡರು ಅವರನ್ನು ಹೊಸೂರಿನ ಕಲಕೆತ್ತಿ ಹೆಣ್ಣಿನ ಜೊತೆ ಸಂಬಂಧ ಕಲ್ಪಿಸಿ, ಅವರನ್ನೆಲ್ಲಾ, ಪೋಲೀಸ್ ಸ್ಟೇಷನ್ನಿಗೆ ಕಳುಹಿಸುತ್ತಾರೆ. ಪಟೇಲರು ಮತ್ತು ಶಾನುಭೋಗರು ತಾವು ಮಾಡಿದ ಕೆಲಸಕ್ಕೆ ತಾವೇ ಖುಷಿ ಪಡುತ್ತಾರೆ. ಪ್ರತಿಭಟನಾಕಾರರಿಗೆ ಕೊನೆಗೆ ಸಿಕ್ಕುವುದು ಪೊಲೀಸರಿಂದ ಶಿಕ್ಷೆ. ಇಡೀ ಊರನ್ನೆ ನಿಯಂತ್ರಿಸುತ್ತಿರುವ ಪಟೇಲರ ಮುಂದೆ ಅವರೆಲ್ಲಾ ಅಸಹಾಯಕರು. ಈ ಕಥೆಯ ಮುಖ್ಯ ಆಶಯ ಇರುವುದು ಈ ಹಂತದಲ್ಲಿಯೇ ಅನ್ನಿಸುತ್ತದೆ.

ಪ್ರಸುತ್ತ ಕಥೆಯು ತನ್ನ ಮುಕ್ತಾಯದಲ್ಲಿ ಮತ್ತೊಂದು ತಿರುವನ್ನು ಪಡೆಯುತ್ತದೆ. ಶಾಲೆಗೆ ಹೋದ ಹೊಲೆಯರ ರಂಗಪ್ಪನ ಮಗ ಮನೆಗೆ ಬರಲಿಲ್ಲ. ಆತನ ಕಾಲನ್ನು ಗುಂಡಿಗೆ ಇಳಿದಿದ್ದ ಟಾರು

ಹಿಡಿದುಕೊಂಡಿತ್ತು. ಆತನ ಎರಡೂ ಕೈಗಳನ್ನು ಟಾರಿನ ಡ್ರಮ್ಮು ಕಚ್ಚಿಕೊಂಡಿತ್ತು. ಆದರೆ ಅವನ ಮೈಯೊಳಗೆ ಇನ್ನೂ ಜೀವ ಆಡುತ್ತಿತ್ತು ಎಂದು ಕಥೆ ಮುಗಿಯುತ್ತದೆ. ಇದನ್ನು ಮಹಜರು ಮಾಡಲು ಪೋಲೀಸ್ ವ್ಯಾನ್‌ನಲ್ಲಿ ಊರಿಗೆ ಬಂದ ಇನ್ಸ್‌ಪೆಕ್ಟರ್ ಪಟೇಲರನ್ನು ಕರೆಸುತ್ತಾರೆ.

ರಂಗಪ್ಪನ ಹೃದನಿಗೆ ಇನ್ನೂ ಜೀವ ಇರುವುದರಿಂದ ಪಟೇಲರು ಕಾನೂನಿನಿಂದ ತಪ್ಪಿಸಿಕೊಳ್ಳುವ ಸಾಧ್ಯತೆ ಇರಬಹುದು. ಈ ಕಥೆಯು ಡಾಂಬರು ಬಂದುದರ ಪರಿಣಾಮವನ್ನು ಸೊಗಸಾಗಿ ಚಿತ್ರಿಸುತ್ತದೆ."[೨೧]

ಈ ಮೇಲಿನ ಡಾಂಬರು ಬಂದುದು ಕತೆಯಲ್ಲಿ ಇನ್ನೂ ಒಳಹೊಕ್ಕು ನೋಡಿದಾಗ ಗ್ರಾಮದ ಪಟೇಲರು, ಶಾನುಭೋಗರು ಮತ್ತು ಗ್ರಾಮಸ್ಥರು ಎಂಬ ಮೂರು ರೀತಿಯ ಜನರನ್ನು ನೋಡಬಹುದು. ಮೊದಲನೆಯ ಎರಡು ಗುಂಪಿನಲ್ಲಿ ಪಟೇಲರು ಸ್ವಲ್ಪ ತಿಳುವಳಿಕೆ ಉಳ್ಳವರಾಗಿ ಇಡೀ ಗ್ರಾಮವನ್ನು ತನ್ನ ಮುಷ್ಟಿಯಲ್ಲಿ ಇಟ್ಟುಕೊಳ್ಳಬೇಕೆಂಬ ಹವಣಿಕೆ. ಈ ಹವಣಿಕೆಗೆ ಶಾನುಭೋಗರ ಬೆಂಬಲವನ್ನು ಪಡೆಯಬೇಕೆನ್ನುವ ಹುನ್ನಾರ. ವಿದ್ಯಾವಂಥರಾದರೂ ಶಾನುಭೋಗರು ಸಮಯಕ್ಕೆ ತಕ್ಕಂಥೆ ವರ್ತಿಸುವ ಮನೋಭಾವದವರು. ಇಲ್ಲಿ ಗ್ರಾಮದ ರಸ್ತೆಗಳಿಗೆ ಡಾಂಬರು ಹಾಕಿಸುವ ಬೆಂಬಲಕ್ಕೆ ಸರ್ಕಾರದ ಸಹಾಯಹಸ್ತ ಈ ರಸ್ತೆಗಳಿಗೆ ಡಾಂಬರು ಹಾಕಲು ಮಂಜೂರಾದ ಹಣದಲ್ಲಿ ಸ್ವಲ್ಪ ಉಳಿಸಿ ಗ್ರಾಮಕ್ಕೆ ದೇವಸ್ಥಾನ ಕಟ್ಟಿಸಬೇಕೆಂಬ ನಿರ್ಧಾರವು ಆ ಊರಿನ ವಿದ್ಯೆ ಕಲಿತ ಯುವಕರಿಗೆ ಸರಿ ಕಾಣದು. ಇದರಲ್ಲಿ ಗೌಡರ ಉದ್ದೇಶ ಗ್ರಾಮದ ಜನತೆಯನ್ನು ಆಸ್ತಿಕತೆಯ ಪ್ರಭಾವವನ್ನು ಬಳಸಿ ಅಂದರೆ ದೇವರ ಮೇಲಿನ ಭಯ, ಭಕ್ತಿಗಳ ಪ್ರಭಾವದಿಂದ ಗ್ರಾಮದ ಜನತೆಯನ್ನು ತನ್ನ ನಿಯಂತ್ರಣದಲ್ಲಿಟ್ಟುಕೊಳ್ಳಬೇಕೆಂಬ ಉದ್ದೇಶದಿಂದ ಮಂಜೂರಾದ ಹಣವನ್ನು ಉಳಿಸಿ ದೇವಸ್ಥಾನ ನಿರ್ಮಿಸಬೇಕೆಂಬ ಆಲೋಚನೆ. ಇದಕ್ಕೆ ತದ್ವಿರುದ್ಧವಾಗಿ ಯುವಕರು ದೇವಸ್ಥಾನದ ಬದಲು ಶಾಲೆಯನ್ನು ನಿರ್ಮಿಸಬೇಕೆಂಬ ಚಿಂತನೆಯನ್ನು ಕಾಣಬಹುದು. ಇಂತಹ ಆಧುನೀಕತೆಯ ಪ್ರಭಾವವಿದ್ದರೂ ಸಹ ಪಟೇಲರೇ ಮೇಲುಗೈ ಸಾಧಿಸಿರುವುದನ್ನು ಈ ಕತೆಯ ಮೂಲಕ ತಿಳಿಯಬಹುದು.

ಗ್ರಾಮದ ಯುವಕರು ವಿದ್ಯಾವಂತರಾಗಬೇಕೆಂಬ ಹಂಬಲ ಈ ಯುವಕರದ್ದು. ಆದರೆ ಪಟೇಲರು ಇದಕ್ಕೆ ವಿರೋಧಿ. ಕಾರಣ ವಿದ್ಯಾವಂತರಾದ ಯುವಕರು ತನ್ನ ಅಧಿಕಾರ ಮತ್ತು ಸ್ಥಾನಕ್ಕೆ ಅಡ್ಡಗಾಲು ಹಾಕುವರು ಎಂಬ ಭಯ. ಇಷ್ಟೆಲ್ಲ ಆಧುನಿಕತೆಯ ಪ್ರಭಾವವಿದ್ದರೂ ಸಹ ಕೆಲವೊಂದು ಸಂದರ್ಭಗಳಲ್ಲಿ ಪಟೇಲರ ಮಾತಿಗೆ ಮನ್ನಣೆ ಇರುವುದನ್ನು ಕಾಣಬಹುದು. ಈ ಮನ್ನಣೆಯ ಸನ್ನಿವೇಶವನ್ನು ಉಪಯೋಗಿಸಿಕೊಂಡು ತನ್ನನ್ನು ವಿರೋಧಿಸಿದ ವಿದ್ಯಾವಂತ ಯುವಕರನ್ನು ಸಲ್ಲದ ಕಾರಣಗಳನ್ನು ನೀಡಿ ಪೊಲೀಸ್ ಸ್ಟೇಷನ್ನಿಗೆ ಕಳುಹಿಸುವ ಮಸಲತ್ತನ್ನು ಸಹ ಪಟೇಲರು ಮಾಡುವುದನ್ನು ಕಾಣಬಹುದಾಗಿದೆ. ಇದನ್ನೆಲ್ಲ ಗಮನಿಸುತ್ತಿರುವ ಗ್ರಾಮಸ್ಥರು ಪಟೇಲರನ್ನು ವಿರೋಧಿಸಲೂ ಆಗದೆ ಯುವಕರಿಗೆ ವಿದ್ಯೆಯನ್ನು ಕೊಡಿಸಬೇಕೆಂಬ ಹಂಬಲವನ್ನು ಅದುಮಿಟ್ಟುಕೊಳ್ಳಲಾರದೆ ತೋಳಲಾಡುವುದನ್ನು ಹಾಗೂ ನಿಸ್ಸಹಾಯಕತೆಯನ್ನು ಈ ಕತೆಯಲ್ಲಿ ಕತೆಗಾರರು ಬಿಂಬಿಸಿರುವುದನ್ನು ನೋಡುತ್ತೇವೆ.

ಸ್ವಾತಂತ್ರ್ಯಾನಂತರದಲ್ಲಿ ಆಧುನಿಕತೆಯಲ್ಲಿ ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಸಾಕಷ್ಟು ಬದಲಾವಣೆಯನ್ನು ಕಾಣಲಾಗಿದೆ. ನಂಜನಗೂಡು ಮತ್ತು ಮೈಸೂರಿನಲ್ಲಿ ಎಸ್ಸೆಲ್ಸಿ ಹತ್ತಿ ಬಂದ ನಾಕಾರು ಹುಡುಗರು ಇವರು.

ಕೆಳಜಾತಿಯವರಾಗಿದ್ದುದರಿಂದ ಗ್ರಾಮಗಳಲ್ಲಿ ಬದಲಾವಣೆಯನ್ನು ಮಾಡಲು ಹೊರಟಿದ್ದಾರೆ. ಆದರೆ ಮೇಲು ಜಾತಿ ಎನಿಸಿಕೊಂಡವರು ಈ ರೀತಿಯ ಬದಲಾವಣೆಯನ್ನು ಪ್ರತಿಭಟಿಸುವುದನ್ನು ಕಾಣಬಹುದು. ಹೊಸದನ್ನು ಬರಮಾಡಿಕೊಳ್ಳುವುದಕ್ಕೆ ನಮ್ಮ ಗ್ರಾಮೀಣ ಜನರ ಹಿಂಜರಿಕೆಯನ್ನು ಕಾಣಬಹುದು.

## ೩. ೨. ಶಿಕ್ಷಣದ ಪ್ರಭಾವ

ಮನುಷ್ಯನು ಸಮಾಜ ಜೀವಿ. ಆತ ಒಬ್ಬನೇ ಬಾಳಲಾರ. ಆದ್ದರಿಂದ ಅವನು ಒಂದು ಸಮಾಜ ಇಲ್ಲವೇ ಸಮೂಹದಲ್ಲಿ ಒಂದುಗೂಡಿ ಬೆಳೆಯುತ್ತಾನೆ. ಸಮೂಹದ ಸದಸ್ಯರ ಸಹಕಾರ ಮತ್ತು ಪರಸ್ಪರ ಪ್ರಕ್ರಿಯೆಯ ಪರಿಧಿಯಲ್ಲೆ ಬದುಕಿ ಬಾಳಬೇಕಾಗುತ್ತದೆ. ಶಿಕ್ಷಣ ಸಮೂಹದ ಒಂದು ಭಾಗವಾಗಿದೆ. ಇದು ಇತ್ತೀಚೆಗೆ ಬೆಳೆದು ಪ್ರತ್ಯೇಕ ವಿಷಯವಾಗಿ ಮಹತ್ವ ಪಡೆದಿದೆ. ಶಿಕ್ಷಣ ಮಾನವನ ವ್ಯಕ್ತಿತ್ವದ ಮತ್ತು ಮಾನವನ ವರ್ತನೆಯ ಬದಲಾವಣೆಯನ್ನು ತಿಳಿಯಲು ಶಿಕ್ಷಣ ಹೆಚ್ಚಿನ ಪ್ರಭಾವ ಬೀರುತ್ತದೆ. ಶಿಕ್ಷಣದಿಂದ ಸಾಮಾಜಿಕ ಬದಲಾವಣೆಯನ್ನು ಕಾಣಬಹುದು. ಇಲ್ಲಿ ಸಾಮಾಜಿಕ ಸಂಬಂಧಗಳು ಅಭ್ಯಾಸವೂ ನಡೆಯುತ್ತದೆ. ಶಿಕ್ಷಕ ಮತ್ತು ವಿದ್ಯಾರ್ಥಿಯ ಸಂಬಂಧ, ಶಿಕ್ಷಕ ಮತ್ತು ಸಮಾಜದ ಇತರ ಸದಸ್ಯರ ಸಂಬಂಧ, ಸಮಾಜದಲ್ಲಿ ಶಿಕ್ಷಕನ ಸ್ಥಾನಮಾನ ಮುಂತಾದವು ಮಹತ್ವದ ಸಂಗತಿಗಳಾಗಿವೆ. ಮನುಷ್ಯನು ಶಿಕ್ಷಣ ಪಡೆಯುವಾಗ ಹಾಗೂ ಪಡೆದ ನಂತರ ಸಮಾಜದಲ್ಲಿಯೇ ಬಾಳಬೇಕಾಗುತ್ತದೆ. ಆದ್ದರಿಂದ ಮನುಷ್ಯ ಸಮಾಜದ ಸಮರ್ಥ ಪ್ರಜೆಯಾಗಿ ಬಾಳಲು ಅವನಿಗೆ ಶಿಕ್ಷಣ ಹೆಚ್ಚಿನ ಸಹಾಯ ಒದಗಿಸುತ್ತದೆ.

ಹಾಗೆಯೇ ಶಿಕ್ಷಣದ ಪ್ರಭಾವವು ನಮ್ಮ ಸಾಹಿತ್ಯದ ಪ್ರಮುಖ ಘಟ್ಟಗಳಾದ ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯದಲ್ಲಿಯೂ ಸಹ ಹೆಚ್ಚಿನ ಪ್ರಭಾವ ಬೀರಿರುವುದನ್ನು ಕಾಣಬಹುದು.

ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಶಿಕ್ಷಣವು ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಅನೇಕ ರೀತಿಯ ಬದಲಾವಣೆಯನ್ನು ಉಂಟುಮಾಡಿದೆ. ಹಾಗೆಯೇ ನಮ್ಮ ಕತೆಗಾರರು ಕತೆಗಳಲ್ಲಿ ಆ ಪರಿಸರಕ್ಕೆ ಪ್ರತಿಕ್ರಿಯಿಸಿದ ರೀತಿ ಕೂಡ ಕುತೂಹಲಕರವಾಗಿದೆ. ಅಂದರೆ ಶಿಕ್ಷಣ ನಮ್ಮ ಗ್ರಾಮಗಳಿಗೆ ಬಂದಾಗ ಕೆಲವರು ಪ್ರೋತ್ಸಾಹ ಕೊಡುತ್ತಿದ್ದರು. ಇನ್ನೂ ಕೆಲವರು ವಿರೋಧವನ್ನು ವ್ಯಕ್ತಪಡಿಸುವುದನ್ನು ಕಾಣಬಹುದಾಗಿದೆ. ಹಾಗೆಯೇ ಶಿಕ್ಷಣದ ಪ್ರಭಾವವು ನವ್ಯ, ದಲಿತ ಬಂಡಾಯದಲ್ಲಿಯೂ ಸಹ ಹೆಚ್ಚಿನ ಪ್ರಭಾವ ಬೀರಿರುವುದನ್ನು ಕಾಣಬಹುದು. ಶಿಕ್ಷಣದ ಪ್ರಭಾವವನ್ನು ಈ ಕೆಳಕಂಡ ಕತೆಗಾರರ ಕತೆಗಳ ಮೂಲಕ ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಕರೀಗೌಡ ಬೀಚನಹಳ್ಳಿಯವರ 'ನೆನಪಲ್ಲ ವಾಸ್ತವ' ಕತೆಯಲ್ಲಿನ ಶಿಕ್ಷಣದ ಪ್ರಭಾವವನುನೀ ಹಿಂದೆಯೇ ಗುರುತಿಸಿದ್ದೇನೆ. ತಗ್ಗಳ್ಳಿಗೆ ಪಾಠಶಾಲೆ ಬಂದಾಗ, ಅಂದರೆ ಒಂದು ಹೊಸತನ ಬರಮಾಡಿಕೊಳ್ಳುವಾಗ ಕಿರಿಯರಲ್ಲಿ ಹಿರಿಯರಲ್ಲಿ ಹೇಗೆ ಮನಸ್ಸು ಆ ಕ್ರಿಯೆಗೆ ಸ್ಪಂದಿಸಿತು ಎಂಬುದನ್ನು ಈ ಕತೆಯಲ್ಲಿ ಕಾಣಬಹುದು. ಶಿಕ್ಷಣದ ಪ್ರಭಾವದಿಂದ ಮಕ್ಕಳಲ್ಲಿಯೂ ಸಹ ಅನೇಕ ರೀತಿಯಾದ ಬದಲಾವಣೆಗಳು ಆಗಿರುವುದನ್ನು ಕಾಣಬಹುದು. ಊರಿನಲ್ಲಿ ಆದ ಬದಲಾವಣೆಯನ್ನು ಈ ಕೆಳಕಂಡಂತೆ ಗುರುತಿಸಲಾಗಿದೆ.

"ಆ ಸಂಜೆಯಲ್ಲಿ ಹೀಗೆ ಊರಿನ ಸುಮಾರು ಐವತ್ತು ಮಕ್ಕಳಿಗೆ ಹೆಸರು, ವಯಸ್ಸು, ಜಾತಿ ಇತ್ಯಾದಿ ವಿವರಗಳನ್ನೆಲ್ಲಾ ಮಾಸ್ತರು ಸೃಷ್ಟಿಸಿದರು. ಒಬ್ಬೊಬ್ಬ ಹುಡುಗನ ಹೆಸರನ್ನು ನೊಂದಾಯಿಸಿಕೊಳ್ಳುವಾಗಲು ಅವರವರ ತಾಯ್ತುಂದೆಗಳು ಅದಕ್ಕೆ ನೀಡುತ್ತಿದ್ದ ವಿವರಣೆಗಳು ನೆರೆದಿದ್ದ ಜನಕ್ಕೆಲ್ಲಾ ಮನರಂಜನೆಯ ಪ್ರಸಂಗವಾಗಿ ಪರಿಣಮಿಸಿತ್ತು.

ನಾಳೆಯಿಂದ ಎಲ್ಲರೂ ಶಾಲೆಗೆ ಬರಬೇಕೆಂದು ಅದಕ್ಕೆ ಅಗತ್ಯವಾದ ಬಳಪ, ಮಗ್ಗಿಪುಸ್ತಕಗಳನ್ನೆಲ್ಲಾ ಅವರವರ ಅಪ್ಪಂದಿರು ಕೂಡಲೇ ತಂದುಕೊಡಬೇಕೆಂದೂ ಮಾಸ್ತರು ಎಲ್ಲರಿಗೂ ಹೇಳಿದರು. ಆದರೆ ಕೆಲವರು ದುರ್ಗಕ್ಕೆ ಹೋಗಲು ತಮಗೆ ಬಿಡುವಿಲ್ಲವೆಂದು, ಆದ್ದರಿಂದ ತಾವೇ ತಂದುಕೊಡಬೇಕೆಂದೂ ಲೆಕ್ಕಹಾಕಿ ಮಾಸ್ತರ ಕೈಗೆ ಹಣ ಕೊಟ್ಟರು. ಮಾಸ್ತರು ಆ ಬಾಲಕ ಬಾಲಕಿಯರಿಗೆಲ್ಲಾ ನಾಳೆ ಬೆಳಿಗ್ಗೆ ಎಂಟು ಗಂಟೆಗೆ ಸರಿಯಾಗಿ ಕೈಕಾಲು ಮುಖ ತೊಳೆದು, ತಲೆ ಬಾಚಿಕೊಂಡು ಜಗಲಿ ಮೇಲಕ್ಕೆ ಹಾಜರಾಗಬೇಕೆಂದು ಹೇಳಿದರು.

ಮಕ್ಕಳು ತಮಗೆ ಹೊಲಮಾಳದಲ್ಲಿ ದನಕರುಗಳನ್ನು ಕಾಯುವ ಕೆಲಸ ಇನ್ನು ತಪ್ಪಿತು ಎಂದುಕೊಂಡು ಸಂತೋಷದಲ್ಲಿ ಮುಳುಗಿದರು. ನಾಳೆಯಿಂದ ಶಾಲೆಗೆ ಹೋಗುವ ಸಂಭ್ರಮದಲ್ಲಿ ಅವರೆಲ್ಲರೂ ತೇಲಾಡಿದರು.

ಆದರೆ ತಮ್ಮ ಮಕ್ಕಳು ಶಾಲೆಗೆ ಹೋದ ಮೇಲೆ ತಮ್ಮ ಮನೆಯ ಕೆಲಸವೆಲ್ಲಾ, ಕೆಲಸದ ಭಾರವೆಲ್ಲಾ ತಮ್ಮ ತಮ್ಮ ಹೆಗಲ ಮೇಲೆ ಬಿದ್ದಿದ್ದನ್ನು ನೆನೆಸಿಕೊಂಡು ತಂದೆ ತಾಯಿಯರು ಚಿಂತೆಗೊಳಗಾದರು."[೨೨]

ಈ ಕತೆಯಲ್ಲಿ ತಗ್ಗಳ್ಳಿಗೆ ಪಾಠಶಾಲೆ ಬಂದಾಗ ಅದೆಲ್ಲಾ ಒಂದು ಮನರಂಜನೆಯ ವಿಷಯವಾಗಿ ಕಾಣುತ್ತದೆ. ಕೆಲವರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ಮುಂದಾದರೆ ಮತ್ತೆ ಕೆಲವರು ಮನೆಯ ಕೆಲಸದ ಭಾರವೆಲ್ಲ ತಮ್ಮ ಮೇಲೆ ಬೀಳುವುದನ್ನು ನೆನೆಸಿಕೊಂಡು ಚಿಂತೆಗೊಳಗಾಗುತ್ತಾರೆ. ಈ ರೀತಿ ಚಿಂತೆಗೊಳಗಾದರೂ ಸಹ ಊರಿನ ಹಿರಿಯರು ಮತ್ತು ಮಕ್ಕಳ ತಂದೆ ತಾಯಿಯರು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸಲು ಮುಂದಾಗುವುದು ಕಾಣಬಹುದಾಗಿದೆ. ಶಿಕ್ಷಣ ನಮ್ಮ ಗ್ರಾಮೀಣ ಪ್ರದೇಶಗಳಿಗೆ ಬಂದು ಗ್ರಾಮ ಪರಿಸರವನ್ನು ಬದಲಾಗಿಸಿರುವುದನ್ನು ಈ ಕತೆಯಲ್ಲಿ ಕಾಣಬಹುದಾಗಿದೆ.

ಇವರದೇ ಇನ್ನೊಂದು ಕತೆಯಾದ 'ಕಲ್ಯಾಣಿ' ಕತೆಯಲ್ಲಿ ಇದರಲ್ಲಿ ಬರುವ ಗೌಡರ ತಮ್ಮ ಆಶ್ರಮದ ಸ್ವಾಮೀಜಿಯಾಗಿದ್ದ. ಈ ಆಶ್ರಮ ಅನೇಕ ಬಡ ಕುಟುಂಬಗಳಿಗೆ, ಅನಾಥ ಮಕ್ಕಳಿಗೆ ಆಸರೆಯಾಗಿತ್ತು. ಗೌಡರ ತಮ್ಮ ಬಾಲ್ಯದಲ್ಲಿಯೇ ತನ್ನ ತಂದೆ ತಲೆ ಮೇಲೆ ವಿನಾಕಾರಣ ಒಂದು ಏಟು ಹೊಡೆದರು. ಅಂತ ಊರು ಬಿಟ್ಟು ಓಡಿ ಹೋದ ನಂತರ ಗೌಡರ ತಮ್ಮ ಅನೇಕ ಹೋಟೆಲ್ಲುಗಳಲ್ಲಿ ಎಂಜಲು ಬಳಿದು ನಂತರ ಅನೇಕ ಆಶ್ರಮಗಳು ಸೇರಿ ಅಲ್ಲಿ ಸ್ವಾಮೀಜಿಗಳ ಸಾನಿಧ್ಯದಲ್ಲಿ ಸೇವೆ ಮಾಡಿ, ವಿದ್ಯೆ ಕಲಿತು, ದೇಶ ವಿದೇಶಗಳಲ್ಲೆಲ್ಲಾ ಸುತ್ತಿ ಅಪಾರ ಪಾಂಡಿತ್ಯ, ವಿದ್ವತ್ತು, ಹಣ, ಕೀರ್ತಿ, ಅನುಭವವನ್ನೆಲ್ಲಾ ಸಂಪಾದಿಸಿ ಕೊನೆಗೆ ಅದೆಲ್ಲವನ್ನೂ ಜನಗಳ ಕಲ್ಯಾಣಕ್ಕಾಗಿ ಧಾರೆ ಎರೆಯಲು ಆಶ್ರಮ ಸ್ಥಾಪಿಸಿ ನೆಲೆ ನಿಂತಿದ್ದರು. ನೂರಾರು ಅಸಹಾಯಕ ಕೂಗುಗಳಿಗೆ ಅವರು ಸಾಕ್ಷಾತ್ ದೇವರಾಗಿ ಕಂಡಿದ್ದರು. ಜನಸೇವೆ ಮತ್ತು ಆಧ್ಯಾತ್ಮ ಅವರ ವ್ಯಕ್ತಿತ್ವದ ಉಸಿರಾಗಿತ್ತು. ಅಸ್ಪೃಶ್ಯತೆ ಮತ್ತು ಅಸಮಾನತೆ ನಿವಾರಣೆ ಅವರ ಗುರಿಯಾಗಿತ್ತು. ಜನರಲ್ಲಿ ವಿದ್ಯೆ ಮತ್ತು ತಿಳುವಳಿಕೆ ಮೂಡಿಸುವುದು ಅವರ ಧ್ಯೇಯವಾಗಿತ್ತು. ಹೀಗೆ ಈ ಕತೆಯಲ್ಲಿ ಶಿಕ್ಷಣದ ಪ್ರಭಾವ

ಆಗಿರುವುದನ್ನು ಕಾಣಬಹುದು. ಗ್ರಾಮೀಣ ಅವಿದ್ಯಾವಂತ ಯುವಕ ಒಂದು ಸಣ್ಣ ಕಾರಣಕ್ಕಾಗಿ ಮನೆ ಬಿಟ್ಟು ಹೋಗಿ ಏನೆಲ್ಲಾ ಕಷ್ಟಪಟ್ಟು ಕೊನೆಗೆ ಅಸಾಧಾರಣ ಯಶಸ್ಸನ್ನು ಗಳಿಸಿರುವುದು ಒಳ್ಳೆಯ ಉದಾಹರಣೆ.

ಈ ಕತೆಯಲ್ಲಿ ಕೆಳಜಾತಿಯವರು ವಿದ್ಯಾವಂತರಾದರೆ ಮತ್ತು ಮುಂದುವರಿದರೆ ತಮ್ಮ ಕೆಲಸಕಾರ್ಯಗಳಿಗೆ ಧಕ್ಕೆಬರುವುದಲ್ಲದೇ ತಮ್ಮಗಳ ಸರಿಸಮನಾಗಿ ನಿಲ್ಲಕೂಡದೆಂಬ ಮನೋಭಾವವನ್ನು ಕಾಣಬಹುದಾಗಿದೆ.

ಕುಸುಮಾ ಅವರ 'ಪ್ರಕೃತಿ' ಸಮಗ್ರ ಕತೆಗಳ ಸಂಕಲನದ ಬಾಂಧವ್ಯ ಕತೆಯಲ್ಲಿ ಶಿಕ್ಷಣದ ಪ್ರಭಾವವನ್ನು ಕಾಣಬಹುದು.

"ಮನೆಗೆ ಬಂದ ಮೈನಾ ಅನ್ಯಮನಸ್ಕಳಾಗಿ ಕಳೆದು ಹೋದ ಕ್ಷಣಗಳನ್ನು ನೆನಪಿಸಿಕೊಳ್ಳುತ್ತಾ, ಅವತ್ತಿಗೂ ಇವತ್ತಿಗೂ ಇರುವ ಅಂತರವನ್ನು ಮನಸ್ಸಿನಲ್ಲೇ ಲೆಕ್ಕಹಾಕ ತೊಡಗಿದಳು. ಆಗ ಹಕ್ಕಿಯಂತೆ ಹಾರಾಡಿದ ಬಂಧನದಲ್ಲಿದ್ದರೂ, ಇಲ್ಲದಂತಿದ್ದ ಮುಗ್ಧತೆ ಎಷ್ಟು ಚೆನ್ನಾಗಿತ್ತು, ಮನಸ್ಸಿಗೆ ಎಷ್ಟೇ ಬೇಸರವಾದರೂ ಗಳಿಗೆಯಲ್ಲಿ ಮರೆತು ಹೊಸ ರೂಪ ಪಡೆಯುತ್ತಿದ್ದದ್ದು ಈಗ ಪವಾಡದಂತೆ ಕಾಣುತ್ತದೆ.

ಕೂತರೆ ತಪ್ಪು ನಿಂತರೆ ತಪ್ಪು ಎಲ್ಲಾದರೂ ಮನೆಯಿಂದಾಚೆ ಹೋಗಲು ನಿರ್ಬಂಧ. ಪದೇ ಪದೇ ಬುದ್ಧಿಮಾತುಗಳು ಬೆನ್ನಟ್ಟಿ ಬರುವ ಭೂತಗಳಂತೆ ಕಾಡುವ ಸನ್ನಿವೇಶಗಳೇ ಹೆಚ್ಚಾಗಿರುವ ಈ ಅನಿವಾರ್ಯತೆಯನ್ನು ವಿವಾಹವಾಗುವತನಕ ಪಡೆದುಕೊಳ್ಳಲೇ ಬೇಕಾದಂತಹ ಪರಿಸ್ಥಿತಿಯನ್ನು ನೆನೆಸಿಕೊಂಡ ಮೈನಾಗೆ ಮೈಮೇಲೆ ಮುಳ್ಳುಗಳೇಳ ತೊಡಗಿದವು, ನಿದ್ದೆ ಹತ್ತಲಿಲ್ಲ. ಇವೆಲ್ಲಾ ಗೋಜಲುಗಳ ನಡುವೆ ಮಲಗಿಕೊಂಡಿದ್ದ ಮೈನಾಗೆ ಮುಂದಿನ ಭವಿಷ್ಯವನ್ನು ಯೋಚಿಸಲು ಭಯವಾಗತೊಡಗಿತು. ಮತ್ತೊಂದು ಕ್ಷಣದಲ್ಲಿ ಮುಂದೆ ಓದಬೇಕೆಂದಿದ್ದ ಅವಳಾಸೆ ಮಣ್ಣುಗೂಡಿದ ಅನಿವಾರ್ಯತೆ ಅವಳ ಸಂಯಮವನ್ನು ಪರೀಕ್ಷಿಸುತ್ತಿತ್ತು. ಎಸ್.ಎಸ್.ಎಲ್.ಸಿ. ಓದಿ ಮುಗಿಸಿದ್ದ ಮೈನಾಳನ್ನು ಮುಂದೆ ಓದಲು ಕಳಿಸಲಿಚ್ಛಿಸದೆ ಮದುವೆ ಮಾಡುವ ಸನ್ನಾಹದಲ್ಲಿ ಅವಳ ತಂದೆ, ತಾಯಿ ಇದ್ದರು. ಬೇಸರವಾದಾಗ ಕೆಲವು ಕಥೆ ಕಾದಂಬರಿಗಳನ್ನು ಓದಿ ತೃಪ್ತಿಪಟ್ಟುಕೊಳ್ಳಬೇಕಿತ್ತು. ಮುಂದೆ ಓದಬೇಕೆಂಬ ದಾಹ ಮೈನಾಳಿಗೆ ವಿಪರೀತವಾಗಿತ್ತು. ಅದೇಕೋ ಅವಳು ಅಳುವಿನ ರೂಪದಲ್ಲಿ ತನ್ನೆಲ್ಲಾ ಸಮಸ್ಯೆಗಳಿಗೂ ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸುತ್ತಿದ್ದಳು. ಓದಲಾಗದೆ ಮದುವೆಯಾಗುವುದರಲ್ಲಿ ಆಸಕ್ತಿ ಬೆಳೆಸಿಕೊಳ್ಳಬೇಕಾಯಿತು. ಇದು ಅವಳಿಗೆ ಬಲವಂತದ ಮಾಘ ಸ್ನಾನವಾಗಿತ್ತು. ಸುಧಾ, ಕಸ್ತೂರಿ ಮುಂತಾದ ವಾರ ಮತ್ತು ತಿಂಗಳ ಪತ್ರಿಕೆಗಳನ್ನು ಓದುತ್ತಾ ಕಾಲ ಕಳೆಯಬೇಕಾಗಿ ಬಂತು. ಇದೆಲ್ಲಾ ನೆನಪಾಗುತ್ತಿದ್ದಂತೆ ಮತ್ತೊಮ್ಮೆ ಅವಳ ಕಣ್ಣುಗಳಲ್ಲಿ ನೀರು ತುಂಬಿಕೊಂಡವು. ಎಷ್ಟೋ ಹೊತ್ತು ಅಳುತ್ತಿದ್ದು ಹಾಗೆ ಮಲಗಿಕೊಂಡಳು. ನಿದ್ದೆ ಹತ್ತಿತು."[೨೨]

ಹೀಗೆ ಹಳ್ಳಿಗಳಲ್ಲಿ ಹೆಣ್ಣು ಮಕ್ಕಳನ್ನು ಹೆಚ್ಚಾಗಿ ಶಾಲೆಗೆ ಕಳುಹಿಸದಿದ್ದ ಕಾರಣ, ಮೈನಾಳಿಗೆ ಓದಬೇಕೆಂಬ ಆಸೆ ಅವಳ ತಂದೆ ತಾಯಿಗಳಿಂದ ಕೆಲವು ಬಲವಂತದ ಒತ್ತಡಗಳು ಹೇಗೆ ಅವಳ ಮನಸ್ಸಿನಲ್ಲಿ ಆಘಾತ ಉಂಟು ಮಾಡಿದವು ಎಂಬುದನ್ನು ಈ ಕತೆ ಚಿತ್ರಿಸುತ್ತದೆ.

ಸಹಪಾಠಿಗಳು ಕತೆಯಲ್ಲಿ ಬರುವ 'ಮಣಿ' ಓದುವುದಕ್ಕೆ ಎಷ್ಟು ಹಿಂಸೆಪಡುತ್ತಿದ್ದಳು ಎಂಬ ವಿಚಾರವನ್ನು ಈ ಕೆಳಗಿನಂತೆ ತಿಳಿದುಕೊಳ್ಳಬಹುದು. ಮಾಗಿಯ ಕಾಲವಾದ್ದರಿಂದ ತುಂಬಾ ಚಳಿ ಇತ್ತು. ರಾತ್ರಿ ಸಮಯ

ಎಂಟಾಗಿತ್ತು. ಹೊಟ್ಟೆ ತುಂಬಾ ಊಟ ಮಾಡಿದ್ದಳು. ಊಟ ಮಾಡಿ ಓದಲು ಕುಳಿತ ಮಣಿಗೆ ನಿದ್ರೆಯ ಜೊಂಪು ಹತ್ತಿ ಜೋಲಿ ಹೊಡೆದಳು. ಇವಳ ಪರಿಸ್ಥಿತಿಯನ್ನು ಗಮನಿಸಿ ನೋಡಿದಾಗ ಓದದೇ ವಿಧಿಯಿಲ್ಲ ನಿದ್ರೆಯನ್ನು ನಿಯಂತ್ರಿಸಲಾಗುವುದಿಲ್ಲ. ಜೊತೆಗೆ ಮಲಗಿದರೆ ಅಪ್ಪ, ಅಮ್ಮನ ಬೈಗುಳ. ಇದೆಲ್ಲದರ ಜೊತೆಗೆ ನಾಳೆಯ ಸ್ಕೂಲಿಗೆ ಹೋಗುವ ತಯಾರಿ ಇವೆಲ್ಲ ಆತಂಕಗಳ ನಡುವೆಯೂ ಸಹ ನಿದ್ರಾದೇವಿಯ ವಶೀಕರಣಕ್ಕೆ ಒಳಗಾಗುವುದನ್ನು ಗಮನಿಸಬಹುದು. ಆದರೂ ಇವೆಲ್ಲವುಗಳನ್ನೂ ಮೀರಿ ನಿದ್ರೆಗೆ ಮಾರು ಹೋಗುತ್ತಾಳೆ. ಅವಳಿಗೆ ಬೆಳಗಾಗಿರುವುದೂ ಸಹ ಗೊತ್ತಾಗುವುದಿಲ್ಲ. ಶಾಲೆಗೆ ಹೋಗಲು ಅಪ್ಪ, ಅಮ್ಮನ ಕೂಗಾಟ, ಆದರೂ ಏಳಲು ಕಷ್ಟ. ಇನ್ನೂ ಮಲಗಬೇಕೆಂಬ ಹಂಬಲ. ಇದರ ನಡುವೆಯೇ ಅಮ್ಮನ ಏಟುಗಳು. ಈ ಸನ್ನಿವೇಶವು ಹಳ್ಳಿಯ ಪ್ರತಿಯೊಬ್ಬರ ಅನುಭವಕ್ಕೂ ಸಹ ಕಂಡುಬರುವಂತಹುದಾಗಿದೆ. ಶಿಕ್ಷಣದ ಪ್ರಭಾವದಿಂದ ನಮ್ಮ ಗ್ರಾಮಗಳಲ್ಲಿ ಆದ ಬೇರೆ ಬೇರೆ ರೀತಿಯ ಬದಲಾವಣೆಗಳನ್ನು ಕಾಣಬಹುದು:

ಪೂರ್ಣಚಂದ್ರ ತೇಜಸ್ವಿಯವರ 'ಅಬಚೂರಿನ ಪೋಸ್ಟಾಫೀಸು' 'ಕುಬಿ ಮತ್ತು ಇಯಾಲ' ಕತೆಯಲ್ಲಿ ಶಿಕ್ಷಣದ ವಿವರಣೆ ಹೀಗಿದೆ : ಶಿಕ್ಷಣದ ಪ್ರಭಾವದಿಂದ 'ಕುಬಿ' ಡಾಕ್ಟರಾಗಿ ಬೈರಾಪುರಕ್ಕೆ ಬಂದಾಗ ಜನ ಅವರನ್ನು ಯಾವ ರೀತಿಯಾಗಿ ಕಂಡರು ಮತ್ತು ಕುಬಿ ಡಾಕ್ಟರು ಹೇಗೆ ಅನೇಕ ರೀತಿಯ ಬದಲಾವಣೆಗಳನ್ನು ಮಾಡುತ್ತಾರೆ. "ಜ್ಞಾನ ತನ್ನೊಡನೆ ಹೇಗೆ ಅಜ್ಞಾನವನ್ನು ಹೊತ್ತುಕೊಂಡು ಸಾಗುತ್ತದೆ ಎಂಬುದನ್ನು 'ಕುಬಿ ಮತ್ತು ಇಯಾಲ' ಕತೆಯಲ್ಲಿ ತೇಜಸ್ವಿಯವರು ತೋರಿಸಿಕೊಟ್ಟಿದ್ದಾರೆ. ಸಮಾಜದ ಚಲನವಲನವನ್ನು ಅತ್ಯಂತ ಸೂಕ್ಷ್ಮವಾಗಿ ಗ್ರಹಿಸುವ ಲೇಖಕರು ಪಾತ್ರಗಳ ಮೂಲಕ ಪ್ರಗತಿ ಹಾಗೂ ಅವನತಿಗಳ ವೈದೃಶ್ಯಗಳನ್ನು ಮುಖಾಮುಖಿಯಾಗಿಸಿ ಓದುಗರು ಚಿಂತಿಸುವಂತೆ ಮಾಡುತ್ತಾರೆ."[೨೪]

ಭೈರಾಪುರಕ್ಕೆ ಹೊಸದಾಗಿ ಕುಬಿ ಡಾಕ್ಟರು ಬರುತ್ತಾರೆ. ಕುಬಿ ಡಾಕ್ಟರು ಬಂದಾಗ ಬೈರಾಪುರದಲ್ಲಿ ಜನಜೀವನದಲ್ಲಿ ಅನೇಕ ಬದಲಾವಣೆಗಳು ಉಂಟಾಗುತ್ತವೆ. ಇಲ್ಲಿ ಲೇಖಕರು ಗ್ರಾಮೀಣ ಬದುಕು ಮತ್ತು ಶಿಕ್ಷಣಕ್ಕೆ ತೆರೆದುಕೊಂಡ ಮನಸ್ಸುಗಳನ್ನು ಮುಖಾಮುಖಿಯಾಗಿಸಿದ್ದಾರೆ. ಗ್ರಾಮೀಣ ಸಮಾಜದ ಅನೇಕ ಚಲನವಲನಗಳನ್ನು ಅತ್ಯಂತ ಸೂಕ್ಷ್ಮವಾಗಿ ಗ್ರಹಿಸಿರುವ ಲೇಖಕರು ಗ್ರಾಮೀಣ ಪಾತ್ರಗಳು ಮೂಲಕ ಪ್ರಗತಿ ಹಾಗೂ ಅವನತಿಗಳ ವೈದೃಶ್ಯಗಳನ್ನು ಮುಖಾಮುಖಿಯಾಗಿಸಿ ಓದುಗರಿಗೆ ಚಿಂತಿಸುವಂತೆ ಮಾಡುತ್ತಾರೆ.

ಇಯಾಲ ಸುಮ್ಮನೆ ಬೆಂಚಿನ ಮೂಲೆಯೊಂದರಲ್ಲಿ ಹೋಗಿ ಕುಳಿತುಕೊಂಡಳು. ಯಾರೋ ಒಬ್ಬನನ್ನು ಡಾಕ್ಟರರು ಪರೀಕ್ಷಿಸುತ್ತಿದ್ದರು. 'ಆ' ಎನ್ನೊ ಎಂದಾಗ ಅವನು ನೀರಾನೆಯಂತೆ ಆ ಎಂದು ಬಾಯಿ ತೆರೆದ. 'ಇ' ಎಂದಾಗ ಹಲ್ಲು ಚಿಲಿದು ದಂತಪಂಕ್ತಿಗಳನ್ನು ತೋರಿಸಿದ. ಸ್ಟೆತಾಸ್ಕೋಪು ಎದೆ ಮೇಲಿಟ್ಟು, ಉಸಿರಾಡು ಗಟ್ಟಿಯಾಗಿ ಎಂದಾಗ ಹೆಬ್ಬಾವಿನಂತೆ ಬುಸ್ ಬುಸ್ ಎಂದು ಗಟ್ಟಿಯಾಗಿ ಶ್ವಾಸಕೋಶದ ತುದಿಯೊತ್ತಿದ. ಅವನ ಬಾಯಿಯ ದುರ್ಗಂದಕ್ಕೆ ಕೊಂಚ ದೂರವೇ ತಲೆ ಇಟ್ಟುಕೊಂಡು ಅವನ ಬಾಯಿಯ ಪಾತಾಳಕ್ಕೆ ಇಣುಕಿದರು. ಅನಂತರ ಅವನ ಬೆನ್ನಿನ ಮೇಲೆ ಕೈಯಿಟ್ಟುಕೊಂಡು ಡೋಲಿನಂತೆ ಡುಬು ಡುಬು ಕುಟ್ಟಿದರು ಡಾಕ್ಟರು.

ಕುಬಿ ಡಾಕ್ಟರಿಗೆ ಇದೊಂದು ದೈನಂದಿನ ವ್ರತವಾಗಿ ಹೋಗಿತ್ತು. ಆ ಡಾಕ್ಟರು ಉಡುಗೆ ಅವನ ಸ್ಟೆತಾಸ್ಕೋಪ್, ಹಾರ, ಕನ್ನಡಕದೊಳಗಿನ ಪ್ರಶಾಂತ ಕಣ್ಣುಗಳು, ಅವರು ಗಂಬೀರವಾಗಿ ಇತರರಿಗೆ ಕೊಡುತ್ತಿದ್ದ

ಸಂದೇಶಗಳು ಇವುಗಳು ಇಯಾಲಳ ಕಣ್ಣುಗಳಿಗೆ ಅಸಾಮಾನ್ಯ ತೇಜಸ್ಸಿನಿಂದ ರಾರಾಜಿಸಿದವು. ಹೆಚ್ಚೇನು, ಕುಬಿ ಡಾಕ್ಟರು ಅವಳ ಅಮ್ಮನ ಹೇಳಿಕೆಯಂತೆ ದೇವರಂಥ ಮನುಷ್ಯನಾಗಿ ಕಾಣದೆ ಸಾಕ್ಷಾತ್ ಏಸುಕ್ರಿಸ್ತನಂತೆಯೇ ಕಂಡ.

ಈ ನಡುವೆ ಡಾಕ್ಟರು ಮುದುಕರನ್ನು ಪರೀಕ್ಷೆ ಮಾಡಲು ಒಳಗೆ ಬನ್ನಿರಿ ಎಂದು ಕರೆದರು. ಆ ಮುದುಕರು ಎದ್ದು ನಿಂತು, "ಲೋ ಎಲ್ಲಿ ಹೋದನೋ ಅವನು ಮುಂಡೇಗಂಡ. ತಾರೊ ಇಲ್ಲಿ ನನ್ನ ಕೋಲನ್ನ" ಎಂದು ಮೊಮ್ಮಗನನ್ನು ಹುಡುಕಿ ಕೂಗ ತೊಡಗಿದರು. ಹುಡುಗ ಅಂಗೈ ಮೇಲೆ ಕೋಲನ್ನು ಬ್ಯಾಲೆನ್ಸ್ ಮಾಡುವ ಭರದಲ್ಲಿ ಹಿಂದೆ ಮುಂದೆ ಕೈ ತೂಗಿಸುತ್ತಾ ಆಸ್ಪತ್ರೆಯ ಗೇಟಾಚೆಗೆ ಸಾಗಿದ್ದ. ಅದನ್ನು ನೋಡುವ ಪ್ರೇಕ್ಷಕಗಣ ಇದೆಯೋ ಇಲ್ಲವೋ ಎಂಬುದನ್ನು ಗಮನಿಸದೆ ತನ್ನ ಅಂಗೈ ಮೇಲಿನ ಕೋಲನ್ನು ಅದು ಓಲುವ ದಿಕ್ಕನ್ನೂ ಏಕಾಗ್ರತೆಯಿಂದ ಗಮನಿಸುತ್ತಿದ್ದ ಮುದುಕನು ಮೊಮ್ಮಗನನ್ನು ಚೆನ್ನಾಗಿ ಬೈದು ನಿನ್ನನ್ನು ಆಸ್ಪತ್ರೆಗೆ ಕರೆತರಲೇಬಾರದೆಂದು ಶಾಪ ಹಾಕಿ ಕೋಲು ಕಿತ್ತುಕೊಂಡು ಪರೀಕ್ಷೆರೂಮಿನತ್ತ ಕಾಲು ಹಾಕಿದರು. ಡಾಕ್ಟರು ಮೌನವಾಗಿ ನಸುನಗುತ್ತ ತಾಳ್ಮೆಯಿಂದ ಕಾಯುತ್ತಿದ್ದರು."[೨೫]

'ನವ್ಯರಲ್ಲಿನ ಎರಡನೆಯ ತಲೆಮಾರಿನ ಕಥೆಗಾರರಲ್ಲಿ ತುಂಬಾ ಪ್ರಸಿದ್ಧರಾದ ಕಥೆಗಾರರು ಶ್ರೀ ಕೃಷ್ಣ ಆಲನಹಳ್ಳಿಯವರು. ವಸ್ತುವಿನ ಉತ್ಕಟ ಅನುಭವ ಮತ್ತು ರಕ್ತಗತವಾದ ಭಾಷೆಯ ಅಭಿವ್ಯಕ್ತಿಯಿಂದ ಆಲನಹಳ್ಳಿಯವರು ಗಮನ ಸೆಳೆಯುತ್ತಾರೆ. ನವ್ಯ ಕಥೆಗಾರರಲ್ಲಿ ಆಲನಹಳ್ಳಿಯವರು ವೈಶಿಷ್ಟ್ಯವನ್ನು ಪ್ರಕಟಿಸುವುದು ಅವರ ಭಾಷೆಯ ಮುಖಾಂತರವೇ ಎನ್ನಬಹುದು. ಈ ಭಾಷೆಯ ಮೂಲ ಶಕ್ತಿ ಅದರ ಇಂದ್ರಿಯಾನುಭವ ನಿಷ್ಠೆಯಲ್ಲಿ ಹುದುಗಿದೆ. ಎಂಥ ಸಂದರ್ಭದಲ್ಲಿಯೂ ಇವರ ಕಥೆಯ ಭಾಷೆ ಸ್ವಂತಿಕೆಯನ್ನು ಕಳೆದುಕೊಳ್ಳುವುದಿಲ್ಲಾ. ಹೀಗಾಗಿ ಆಲನಹಳ್ಳಿಯವರ ಕಥೆಗಳಿಗೆ ನವ್ಯ ಸಾಹಿತ್ಯದ ಸಂದರ್ಭದಲ್ಲಿ ಒಂದು ವಿಶೇಷ ಸ್ಥಾನವಿದೆ. ಅವರ ಕಥೆಗಳು ಮುಖ್ಯವಾಗಿ ಪ್ರಧಾನವಾದ ಎರಡು ನೆಲೆಗಳಲ್ಲಿ ಪ್ರವೃತ್ತವಾಗುತ್ತವೆ. ಮನುಷ್ಯ ಹೊಸ ಮೌಲ್ಯಗಳನ್ನು ಸ್ವೀಕರಿಸುವಾಗ ಒಪ್ಪಿಕೊಳ್ಳುವಾಗ ಅನಿವಾರ್ಯವಾದ ದ್ವಂದ್ವದ ಅರಿವನ್ನು ತಂದು ಕೊಳ್ಳುವುದು ಮತ್ತು ಗಂಡು ಹೆಣ್ಣುಗಳ ಲೈಂಗಿಕ ಸಂಬಂಧಗಳ ರಹಸ್ಯವನ್ನು ಶೋಧಿಸುವುದು."[೨೬]

ಲಂಕೇಶರ ಕಥೆಗಳಲ್ಲಿಯೂ ಸಹ ನಾವು ಶಿಕ್ಷಣದ ಬಗೆಗಿನ ಚಿಂತನೆಗಳನ್ನು ಸೂಕ್ಷ್ಮವಾಗಿ ಕಾಣಬಹುದು. ಇವರ ಕಥೆಗಳಲ್ಲಿ "ಸ್ವಾತಂತ್ರ್ಯೋತ್ತರ ಭ್ರಮ ನಿರಸನದಿಂದಾಗಿ ಹುಟ್ಟಿಕೊಂಡಂತಹ ನವ್ಯದಲ್ಲಿ ಎಲ್ಲ ಬಗೆಯ ರಮ್ಯತೆಯನ್ನು ಆದರ್ಶವನ್ನು ಸಂದೇಹಿಸುವ ಮನಸ್ಥಿತಿ ಹುಟ್ಟಿಕೊಂಡಿತು. ಹೀಗಾಗಿ ಇಲ್ಲಿ ಹಳ್ಳಿಯನ್ನು ನೋಡುವ ಕ್ರಮವೇ ಬೇರೆ. ರಮ್ಯತೆ ಮತ್ತು ಆದರ್ಶವಾದಿ ಇರದೆ ಇರುವಂತಹ ಒಂದು ವಾಸ್ತವ ಪ್ರಜ್ಞೆ ಪ್ರಾರಂಭವಾಯಿತು. ಹೊಸ ಸಂವೇದನೆ ಇರುವ ವ್ಯಕ್ತಿ ಈ ರೀತಿ ನೋಡಲು ಪ್ರಾರಂಭಿಸಿದ. ಮೊದಲಿನ ಗ್ರಾಮೀಣ ಮೌಲ್ಯಗಳ ವಿರುದ್ಧದ ಮನಸ್ಥಿತಿ ಇರುವ ನಾಯಕರು ಇಲ್ಲಿ ಬರುತ್ತಾರೆ. ಹಾಗೂ ಇವರು ನಗರ ಪ್ರಜ್ಞೆಗೆ ಆಕರ್ಷಿತರಾದ ನಾಯಕರು. ಇಲ್ಲಿ ಗಮನಿಸಬೇಕಾದ ಇನ್ನೊಂದು ಮುಖ್ಯ ಸಂಗತಿ ಎಂದರೆ ಕನ್ನಡದ ಮುಖ್ಯ ಸಾಹಿತಿಗಳು ಗ್ರಾಮೀಣ ಹಿನ್ನೆಲೆಯಿಂದ ಬಂದವರು. ಆದರೆ ಹೊಸ ಮೌಲ್ಯಗಳ ಪ್ರಭಾವಕ್ಕೆ ಸಿಲುಕಿದವರು. ಹೀಗಾಗಿ ಅವರ ಸೃಜನ ಶೀಲತೆಯ ಮೂಲ ದ್ರವ್ಯಗಳಲ್ಲಿ ಒಂದು ಅವರ ಆತ್ಮಾವಲೋಕನ.

ತಮ್ಮ ಪ್ರಜ್ಞೆ ಮತ್ತು ಪರಿಸರಗಳ ಸಂಬಂಧಗಳನ್ನು ಪರೀಕ್ಷಿಸುವ ನೆಲೆಯಲ್ಲಿ ಗ್ರಾಮೀಣ ಹಿನ್ನೆಲೆಯ ನವ್ಯರ ಮುಖ್ಯ ಕೃತಿಗಳು ರೂಪುಗೊಂಡವು. ಅನಂತಮೂರ್ತಿ, ಲಂಕೇಶ್, ಚಿತ್ತಾಲ, ಕಂಬಾರರ ಕೃತಿಗಳು ಇದಕ್ಕೆ ಸಾಕ್ಷಿ. ಆದ್ದರಿಂದ ನವ್ಯರಲ್ಲಿ ಕಾಣುವ ಬಹುಪಾಲು ನಾಯಕರುಗಳ ಆತ್ಮವಿಶ್ಲೇಷಣೆ ಸಾಹಿತಿಯ ಸಾಮಾಜಿಕ ವೈಯುಕ್ತಿಕ ವ್ಯಕ್ತಿತ್ವದ ಆತ್ಮವಿಶ್ಲೇಷಣೆಯೂ ಹೌದು. ನಿರೂಪಕನ ಪ್ರಜ್ಞೆ ಹಳ್ಳಿಗೆ ಒಗ್ಗದೇ ಹೋದ ಸ್ಥಿತಿಯ ಶೋಧನೆಯೇ ನವ್ಯದ ಗ್ರಾಮೀಣ ಚಿತ್ರಣದ ಮೂಲಗುಣ. ಈ ಹಿನ್ನೆಲೆಯಿಂದ ನೋಡಿದರೆ ನವ್ಯ ಸಾಹಿತ್ಯದ ಗ್ರಾಮೀಣ ಬೇರುಗಳು ಹೆಚ್ಚು ಸ್ಪಷ್ಟವಾಗಿ ಕಾಣುತ್ತವೆ."[೨೭]

ಲಂಕೇಶ್‌ರ ಕತೆಯಲ್ಲಿ "ಕೆರೆಯ ನೀರನು ಕೆರೆಗೆ ಚೆಲ್ಲಿ" ಶೈಕ್ಷಣಿಕ ಪ್ರೇರಣೆ ಮತ್ತು ಪ್ರಭಾವದ ಸ್ವರೂಪ ಹೀಗಿದೆ. ಇದರಲ್ಲಿ "ಕಥೆಗಾರರು ಹಳ್ಳಿಯ ಬದುಕನ್ನು ಅದರೊಂದಿಗಿನ ಭೂತಕಾಲದ ಕೊಂಡಿಗಳನ್ನು ಕಳಚಿಕೊಳ್ಳದ, ನಿರ್ಲಿಪ್ತ ಪ್ರವಾಸಿಯಂತೆ ನೋಡುತ್ತಾರೆ. ಸದ್ಯದ, ನಿರೂಪಕನ ನಗರದ ಬದುಕು ಮತ್ತು ಅದೇ ನಿರೂಪಕನೇ ಎದುರಿಸಬೇಕಾಗಿರುವ ಹಳ್ಳಿಯ ಬದುಕನ್ನು ಪರಸ್ಪರ ಅರ್ಥ ಶೋಧನೆಗೆಂದು ಬಳಸಿಕೊಳ್ಳಲಾಗುತ್ತದೆ. ಇವನು ಹಳ್ಳಿಯಲ್ಲಿ ಆಗಂತುಕ. ಈ ಸ್ಥಿತಿಯು ಇಡೀ ಒಂದು ತಲೆಮಾರಿನ ಅನುಭವವೂ ಆಗುವುದರಿಂದ ಮುಖ್ಯವಾಗುತ್ತದೆ."[೨೮]

ಇಲ್ಲಿ ಕತೆಗಾರರು ಹಳ್ಳಿಯ ಬದುಕು ಮತ್ತು ಅದರೊಂದಿಗೆ ಭೂತಕಾಲದ ಕೊಂಡಿಗಳನ್ನು ಕಳಚಿಕೊಳ್ಳಲಾಗಿದೆ. ಇರುವುದನ್ನು ನಿರ್ಲಿಪ್ತತೆಯಿಂದ ನೋಡುತ್ತಾರೆ. ಇಲ್ಲಿ ಸದ್ಯದ ನಿರೂಪಕನ ನಗರದ ಬದುಕು ಮತ್ತು ಅದೇ ನಿರೂಪಕನೇ ಎದುರಿಸಬೇಕಾಗಿರುವ ಹಳ್ಳಿಯ ಜೀವನವನ್ನು ಪರಸ್ಪರ ಅರ್ಥ ಶೋಧನೆಗೆಂದು ಬಳಸಿಕೊಳ್ಳಲಾಗುತ್ತದೆ. ಇವನು ಹಳ್ಳಿಯಲ್ಲಿ ಆಗಂತುಕ ವ್ಯಕ್ತಿಯಾಗಿದ್ದಾನೆ. ಈ ಸ್ಥಿತಿಯು ಇಡೀ ಒಂದು ತಲೆಮಾರಿನ ಅನುಭವವಾಗಿ ಮುಖ್ಯವಾಗುತ್ತದೆ. ನಗರದ ಬದುಕು ಮತ್ತು ಗ್ರಾಮೀಣ ಬದುಕನ್ನು ಒಟ್ಟಾರೆ ನೋಡಿದಾಗ ಕೆಲವು ವಿಚಾರಗಳು ಯಾವುದೇ ನಿರ್ಧಾರಕ್ಕೆ ಬರದೆ ನಿರ್ಲಿಪ್ತವಾಗುವುದನ್ನು ಕಾಣಬಹುದಾಗಿದೆ.

ಶಿಕ್ಷಣದ ಪ್ರಭಾವದಿಂದ ಒಬ್ಬ ವಿದ್ಯಾವಂತ ಮನೆಗೆ ಬರುವಾಗ ಸಂಭ್ರಮ ಸಂತೋಷಗಳನ್ನು ಕಾಣಬಹುದು.

"ಪರಮೇಶಮಾವ ಬರುತ್ತೇನೆಂದು ಅಜ್ಜನಿಗೆ ಕಾಗದ ಬರೆಯುವುದಕ್ಕೆ ಎಂಟುದಿನ ಮುಂಚೆಯೇ ಗಳ್ಳುಜನ ಭಾವಿಯ ಹತ್ತಿರ ಕಬ್ಬಿನ ಗದ್ದೆಯಲ್ಲಿ ಸೊಪ್ಪು ಕೊಯ್ಯುವಾಗ, ತಾನು ಮುಖ ಎತ್ತದ ಹಾಗೆ ಕಿಸಾಣಿ ಮಾಡಿರಲಿಲ್ಲವೆ? "ಹೋಗೇ ತುಳುಜಕ್ಕ ಆದಿಯಾಗಿ, ಕಚಗುಳಿ ಇಡುತ್ತಿದ್ದರೆ, ಹೀಗೆ ತಿಂಗಳುಗಟ್ಟಲೆ ನಕ್ಕಾಡಿದರೂ ಕೂಡ, ಗೌರಿಯ ಮನಸ್ಸಿಗೆ ನೋವಾಗುವ ಕಾರಣ ಇರಲಿಲ್ಲ. ಏಕೆ ನೋವಾಗಬೇಕು? ಪರಮೇಶ ಬೆಂಗಳೂರಲ್ಲಿ ನಾಲ್ಕು ವರ್ಷ ಓದಿ ಅದೇನೆನ್ನೊ ಪಾಸು ಮಾಡಿದ್ದಾನಂತೆ. ಈ ವರ್ಷ ಮದುವೆಯಾದರೆ ಕೆಲಸ ಸಿಗುವುದು ಖಂಡಿತವಾದ್ದರಿಂದ, ಕರೆದುಕೊಂಡು ಹೋಗಿ ಸಂಸಾರ ಹೂಡುತ್ತಾನಂತೆ. ಪರಮೇಶನ ಕೂಡ ಮದುವೆ ಸುಲಭ ಜೀವನದ ಪ್ರಥಮ ಮೆಟ್ಟಿಲು. ತನ್ನ ತಾಯಿ ಸತ್ತು ಹೋದ ಮೇಲೆ ತಬ್ಬಲಿಯನ್ನು ತಂದು (ಕಣ್ಣಲ್ಲಿಟ್ಟು ಮುಚ್ಚಿಕೊಂಡು) ಸಾಕಿದ ಅಜ್ಜ ಅಜ್ಜಿ ತಮ್ಮ ಮಗ ಪರಮೇಶನ ಹೆಂಡತಿ ಮೊಮ್ಮಗಳು ಗೌರಿಯೆ ಸರಿ - ಎಂದು ಯೋಚಿಸಿ, ನಿರ್ಧರಿಸಿ ಎಷ್ಟೊಂದು ವರ್ಷವಾಯಿತು.

ಮದುವೆಯೆಂಬ ಮಾತಿನ ಸಂಪೂರ್ಣ ಅರ್ಥ ಗೌರಿಗೆ ಆಗತೊಡಗಿತ್ತು. ನಿಂತು ಯೋಚಿಸಿದಾಗ ಉಸಿರು ಕಟ್ಟಿದ ಹಾಗಾಗುತ್ತಿತ್ತು. ಅಷ್ಟೆ ಅಲ್ಲ ಹದಿನೈದು ದಾಟಿದೊಡನೆ ಪ್ರಾರಂಭವಾದ ಮೈಯಿನ ಬಿಗಿ, ಕಣ್ಣಲ್ಲಿ ನೀರು ತುಂಬುವ ಸುಖದ ಕಾವು ಬಣ್ಣ ಬಣ್ಣದ ಯೋಚನೆಗಳು ಕೆನ್ನೆಗೆ ತರುವ ನವಿರು ಎಲ್ಲಕ್ಕೂ ಹೊಸ ಪ್ರಾಮುಖ್ಯತೆ ಬಂದಿತ್ತು. ತಾನು ನೋಡಲು ಚೆನ್ನಾಗಿರುವುದಾಗಿ ಜನ ಹೇಳ್ತಾರೆ. ಹುಡುಗರು ಕಣ್ಣಗಲಿಸಿ ನೋಡಿ ಮುಂದೆ ಹೋಗುತ್ತಾರೆ. ತುಳಜಕ್ಕನ ಐದನೆಯ ಮಗುವನ್ನು ಎತ್ತಿಕೊಂಡಾಗ ಆದ ಅನುಭವ ಲೆಕ್ಕವಿಲ್ಲದಷ್ಟು ಆಶೆಗಳನ್ನು ಕೆರಳಿಸಿದೆ.

ಬಾಗಿಲ ಕಡೆ ಗದ್ದಲ, ಅಜ್ಜ ಸಂಭ್ರಮದಿಂದ ಜಗುಲಿಗೆ ಹೋದಕೂಡಲೆ ಗೌರಿ ಸೆರಗಿನಿಂದ ಕಣ್ಣೀರೊರಸಿ ಕೊಂಡು "ಥೂ ಕೆಟ್ಟ ನೀರುಳ್ಳಿ! ಎಂದು ಬೈದು ಪರಮೇಶಮಾವನನ್ನು ಕಾಣಲು ಧೈರ್ಯ ಕೂಡಿಸಿಕೊಂಡು ದೇವರ ಕೋಣೆಗೆ ಬಂದಳು. ಅಂಗಳದಲ್ಲಿ ಅಜ್ಜ ಜೋರಾಗಿ ಮಾತಾಡುತ್ತಿದ್ದ. ಮಗ ಬೆಂಗಳೂರಿನಿಂದ ವಿದ್ಯಾಭ್ಯಾಸ ಮುಗಿಸಿಕೊಂಡು ಬಂದಿದ್ದಾನೆನ್ನುವುದು ಸಾಮಾನ್ಯವೆ? ಮುದುಕ ಎಷ್ಟು ಬೇಗ ಹುಡುಗನಾಗಿ ಬಿಟ್ಟ ಎಂದುಕೊಂಡೊಡನೆ ಗೌರಿಗೆ ನಗು ಬಂತು."[೨೮]

ತೇಜಸ್ವಿಯವರ 'ಅಬಚೂರಿನ ಪೋಸ್ಟಾಫೀಸು' ಕತೆಯಲ್ಲಿ ಶಿಕ್ಷಣದಿಂದಾದ ದುರಂತವನ್ನು ಚಿತ್ರಿಸಲಾಗಿದೆ. "ಹೊಸದಾಗಿ ಆರಂಭವಾಗಿದ್ದ ಅಬಚೂರಿನ ಪೋಸ್ಟಾಫೀಸಿನಲ್ಲಿ ಹಂಗಾಮಿಯಾಗಿ ಪೋಸ್ಟು ಮಾಸ್ತರ ಬೋಬಣ್ಣ ಇಂದು ಅತ್ಯಂತ ಅಸಂತುಷ್ಟನೂ ತೊಂದರೆ ಗೊಳಗಾದವನೂ ಆಗಿದ್ದನು. ಮೊದಲು ಅವನು ಅಬಚೂರಿನ ಸಾಹುಕಾರರಾದ ಅಲ್ಲಿಜಾನ್ ಸಾಬರ ತೋಟದಲ್ಲಿ ರೈಟರ್ ಕೆಲಸ ಮಾಡುತ್ತಿದ್ದನು. ಪೋಸ್ಟಾಪೀಸು ಅಬಚೂರಿನಲ್ಲಿ ಹೊಸದಾಗಿ ತೆರೆದಾಗ ಬೋಬಣ್ಣ ಸಾಯಂಕಾಲ ಒಂದು ಗಂಟೆ ಬೆಳಿಗ್ಗೆ ಒಂದು ಗಂಟೆ ಹಂಗಾಮಿಯಾಗಿ ಪೋಸ್ಟ್ ಮಾಸ್ಟರ ಕೆಲಸ ಮಾಡಲು ಒಪ್ಪಿದ್ದನು. ಬೋಬಣ್ಣ ಒಪ್ಪದಿದ್ದರೆ ಅಬಚೂರಿಗೆ ಪೋಸ್ಟ್ ಆಫೀಸು ಬರಲು ಸಾಧ್ಯವೆ ಇರಲಿಲ್ಲ. ಏಕೆಂದರೆ ಅಲ್ಲಿ ಇನ್ನೂ ಯಾರಿಗೂ ಇಂಗ್ಲಿಷ್ ಅಕ್ಷರಗಳು ತಿಳಿಯುತ್ತಲೇ ಇರಲಿಲ್ಲ. ಹಾಗೂ ಇಂಗ್ಲೀಷ್ ತಿಳಿದವರಾರೂ ಆ ಕೊಂಪೆಗೆ ಅಷ್ಟೊಂದು ಸಣ್ಣ ಸಂಬಳಕ್ಕೆ ಬಂದು ಕೆಲಸ ಮಾಡಲು ತಯಾರಿರಲಿಲ್ಲ. ಬೋಬಣ್ಣ ಒಪ್ಪಿದ ನಂತರ ಅವನ ಅತ್ತೆ ಮನೆಯೇ ಪೋಸ್ಟ್ ಆಫೀಸ್ ಆಗಿ ಹಂಗಾಮಿಯಾಗಿ ರೂಪಾಂತರಗೊಂಡಿತು. ಹೀಗಾಗಿ ಪೋಸ್ಟಾಫೀಸ್ ತೆರೆದ ಕೆಲವೇ ದಿನಗಳಲ್ಲಿ ಬೋಬಣ್ಣನೂ ಪೋಸ್ಟಾಫೀಸೂ ಅವಿಭಾಜ್ಯ ಅಂಗಗಳೆನ್ನುವಂತಾಯ್ತು.

ಪೋಸ್ಟಾಫೀಸು ಆರಂಭವಾಯ್ತು. ಎಲ್ಲರೂ ಬೋಬಣ್ಣನನ್ನು ಪೋಸ್ಟ್ ಮಾಸ್ತರೇ ಎಂದು ಗೌರವದಿಂದ ಕರೆಯುತ್ತಿದ್ದರು. ಬೋಬಣ್ಣನಿಗೆ ತಾನೊಬ್ಬ ದಿಲ್ಲಿಯೊಡನೆ ಸಂಪರ್ಕ ಹೊಂದಿರುವ ಭಾರತ ಪ್ರಜೆ ಎಂಬ ಹೆಮ್ಮೆಯುಂಟಾಗತೊಡಗಿತು. ಬೋಬಣ್ಣನ ಎಸ್.ಎಸ್.ಎಲ್.ಸಿ.ವರೆಗಿನ ಇಂಗ್ಲೀಷ್ ಅವನ ಎಷ್ಟೋ ಪೋಸ್ಟಾಫೀಸಿನ ಕೆಲಸ ಕಾರ್ಯಗಳಿಗೆ ಸಾಲದಾಗುತ್ತಿದ್ದಿತು. ಅದಕ್ಕಾಗಿ ಅವನು ಒಂದು ಹಳೇ ಇಂಗ್ಲೀಷ್-ಕನ್ನಡ- ಡಿಕ್ಷನರಿಯನ್ನು ಇಟ್ಟುಕೊಂಡನು. ಬೋಬಣ್ಣನು ಅವನ ಅತ್ತೇ ಮನೆಯಲ್ಲಿಯೇ ವಾಸವಾಗಿದ್ದನು. ಆತನ ಅತ್ತೆಯೂ ಹೆಂಡತಿಯೂ ಸಾಬರ ತೋಟದಲ್ಲಿಯೇ ಬಹುಕಾಲದಿಂದ ಕೆಲಸ ಮಾಡಿಕೊಂಡು ಬಂದವರಾಗಿದ್ದರು. ಬೋಬಣ್ಣ ಸಕಲೇಶಪುರದ ಹತ್ತಿರ ಕೊಡಲಿಪೇಟೆ ಎಂಬ ಒಂದು ಹಳ್ಳಿಯವನಾಗಿದ್ದನು.

ಅವನು ಅಲ್ಲಿ ಕೆಲಸ ಇಲ್ಲದೆ ಪೋಕರಿ ತಿರುಗುತ್ತಿದ್ದಾಗ ಬೋಬಣ್ಣನ ಅತ್ತೆ ಮಾಚಮ್ಮನೇ ಅವನನ್ನು ಕರೆತಂದು ಮಗಳಿಗೆ ಮದುವೆ ಮಾಡಿ ಮನೆಯಲ್ಲಿಯೇ ಇರಿಸಿಕೊಂಡಿದ್ದಳು.

ಓದಿದ ಹುಡುಗನೆಂದು ಅಲ್ಲಿ ಜಾನ್‌ಸಾಬರ ಬಳಿ ಕೇಳಿ ಒಂದು ಕೆಲಸ ಕೊಡಿಸಿದಳು. ಬೋಬಣ್ಣನಿಗೆ ತಂದೆ ತಾಯಿ ಇರಲಿಲ್ಲ. ಇಬ್ಬರು ಅಣ್ಣಂದಿರು ಮಾತ್ರ ಇದ್ದರು. ಬೋಬಣ್ಣ ಅತ್ತೆ ಮನೆಗೆ ಹೋಗುವುದಾಗಿ ಹೇಳಿದಾಗ ಸಂತೋಷಗೊಂಡು ಮರು ಮಾತನಾಡದೆ ಸಮ್ಮತಿಸಿದ್ದರು.''[೩೦]

ಬೆಸಗರಹಳ್ಳಿ ರಾಮಣ್ಣನವರ ಸೋಲು ಕತೆಯಲ್ಲಿನ ಈ ವಿಚಾರವನ್ನು ಸಂದರ್ಭದೊಡನೆ ವಿವರಿಸಲಾಗಿದೆ. ಊರಿಗೆ ದೊಡ್ಡವರೆನಿಸಿಕೊಂಡ ಗೌಡರಿಗೆ ಅವರ ಮಗ ಬೇರೆ ಮಕ್ಕಳಂತೆ ಓದಬೇಕೆಂಬ ಆಸೆಯನ್ನು ಇಟ್ಟುಕೊಂಡಿರುತ್ತಾರೆ. ಮಗ ಒಳ್ಳೆಯ ವಿದ್ಯಾವಂತನಾದರೆ ತನ್ನ ಪ್ರತಿಷ್ಠೆ ತೋರಿಸಿಕೊಳ್ಳಬೇಕೆಂಬುದು ಗೌಡರ ಆಸೆಯಾಗಿದೆ. ಆದರೆ ಮಗ ದಡ್ಡ. ಆಗಿನ ಕಾಲದಲ್ಲಿ ಹಳ್ಳಿಗಳಲ್ಲಿ ಶಿಕ್ಷಣದ ಪ್ರಭಾವ ಹೇಗಾಗಿದೆ ಎಂಬುದನ್ನು ಗುರುತಿಸಬಹುದು. ಸಂದರ್ಭದ ವಿವರಣೆಯನ್ನು ಈ ಕೆಳಕಂಡಂತೆ ಗುರುತಿಸಲಾಗಿದೆ.

''ಗೌಡರಿಗೆ ತಮ್ಮ ಹಿರಿಯ ಮಗ ಯಾತಕ್ಕೂ ಬಾರದ ಹೆಣ್ಣಿಗನಂತೆ ಹ್ಯಾಪು ಮೋರೆ ಹಾಕಿಕೊಂಡು ಬಂದು ನಿಂತುದನ್ನು ಕಂಡು ಮನಸ್ಸು 'ಪಿಚ್' ಎನ್ನಿಸಿತು. ''ಹುಲಿ ಹೊಟ್ಟೇಲಿ ಅದೇನು ಅಂತ ಹುಟ್ಟೋ ಕುರಿ. ಮೂರು ವರ್ಷದಿಂದಲೂ ಕಡ್ನು ದಬ್ಬಾಕ್ತೀನಿ. ಹೀಂಗೆ ಹಾಗೆ ಅಂತಿದ್ದೀ ಎಸ್ಸೆಸ್ಸೆಲ್ಸಿ ಆಗಲಿಲ್ಲ. ಮೊನ್ನೆಯಿಂದ ಹೋಗ್ಲ'' ಚನ್ನಪಟ್ಟಣಕ್ಕಾದ್ರೂ, ಮಂಡ್ಯಕ್ಕಾದ್ರೂ ಒಂದು ಐವತ್ತು ಅರವತ್ತು ಜಾಸ್ತಿಯಾದ್ರೂ, ಚಿಂತಿಲ್ಲಾ. ಈ ಸಾರಿಯಾದ್ರೂ ಕಷ್ಟಪಟ್ಟು ಕಣ್ಣಿಗೆ ಎಣ್ಣೆ ಬಿಟ್‌ಕೊಂಡು ಓದಿ ಕಾಲೇಜ್ ಮೆಟ್ಟಿಲು ತುಳಿಯಂಗಾಗು ಅಂತ ಬಡ್ಕೊಂಡ್ರೆ ಕೇಳ್ದಾ? ಸುಮ್ಮನೇ ತೊಲೆ ಬೆಳ್ದಂಗೆ ಬೆಳ್ದೆ ಬಸವನಂಗೆ, ನನ್ನ ಎದುರಿಗೆ ಕುಂಭಕರ್ಣನಂಗೆ 'ತಿಸ್ಕೊ' ಅಂತ ಬಿದ್ಕಂತಿ ಅಲ್ಲಾ ಅಲ್ಲೇನು ಪುಸ್ತಕ ಮುಟ್ತೆಯೋ ಇಲ್ವೊ? ಎಲ್ಲ ನನ್ನ ಕರ್ಮ. ಬನ್ನಿ ನನ್ನೆದೆ ಕೆರ್ಕಂಡು ತಿನ್ನಿರಿ. ಹೆಂಗೆ ನಿಂತವನೆ ನೋಡು! ಹೋಗಲ ಎತ್ತಾಗಾದ್ರೂ ಹಾಳಾಗಿ, ಆ ಪುಟ್ಟಬಸಕ್ಕನ ಹೈದ ಭೋಟುದ್ದ ಇಲ್ಲ ಆಗ್ಲೇ 'ಬಿ.ಎ' ಮಾಡ್ತು! ಮೊನ್ನೆದಿನ ಮೂರು ಸಾವಿರ ಕೈಗೆ ಕೊಟ್ಟು ಮದುವೆ ಮಾಡಿ, ಎರಡೆಕರೆ ಗದ್ದೇನೂ ಬರಿತೀವಿ ಅಂತ ಬಂದಿದ್ರಂತೆ. ಅಸುಗಾಡಳ್ಳಿಯಿಂದ ಹೆಣ್ಣೋ ಹಾ! ಹಾ! ಒಳ್ಳೆ ಮುತ್ತು ಸವರನ್ನು ಇದ್ದಂಗೈಯ್ತಂತೆ. ನಾನು ಪಡಕೋಬರಲಿಲ್ಲ.... ಹೂಂ ಎಂದು ಉಸಿರು ಕಟ್ಟಿದಂತಾಗಿ ನಿಲ್ಲಿಸಿ ಮಗನ ಕಡೆ ಮತ್ತೊಮ್ಮೆ ಕಣ್ಣಿಂದ ಕೆಂಡ ಕಾರಿದರು.''[೩೧]

ತೇಜಸ್ವಿಯವರ 'ಅಬಚೂರಿನ ಪೋಸ್ಟಾಫೀಸು' ಕಥಾ ಸಂಕಲನದ, 'ಡೇರ್ ಡೆವಿಲ್' 'ಮುಸ್ತಫಾ' ಕತೆಯಲ್ಲಿ ಶಿಕ್ಷಣದ ಪ್ರಭಾವ ಆಗಿರುವುದನ್ನು ಗುರುತಿಸಲಾಗಿದೆ. ''ಜಮಾಲ್ ಅಬ್ದುಲ್ ಮುಸ್ತಫಾ ಹುಸೇನ್'' ಎಂದು ಪ್ರತಿದಿನ ಹಾಜರಿ ಕೂಗಿದಾಗಲೂ ಕೇವಲ ಮುಸಲ್ಮಾನರೇ ಇರುವ ಗುಂಪಿನೊಳಗೆ ಏಕಾಂಗಿಯಾಗಿ ಹೋಗಲೂ ಹೆದರುತ್ತಿದ್ದ ನಮಗೆ ಕೇವಲ ಹಿಂದೂಗಳೇ ಇದ್ದ ಕಾಲೇಜಿಗೆ ಬರಬೇಕಾದರೆ ಮುಸ್ತಫಾ ಧೈರ್ಯಶಾಲಿಯೇ ಇರಬೇಕೆನಿಸುತ್ತಿತ್ತು. ಆದರೆ ತಿಂಗಳು ಕಳೆದರೂ ಮುಸ್ತಫಾ ಹಾಜರಾಗಲೇ ಇಲ್ಲ. ಅವನು ಮುಂಜಿ ಎಂದೋ ಮತ್ತು ಪ್ರಿನ್ಸಿಪಾಲರೇ ಬರಿಯ ಹಿಂದೂಗಳಿರುವ ಕಾಲೇಜಿಗೆ ಬರಬೇಡ ಎಂದು ವಿವೇಕ ಹೇಳಿದರೆಂದೂ ನಾನಾ ಬಗೆಯ ಊಹಾಪೋಹಗಳನ್ನು ಹುಡುಗರು ಹಬ್ಬಿಸಿದರು.

“ಜಮಾಲ್ ಅಬ್ದುಲ್ ಮುಸ್ತಫಾ ಹುಸೇನ್”

“ಎಸ್ ಸಾರ್”

ಒಂದು ದಿನ ಚರಿತ್ರೆಯ ಮಾಸ್ತರು ಕೂಗಿದಾಗ ಒಂದು ಮೂಲೆಯಿಂದ ಉತ್ತರ ಬಂತು. ಚರಿತ್ರೆಯ ಮಾಸ್ತರರು ಹೆಸರು ಕೂಗುವುದನ್ನು ನಿಲ್ಲಿಸಿ ಉತ್ತರ ಬಂದ ಮೂಲೆಯ ಕಡೆಗೆ ದುರುದುರು ನೋಡಿದರು. ಅವರೊಡನೆ ಇಡೀ ತರಗತಿಯೇ ಸದ್ದು ಬಂದ ಕಡೆ ದಿಕ್ಕನ್ನು ವೀಕ್ಷಿಸತೊಡಗಿತು. ಸಾಧಾರಣವಾಗಿ ತಲೆ ತಗ್ಗಿಸಿಕೊಂಡೆ ಇರುತ್ತಿದ್ದ ನಮ್ಮ ತರಗತಿಯ ಹುಡುಗಿಯರೂ ಸಹ ತಮ್ಮ ಡಬ್ಬಿಗಳನ್ನು ದಡಬಡ ಬೀಳಿಸುತ್ತ ಅತ್ತ ತಿರುಗಿ ನೋಡಿದರು.

‘ಜಮಾಲ್ ಅಬ್ದುಲ್ ಮುಸ್ತಫಾ ಹುಸೇನ್’ ತರಗತಿಯ ಒಂದು ಮೂಲೆಯಲ್ಲಿ ಕುಳಿತಿದ್ದ ಕಣ್ಣು ಮೂಗು ಮುಖ ಎಲ್ಲ ನೀಟಾಗಿ ಕೆಂಪಗಿದ್ದ ಯುವಕನೊಬ್ಬ ಎಲ್ಲರೂ ತನ್ನತ್ತ ತಿರುಗಿ ನೋಡುತ್ತಿದ್ದುದರಿಂದ ನಾಚಿ ನೀರಾಗಿ ಕುಳಿತಿದ್ದ.

ನಮಗೆಲ್ಲಾ ಒಂದು ದೊಡ್ಡ ಒಗಟು ಬಿಡಿಸಿದಷ್ಟು ನೆಮ್ಮದಿಯಾಯ್ತು. ಜೊತೆಗೆ ಆತ ಕರಾಳ ಘಜ್ನಿ ಮಹಮೂದನ ಸಂತಾನವಾಗಿ ಕಾಣದೆ ವಿಶ್ವಾಸ ಸ್ನೇಹಗಳಿಗೆ ತಕ್ಕಂಥ ಮುಗ್ಧ ಯುವಕನಾಗಿದ್ದುದೂ ಇನ್ನೊಂದು ಸಮಾಧಾನದ ಸಂಗತಿಯಾಗಿತ್ತು.”[೩೨]

ಲಂಕೇಶರ ‘ಕೊನೆ’ ಕತೆಯಲ್ಲಿ ಶಿಕ್ಷಣದ ಪ್ರಭಾವ ಕುರಿತು ಹೀಗೆ ಧ್ವನಿ ಇದೆ. ಇದರ ಬಗ್ಗೆ ಸಿ.ವೆಂಕಟೇಶ್ ಹೇಳುವಂತೆ. “ಕೊನೆ ಕತೆಯಲ್ಲಿ ಇಂಥ ಒಬ್ಬ ಗ್ರಾಮೀಣ ವಿದ್ಯಾವಂತ ನಿರುದ್ಯೋಗಿ ಯುವಕನೊಬ್ಬನ ಜೀವನ ವಿಕೃತ ಸಾಮಾಜಿಕ ವ್ಯವಸ್ಥೆಯ ಕಾರಣದಿಂದ ಅನ್ಯಾಯವಾಗಿ ಕೊನೆಯಾಗುವ ಚಿತ್ರಣವಿದೆ. ಪಟ್ಟಣದಲ್ಲಿ ಓದಲು ಬಂದ ಉಜ್ಜ ಎಂಬ ಗ್ರಾಮೀಣ ಯುವಕನೊಬ್ಬನ ಮೌನ ಸಹಜ ಬಯಕೆ, ಚಟ, ಚಪಲಗಳಿಗೆ ಬಲಿಯಾಗಿ ತಾನು ಪಟ್ಟಣಕ್ಕೆ ಬಂದ ಉದ್ದೇಶವನ್ನೇ ಮರೆತು ಆರಕ್ಕೇರದ ಮೂರಕ್ಕಿಳಿಯದ ಅಯೋಗ್ಯನಾಗಿ ತನ್ನ ಹಳ್ಳಿಗೆ ಹಿಂದಿರುಗುತ್ತಾನೆ. ಅಲ್ಲಿಯೂ ತನ್ನವರ ಹಾಗೂ ಊರವರಿಂದ ಅವಮಾನಿತನಾಗಿ ಬೇಸತ್ತು ಒಂದು ರೀತಿಯ ಹುಚ್ಚಿನ ಉನ್ಮಾದ ಸ್ಥಿತಿಯಲ್ಲಿ ದುರಂತವನ್ನಪ್ಪುತ್ತಾನೆ.

ಪಟ್ಟಣದಲ್ಲಿ ಅವನು ಓದನ್ನು ಮರೆತು ಕೆಟ್ಟು ಹೋಗಲು ಹೊರಗಿನ ಕಾರಣಗಳೇನೇ ಇದ್ದರೂ ಮೂಲತಃ ಅವನ ಚಂಚಲ ಮನಸ್ಸು ಅಪಕ್ವ ಬುದ್ಧಿ ಹಾಗೂ ಜವಾಬ್ದಾರಿತನದ ಸ್ಪಷ್ಟ ತಿಳುವಳಿಕೆಯ ಅಭಾವವೂ ಕಾರಣವಾಗಿದೆ. ಒಟ್ಟಾರೆ ಕಾರ್ಯ ಕಾರಣಗಳೇನೇ ಇದ್ದರೂ ಮೂಲತಃ ಅವನ ಉದ್ದೇಶ ಸಾಧನೆಯಾಗದೇ ಬದುಕು ಹದಗೆಟ್ಟು ಹಳ್ಳಿಗೆ ವಾಪಸಾಗುತ್ತಾನೆ. (ಆದರೆ ಅಲ್ಲಿಯೂ ಅಂತಹ ಸಂದರ್ಭದಲ್ಲಿ ಬೇಸತ್ತ ಮನಸ್ಸಿಗೆ ಸಾಂತ್ವನದ ನುಡಿಗೆ ಬದಲಾಗಿ ಅವಮಾನದ ಸಂಗತಿಗಳೇ ಹೆಚ್ಚಾದಾಗ ಒಮ್ಮೆ ಹಣ) ಕೆಲಸ ಸಂಪಾದನೆಯ ಅವನ ಗುರಿ ಎಲ್ಲಿ ಹೋದರೂ ಯಶಸ್ವಿಯಾಗದಿದ್ದಾಗ ಕೈಯಲ್ಲಿನ ಹಣ ಕರಿಗಿಸಿಕೊಂಡು ಪುನಃ ತನ್ನ ಹಳ್ಳಿಗೆ ಹಿಂದಿರುಗುತ್ತಾನೆ. ಇದರಿಂದ ಅವನಿಗೆ ಮತ್ತಷ್ಟು ಅವಮಾನವಾಗಿ ಬದುಕಿನ ಬಗ್ಗೆ ನಿರಾಶೆಯುಂಟಾಗುತ್ತದೆ. ಇದಕ್ಕೆ ಅಷ್ಟೇನೂ ಉತ್ತಮ ಸ್ಥಿತಿಯಲ್ಲಿಲ್ಲದ ತನ್ನ ಮನೆಯ ವಾತಾವರಣವೂ ಕಾರಣವಾಗಿದೆ. ಅವನ

ಬದುಕು ಕೈಕೊಟ್ಟಾಗ ಕೈ ಹಿಡಿಯುವ ದಾತರಿಲ್ಲದೆ ತನ್ನ ಸುತ್ತಲಿನ ಕೊಂಕು ನುಡಿಗಳನ್ನು ಸಹಿಸಲಾರದೆ ತನ್ನ ತಂದೆಯ ಸಾವನ್ನು ಬಯಸುವಂಥವನಾಗಿ ಒಂದು ರೀತಿಯ ಮನೋವಿಕಾರಕ್ಕೆ ಒಳಗಾಗುತ್ತಾನೆ.

ಅಂತಿಮವಾಗಿ ಸಾವಿನ ನಿರ್ಧಾರ ಮಾಡಿಕೊಂಡು ಕೊನೆಯ ಬಯಕೆಯ ಊಳವೆಂಬಂತೆ ಧೈರ್ಯವಾಗಿ, ಬಲಾತ್ಕಾರವಾಗಿ ಹೆಣ್ಣನ್ನು ಅನುಭವಿಸಿದ. ಅಡ್ಡಬಂದವರನ್ನು ರೊಚ್ಚಿನಿಂದ ಓಡಿಸಿದ. ಅದೇ ವೇಳೆಯಲ್ಲಿ ಊರಿಗೆ ಹುಲಿನುಗ್ಗಿ ಜನರಪ್ರಾಣ ಕಬಳಿಸುತ್ತಿದ್ದಾಗ ಸಾವಿನ ಹತ್ತಿರ ಹೋಗುತ್ತಿದ್ದ ಉಜ್ಜ ಅಂತಿಮವಾಗಿ ಊರಿನ ಜನರ ಪ್ರಾಣ ಕಾಪಾಡಲು ಧೀರನಂತೆ ಹುಲಿಯೊಡನೆ ಹೋರಾಡಿ ಅದನ್ನು ಸಾಯಿಸಿ ತಾನೂ ಸತ್ತ."[೩೩]

ಸ್ವಾತಂತ್ರ್ಯಾನಂತರದಲ್ಲಿ ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಆಧುನಮಿಕತೆ ಮತ್ತು ಶಿಕ್ಷಣದ ಪ್ರಭಾವದಿಂದ ಅನೇಕ ಬದಲಾವಣೆಗಳಾಗಿರುವುದನ್ನು ಕಾಣಬಹುದು. ಸ್ವಾತಂತ್ರ್ಯಪೂರ್ವದಲ್ಲಿ ಕೇವಲ ಅಧಿಕಾರಶಾಹಿ ಜಮೀನ್ದಾರರ ಸ್ವತ್ತಾಗಿ ರಾಜಕಾರಣ ಸ್ವಾತಂತ್ರ್ಯಾನಂತರದಲ್ಲಿ ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಹಲವು ರೀತಿಯಾದ ಬದಲಾವಣೆಗಳನ್ನು ತಂದಿತು. ಸಾಮಾನ್ಯ ಜನರೂ ಸಹ ರಾಜಕೀಯದ ವಿದ್ಯಮಾನಗಳನ್ನು ಕುರಿತಂತೆ ಹಲವು ವಿಷಯಗಳನ್ನು ತಿಳಿದುಕೊಳ್ಳಲು ಅನುಕೂಲವಾಯಿತು. ಹೀಗೆ ಸ್ವಾತಂತ್ರ್ಯಾನಂತರದಲ್ಲಿ ನಮ್ಮ ಗ್ರಾಮೀಣ ಕತೆಗಾರರು ತಮ್ಮ ಕತೆಗಳ ಮೂಲಕ ಗ್ರಾಮೀಣ ಪ್ರದೇಶದ ರಾಜಕೀಯ ಸ್ಥಿತಿಗತಿಗಳನ್ನು ಬಹಳ ಚೆನ್ನಾಗಿ ಚಿತ್ರಿಸಿರುವುದನ್ನು ಕಾಣಬಹುದಾಗಿದೆ. ಅದರಲ್ಲಿ ನಮ್ಮ ನವ್ಯ ಕಥಾ ಸಾಹಿತ್ಯದಲ್ಲಿ ಗ್ರಾಮೀಣ ರಾಜಕೀಯದ ಚಿತ್ರಣವನ್ನು ತಾವು ನೋಡಿದ ಅನುಭವಗಳ ಮೂಲಕ ಅಭಿವ್ಯಕ್ತಿಸಿದವರಲ್ಲಿ ಡಾ. ಬೆಸಗರಹಳ್ಳಿ ರಾಮಣ್ಣನವರು ಪ್ರಮುಖರಾಗುತ್ತಾರೆ. ಹೀಗೆ ರಾಜಕಾರಣದ ಬಗ್ಗೆ ಸಂಕ್ಷಿಪ್ತವಾದ ವಿಚಾರಗಳನ್ನು ಮೊಗಳ್ಳಿ ಗಣೇಶ್‌ರವರು ವಿವರಿಸಿದ್ದಾರೆ. ಅವರ ಮಾತುಗಳು ಸಮಂಜಸವಾಗಿರುತ್ತದೆ.

## ೩. ೩. ರಾಜಕಾರಣದ ಪ್ರಭಾವ

ಗ್ರಾಮಿಣ ಜೀವನವನ್ನು "ನವ್ಯ ಕಥಾ ಸಾಹಿತ್ಯದಲ್ಲಿ ದಟ್ಟವಾಗಿ ಅಭಿವ್ಯಕ್ತಿಸಿದವರಲ್ಲಿ ಬೆಸಗರಹಳ್ಳಿ ರಾಮಣ್ಣನವರು ಪ್ರಮುಖರು. ರಾಮಣ್ಣನವರು ಕುವೆಂಪು, ಟಾಲ್‌ಸ್ಟಾಯ್, ದಾಸ್ತೋವೆಸ್ಕಿ, ಮೈಕೆಲ್ ಶೊಲ್‌ಕೋವ್, ಚಿಕಾವ್, ಪ್ರೇಮಚಂದ್ ಇನ್ನೂ ಮುಂತಾದ ಮಹಾಚೇತನಗಳಿಂದ ಪ್ರೇರಣೆ ಪಡೆದಿದ್ದಾರೆ. ಇವರಿಗೆ ಸಾಹಿತ್ಯಾಸಕ್ತಿ ಮೂಡಿಸುವಲ್ಲಿ ತಮ್ಮ ಸೋದರಮಾವ ಮತ್ತು ಅಣ್ಣ ಪುಟ್ಟಸ್ವಾಮಿಯವರು ಮುಖ್ಯವಾಗಿದ್ದಾರೆ."

ಇವರ ಸಂತೆಯ ಒಳಗೊಂದು ಮನೆಯ ಮಾಡಿ ಕತೆಯಲ್ಲಿ ರಾಜಕಾರಣದ ಪ್ರಭಾವವಾಗಿರುವುದನ್ನು ಕಾಣಬಹುದು. ಮೊಗಳ್ಳಿ ಗಣೇಶರು ಹೇಳುವಂತೆ "ರಾಜಕೀಯ, ರಾಜಕಾರಣ ಎಂದರೆ ಅದೊಂದು ವ್ಯಾಪಾರ, ದಂಧೆ, ಕುತಂತ್ರಿಗಳ ಸಂತೆ, ನೀಚರ ಕಾರಾಸ್ಥಾನ, ಕೊಳ್ಳೆಹೊಡೆಯುವವರ ದಂಡು, ಕಳ್ಳರ ತವರು, ಎಂದೆಲ್ಲ ಹೀನಾರ್ಥಗಳಿಂದ ಟೀಕಿಸುವವರಿದ್ದಾರೆ. ಇದು ರಾಜಕಾರಣದ ಇವತ್ತಿನ ಅಪವಿತ್ರತೆಯ ಕಾರಣದಿಂದ ಬರುವ ಮಾತುಗಳು. ಆದರೆ ರಾಜಕಾರಣ ಎಂದರೆ, ಒಂದು ಸಮುದಾಯದ ಎಚ್ಚರ ಮತ್ತು ಸಮಷ್ಠಿಯಲ್ಲಿ ಬೇರೆಯದೇ ಆದದ್ದನ್ನು ಹೇಳುವಂತಹುದು. ಇಡೀ ಸಮುದಾಯದ ಅಂತಃಶಕ್ತಿಯನ್ನು ತನ್ನ ಇರುವಿಕೆ ಹಾಗೂ ಭವಿಷ್ಯವನ್ನು ಅಗತ್ಯಕ್ಕೆ ತಕ್ಕಂತೆ ಕಟ್ಟಿಕೊಳ್ಳುವ ಒಂದು ವ್ಯವಸ್ಥೆ. ವಿಶಾಲ ಅರ್ಥದಲ್ಲಿ ರಾಜಕಾರಣ

ಎಂದರೆ ಸಾಮಾಜಿಕ ಮೌಲ್ಯಗಳೆಲ್ಲವನ್ನು ಒಟ್ಟು ಆ ವ್ಯವಸ್ಥೆ ಎಲ್ಲವನ್ನು ಅತ್ಯಂತ ಜವಾಬ್ದಾರಿಯಿಂದ ಅರ್ಥಪೂರ್ಣವಾಗಿ ನಿಭಾಯಿಸುವ ಇಚ್ಛಾಶಕ್ತಿಯ ಹಾಗೆಯೇ ಸಮುದಾಯದ ಸಾಮೂಹಿಕ ಕನಸುಗಳ ಪ್ರತಿಬಿಂಬದ ವಾಸ್ತು ಕ್ರಿಯೆ. ಚಾರಿತ್ರಿಕ ಪ್ರಜ್ಞೆ, ಚರಿತ್ರೆ ಮತ್ತು ಸಂಸ್ಕೃತಿಯ ಸಂಯೋಗದಿಂದ ಹುಟ್ಟುವ ರಾಜಕಾರಣ ವಿಕಾರಗಳನ್ನು ಯಾವತ್ತೂ ಎಲ್ಲರನ್ನೂ ಸಮೀಪಿಸುತ್ತದೆ. ಆದರೆ ಜಾತಿ ಮತ್ತು ಧರ್ಮದ ವಿಕಾರಗಳಿಂದ ಹುಟ್ಟಿದ ರಾಜಕಾರಣ ಎಂದೆಂದೂ ಮನುಷ್ಯ ಪರವಾಗಿರುವುದಿಲ್ಲಾ. ಚರಿತ್ರೆಯಲ್ಲಿ ಹಿಟ್ಲರ್ ನೆಪೋಲಿಯನ್ನರಂತವರಿಂದ ಹಿಡಿದು ಮನುವಂತವರು ರೂಪಿಸಿದ ರಾಜಕಾರಣದ ವಿಕಾರಗಳು ಯಾವತ್ತೂ ಎಲ್ಲರನ್ನೂ ಸಮೀಪಿಸುತ್ತದೆ. ಆದರೆ ಜಾತಿ ಮತ್ತು ಧರ್ಮದ ವಿಕಾರಗಳಿಂದ ಹುಟ್ಟಿದ ರಾಜಕಾರಣ ಎಂದೆಂದೂ ಮನುಷ್ಯ ಪರವಾಗಿರುವುದಿಲ್ಲ. ಚರಿತ್ರೆಯಲ್ಲಿ ಹಿಟ್ಲರ್ ನೆಪೋಲಿಯನ್‌ರಂತವರಿಂದ ಹಿಡಿದು, ಮನುವಂತವರು ರೂಪಿಸಿದ ರಾಜಕಾರಣದ ವಿಕಾರಗಳನ್ನು ಇವತ್ತಿನವರೆಗೂ ನೋಡಬಹುದು. ರಾಜಕಾರಣ ಒಂದು ವ್ಯವಸ್ಥೆಯಾಗಿದ್ದುಕೊಂಡೇ ಸಮಾಜವನ್ನು ಆಳುವ, ಆಳ್ವಿಕೆಗೆ ಒಳಪಡಿಸುವ ಅಧಿಕಾರವನ್ನು ಸದುಪಯೋಗ ಪಡಿಸುವ ಮಹತ್ವದ ಆಧುನಿಕ ಶಕ್ತಿಯದು. ಪ್ರಭುತ್ವಕ್ಕೂ ಇದಕ್ಕೂ ಮಾನವೀಯ ಸಂಬಂಧಗಳು ಬೆಳೆಯದೇ ಹೋದಾಗ ಅಲ್ಲಿ ಸಮಾಜಗಳೂ, ಸಂಸ್ಕೃತಿಗಳೂ, ಸಮುದಾಯಗಳೂ ಕೆಟ್ಟುಹೋಗುತ್ತವೆ. ಆಗಲೇ ಅಪ್ರಮಾಣಿಕತೆ, ಹಿಂಸೆ ಹಾಗೂ ರಾಜಕೀಯದ ಬಗ್ಗೆ ಇವತ್ತು ಇರುವಂತಹ ಎಲ್ಲ ಅರ್ಥಗಳೂ ವಿಜೃಂಭಿಸುವುದು."[೩೪]

ಬೆಸಗರಹಳ್ಳಿ ರಾಮಣ್ಣನವರ ಮಾತಿನಲ್ಲಿ ಹೇಳುವುದಾದರೆ "ಗ್ರಾಮಾಂತರ ಪ್ರದೇಶದ ರಾಜಕೀಯ ಸಹ ರಾಮಣ್ಣನವರ ಕತೆಗಳಲ್ಲಿ ಕಾಣಿಸಿಕೊಳ್ಳುತ್ತದೆ. ತನ್ಮೂಲಕ ಮನುಷ್ಯನ ಸಣ್ಣತನ ಪ್ರಕಾಶಿತಗೊಳ್ಳುತ್ತದೆ.

ರಾಜಕೀಯ ಪ್ರಭಾವ ಕ್ಷಿಪ್ರ ಮತ್ತು ಕ್ಷಣಿಕ. ಸಾಹಿತ್ಯದ ಪರಿಣಾಮ ದೀರ್ಘ ಮತ್ತು ಶಾಶ್ವತ ರಾಜಕೀಯವನ್ನು ಬಿರುಮಳೆಗೂ, ಸಾಹಿತ್ಯವನ್ನು ಸೋನೆ ಮಳೆಗೂ ಹೋಲಿಸಬಹುದು. ಬಿರುಮಳೆ ಬಿದ್ದು ಭೂಮಿ ಕುಡಿಯುವುದಕ್ಕೆ ಮೊದಲೇ ಹರಿದು ಹೋಗಿ ಕೊರಕಲು ನಿರ್ಮಿಸುತ್ತದೆ. ಸೋನೆ ಮಳೆ ಮಣ್ಣನ್ನು ಸವೆಸದೆ ಅದರ ಮೇಲೆ ಹಸಿರು ಕಂಗೊಳಿಸುವಂತೆ ಮಾಡುತ್ತದೆ. ರಾಜಕೀಯದ ಗುರಿ ಉದ್ರೇಕ ಸಾಹಿತ್ಯದ ಗುರಿ ವಿವೇಕ. ಉದ್ರೇಕದಿಂದ ಹಿಂಸೆ ಮತ್ತು ಹಾನಿ; ವಿವೇಕದಿಂದ ಶಾಂತಿ ಮತ್ತು ಸಮೃದ್ಧಿ."[೩೫]

ಇವರ ಅಭಿಮಾನ ಕತೆ ಊರಿನ ರಾಜಕೀಯ ಸ್ಥಿತಿಯೊಂದನ್ನು ಹೇಳುವ ಕತೆಯಾಗಿದೆ. "ತಾಲ್ಲೂಕು ಬೋರ್ಡು ಸದಸ್ಯ ಪುಟ್ಟಸ್ವಾಮಿಗೌಡನ ಕುಟಿಲತನ, ಪಂಚಾಯ್ತಿ ಸದಸ್ಯ ಯಾಲಕ್ಕಿಯ ಮುಗ್ಧತನ ಕಣ್ಣಿಗೆ ಕಟ್ಟುವಂತೆ ಚಿತ್ರಿತವಾಗಿದೆ. ಹೊಲೆಯನಾದರೂ ಯಾಲಕ್ಕಿಯ ನಿಯತ್ತು ಮೆಚ್ಚುವಂಥದು. ಹಳ್ಳಿಯ ಜೀವನ ರಾಜಕೀಯದಿಂದಾಗಿ ಹೇಗೆ ಕಲುಷಿತವಾಗುತ್ತದೆ ಎಂಬುದು ಈ ಕತೆಯಿಂದ ತಿಳಿದು ಬರುತ್ತದೆ."[೩೬]

ಬೆಸಗರಹಳ್ಳಿ ರಾಮಣ್ಣನವರ ಪ್ರಜಾಪ್ರಭುತ್ವ ಮೂರು ಮಂಗಗಳು, ಲೇಖಕರ ಸ್ನೇಹಿತರೊಬ್ಬರು ತುರ್ತುಪರಿಸ್ಥಿತಿಯ ಕಾಲದಲ್ಲಿ ದೆಹಲಿಯಲ್ಲಿ ಅವರು ಕಂಡ ಒಂದು ಸತ್ಯಘಟನೆಯನ್ನು ಲೇಖಕರಿಗೆ ಹೇಳಿದಾಗ, ಪ್ರೇರಿತನಾಗಿ ತುರ್ತುಪರಿಸ್ಥಿತಿಯ ಕಾಲದಲ್ಲೆ ಆಂದೋಲನಕ್ಕಾಗಿ ಬರೆದ ಕತೆ ಎಂದು ಹೇಳಿಕೊಂಡಿದ್ದಾರೆ.

ಗಾಂಧಿಜೀಯ ಮೌಲ್ಯಗಳನ್ನು ಗಾಂಧೀಜಿಯ ಹೆಸರಿನಲ್ಲೇ ಕೊಲೆ ಮಾಡುವುದು. ಹಾಗೂ ಪ್ರಜಾಪ್ರಭುತ್ವದ ಹೆಸರಿನಲ್ಲಿಯೇ ಸ್ವಾತಂತ್ರ ಹರಣ ಮಾಡುವುದನ್ನು ಕಾಣಬಹುದು. ಇಲ್ಲಿ ವ್ಯಂಗ್ಯ ಯಶಸ್ವಿಯಾಗಿ ಬಂದಿದೆ. ಕಥೆಯಲ್ಲಿನ ಒಂದು ಸನ್ನಿವೇಶ ಈ ಕೆಳಗಿನಂತಿದೆ.

''ಸಾ ಒಂದು ಸ್ಪೆಷಲ್ ಕೇಸು ಸಾರು! ನೋಡಿ ಒಬ್ಬ ಕೋತಿ ಆಡಿಸೋನು.....

'ಹೂಂ! ಅದೇನ್ ಬೋಗಳು ರಾಗ ಎಳೀಬೇಡ'

''ನೆಹರೂ ಸರ್ಕಲ್ ತಾವ ಸಾರ್! ತಾನು ಇರೋದು ತುರ್ತುಪರಿಸ್ಥಿತಿ ಅನ್ನೋದನ್ನ ತಿಳಿದೇ ಅಲ್ಕಾ ನನ್ನ ಮಗ ಏನು ಮಾಡ್ತಾಯಿದ್ದ ಸಾ... ಅದ ನೋಡೋಕೆ ಅದೇನ್ ಜನ ಸಾ..'

''ಅದೇನು ಬೋಗಳೋ ಅಂದ್ರ...''

''ಮಹಾತ್ಮ ಗಾಂಧಿ ನಡೆಯೋದು ಹೆಂಗೆ ಪೋಲಿಸ್ನೋರು ಜನಕ್ಕೆ ಹೊಡೆಯೋದು ಹೆಂಗೆ.... ಆಮ್ಯಾಲೆ..''

''ಅದ್ಕೆ ಅವ್ನ ಒದ್ದು ಎಳಕ್ಕೊಂಡು ಬಂದು ಬುಟ್ಟೆ, ಕಳ್ಳ ನನ್ನ ಮಗನೆ''

''ಅಷ್ಟೆ ಅಲ್ಲ ಸಾರ್! ನಮ್ಮ ನೆಚ್ಚಿನ ಪ್ರಧಾನಮಂತ್ರಿ ಇಂದಿರಾಗಾಂಧಿಯವರು ಭಾಷಣ ಮಾಡೋದೆಂಗೆ ಅಂತ ಕುಣಿಸ್ತಾ ಇದ್ದ...''

ಸಾಮಾನ್ಯ ಮನುಷ್ಯನಾದ ಮಂಚನನ್ನು ಠಾಣೆಗೆ ಎಳೆದುಕೊಂಡು ಬರುವುದು ಪೋಲೀಸ್ ಇಲಾಖೆಯ ದೌರ್ಜನ್ಯಕ್ಕೆ ಸಾಕ್ಷಿಯಾಗಿದೆ. ಮಂಚನ ವಸ್ತುಗಳನ್ನು ಇನ್ಸ್‌ಪೆಕ್ಟರ್ ಶೋಧಿಸುತ್ತಿರುವಾಗ ಆ ಮೂರು ಮಂಗಗಳು ಟೇಬಲ್ಲಿನ ಮೇಲೆ ನೆಗೆದು, ಒಂದು ಬಾಯಿ, ಇನ್ನೊಂದು ಕಿವಿ, ಮತ್ತೊಂದು ಕಣ್ಣುಮುಚ್ಚಿ ಸಾಲಾಗಿ ಕುಳಿತಿದ್ದನ್ನು ಕಂಡ ಇನ್ಸ್‌ಪೆಕ್ಟರ್ ಮೈ ನೈತಿಕ ಭಯದಿಂದ ನಡುಗಿತು. ಗಂಭೀರವಾಗಿ ಕುಳಿತ ಮಂಗಗಳು ಗೋಡೆಯಲ್ಲಿ ತಗುಲಿ ಹಾಕಿದ್ದ ರಾಷ್ಟ್ರನಾಯಕರ ಭಾವಚಿತ್ರಗಳ ಮೇಲೆಯೇ ದೃಷ್ಟಿ ಇಟ್ಟಿದ್ದವು. ಇದನ್ನು ಕಂಡು ಈ ಮಂಗಗಳಿಗೂ ಮತ್ತು ಗಾಂಧಿಜೀಗೂ ಏನೋ ಸಂಬಂಧವಿದೆ ಎನ್ನಿಸಿದಾಗ ಮೊದಲನೆಯದು ಬಾಯಿ ಮುಚ್ಚಿಕೊಂಡಿದ್ದರ ಅರ್ಥ ಕೆಟ್ಟದ್ದನ್ನು ಕೇಳಬಾರದು ಎಂದಾಗಿದೆ. ಈ ಕೋತಿಗಳು ಹೀಗೆ ಮಾಡಬೇಕಾದರೆ ಮಂಚನೇ ಕಾರಣ ಎಂದು ಇನ್ಸ್‌ಪೆಕ್ಟರ್ ತೀರ್ಮಾನಿಸಿದ ದಫೇದಾರ ಮಂಚನನ್ನು ಥಳಿಸುತ್ತಾನೆ. ಪೋಲೀಸ್ ಕ್ರೌರ್ಯವನ್ನು ನೋಡುತ್ತಿದ್ದ ಕೋತಿಗಳು ಥಟ್ಟನೆ 'ಗುರ್' ಎಂದು ದಫೇದಾರನ ಕಡೆ ಹಾರುತ್ತವೆ. ಆತ ತನ್ನ ಕೈಯಲ್ಲಿದ್ದ ದೊಣ್ಣೆಯಿಂದ ಅವುಗಳನ್ನು ತಳ್ಳಲು ಪ್ರಯತ್ನಿಸುತ್ತಾನೆ. ಈ ದೃಶ್ಯವನ್ನು ನೋಡಿದ ಮಂಚ ಕೋತಿಗಳಿಗೆ ಹೀಗೆ ಹೇಳುತ್ತಾನೆ.

''ರಾಮ, ಸೀತೆ, ಅಭಿಮನ್ಯು, ಗಾಂಧಿತಾತ ಏನು ಹೇಳಿದ್ರು'' ಎಂದ ತಕ್ಷಣ ಒಂದು ಗಂಡು ಕೋತಿ ಇನ್ನೊಂದು ಗಂಡುಕೋತಿಗೆ ಪ್ರತೀಕಾರ ಮಾಡುವ ಬದಲು ತನ್ನ ಎಡಗೆನ್ನೆಯನ್ನು ತೋರಿಸುತ್ತದೆ. ಅದಕ್ಕೆ ಏಟಿನ ಮೇಲೆ ಏಟುಬಿದ್ದರೂ ಪ್ರತಿಭಟಿಸದೆ ಗಾಂಧಿಜೀಯ ಸತ್ಯಾಗ್ರಹವನ್ನು ಪ್ರತಿಪಾದನೆ ಮಾಡುವ ರೀತಿಯಲ್ಲಿ ಗಂಭೀರವಾಗಿ ಕುಳಿತುಬಿಡುತ್ತದೆ. ಅದರಂತೆ ಹೆಣ್ಣು ಕೋತಿಯು ಕುಳಿತುಬಿಡುತ್ತದೆ.

ಈ ಕಥೆಯ ತಿರುಳು "ಸತ್ಯಾಗ್ರಹ ಅದೂ ಕೋತಿಗಳಿಂದ ಮನುಷ ಮನುಷ್ಯನ ಮೇಲೆ ದೌರ್ಜನ್ಯ ಮಾಡಿದ್ದಕ್ಕಾಗಿ ಕೋತಿಗಳಿಂದ ಮಹಾತ್ಮನ ತತ್ವ ಪ್ರತಿಪಾದನೆ" ಹೀಗೆ ತುರ್ತು ಪರಿಸ್ಥಿಯಲ್ಲಿ ಪೋಲೀಸಿನವರಿಂದ ಪ್ರಜಾಪ್ರಭುತ್ವಕ್ಕೆ, ಗಾಂಧಿ ತತ್ವಗಳಿಗೆ ಉಂಟಾಗಿರುವ ಧಕ್ಕೆಯನ್ನು ಮೂರು ಮಂಗಗಳು ಪ್ರಶ್ನೆಯ ಮೂಲಕ ವ್ಯಂಗ್ಯದ ಧಾಟಿಯಲ್ಲಿ ಈ ಕಥೆಯಲ್ಲಿ ನಿರೂಪಿಸಿರುವ ರೀತಿ ಅದ್ಭುತವಾಗಿದೆ. "ವ್ಯಕ್ತಿಯ ಮಾನಸಿಕ, ಸೃಜನಾತ್ಮಕ ಜಗತ್ತಿನ ಮೇಲೆ ನಡೆಯುವ ಹಲ್ಲೆಯ ಕರಾಳ ಸ್ವರೂಪವನ್ನು ಈ ಕಥೆ ಅನಾವರಣ ಮಾಡುತ್ತದೆ. ಕಥೆಯಲ್ಲಿ ಸಾಂಕೇತಿಕತೆ ಸಹಜವಾಗಿ ಅಭಿವ್ಯಕ್ತವಾಗಿದೆ."[೩೭]

ಬೆಸಗರಹಳ್ಳಿ ರಾಮಣ್ಣನವರ "ಹರಕೆಯ ಹಣ" ಒಂದು ಉತ್ತಮ ಕತೆಯಾಗಿದ್ದು "ಮೇಲು ಕೀಳಿನ ಸಮಸ್ಯೆಯನ್ನು ಸಾಂದ್ರವಾಗಿ ಹಿಡಿಯುತ್ತದೆ. ತಲೆ ತಲಾಂತರದಿಂದ ಕಾಲಕಸವಾಗಿ ಬದುಕುತ್ತಿದ್ದ ಜನ ತಮ್ಮನ್ನು ತಾವೇ ಅಸಟ್ ಮಾಡಿಕೊಳ್ಳುವ ಬಗೆ ಚೇತೋಹಾರಿಯಾಗಿದೆ. ಕೆಳವರ್ಗದಲ್ಲಿ ಬಹುಮಂದಿ ಹೇಳಿದ ಹಾಗೆ ಕೇಳಿಕೊಂಡಿರುವ ಮನಸ್ಸುಳ್ಳವರಾದರೂ ಅಲ್ಪಸ್ವಲ್ಪ ವಿದ್ಯಾಭ್ಯಾಸದಿಂದ ಆಧುನಿಕ ವಿಚಾರಗಳಿಂದ ಎಚ್ಚೆತ್ತ ಬೆರಳೆಣಿಕೆಯ ವ್ಯಕ್ತಿಗಳನ್ನು ರಾಮಣ್ಣ ಜೀವಂತವಾಗಿ ಮೂಡಿಸಿದ್ದಾರೆ. ಅವರ ಸ್ವಾಭಿಮಾನ, ಕೆಚ್ಚು, ಹಟ, ರೋಷ, ಶಕ್ತಿ ಮುಂತಾದ ಗುಣಗಳು ಅವರ ಕತ್ತಲ ಬಾಳಿನ ಹಂದರದಲ್ಲಿ ಇಣುಕುವ ಕಿರಣಗಳಾಗಿವೆ. ಈ ಕತೆಯ ಸುಮಾನಿ ಅಂತಹ ಒಂದು ಪಾತ್ರ. ಅವನು ತನ್ನ ಜನಾಂಗದ ಹಕ್ಕುಗಳಿಗಾಗಿ ಹೋರಾಡಲು ಮುಂದಾದರೆ ಅವನ ಜನರೇ ಅವನಿಗೆ ಬೆಂಬಲ ನೀಡದ ಸಂಗತಿ ಮಾರ್ಮಿಕವಾಗಿದೆ. ಅವರನ್ನು ಪ್ರತಿನಿಧಿಸುವ ಎಂ.ಎಲ್.ಎ ಕೂಡ ಸತ್ಯದ ಪರವಾಗಿರುವುದಕ್ಕೆ ಬದಲು ವರ್ಗದವರ ಜೊತೆ ಸೇರಿಕೊಳ್ಳುವುದು, ಪೋಲಿಸ್ ಇಲಾಖೆಯ ಸೋಗಲಾಡಿ ತನಗಳೆಲ್ಲ ಕತೆಯಲ್ಲಿ ಅನಾವರಣಗೊಳ್ಳುತ್ತವೆ. ಜಾತಿ ವ್ಯವಸ್ಥೆಯ ಕೊಳಕುಗಳು ಜನ ಬಾಯಿ ಬಿಟ್ಟರೆ ಸಾಕು ಗಬ್ಬು ನಾರುತ್ತವೆ. ಸಮಸ್ಯೆಯ ಕಗ್ಗಂಟನ್ನು ಬಿಡಿಸುವುದಕ್ಕೆ ಬದಲಾಗಿ ಅದನ್ನು ಇನ್ನೂ ಸಂಕೀರ್ಣಗೊಳಿಸುವ ಜೀವನಗತಿ ಅದಮ್ಯವಾದುದು. ಇವೆಲ್ಲದರ ಮಧ್ಯೆಯು ತಾನು ಗುಟ್ಟಾಗಿ ಪ್ರೀತಿಸುವ ಹೆಣ್ಣನ್ನು ತನ್ನ ಆಳು ಮಗನಿಗೆ ಮದುವೆ ಮಾಡಿಕೊಂಡು ತಾನೇ ಅನುಭವಿಸಬೇಕೆಂದು ಕುದಿಯುತ್ತಿದ್ದ ಪಟೇಲನನ್ನು ಸುಮಾನಿ ಸೋಲಿಸುವ ರೀತಿ ಬಂಡೆದ್ದ ದಲಿತರ ಕೌಶಲ್ಯಕ್ಕೆ ಸಾಕ್ಷಿಯಾಗಿದೆ. ಬಿಡುಗಡೆ ಹೊಂದುವ ವ್ಯಕ್ತಿಗಳು ಬೆಳೆಯುತ್ತವೆ. ಜೀವನ ತೀವ್ರತೆ ಬಿಡುಗಡೆ ಭಾವನೆಯನ್ನು ಪ್ರಚೋದಿಸುತ್ತದೆ."[೩೮]

ಹರಕೆಯ ಹಣ ಕತೆಯ ರಾಜಕೀಯ ಈ ಕತೆಯಲ್ಲಿ ಹೇಗೆ ವ್ಯಕ್ತವಾಗಿದೆ ಎಂಬುದನ್ನು ಈ ಕೆಳಕಂಡಂತೆ ವಿವರಣೆಯನ್ನು ಕೊಟ್ಟಿದ್ದೇನೆ. "ಬೇಕೆಂದೇ ಪಟೇಲರು ಶ್ಯಾನುಭೋಗರು ಹತ್ತು ನಿಮಿಷ ತಡವಾಗಿ ಬಂದರು. ಆಗಲೇ ಚಿಟ್ಟೆ, ಹೊಟ್ಟೆ ಮತ್ತು ಧೂಳು ಅವರ ಹಿಂದೆ ನೂರಿನ್ನೂರು ಜನರು ಇರುವೆ ಸಾಲಿನಂತೆ ಬಂದರು. ಆಗಲೆ ಚಿಟ್ಟೆ, ಹೊಟ್ಟೆ, ಮತ್ತು ಧೂಳೊಡನೆ ಸುಮಾನಿಯ ನೇತೃತ್ವದಲ್ಲಿ ಸುಮಾರು ಐವತ್ತು ಅರವತ್ತು ಹರಿಜನ ಗಂಡಸರು, ಮಕ್ಕಳು ಮರಿ, ಅಲ್ಲಿ ನೆರೆದಿದ್ದರು. ಪಟೇಲರು, ಶ್ಯಾನುಭೋಗರು, ಕುರ್ಚಿಯ ಮೇಲೆ ಕುಳಿತರು. ಹಾಸಿದ್ದ ಚಾಪೆಗಳು ಹಾಗೇ ಬಿದ್ದಿದ್ದವು. ಹರಿಜನರ ಗುಂಪು ಎಡಕ್ಕೆ ಉಳಿದವರ ಗುಂಪು ಬಲಕ್ಕೆ ನಿಂತಿತು."

ಪಟೇಲ್ರು! "ಅದೇನು ಮಾತಾಡಿ ಶಾನುಭೋಗಪ್ಪ,"

ಶ್ಯಾನುಭೋಗರು: "ಚಿಟ್ಟೆ ಅದೇನು ಮಾತಾಡಪ್ಪ. ಅದೇನು ಕೇಳಬೇಕು ಅಂತ ಇದ್ದೀಯೋ ಕೇಳು. ಹಿಂದೊಂದು ಮುಂದೊಂದು ಬ್ಯಾಡ"

ಸುಮಾನಿ: "ಅದೇ ಸ್ವಾಮಿ ದಂಡಿಗಮ್ಮನ ಹರಕೆ ದುಡ್ನು..."

ಪಟೇಲರು "ಲೇ ಸುಮಾನಿ ಇದ ಕೇಳ್ಲೋಕೆ ನೀ ಯಾವೂರ ದಾಸಯ್ಯನ್ನೆ ಮುಚ್ಲೆ ನಿನಬಾಯಿ.."

ಒಂದು ಧ್ವನಿ : ಬೋ ಹೆಚ್ಚು ಬುಟ್ಟ. ಕೆನ್ನೆಗೆ ಕೊಟ್ಟರೆ ಕುಣಿದಾಡಬೇಕು.

ಹೋಟಲ್ ನಿಂಗಣ್ಣ: ಹೋಟಲ್ ಒಳಾಕೆ ಕರ್ದು ಇವನ್ಗೆ ಮಾರಾಜ ಬಂದ ಅಂತ ಚಿನ್ನದ ಗಳಾಸು ಕೊಟ್ಟು ಕಾಫಿ ಕೊಡಬೇಕಂತೆ....

ಶ್ಯಾನುಭೋಗರು: ತಲೆಗೊಂದು ಮಾತ್ಯಾಕೆ ಸುಮ್ಮನಿರಯ್ಯ...ಚಿಟ್ಟೆ ನೀನು.

ಗುಡ್ಡ: ನಿನಗೆ ಮಾತಾಡೋ ಹಕ್ಕಿದೆ ಅದೇನ್ ಹೇಳೋ...

ಚಿಟ್ಟೆ: ಅದೇ ಸ್ವಾಮಿ ಹರಕೆ ದುಡ್ಡಿನ ಮಾತು. ಈ ಸಾರಿ ಎಷ್ಟು ಬಂದದೆ ಎಲ್ಲಾರಿಂದ ರಗಡೂ ಲೆಕ್ಕಾಚಾರ ಮಾಡಿ ನಂಕೈಗೆ ಕೊಟ್ಟು ಬುಡ್ಲಿ.

ಶ್ಯಾನುಭೋಗ : ಹಿಂದ್ಲಿಂದ ಇದು ನಡಕೋ ಬಂದಿತ್ತ? ಪಟೇಲ್ರು ತಾವು ಇರ್‍ತಿತ್ತು. ವರ್ಷ ವರ್ಷಕ್ಕೆ ಚಿಕ್ಕಬ್ಬ ಮೂರು ವರ್ಷಕ್ಕೊಂದು ಸಲ ದೊಡ್ಡಹಬ್ಬ ನಡಸ್ಕೊಂಡು ಅವ್ರು ಬತ್ತಾ ಇಲ್ವ.... ಈಗ್ಯಾಕೆ ಈ ಹೊಸ ಮಾತು ಅಂತೀನಿ.

ಸುಮಾನಿ: ಕಾಲ ಬದಲಾಯ್ತು ಸ್ವಾಮಿ. ಗುಡ್ಡ ಆದೋನ್ತಾವೆ ಹರ್ಕೆ ದುಡ್ನೆಲ್ಲ ಇರ್ಲಿ. ಗುಡ್ಡ ಭಕ್ತರ ತಾವು ಭಿಕ್ಷೆ ಕೇಳಬೇಕೆ?

ಪಟೇಲರು : ಈ ಬಡ್ಡಿಹೈದ ಸುಮ್ಕಿರೋಕೆ ಎಷ್ಟು ಕೇಳಾನು ಕೇಳಿ ಶಾಮಣ್ಣ.

ಇವನು ಯಾವ ತುಪ್ಪಟ. ಈ ವಿಷ್ಯಕ್ಕೆ ಬರೋಕೆ. ಲೇ ಸುಮಾನಿ ನಿನ್ನ ಚರ್ಮ ಸುಲ್ಸಿ ತಮಟೆ ಮಾಡಿಸ್ತೀನಿ.

ಸುಮಾನಿ : ಆಡು, ಕುರಿ, ಅಲ್ಲ ಚರ್ಮ ಸುಲಿಯಾಕೆ.

ಒಬ್ಬ : ಎಲಾ ಹೊಲೀನನ್ನ ಮಗ್ನೆ ಸದ್ರ ಕೊಟ್ರೆ ಬೊಡ್ರೆ ಕೈಹಾಕೋಕೆ ಬಂದೆ ನೀನು....

ಸುಮಾನಿ ಈ ಮಾತು ಬಂದ ಕಡೆ ತಿರುಗಿ ಅವನ್ಯಾವನಯ್ಯ ಹೊಲೆಯ ಪಲೆಯ ಅನ್ನೋನು. ಉಷಾರ್. ಹೊಲೆಯ ಅಂದ್ರೆ ಕೋರ್ಟಿಗೆಳ್ದು ಮೂರು ವರ್ಷ ಸಜ ಮಾಡಿಸ್ ಬುಟ್ಟೇನು. ನಾಲ್ಕಾರು ಧ್ವನಿಗಳು ಒಮ್ಮೆಯೇ ತದಕ್ಲ ಸೂಳೇ ಮಗನ್ನ.. ಕೋರ್ಟು ಕಂಡಿರೋನು ಈ ಸೂಳೇಮಗ ಒಬ್ನೆ. ಇಡ್ದು ಅಳ್ಳಿಮರಕ್ಕೆ ನ್ಯಾಣಾಕ್ತೀವಿ. ಜೈಲು ಇವರಪ್ಪಂದು...

ಇನ್ನೂ ನಾಲ್ಕಾರು ಧ್ವನಿಗಳು ಜಡೀ ಇವರವ್ವನ ಮಿಂಡ. ಎಲ್ಲಿಗೆ ಬಂದ. ಪಟೇಲರು ಉರಿಯುವ ಕೊಳ್ಳಿಯಂತೆ ಮೇಲಕ್ಕೆ ಚಿಮ್ಮಿನಿಂತು ಹೇಳಿದರು."[೩೯]

ಪೂರ್ಣಚಂದ್ರ ತೇಜಸ್ವಿಯವರು ಅಬಚೂರಿನ ಪೋಸ್ಟಾಫೀಸು ೧೯೭೧ ಕಥಾ ಸಂಗ್ರಹಕ್ಕೆ ಬರೆದ 'ಹೊಸ ದಿಗಂತದ ಕಡೆಗೆ' ಎನ್ನುವ ಲೇಖನದಲ್ಲಿ ಅವರು ನವ್ಯತೆಯನ್ನು ಸೈದ್ಧಾಂತಿಕವಾಗಿ ತಿರಸ್ಕರಿಸಿದರು. ಈ ನಿರಾಕರಣೆಗೆ ಅವರು ಕೊಡುವ ಕಾರಣಗಳು ಹೀಗಿವೆ.

೧. "ಸಾಂಕೇತಿಕ ಮಾರ್ಗದ ನವ್ಯ ಸಾಹಿತ್ಯ ಸಂಪ್ರದಾಯ ನಿಗೂಢ. ಅಪರಿಚಿತ ಮತ್ತು ಅವ್ಯಕ್ತ ಭಾರತದ ಎದುರು ಅಸಂಭದ್ಧವಾಗುತ್ತದೆ.

೨. ಲೋಹಿಯಾರವರ ತತ್ವ ಚಿಂತನೆ ಮತ್ತು ಹಳ್ಳಿಯ ಜೀವನದ ಬದಲಾದ ಪರಿಸ್ಥಿತಿ ಹೊಸ ಶ್ರದ್ಧೆಗೆ ಕಾರಣವಾಗಬಲ್ಲವು.

"ನನ್ನ ಜೀವನ ಮತ್ತು ಅದರ ಅಂಗವಾದ ಸಾಹಿತ್ಯ ಸೃಷ್ಟಿ ಇವು ನಮ್ಮ ಭಾರತೀಯ ಸಂದರ್ಭದ ನಮ್ಮ ವ್ಯಕ್ತಿತ್ವದ ಅಸಂಭದ್ಧತೆಯ ಬಗ್ಗೆ ಹೋರಾಡುವ ಮತ್ತು ಹೊಸ ಪರಿಪೂರ್ಣ ನಾಗರೀಕತೆಯೊಂದನ್ನು ನಿರ್ಮಿಸುವ ಹೋರಾಟವೆಂದರೆ ಮಾತ್ರ ನಾವು ನವ್ಯರಿಂದ ಭಿನ್ನವೆಂದು ಭಾವಿಸಬೇಕು.

೩. ಸರಳವಾಗಿ ನೇರವಾಗಿ ನೋಡುವ ಕೇವಲ ದೃಷ್ಟಿಕೋನ ಮಾತ್ರವಾಗಿ ಎಂದರೆ ಕೇವಲ 'ವೀಕ್ಷಕ'ನಾಗಿ ಸಾಹಿತಿ ಹೊಸದೊಂದು ಶಿಸ್ತನ್ನು ಬರವಣಿಗೆಯಲ್ಲಿ ತಂದುಕೊಳ್ಳುವ, ಅವಶ್ಯಕತೆ, ಇದು ನವ್ಯದ ಆತ್ಮನಿಷ್ಠ ಬರವಣಿಗೆಗೆ ವಿರುದ್ಧವಾದುದು.

೪. ನವ್ಯ ಸಾಹಿತ್ಯ ಬದಲಾಗುತ್ತಿರುವ ಪರಿಸರದ ಹೊಸ ಜವಾಬ್ದಾರಿಗಳನ್ನು ಹೊರಲಾರದು. ಇದಕ್ಕೆ ಕಾರಣಗಳೆಂದರೆ, ಯಾಂತ್ರಿಕವಾಗಿರುವ ಅದರ ಸಾಂಕೇತಿಕ ಶೈಲಿ ತಂತ್ರಗಳು ಕೇವಲ ಉಪಾಧ್ಯಾಯರೇ ಹೆಚ್ಚಾಗಿರುವ ಹಾಗೂ ಬ್ರಾಹ್ಮಣರೇ ಮುಂಚೂಣಿಯಲ್ಲಿರುವ ಅದರ ಸಾಹಿತಿ ವರ್ಗ ಮತ್ತು ಕೇವಲ ಸಾಹಿತ್ಯದ ಮಟ್ಟಿಗೇ ಸೀಮಿತಗೊಂಡ ಅದರ ಕ್ರಾಂತಿಕಾರತನ.

ಈ ವಿಶ್ಲೇಷಣೆಯ ಮೂಲಕ ತೇಜಸ್ವಿಯವರು, "ರಾಜಕೀಯವಾಗಿ, ಸಾಮಾಜಿಕವಾಗಿ, ತಾತ್ವಿಕವಾಗಿ ಸಮಗ್ರ ಬದಲಾವಣೆಯಾಗುವುದರಿಂದ ಮಾತ್ರವೇ ನಿಜವಾದ ಹೊಸ ಸಾಹಿತ್ಯ ಹೊರಬರುತ್ತದೆ.

ಅಬಚೂರಿನ ಪೋಸ್ಟಾಫೀಸು ಸಂಗ್ರಹದ ಕತೆಗಳು ಬಂದು ಎದ್ದು ಕಾಣುವ ವೈಶಿಷ್ಟ್ಯವೆಂದರೆ ಅವುಗಳ ಗ್ರಾಮೀಣ ಪರಿಸರ ಹಾಗೂ ತೀರ ಸಾಮಾನ್ಯರೆಂದು ಕಂಡುಬರುವ ಪಾತ್ರಗಳು.

'ಕುಬಿ ಮತ್ತು ಇಯಾಲ' ಕತೆಯಲ್ಲಿ ಸಮಾಜದ ಶಿಕ್ಷಿತ ವರ್ಗಗಳಿಗೂ ಸಾಮಾನ್ಯ ಜನತೆಗೂ ಇರುವ ವ್ಯಂಗ್ಯ ಸಂಬಂಧಗಳನ್ನು ಇನ್ನೂ ಹೆಚ್ಚು ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ. ವೈದ್ಯಕೀಯ ವೃತ್ತಿಯಲ್ಲಿ ತರಬೇತಿ ಪಡೆದ ಕುಬಿಗೆ ವೈಜ್ಞಾನಿಕ ಧೋರಣೆಗಳು ಸಹಜವಾಗಿಯೇ ಬಂದಿವೆ. ತಾನು ದುಡಿಯಬೇಕಾಗಿ ಬಂದ ಗ್ರಾಮದಲ್ಲಿ ಈ ಧೋರಣೆಗಳನ್ನು ಕಾರ್ಯ ರೂಪಕ್ಕೆ ಇಳಿಸಲು ಆತ ಹವಣಿಸುತ್ತಾನೆ. ಆದರೆ ಸ್ವಾರ್ಥ ಹಾಗೂ ಮೂಢನಂಬಿಕೆ ತುಂಬಿದ ಅಲ್ಲಿನ ಜನರ ಮೇಲೆ ಅವನ ಕೃತಿಗಳ ಪರಿಣಾಮ ಅವನು ಯೋಚಿಸಿದ ದಿಕ್ಕಿನ ವಿರುದ್ಧವಾಗಿಯೇ ನಡೆಯುತ್ತದೆ. ಕುಬಿ ತನ್ನ ನಂಬುಗೆಗಳನ್ನು ಕಳೆದುಕೊಳ್ಳುವುದಿಲ್ಲ.

ಆದರೆ ಇವುಗಳಿಂದಾಗಿ ಹೆಜ್ಜೆ ಹೆಜ್ಜೆಗೂ ಅವನು ಸಮಸ್ಯೆಗಳಲ್ಲಿ ಸಿಕ್ಕಿಹಾಕಿಕೊಳ್ಳುತ್ತಾನೆ. ತನ್ನ ಸುತ್ತಮುತ್ತಲಿನ ಸಮಾಜದೊಡನೆ ಆತ ಯಾವ ಕ್ರಿಯಾಶೀಲ ಸಂಬಂಧವನ್ನು ಬೆಳೆಸಲೂ ಶಕ್ತನಾಗುವುದಿಲ್ಲ.

ಅವನ ಕೈಗುಣದಲ್ಲಿ ಹಳ್ಳಿಗರಿಗೆ ವಿಶ್ವಾಸವಿದೆಯೇ ಹೊರತು ಅವನ ಚಿಕಿತ್ಸೆಯಲ್ಲಿಲ್ಲ. ದೊಡ್ಡ ಬಂಡೆಯೊಂದು ಹಲವಾರು ರಸ್ತೆ ಅಪಘಾತಗಳಿಗೆ ಕಾರಣವಾಗಿರುತ್ತದೆ. ಆದರೆ ಅದರಲ್ಲಿ ಭೂತಗಳಿವೆಯೆಂಬ ನಂಬುಗೆ ಹಳ್ಳಿಗರಲ್ಲಿರುವುದರಿಂದ ಅದನ್ನು ನಾಶಮಾಡುವ ಹಾಗಿಲ್ಲ. ತನ್ನ ಲೈಂಗಿಕ ರೋಗಕ್ಕೆ ಪರಿಹಾರವೆಂದು ಕೂಲಿಯವನೊಬ್ಬ ಅಮಾಯಕ ಹುಡುಗಿಯೊಬ್ಬಳ ಮೇಲೆ ಬಲಾತ್ಕಾರ ನಡೆಸಿ ಅವಳನ್ನು ಸಾಯಿಸುತ್ತಾನೆ.

ಮೂಢನಂಬಿಕೆಗಳಂತೆ ಜಾತಿಯ ರಾಜಕಾರಣವೂ ಹಳ್ಳಿಯಲ್ಲಿ ತಾಂಡವವಾಡುತ್ತಿದೆ. ಇಯಾಲಳು ದೇಹದ ಮರಣೋತ್ತರ ಪರೀಕ್ಷೆಯಿಂದ ಚುನಾವಣೆಯಲ್ಲಿ ತನ್ನ ಪಕ್ಷ ಗೆಲ್ಲುವ ಅವಕಾಶಗಳು ತಪ್ಪಬಹುದೆಂಬ ಭೀತಿಯಿಂದ ರಾಮನಗೌಡ ಅದಕ್ಕೆ ಅಡ್ಡ ಬರುತ್ತಾನೆ. ತಮ್ಮ ಕಾರ್ಯ ಶೂನ್ಯತೆಯನ್ನು ಮುಚ್ಚಿಹಾಕಲು ಪೊಲೀಸರು ನಿರಪರಾಧಿಗಳನ್ನು ಹಿಂಸಿಸುತ್ತಾರೆ. ಕುಬಿ ಮತ್ತು ಇಯಾಲ ಸಣ್ಣಕತೆಯ ಚೌಕಟ್ಟಿನಲ್ಲಿಯೇ ಕಾದಂಬರಿಯ ಹರವನ್ನು ಸಾಧಿಸುತ್ತದೆ."[೪೦]

ಈ ಕತೆಯ ರಾಜಕಾರಣದ ಸಂದರ್ಭವನ್ನು ಕೆಳಕಂಡಂತೆ ಈ ಕತೆಯ ವಿವರಣೆಯನ್ನು ಗುರುತಿಸಿದ್ದೇನೆ.

"ಕುಬಿ ರಾಮಣ್ಣಗೌಡನ ಮನೆಗೆ ಬಂದಾಗ ಆಗ ತಾನೆ ಸ್ನಾನ ಮಾಡಿಕೊಂಡು ರಾಮಣ್ಣಗೌಡ ಹೊರ ಬಂದಿದ್ದ. ಅವನ ಮುಖದ ಮೇಲೆ ಯಾವುದೇ ರೋಗದ ಚಿನ್ಹೆಯ ಲವಶೇಷವೂ ಇರಲಿಲ್ಲ. ಕುಬಿಗೆ ಆಶ್ಚರ್ಯವಾಯ್ತು.

"ಡಾಕ್ಟರೇ, ನಿಮ್ಮಿಂದ ಒಂದು ಉಪಕಾರ ಆಗಬೇಕಿತ್ತು. ಅದಕ್ಕೆ ಕರೆಸಿ ತೊಂದರೆ ಕೊಟ್ಟೆ. ನಾನೇ ಬರುತ್ತಿದ್ದೆ. ಆದರೆ ನಾವು ಈಗ ಏನು ಮಾಡಿದರೂ ಸಹ ಅದಕ್ಕೆಲ್ಲಾ ಒಂದೊಂದು ಅರ್ಥ ಕಟ್ಟುತ್ತಾರೆ. ಅದಕ್ಕೆ ನಿಮ್ಮನ್ನು ಬರಲು ಹೇಳಿ ಕಳುಹಿಸಿದ್ದು" ಎಂದ

"ಏನಾಗಬೇಕು?" ನೇರವಾಗಿ ಕುಬಿ ಪ್ರಶ್ನೆ ಕೇಳಿದ. ರಾಮಣ್ಣಗೌಡ ಮಾತನಾಡುವ ರೀತಿಯಲ್ಲೇ ಇದಕ್ಕೂ ಇಯಾಲಳ ಕೊಲೆಗೂ ಏನೋ ಸಂಬಂಧವಿರಬೇಕೆಂದು ಅನುಮಾನ ಬಂದಿತ್ತು. ಏನು ಗೂಢವಾದುದ್ದಾದರೂ ಅದಕ್ಕೂ ಇಯಾಲಳಿಗೂ ಏನೋ ಸಂಬಂಧ ವೇರ್ಪಡುತ್ತಿದ್ದಿತು.

"ನೋಡಿ, ಸೂಳೆಮಕ್ಕಳು ನಮ್ಮ ಎದುರು ಪಾರ್ಟಿಯವರು ನನಗೂ ಬಾಯಮ್ಮನ ಮಗಳಿಗೂ ಏನೋ ಸಂಬಂಧ ಇತ್ತೆಂದೂ ಅದು ಹೊರಬರಬಾರದು ಅಂತ ನಾನು ಖೂನಿ ಮಾಡಿಸಿದೆ ಅಂತಲೂ ಓಟ್ರಿನ್ ಹತ್ತಿರ ಕಂಪ್ಲೆಂಟು ಕೊಡಿಸಲು ಓಡಾಡುತ್ತಿದ್ದಾರೆ. ಆ ಹಸುಗೂಸಿನ ಹತ್ತಿರ ಚಕ್ಕಂದ ಆಡೋದಕ್ಕೆ ನಾನೂ ಮನುಷ್ಯ ಅಲ್ಲವೇ? ಹುಡುಗಿ ದೊಡ್ಡವಳಾಗಿರಲಿ ಬಿಡಲಿ, ನೀವು ಅವಳಿನ್ನೂ ದೊಡ್ಡೋಳೆ ಆಗಿರಲಿಲ್ಲ ಅಂತ ರಿಪೋರ್ಟು ಮಾಡಿಬಿಡಿ. ಮಿಕ್ಕಿದ್ದನ್ನು ನಾನು ನೋಡ್ಕೊತೇನೆ. ಈವತ್ತು ನಮ್ಮ ಎಂ.ಎಲ್.ಎ. ಕರಕೊಂಡು ಐಜಿಪಿ ಹತ್ತಿರ ಹೋಗಲಿಕ್ಕೆ ನೋಡ್ತೇನೆ" ಎಂದು ಒಂದೇ ಉಸುರಿಗೆ ಹೇಳಿದ.

ಕುಬಿಗೆ ವಿಪರೀತ ಬೇಸರ ಬಂದಿತ್ತು. ಈ ಹೊಲಸು ರಾಜಕಾರಣದ ದೆಸೆಯಿಂದ ಕೊಲೆಪಾತಕಿಯೂ ಸಿಗದೆ ಎಲ್ಲರೂ ದಿಕ್ಕುತಪ್ಪುತ್ತಿದ್ದಾರೆಂದರು.

"ರಾಮಣ್ಣಗೌಡರೇ, ನೀವು ಇಯಾಲಳನ್ನು ಖೂನಿ ಮಾಡಿದೀರಾ? ಎಂದು ಒಂದು ಪ್ರಶ್ನೆ ಕೇಳಿದ.

ಇದೇನು ಡಾಕ್ಟರೆ ಹೀಗೆ ಕೇಳ್ತೀರಿ. ನಿಮಗೂ ಹಾಗಾದರೆ ನನ್ನ ಮೇಲೆ ಗುಮಾನಿ ಇದೆಯೇ? ಆ ಲಿಂಗಾಯತರ ಮಾತಿಗೆ ನೀವು ಸಿಕ್ಕಿಬಿದ್ದಂತೆ ತೋರುತ್ತದೆ. ಮುಖ್ಯ ನಮಗೆ ಒಳ್ಳೆ ಕಾಲ ಇದಲ್ಲ'' ಎಂದ ರಾಮಣ್ಣಗೌಡ.

ನಾನು ಕೇಳಿದ್ದಕ್ಕೆ ಉತ್ತರಿಸಿ. ನೀವು ಆಕೆಯನ್ನು ಖೂನಿ ಮಾಡಿಸಿದಿರೋ ಗಂಭೀರವಾಗಿ ಕೇಳಿದ ಕುಬಿ. ಅವನ ಮಾತಿನ ನಿಷ್ಠುರತೆಗೆ ಅವಾಕ್ಕಾದ ರಾಮಣ್ಣ ಗೌಡ.

''ಛೇ ನನಗೂ ಇದಕ್ಕೂ ಸಂಬಂಧವಿಲ್ಲಪ್ಪಾ. ನೀವೂ ಗುಮಾನಿ ಇಟ್ಟರೆ ನಾನೇನು ಮಾಡಲಿ ಹೇಳಿರಿ!'' ಎಂದು ರಾಮಣ್ಣಗೌಡ ಚಿಂತಾಕ್ರಾಂತನಾದ.

''ನಿಮಗೂ ಅದಕ್ಕೂ ಸಂಬಂಧವಿಲ್ಲಾ ತಾನೆ! ಹಾಗಾದರೆ ಸುಮ್ಮನಿರಿ ತಣ್ಣಗೆ. ನೀವಲ್ಲದ ಮೇಲೆ ಮುಗಿಯಿತು. ನೀವ್ಯಾಕೆ ಪರದಾಟ ಮಾಡುತ್ತೀರಿ. ಸುಳ್ಳು ಹೇಳಿ ಕೇಸ್ ಮಾಡುವುದು ಬಹಳ ಸುಲಭವೇನಲ್ಲ'' ಎಂದ ಕುಬಿ.

''ಅಯ್ಯಾ ಡಾಕ್ಟರೆ. ನಿಮಗೆ ಗೊತ್ತಿಲ್ಲ ಇವರ ಮರ್ಮ. ನಾನು ಮುಂದಿನ ತಾಲ್ಲೂಕು ಬೋರ್ಡು ಚುನಾವಣೆಗೆ ನಿಲ್ಲಬೇಕಂತ ಮಾಡಿದ್ದೀನಿ. ಸುಮ್ಮನೆ ನನ್ನ ಹೆಸರಿಗೆ ಮಸಿ ಬಳಿಯಲು ಇವರ ಉಪಾಯ. ಮತ್ತೆ ನನ್ನ ಮೇಲೆ ಕೇಸ್ ಮಾಡಿ ನನಗೆ ಕೋಳ ಹಾಕಿಸಲು ಇವರ ಅಜ್ಜಂದಿರು ಬಂದರೂ ಆಗೋದಿಲ್ಲ! ಇಂಥ ಖೂನಿ ಎಷ್ಟೋ ಮಾಡಿಸಿಯೇ ನಿಭಾಯಿಸಿಯೇನು ಇವೆಲ್ಲಾ ನಮಗೆ ಈಡಲ್ಲ. ಮುಖ್ಯ ಇದು ರಾಜಕೀಯದ ವಿಷಯ. ಕುಬಿಗೆ ಬಹಳ ಬೇಜಾರಾಯ್ತು ''ಬರ್ತೀನಿ ಗೌಡರೆ. ನಾನು ರಾಜಕೀಯದವ ಅಲ್ಲ. ಆಸ್ಪತ್ರೆಯಲ್ಲಿ ತುಂಬಾ ಕೇಸುಗಳಿದ್ದಾವೆ. ಅಟೆಂಡ್ ಮಾಡಬೇಕು ಎಂದು ಹೇಳುತ್ತಾ ಸ್ಟೆತಾಸ್ಕೋಪು ಚರ್ಮದ ಚೀಲ ಕೈಗೆತ್ತಿಕೊಂಡ.

ತುಂಬಾ ತೊಂದರೆ ಕೊಟ್ಟೆ ಡಾಕ್ಟರೆ. ನೋಡಿ ಈ ಲಿಂಗಾಯಿತರಿಗೆ ನಮ್ಮ ಮೇಲೆ ಹೊಟ್ಟೆ ಉರಿ. ಊಳಿಗಕ್ಕಿದ್ದವರು ಇವರು. ಈಗ ತಲೆ ಎತ್ತಿಕೊಂಡು ತಿರುಗಾಡುತ್ತಿದ್ದಾರೆ ಅಂತ. ನಿಮಗೆ ಇವೆಲ್ಲಾ ಗೊತ್ತಾಗೊಲ್ಲ ಮುಖ್ಯ ನೀವು ರಾಜಕೀಯದ ಮನುಷ್ಯರಲ್ಲಿ ನೋಡಿರಿ'' ಎಂದು ರಾಮಣ್ಣಗೌಡ ಹೇಳಿದ. ಕುಬಿಯನ್ನೂ ತನ್ನ ಅಂತರಂಗಕ್ಕೆ ತೆಗೆದುಕೊಂಡು ಸ್ಥಳೀಯ ರಾಜಕಾರಣದ ವಿಷವರ್ತುಲಕ್ಕೆ ಎಳೆಯುವ ಅವನ ಹಂಚಿಕೆ ಸಫಲವಾಗಲಿಲ್ಲ.

ಕೂಬಿ ಇಳಿದು ಬರುತ್ತಾ ''ಗೌಡರೆ ಅವರು ಗುಮಾನಿ ಹುಟ್ಟಿಸಲೆತ್ನಿಸುತ್ತಿದ್ದಾರೆ ಅಂತ ನೀವು ಓಡಾಟ ಪರದಾಟ ಮಾಡಿದರೆ ಅದರಿಂದಲೂ ಗುಮಾನಿ ಬರುತ್ತದಲ್ಲವೆ. ಕೊಂಚ ಯೋಚಿಸಿ ನೋಡಿರಿ ಎಂದು ಹೇಳಿ ಚಕಚಕ ಇಳಿದು ನಡೆದ.''[೪೧]

ಹೀಗೆ ನಮ್ಮ ಗ್ರಾಮಗಳಲ್ಲಿ ಹೆಚ್ಚು ರಾಜಕಾರಣದ ಪ್ರಭಾವವಾಗಿರುವುದನ್ನು ಕಾಣಬಹುದು. ಸ್ವಾತಂತ್ರ್ಯಪೂರ್ವದಲ್ಲಿದ್ದ ರಾಜಕೀಯಕ್ಕೂ ಮತ್ತು ಸ್ವಾತಂತ್ರ್ಯಾನಂತರದ ರಾಜಕೀಯಕ್ಕೂ ಅನೇಕ ರೀತಿಯಾದ ಬದಲಾವಣೆಗಳನ್ನು ಕಾಣಬಹುದಾಗಿದೆ.

## ಅಡಿ ಟಿಪ್ಪಣಿಗಳು

೧. ಕೆ.ಭೈರಪ್ಪ, ಸಮಗ್ರ ಗ್ರಾಮೀಣ ಸಮಾಜ, ೨೦೦೨, ಪುಟ ೧೯೬

೨. ರಹಮತ್ ತರೀಕೆರೆ, ಪ್ರತಿಸಂಸ್ಕೃತಿ, ೧೯೯೩, ಪುಟ ೪೭

೩. ಎನ್.ಕೆ.ಕೋದಂಡ ರಾಮ, ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ, ೧೯೯೭, ಪುಟ ೩೪೮

೪. ಕರೀಗೌಡ ಬೀಚನಹಳ್ಳಿ, ತೇಜಸ್ವಿ ಕಥೆಗಳ ಕುರಿತು, ೧೯೯೮, ಪುಟ ೧೩

೫. ಎಲ್.ಎಸ್.ಶೇಷಗಿರಿರಾವ್, ಹೊಸಗನ್ನಡ ಸಾಹಿತ್ಯ ಚರಿತ್ರೆ, ೧೯೯೯, ಪುಟ ೨೫

೬. ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೬೨-೧೯೮೫, ಪುಟ ೨೪

೭. ರಹಮತ್ ತರೀಕೆರೆ, ಪ್ರತಿಸಂಸ್ಕೃತಿ, ೧೯೯೩, ಪುಟ ೪೭

೮. ಎನ್.ಕೆ.ಕೋದಂಡರಾಮ, ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ, ೧೯೯೭, ಪುಟ ೩೪೮

೯. ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೬೨-೧೯೮೫, ಪುಟ ೧೦೬

೧೦. ಅದೇ, ಪುಟ ೨೮೨, ೨೮೩

೧೧. ಕರೀಗೌಡ ಬೀಚನಹಳ್ಳಿ, ಹೊತ್ತಿನ ಕಣ್ಣಿನ ಮಿಂಚು, ೧೯೯೬, ಪುಟ ೨೫೦, ೨೫೧

೧೨. ಅದೇ, ಪುಟ ೨೭೫

೧೩. ಅದೇ, ಪುಟ ೨೦೫

೧೪. ಅದೇ, ಪುಟ ೩೩೮, ೩೩೯

೧೫. ಎನ್.ಕೆ.ಕೋದಂಡರಾಮ, ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ, ೧೯೯೭, ಪುಟ ೩೪೮

೧೬. ಅದೇ, ಪುಟ ೧೨, ೧೩

೧೭. ಅದೇ, ಪುಟ ೧೪, ೧೫, ೧೬

೧೮. ಅದೇ, ಪುಟ ೧೭, ೧೮

೧೯. ಕುಸುಮ, ಪ್ರಕೃತಿ, ೧೯೯೯, ಪುಟ ೧೭, ೧೮

೨೦. ದೇವನೂರು ಮಹಾದೇವ, ದೇವನೂರು ಮಹಾದೇವ ಅವರ ಕೃತಿಗಳು, ೧೯೯೭, ಪುಟ ೩೦

೨೧. ಕರೀಗೌಡ ಬೀಚನಹಳ್ಳಿ, ವ್ಯಷ್ಟಿ ಮತ್ತು ಸಮಷ್ಟಿ, ೧೯೯೧, ಪುಟ ೨೩೬, ೨೩೭, ೨೩೮

೨೨. ಕರೀಗೌಡ ಬೀಚನ ಹಳ್ಳಿ, ಹೊತ್ತಿನ ಕಣ್ಣಿನ ಮಿಂಚು, ೧೯೯೬, ಪುಟ ೨೬೪,

೨೩. ಕುಸುಮ, ಪ್ರಕೃತಿ, ೧೯೯೯, ಪುಟ ೧೪೨

೨೪. ಎಚ್.ಎಂ.ಮಹೇಶ್ವರಯ್ಯ, ಪೂರ್ಣಚಂದ್ರ ತೇಜಸ್ವಿ, ೨೦೦೨, ಪುಟ ೨೮

೨೫. ಕೆ.ಪಿ.ಪೂರ್ಣಚಂದ್ರ ತೇಜಸ್ವಿ, ಅಬಚೂರಿನ ಪೋಸ್ಟಾಫೀಸು, ೧೯೯೯, ಪುಟ ೪೦, ೪೧

೨೬. ಕರೀಗೌಡ ಬೀಚನಹಳ್ಳಿ, ವ್ಯಷ್ಟಿ ಮತ್ತು ಸಮಷ್ಟಿ, ೧೯೯೧, ಪುಟ ೨೬೨

೨೭. ಸಿ.ವೆಂಕಟೇಶ್, ಲಂಕೇಶರ ಕಥನ ಸಾಹಿತ್ಯದಲ್ಲಿ ಗ್ರಾಮ ಸಮಾಜ, ೧೯೯೮, ಪುಟ ೩, ೪

೨೮. ಪಿ.ಲಂಕೇಶ್, ಸಾಹಿತ್ಯ ಸಂವಾದ ೫೪, ೫೫, ೨೦೦೦, ಪುಟ ೧೧೬

೨೯. ಪಿ.ಲಂಕೇಶ್, ಸಮಗ್ರ ಕಥೆಗಳು, ೧೯೯೨, ಪುಟ ೧, ೨

೩೦. ಕೆ.ಪಿ.ಪೂರ್ಣಚಂದ್ರ ತೇಜಸ್ವಿ, ಅಬಚೂರಿನ ಪೋಸ್ಟಾಫೀಸು, ೧೯೯೯, ಪುಟ ೧, ೨

೩೧. ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೬೨, ೧೯೮೫, ಪುಟ ೨೭, ೨೮

೩೨. ಕೆ.ಪಿ.ಪೂರ್ಣಚಂದ್ರ ತೇಜಸ್ವಿ, ಅಬಚೂರಿನ ಪೋಸ್ಟಾಫೀಸು, ೧೯೯೯, ಪುಟ ೮೭, ೮೮

೩೩. ಸಿ.ವೆಂಕಟೇಶ್, ಲಂಕೇಶರ ಕಥನ ಸಾಹಿತ್ಯದಲ್ಲಿ ಗ್ರಾಮ ಸಮಾಜ, ೧೯೯೮, ಪುಟ ೭, ೮

೩೪. ಮೊಗಳ್ಳಿ ಗಣೇಶ್, ದಲಿತರು ಮತ್ತು ಜಾಗತೀಕರಣ, ೧೯೯೯, ಪುಟ ೨೯

೩೫. ಬೆಸಗರಹಳ್ಳಿ ರಾಮಣ್ಣ, ಕನ್ನಬಾಂಡಿ, ೧೯೬೨-೧೯೮೫, ಪುಟ ೨೪, ೨೫

೩೬. ಜಿ.ಎಸ್.ಶಿವರುದ್ರಪ್ಪ, (ಸಂ) ಸಾಹಿತ್ಯ ವಾರ್ಷಿಕ-೭೨, ೧೯೭೪, ಪುಟ ೧೦೬

೩೭. ಕರೀಗೌಡ ಬೀಚನಹಳ್ಳಿ ವ್ಯಷ್ಟಿ ಮತ್ತು ಸಮಷ್ಟಿ, ೧೯೯೧, ಪುಟ ೧೯೩

೩೮. ಬೆಸಗರಹಳ್ಳಿ ರಾಮಣ್ಣ, ಕನ್ನಬಾಂಡಿ, ೧೯೬೨-೧೯೮೫, ಪುಟ ೨೨

೩೯. ಅದೇ, ಪುಟ ೧೮೧

೪೦. ಜಿ.ಎಸ್.ಆಮೂರ, ಕನ್ನಡ ಕಥನ ಸಾಹಿತ್ಯ, ಸಣ್ಣಕತೆ, ೨೦೦೩, ಪುಟ ೨೮೫

೪೧. ಕೆ.ಪಿ.ಪೂರ್ಣಚಂದ್ರ ತೇಜಸ್ವಿ, ಅಬಚೂರಿನ ಪೋಸ್ಟಾಫೀಸು, ೧೯೯೯, ಪುಟ ೫೭, ೫೮

# ಅಧ್ಯಾಯ ೪

# ಸಾಂಸ್ಕೃತಿಕ ವ್ಯವಸ್ಥೆಯ ಸ್ವರೂಪ

## ಅಧ್ಯಾಯ ೪

# ಸಾಂಸ್ಕೃತಿಕ ವ್ಯವಸ್ಥೆಯ ಸ್ವರೂಪ

ಸ್ವಾತಂತ್ರ್ಯಪೂರ್ವದಲ್ಲಿ ಗ್ರಾಮೀಣ ಜನತೆ ತಮಗೆ ಅರಿವಿಲ್ಲದಂತೆಯೇ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಅವರದೇ ಆದ ಒಂದು ವ್ಯವಸ್ಥೆಯ ಮೂಲಕ ಒಂದು ಸ್ವರೂಪಕ್ಕೆ ತಂದುಕೊಂಡಿರುವುದನ್ನು ಅನೇಕ ಕತೆಗಾರರ ಕತೆಗಳ ಮೂಲಕವಾಗಿ ವ್ಯಕ್ತವಾಗಿರುವುದು ಕಂಡುಬರುತ್ತದೆ. ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಗ್ರಾಮೀಣ ಜನತೆಯಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಅರಿತು ಅನೇಕ ಬದಲಾವಣೆಗಳನ್ನು ಕಂಡುಕೊಂಡು ತಕ್ಕ ವ್ಯವಸ್ಥೆಯನ್ನು ಮಾರ್ಪಾಡು ಮಾಡುವ ಮೂಲಕ ಆತ್ಯಾಕರ್ಷಕ ಸ್ವರೂಪವನ್ನು ನೀಡಿರುವುದು ಸ್ವಾತಂತ್ರ್ಯಾನಂತರದ ಕತೆಗಾರರಲ್ಲಿ ವ್ಯಕ್ತವಾಗಿರುವುದನ್ನು ನಾವು ನೋಡಬಹುದು. ಸ್ವಾತಂತ್ರ್ಯಪೂರ್ವದಲ್ಲಿ ಗ್ರಾಮೀಣ ಜನತೆ ತಮ್ಮ ದೈನಂದಿನ ಕೆಲಸ ಕಾರ್ಯಗಳಲ್ಲಿ ಲೀನವಾಗುತ್ತಿದ್ದರು. ಕಾರ್ಯಕ್ರಮಗಳು ತಮ್ಮ ವಾರದ ಅಂತ್ಯದಲ್ಲಿ ಒಂದು ನಿಗಧಿಯಾದ ದಿನದಂದು ಹಲವು ಆಚರಣೆಗಳ ಮೂಲಕ ಸಾಂಸ್ಕೃತಿಕ ರೂಪದಲ್ಲಿ ಉಳಿದುಕೊಂಡಿರುವುದನ್ನು ಕಾಣಬಹುದಾಗಿದೆ.

ಹಬ್ಬಹರಿದಿನಗಳ ಆಚರಣೆ ಮಾಡುವ ಸಂದರ್ಭಗಳಲ್ಲಿ ಸಾಂಸ್ಕೃತಿಕ ವ್ಯವಸ್ಥೆಯ ಸ್ವರೂಪವನ್ನು ಕಾಣಬಹುದು. ಉದಾ ಗ್ರಾಮೀಣ ಜನತೆಯಲ್ಲಿ ಶೇಕಡ ೯೦ರಷ್ಟು ವ್ಯವಸಾಯವನ್ನು ಮುಖ್ಯ ಕಸುಬನ್ನಾಗಿ ಅಳವಡಿಸಿಕೊಂಡಿರುತ್ತಾರೆ. ತಮ್ಮ ಹೊಲಗಳಲ್ಲಿ ಕೊಯ್ಲಾದ ನಂತರ ದವಸ ಧಾನ್ಯಗಳನ್ನು ಕೊಯ್ದು ಹಸನು ಮಾಡಿ ಮನೆಗೆ ತುಂಬಿಕೊಳ್ಳುವ ಸಂಭ್ರಮದಲ್ಲಿ ಸಾಂಸ್ಕೃತಿಕ ಆಚರಣೆಗಳನ್ನು ಕಾಣಬಹುದು. ಇದಾದ ನಂತರ ಗ್ರಾಮಗಳಲ್ಲಿ ಜಾತ್ರೆಗಳ ಸಂಭ್ರಮ, ವಿರಾಮ ಕಾಲದಲ್ಲಿ ಇವರು ಮನರಂಜನೆಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಡುತ್ತಾರೆ. ಇದರಲ್ಲಿ ತಮಗೆ ಆಸಕ್ತಿಯಾದ ವಿಷಯಗಳಲ್ಲಿ ಹೆಚ್ಚು ಮನರಂಜನೆಯನ್ನು ಕಾಣುತ್ತಾರೆ. ಉದಾ ನಾಟಕ, ಬಯಲಾಟ, ಯಕ್ಷಗಾನ ಪದ ಹೇಳುವುದು, ಜಾತ್ರೆಯನ್ನು ಪ್ರಾರಂಭಿಸುವಾಗ ಅನೇಕ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಾರೆ. ಜಾತ್ರೆಗೆ ಕುಟುಂಬದ ಹಾಗೂ ಅವರ ನೆಂಟರಿಷ್ಟರನ್ನೆಲ್ಲ ತಮ್ಮ ಊರುಗಳಿಗೆ ಕರೆಸಿಕೊಳ್ಳುವುದನ್ನು ಕಾಣಬಹುದು. ಈ ಸಂದರ್ಭದಲ್ಲಿ ದೇವರನ್ನು ಭಕ್ತಿ, ಭಾವಗಳಿಂದ ಪೂಜಿಸುವರು. ಹಾಗೂ ರಥೋತ್ಸವ, ಮೆರವಣಿಗೆ, ಸೋಮನಕುಣಿತ ಮುಂತಾದ ಸೇವೆಗಳನ್ನು ಮಾಡುವುದನ್ನು ಕಾಣಬಹುದು. ಈ ಜಾತ್ರೆಯಲ್ಲಿ ಮನರಂಜನೆಯ ಜೊತೆಗೆ ಅಂಗಡಿ

ಮುಂಗಟ್ಟುಗಳು ಸಹ ಬಂದಿರುತ್ತವೆ. ಇದರಲ್ಲಿ ಜನರು ತಮಗೆ ಬೇಕಾದ ವಸ್ತುಗಳನ್ನು ಕೊಂಡುಕೊಳ್ಳುತ್ತಾರೆ. ಗ್ರಾಮಗಳಲ್ಲಿ ಜಾತ್ರೆಯ ಸಂದರ್ಭದಲ್ಲಿ ಎರಡು ಮೂರು ದಿನಗಳ ಮನರಂಜನೆಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಡುತ್ತಾರೆ. ಜಾತ್ರೆಯಲ್ಲಿ ಊರಿನ ಪ್ರಮುಖ ವ್ಯಕ್ತಿಗಳಾದ ಗೌಡರು ಮತ್ತು ಶಾನುಭೋಗರು ಸೇರಿ ಜಾತ್ರೆ ಮಾಡುವ ವ್ಯವಸ್ಥೆಯನ್ನು ಮಾಡುತ್ತಾರೆ. ಆ ಊರಿನ ಗ್ರಾಮಸ್ಥರು ಒಟ್ಟಾಗಿ ಸೇರಿ ಅವರ ಮುಂದಾಳತ್ವದಲ್ಲಿ ಜಾತ್ರೆ ನಡೆಸಲು ಸಹಕರಿಸುವುದನ್ನು ಕಾಣಬಹುದು.

ಜಾತ್ರೆಗಳ ಸಂದರ್ಭದಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಾರೆ. ಉದಾ ಕೀಲು ಕುದುರೆ ಕುಣಿತ, ಡೊಳ್ಳು ಕುಣಿತ ಮುಂತಾದವು ಮತ್ತು ಹಾಡು ಹೇಳುವುದು, ರಂಗೋಲಿ ಬಿಡಿಸುವುದು, ಕುಸ್ತಿ ಪಂದ್ಯಗಳನ್ನು ಏರ್ಪಡಿಸುವುದು. ಕಾಸು ಕಟ್ಟಿಕೊಂಡು ಹಾಡುವುದು ಮುಂತಾದ ಮನರಂಜನಾ ಕಾರ್ಯಕ್ರಮಗಳನ್ನು ಕಾಣಬಹುದು. ನಾಟಕ ಏರ್ಪಡಿಸುವುದರಿಂದ ಜನರ ಮನರಂಜನೆಯ ಜೊತೆಗೆ ಅವರ ಕಲೆಯ ಅಭಿವ್ಯಕ್ತಿ ಮತ್ತು ಅವರಿಗೆ ತಮ್ಮ ಪ್ರತಿಭೆಯನ್ನು ಪ್ರದರ್ಶಿಸಲು ಉತ್ತಮ ಅವಕಾಶ ಒದಗಿ ಬರುತ್ತದೆ.

ಈ ಮೇಲಿನ ಅಂಶಗಳಿಂದ ನಾವು ಗ್ರಾಮೀಣ ಜನತೆಯಲ್ಲಿ ಸ್ವಾತಂತ್ರ್ಯೋತ್ತರದಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸುವ ವ್ಯವಸ್ಥೆಯ ಸ್ವರೂಪವನ್ನು ಗ್ರಾಮೀಣ ಸಂಸ್ಕೃತಿಯಲ್ಲಿ ಕಾಣಬಹುದಾಗಿದೆ.

ನಮ್ಮ "ಭಾರತದಲ್ಲಿ ಋಗ್ವೇದ ಕಾಲದಿಂದಲೂ, ಜಾನಪದ ಮೂಲವನ್ನು ಅರಸಲಾಗುತ್ತದೆ. ಪಂಚತಂತ್ರ, ಹಿತೋಪದೇಶ, ಬೇತಾಳ, ಗುಣಾಢ್ಯನ ಬೃಹತ್ಕತೆಯ ಆಧಾರದ ಮೇಲೆ ರಚಿತಗೊಂಡ, ಕ್ಷೇಮೇಂದ್ರನ ಬೃಹತ್ಕಥಾಮಂಜರಿ, ಸೋಮದೇವನ ಕಥಾ ಸರಿತ್ಸಾಗರ, ಮುಂತಾದವು ಜನಪದ ಕಥೆಗಳ ದೊಡ್ಡ ಕೋಶಗಳೆನಿಸುತ್ತವೆ. ಕನ್ನಡದಲ್ಲಿ ಪ್ರಥಮ ಗದ್ಯಗ್ರಂಥ 'ವಡ್ಡಾರಾಧನೆ'ಯೇ ಕನ್ನಡದ ಪ್ರಥಮ ಜನಪದ ಕಥಾ ಸಂಕಲನ ಎನಿಸುತ್ತದೆ. ಅಲ್ಲಿನ ಅನೇಕ ಕಥೆಗಳು ಇಂದಿಗೂ ಜನಪದ ಜೀವನದಲ್ಲಿ, ಮೌಖಿಕ ಸಂಪ್ರದಾಯದಲ್ಲಿ ಲಭ್ಯವಾಗುತ್ತದೆ. ರಾಘವಾಂಕ, ಕುಮಾರ ವ್ಯಾಸ, ಲಕ್ಷ್ಮೀಶ, ಅಪಾರ ಸಂಖ್ಯೆಯ ಸಾಂಗತ್ಯ ಕವಿಗಳು, ನೇಮಿಚಂದ್ರ ಮೊದಲಾದವರು ಜಾನಪದ ಭಂಡಾರದಿಂದ ಅಪಾರ ಸಾಮಗ್ರಿಯನ್ನು ಸ್ವೀಕರಿಸಿ ತಮ್ಮ ಕೃತಿಗಳ ಸತ್ವವನ್ನು ಹೆಚ್ಚಿಸಿಕೊಂಡಿದ್ದಾರೆ. ನೇಮಿಚಂದ್ರನ ಲೀಲಾವತಿ ಕಾವ್ಯ, ನಂಜುಂಡ ಪಾಂಚಾಲಗಂಗ, ಮೊದಲಾದವರ ಕೃತಿಗಳು ಸಂಪೂರ್ಣವಾಗಿ ಜನಪದ ಕಥೆಗಳನ್ನೋ, ಕಾವ್ಯಗಳನ್ನೋ, ಆದರಿಸಿಯೇ ರಚಿತವಾದ ಕಾವ್ಯಗಳಾಗಿವೆ."[7]

ಕಥೆಗಳನ್ನು ಹೇಳುವ ಮತ್ತು ಕೇಳುವ ಕ್ರಿಯೆಯು "ಮಾನವನ ಜೀವನದಲ್ಲಿ ತುಂಬಾ ಹಿಂದಿನಿಂದಲೂ ನಡೆದು ಬಂದಿದೆ. ಇದು ಎಲ್ಲಾ ಕಾಲಗಳು, ಸಂಗತಿ, ನಾಟಿ, ಕಳೆಕೀಳುವಿಕೆ, ಕೊಯ್ಲು, ಕಣದ ಕೆಲಸ ಮುಂತಾದ ದುಡಿಮೆಯ ಸಂದರ್ಭದಲ್ಲಿ ಹೇಳಲಾಗುವ ಕಥೆಗಳು ದಣಿವನ್ನು ಮರೆಸಿ ಮನಸ್ಸಿಗೆ ಗೆಲುವು ತರುತ್ತದೆ. ಎಮ್ಮೆ, ದನ, ಕುರಿ, ಆಡುಗಳನ್ನು ಕಾಯುವಾಗ ಕಾಡಿನಲ್ಲಿ, ಬಯಲಿನಲ್ಲಿ ಸಿಗುವ ಆರಾಮದ ವೇಳೆಯಲ್ಲಿ ಮಕ್ಕಳನ್ನು ಮಲಗಿಸುವಾಗ, ಸೆಕೆ ಉಕ್ಕುವ ಬೇಸಿಗೆಯ ರಾತ್ರಿಗಳಲ್ಲಿ ಕಥೆಗಳನ್ನು ಕೇಳುವ ಕಿವಿಗಳು ಹೆಚ್ಚಿನ ಕುತೂಹಲದಿಂದ ಕೂಡಿರುತ್ತವೆ. ಮನುಷ್ಯನು ವೈಯುಕ್ತಿಕವಾದ ಹಾಗೂ ಸಾಮಾಜಿಕವಾದ ಆವಶ್ಯಕತೆಯ ಆಧಾರದ ಮೇಲೆ ರಚಿತವಾಗಿರುವ ಕಥೆಗಳಲ್ಲಿ ಜನತೆಯ ಗತಕಾಲದ ಅನುಭವವಿದೆ.

ನಿಜ ಜೀವನದಲ್ಲಿಯ ನಿರಾಶೆಯ ವಿರುದ್ಧದ ಕನಸು ಇಲ್ಲಿ ಕಂಡುಬರುತ್ತದೆ. ಸಾವು, ನೋವು, ರೋಗಗಳ ಬಗೆಗಿನ ಭಯಂಕರವಾದ ಹೆದರಿಕೆಯು ದೆವ್ವ, ದೇವರು, ರಾಕ್ಷಸ, ಬೇತಾಳಗಳನ್ನು ಸೃಷ್ಟಿಸಿಕೊಂಡಿರುವುದು ಕಾಣುತ್ತದೆ. ಮಾನವನ ಮನಸ್ಸಿನ ಈ ತನಕದ ವಿಕಾರ, ದೌರ್ಬಲ್ಯ, ವೈಶಿಷ್ಟ್ಯಗಳನ್ನು ಗುರುತಿಸುವಲ್ಲಿ ಈ ಕಥೆಗಳು ನಮಗೆ ಹೆಚ್ಚು ನೆರವಾಗುತ್ತವೆ. ಸಮಾಜದ ನಂಬಿಕೆಗೆ ವಿರುದ್ಧವಾದ ಕಥೆಗಳನ್ನು ಕಾಣಲಾಗುವುದಿಲ್ಲ.

ಇಂಡಿಯಾದಲ್ಲಿದ ಜನಪದ ಕಥೆಗಳ ಸಂಪತ್ತು ಹೇರಳವಾಗಿದೆ. ಜಗತ್ತಿನ ಜನಪದ ಕಥೆಗಳ ತವರು 'ಭಾರತ' ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿರುವುದೂ ಉಂಟು. ನಾನಾ ಬಗೆಯ ಧಾರ್ಮಿಕ ಹಿನ್ನೆಲೆಯಿಂದ ಬರುವ ಇಲ್ಲಿನ ಕಥೆಗಳು ವೈವಿಧ್ಯಮಯ ಜೀವನವನ್ನು ಚಿತ್ರಿಸುತ್ತವೆ. ಚಾತಕ ಕಥೆ, ಪಂಚತಂತ್ರ, ಬೃಹತ್ಕಥೆ, ಕಥಾಸರಿತ್ಸಾಗರ, ಬೇತಾಳ ಕತೆಗಳು, ಮಹಾಭಾರತದ ಆಖ್ಯಾನ-ಉಪಾಖ್ಯಾನಗಳು ಮುಂತಾದ ಸಾಹಿತ್ಯಕ ಕಥೆಗಳು, ಜನಪದ ಕಥೆಗಳಿಂದ ಅನೇಕ ಅಂಶಗಳನ್ನು ಪಡೆದಿವೆ ಹಾಗೆಯೇ ಈ ಸಾಹಿತ್ಯಕ ಕಥೆಗಳಿಂದ ಜನಪದ ಕಥೆಗಳೂ ಕೂಡ ಸಾಕಷ್ಟು ಪ್ರಭಾವವನ್ನು ಹೊಂದಿವೆ.''[3] ಈ ರೀತಿಯ ಅಂಶಗಳನ್ನು ನಮ್ಮ ಗ್ರಾಮೀಣ ಪರಿಸರದಲ್ಲಿ ಗುರುತಿಸಬಹುದಾಗಿದೆ.

ಕಾಳೇಗೌಡ ನಾಗವಾರರ ಅಭಿಪ್ರಾಯದಂತೆ ಹೊಲಗದ್ದೆಗಳಲ್ಲಿ ಕೆಲಸ ಮಾಡುವಾಗ ಎಮ್ಮೆ, ದನ, ಕುರಿ, ಆಡುಗಳನ್ನು ಕಾಯುವಾಗ, ನಾಟಿ ಮಾಡುವಾಗ, ಕಳೆ ಕೀಳುವಾಗ, ಕೊಯ್ಲು, ಕಣದ ಕೆಲಸ ಮಾಡುವ ಸಂದರ್ಭಗಳಲ್ಲಿ ಹಾಡುವುದು, ಕೀಟಲೆ ಮಾಡುವುದು, ಆಟ ಆಡುವುದು, ನಕ್ಕು ನಲಿಯುವುದು ಸಮಯಕ್ಕೆ ತಕ್ಕಂತೆ ಈ ಸಂದರ್ಭವನ್ನು ಉಪಯೋಗಿಸಿಕೊಂಡು ತಮ್ಮ ದಿನನಿತ್ಯದ ಕೆಲಸಗಳಲ್ಲಿ ಶ್ರಮದ ಅರಿವು ಗೊತ್ತಾಗದಂತೆ ಕೆಲಸ ಕಾರ್ಯಗಳನ್ನು ಮಾಡುವುದು ಒಂದು ಬಗೆಯ ಸಾಂಸ್ಕೃತಿಕ ಸ್ವರೂಪವನ್ನು ಕಾಣಬಹುದು. ಇವರ ಈ ಹೇಳಿಕೆ ತುಂಬಾ ಸಮಂಜಸವಾಗಿದೆ.

ನಮ್ಮ ಭಾರತದ ಗ್ರಾಮಗಳನ್ನು ಒಳ ಹೊಕ್ಕು ನೋಡಿದಾಗ ಸ್ತ್ರೀಯರ ಪಾತ್ರ ಮನೆಯ ಒಳಗೂ ಹಾಗೂ ಹೊರಗೂ ತನ್ನ ಕರ್ತವ್ಯಗಳನ್ನು ಹೆಚ್ಚು ಜವಾಬ್ದಾರಿಯಿಂದ ನಿರ್ವಹಿಸುವುದನ್ನು ಕಾಣುತ್ತೇವೆ. ಗ್ರಾಮೀಣ ಪ್ರದೇಶಗಳಲ್ಲಿ ಪುರುಷರಿಗಿಂತ ಮಹಿಳೆಯರಿಗೆ ಹೆಚ್ಚು ಹೆಚ್ಚಾಗಿ ಕಟ್ಟುಪಾಡುಗಳನ್ನು ವಿಧಿಸುವುದನ್ನು ಕಾಣಬಹುದು. ಇದರ ಜೊತೆಗೆ ಗಂಡಸರಿಗೆ ಕಟ್ಟುಪಾಡುಗಳು ಇಲ್ಲವೆಂದೇನೂ ಇಲ್ಲ. ಅವರೂ ಸಹ ಇವರ ಜೊತೆಗೆ ಕೈ ಗೂಡಿಸಬೇಕಾಗುತ್ತದೆ. ಗ್ರಾಮಗಳಲ್ಲಿ ಜಾತಿ, ಧರ್ಮದ ಕಟ್ಟು ಕಟ್ಟಳೆಗಳನ್ನು ಚಾಚೂ ತಪ್ಪದೆ ಪಾಲಿಸಿಕೊಂಡು ಬಂದಿರುವುದನ್ನು ಇಂದಿಗೂ ನೋಡಬಹುದು. ಇವೆಲ್ಲವುಗಳ ಮಧ್ಯೆ ಸ್ತ್ರೀಯರು ಮತ್ತು ಪುರುಷರು ತಮ್ಮ ಬಿಡುವಿನ ವೇಳೆಯಲ್ಲಿ ಹಾಗೂ ಹಬ್ಬ ಹರಿದಿನಗಳಲ್ಲಿ, ವಿಶೇಷ ಸಂದರ್ಭಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಿ ಅವುಗಳಲ್ಲಿ ಪಾಲ್ಗೊಳ್ಳುವುದನ್ನು ಈಗಲೂ ಸಹ ನೋಡಬಹುದು.

ಶ್ರೀಮತಿ ನಾಜ್‌ನೀನ್ ಬೇಗಂರವರ ಗ್ರಾಮೀಣ ಬದುಕು ಮತ್ತು ಮಹಿಳೆ ಎಂಬ ವಿಷಯವನ್ನು ಅವಲೋಕಿಸಿದಾಗ ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯು ಒಂದು ಕುಟುಂಬದ ಪ್ರಮುಖ ವ್ಯಕ್ತಿಯಾಗುತ್ತಾಳೆ. ಅಲ್ಲದೆ ಸಂಪ್ರದಾಯಸ್ಥಳಾಗಿ ನಡೆದು ಬಂದ ಪರಿಪಾಠವನ್ನು ಬದಲಾವಣೆಯ ಮೂಲಕ ಅದರಿಂದ ಹೊರಗೆ ಬರುವ ಪ್ರಯತ್ನ ಮಾಡಿದ್ದಾರೆ.

"ನಮ್ಮ ಗ್ರಾಮೀಣ ಮಹಿಳೆಯರು ತಮ್ಮ ಹಿರಿಯರು ಬದುಕಿದ ರೀತಿ, ಮಾಡಿ ತೋರಿಸಿದ ಆಚಾರ ಪದ್ಧತಿಗಳಲ್ಲಿ ಅಚಲ ವಿಶ್ವಾಸವಿರುವವರು. ಇವರು ತಮ್ಮ ಕುಟುಂಬದಲ್ಲಿ ಅತೀ ಹಿಂದಿನಿಂದಲೂ ನಡೆದು ಬಂದ ಆಚಾರಗಳನ್ನು ಚಾಚು ತಪ್ಪದೆ ಮಾಡುತ್ತಾರೆ. ಧಾರ್ಮಿಕ ನಂಬಿಕೆಗಳಲ್ಲಿ ಇವರ ಶ್ರದ್ಧೆ ಅತ್ಯಂತ ಆಳವಾದುದು. ಅವರು ತಮ್ಮ ಪ್ರತಿಯೊಂದು ಕಾರ್ಯದಲ್ಲೂ ಧರ್ಮಕ್ಕೆ ಅತಿ ಹೆಚ್ಚಿನ ಪ್ರಾಮುಖತ್ಯೆಯನ್ನು ಕೊಡುತ್ತಾರೆ. ಪ್ರತಿ ಶುಭ-ಅಶುಭ ಕಾರ್ಯಗಳಲ್ಲಿ ಅವರು ಜೋಯಿಸರ ಪೂಜಾರಿಗಳ ಮತ್ತು ಶಾಸ್ತ್ರಿಗಳ ಹತ್ತಿರ ಹೋಗಿ ಸಮಾಧಾನಕರ ಉತ್ತರವನ್ನು ಕೇಳುತ್ತಾರೆ. ಇವರನ್ನೇ ಅವರು ಧರ್ಮದ ಪ್ರತಿನಿಧಿಗಳೆಂದು ನಂಬಿ ಬಿಡುವುದನ್ನು ಕಾಣಬಹುದು."[೩] ಹೀಗೆ ಒಂದು ಸಾಂಸ್ಕೃತಿಕ ವ್ಯವಸ್ಥೆಯಲ್ಲಿ ಮಹಿಳೆಯ ಪಾತ್ರ ಮುಖ್ಯವಾಗುತ್ತದೆ.

ಗ್ರಾಮೀಣ ಮಹಿಳೆಯರು ಧರ್ಮದ ಬಗ್ಗೆ ಹೆಚ್ಚು ನಂಬಿಕೆ ತೋರಿಸುವುದನ್ನು ಶಾಸ್ತ್ರ ಪುರಾಣಗಳ ಮೂಲಕ ಈಗಲೂ ನಾವು ಕಾಣಬಹುದು. ಇದನ್ನು ನಾಜ್‌ನೀನ್ ಬೇಗಂ ಅವರು ವಿವರಣೆ ನೀಡಿರುವುದನ್ನು ನಾವು ತಿಳಿಯಬಹುದು.

"ಗ್ರಾಮೀಣ ಬದುಕಿನ ಆಶಯಗಳನ್ನು ಗ್ರಾಮೀಣ ಪ್ರದೇಶದಿಂದ ವಸ್ತುಗಳನ್ನಾಯ್ದುಕೊಂಡು ಕತೆ ರಚಿಸಿದವರಲ್ಲಿ ರಾವ್‌ಬಹದ್ದೂರ್‌ರು ಇನ್ನೊಬ್ಬ ಕತೆಗಾರರು. ಇವರ 'ನೆರೆಹೊರೆ' (೧೯೭೫) ಗ್ರಾಮೀಣ ಜನತೆಯಲ್ಲಿ ಹಾಸು ಹೊಕ್ಕಾಗಿರುವ ಸಂಪ್ರದಾಯಗಳು. ಆಚರಣೆಗಳು, ಇವುಗಳಿಂದಾಗುವ ಸಂಘರ್ಷದ ಚಿತ್ರಣವನ್ನು ನೀಡಿ ಆದರ್ಶವನ್ನು ಇವರ ಕತೆಗಳು ಪ್ರತಿಪಾದಿಸುತ್ತವೆ. ಗ್ರಾಮೀಣ ಬದುಕಿನ ಆಶಯಗಳನ್ನು ಕತೆಯೊಳಗೆ ಅನಾವರಣಗೊಳಿಸಿದುದು ಈ ಬರಹಗಾರರ ವೈಶಿಷ್ಟ್ಯಗಳಲ್ಲೊಂದು. ಗ್ರಾಮೀಣ ಜನರಲ್ಲಿ ಮನೆಮಾಡಿರುವ ವೈಶಮ್ಯಗಳು, ಮಾನವೀಯ ಸಂಬಂಧಗಳು, ಸಿಟ್ಟು, ದ್ವೇಷ, ಕಾಮ ಮೊದಲಾದ ಭಾವನೆಗಳಿಗೆ ಇವರು ಸ್ಪಂದಿಸುವ ವೇಳೆ ಅದರ ಅಂದಿನ ಕ್ರೌರ್ಯವನ್ನಾಗಲಿ, ಸಾಮಾಜಿಕ ಅವ್ಯವಸ್ಥೆಯನ್ನಾಗಲಿ ಇವರು ಅಷ್ಟಾಗಿ ಗಮನಿಸದೆ ಹೋದದ್ದು, ಇವರ ಬರವಣಿಗೆಯ ಮಿತಿಯನ್ನು ಸೂಚಿಸುತ್ತದೆ."[೪]

ಹಳ್ಳಿಗಳಲ್ಲಿ ಸಾಂಸ್ಕೃತಿಕ ಆಚರಣೆಗಳ ಬಗ್ಗೆ ಕೆಲವು ಮಾತುಗಳಲ್ಲಿ ಹೇಳುವುದಾದರೆ ಗ್ರಾಮಗಳ ಸಾಂಸ್ಕೃತಿಕ ಆಚರಣೆಗಳ ಮೇಲೆ ಅತ್ಯಾಧುನಿಕತೆಯನ್ನು ಅಳವಡಿಸಿಕೊಂಡಿರುವುದನ್ನು ಕಾಣುತ್ತೇವೆ. ಇದೇ ಅಭಿಪ್ರಾಯವನ್ನು ಗೊರೂರರು ತಮ್ಮ ಕತೆಗಳಲ್ಲಿ ವ್ಯಕ್ತಪಡಿಸಿದ್ದಾರೆ. ಮುಂದುವರೆದು ನೋಡಿದಾಗ ನವೋದಯ ಲೇಖಕರು ತಮ್ಮ ಲೇಖನಗಳಲ್ಲಿ ಗ್ರಾಮೀಣ ಬದುಕಿನಲ್ಲಿ ಅನೇಕ ಸಾಂಸ್ಕೃತಿಕ ಚಟುವಟಿಕೆ ಮತ್ತು ಜಾನಪದ ಜೀವನದ ಪ್ರಮುಖ ಸಂದರ್ಭಗಳನ್ನು ತೋರಿಸಿರುವುದರಲ್ಲಿ ಈಶ್ವರಚಂದ್ರ, ಸಿ.ವಿ. ಸಣ್ಣಪ್ಪನವರು ಪ್ರಮುಖರು. ಗ್ರಾಮೀಣ ಜನಜೀವನದಲ್ಲಿ ಹಿಂದಿನಿಂದಲೂ ಪ್ರತಿಯೊಂದು ಸಂಸಾರದಲ್ಲಿಯೂ ಅತ್ತೆ ಸೊಸೆ, ಸವತಿ ಮಾತ್ಸರ್ಯ, ಅಣ್ಣ ತಮ್ಮಂದಿರ ವ್ಯಾಜ್ಯಗಳು ಜೊತೆಗೆ ಬಂಧು ಪ್ರೇಮ, ಅತಿಥಿ ಸತ್ಕಾರ ಇವುಗಳಿಗೆ ಹೆಚ್ಚು ಒತ್ತು ಕೊಡುವುದನ್ನು ಇಂದಿಗೂ ಕಾಣಬಹುದು.

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ಲೇಖಕರು ಕಥೆಗಾರರ ವಿವರಣೆಯನ್ನು ಇನ್ನೂ ಅರ್ಥಪೂರ್ಣವಾಗಿ ವಿವರಿಸಬಹುದಾಗಿತ್ತು ಎಂಬ ವಿಷಯವನ್ನು ನಯವಾಗಿ ತಮ್ಮ ಮಾತಿನಲ್ಲಿ ಹೇಳಿದ್ದಾರೆ.

ಒಂದು ಸಾಹಿತ್ಯ ಕೃತಿಯ ಯೋಗ್ಯತೆಯನ್ನು ನಿರ್ಧರಿಸಬೇಕಾದ ಮಾನದಂಡ ಅದರಲ್ಲಿ ಮಾನವೀಯ ಮೌಲ್ಯಗಳು, ಒಳ್ಳೆಯ ಬದುಕಿಗೆ ಪೋಷಕವಾಗುವಂಥ ಮೌಲ್ಯಗಳು. ಎಷ್ಟು ಪರಿಣಾಮಕಾರಿಯಾಗಿ, ಎಷ್ಟು ಕಲಾತ್ಮಕವಾಗಿ ಬಂದಿದೆಯಂದಷ್ಟೆ ಹೊರತು, ಆ ಕೃತಿಯನ್ನು ರಚಿಸಿದ ಸೃಜನಶೀಲ ಪ್ರತಿಭೆ ಯಾವುದೊಂದು ವೈಚಾರಿಕ ಪ್ರಣಾಲಿಕೆ ಯಾವರೀತಿ ಬದ್ಧವಾಗಿದೆ ಎಂಬುದರಿಂದಲ್ಲ. ಆದ್ದರಿಂದ ಎಪ್ಪತ್ತರ ದಶಕದಲ್ಲೂ ಈ ಕತೆಗಳ ಕೊಡುಗೆ ಗಮನಾರ್ಹವಾದದ್ದು.

"ಎಪ್ಪತ್ತರ ದಶಕದ ವೇಳೆಗೆ ನವ್ಯ ಪಂಥ ಕ್ಷೀಣದಿಸೆಗಿಳಿಯಿತಾದರೂ ಕೆಲವು ಮಂದಿ ನವ್ಯ ಲೇಖಕರು ತಮ್ಮ ಬರವಣಿಗೆಯನ್ನು ಮುಂದುವರಿಸುವುದನ್ನು ಕಾಣುತ್ತೇವೆ. ಈ ಲೇಖಕರು ನವ್ಯದ ಆಳ ವಿಸ್ತಾರಗಳನ್ನು ಹಿಗ್ಗಿಸುತ್ತಾ ಹೊಸ ಮಗ್ಗಲುಗಳತ್ತ ಹೊರಳಿಕೊಳ್ಳುತ್ತಿರುವುದನ್ನು ಈ ದಶಕದಲ್ಲಿ ಕಾಣಬಹುದು. ನವ್ಯ ಬರವಣಿಗೆಯ ಮಾದರಿಯನ್ನೆ ಪ್ರಮುಖವಾಗಿಟ್ಟುಕೊಂಡು ಅನುಭವಕ್ಕೆ ಅಭಿವ್ಯಕ್ತಿ ನೀಡಿದ ಯು.ಆರ್.ಅನಂತಮೂರ್ತಿ, ಲಂಕೇಶ್, ರಾಮಚಂದ್ರಶರ್ಮ, ಶಾಂತಿನಾಥದೇಸಾಯಿ, ಕೆ.ಸದಾಶಿವ, ಯಶವಂತ ಚಿತ್ತಾಲ ಮೊದಲಾದವರ ಸಣ್ಣ ಕತೆಗಳಲ್ಲಿ ಕಾಣಬಹುದು. ನವೋದಯ ಲೇಖಕರು ಮಾಸ್ತಿಯವರು ಹಾಕಿಕೊಟ್ಟ ಕಥಾ ಪರಂಪರೆಯನ್ನು ಅನುಕರಣೆ ಮಾಡುತ್ತಾ, ಒಂದು ರೀತಿಯ ಯಾಂತ್ರಿಕ ಬರವಣಿಗೆಯನ್ನು ಮುಂದುವರಿಸುತ್ತಲೇ ಬಂದಿದ್ದರು. ಸ್ವಾತಂತ್ರ್ಯಾನಂತರದ ಬದಲಾವಣೆ ಆದ ದೇಶದ ಸ್ಥಿತಿಗತಿಗಳ ಹಿನ್ನೆಲೆಯಲ್ಲಿ ಪ್ರತಿಯೊಬ್ಬ ಪ್ರಜೆಯೂ ವೈಯಕ್ತಿಕ ಜವಾಬ್ದಾರಿಯನ್ನು ಅರಿತುಕೊಳ್ಳುವುದು ಅನಿವಾರ್ಯವೆನಿಸಿತು. ನವೋದಯದ ಆದರ್ಶಗಳನ್ನು ಹಿಂದೆ ನಿಲ್ಲಿಸಿ, ವೈಯಕ್ತಿಕ ಅನುಭವದ ಹಿನ್ನೆಲೆಯಲ್ಲಿ ಚಿಂತನೆಗೆ ಲೇಖಕರು ಮುಂದಾದರು. ಇಂಥ ಹೊಸ ಗದ್ಯ ಬರವಣಿಗೆಗೆ ಅನಂತಮೂರ್ತಿಯವರು ಅರವತ್ತರ ದಶಕದಲ್ಲಿ ಮಾರ್ಗದರ್ಶಕರಾಗಿ ಕಾಣಿಸಿಕೊಂಡರು. ಅನಂತ ಮೂರ್ತಿಯವರು ನವ್ಯದ ವೈಚಾರಿಕತೆಯನ್ನು ರೂಪಿಸಿ ಕೊಟ್ಟರು. ಎರಡನೆಯದಾಗಿ ಈ ವೈಚಾರಿಕತೆಯ ಅಭಿವ್ಯಕ್ತಿಗೆ ಬೇಕಾದ ತಾಂತ್ರಿಕ ಸಾಧ್ಯತೆಯನ್ನು ತೋರಿಸಿಕೊಟ್ಟರು.

ಮೂರನೆಯದಾಗಿ ಈ ವೈಚಾರಿಕತೆಯನ್ನು ಸಮರ್ಥವಾಗಿ ಧ್ವನಿಸಬಲ್ಲ ವಸ್ತುಗಳನ್ನು ಹುಡುಕಿಕೊಟ್ಟರು. ಕೊನೆಯದಾಗಿ ಇವೆಲ್ಲಕ್ಕೂ ಸೂಕ್ತವಾದ ವಿಕಾಸಶೀಲವಾದ ಭಾಷೆಯನ್ನು ನಿರ್ಮಿಸಿದರು. ನವೋದಯ ಮಾರ್ಗದ ಸವಕಲು ಹಾದಿಯಿಂದ ಕನ್ನಡ ಸಣ್ಣಕತೆಯನ್ನು ಅನಂತಮೂರ್ತಿ ಹೊಸ ಹಾದಿಗೆ ತಂದರು.

ಸಾಹಿತ್ಯಕವಾಗಿ ನವ್ಯ ಕತೆಗಳು ಯಶಸ್ವಿಯಾದರೂ ಬದುಕಿಗೆ ಏನನ್ನು ಕೊಡುತ್ತವೆ ಎಂಬುದನ್ನು ಯೋಚಿಸಿದಾಗ ಇವುಗಳ ಮಿತಿ ವ್ಯಕ್ತವಾಗುತ್ತದೆ. ಈ ಕತೆಗಳಲ್ಲಿ ಸಾಮಾಜಿಕ ಪ್ರಜ್ಞೆಯಿದ್ದರೂ ಅದು ಒಂದು ರೀತಿಯ ಸಂದೇಹದಿಂದಲೇ ನೋಡುವ ದೃಷ್ಟಿಯುಳ್ಳದ್ದು. ಪ್ರಾಮಾಣಿಕವಾದ ವ್ಯಕ್ತಿಯೇ ಅಲ್ಲವೆಂದು ಭ್ರಮೆಯನ್ನು ಇವರ ಕೃತಿಗಳು ಹುಟ್ಟಿಸುತ್ತವೆ. ಇವರ ಕಥಾ ನಾಯಕರು ಪ್ರಜ್ಞಾವಂತರಾಗಿದ್ದರೂ ನಿಶ್ಚಿತ ಗುರಿಯುಳ್ಳವರೆಂದಲ್ಲ. ದ್ವಂದ್ವದಿಂದಲೇ ಬದುಕನ್ನು ಸ್ವೀಕರಿಸುವ, ತಿರಸ್ಕರಿಸುವ ಸ್ವಭಾವ ಯಾವಾಗಲೂ ಇತರರ ಬಗ್ಗೆ ಸಂದೇಹವುಳ್ಳವರಾಗಿದ್ದು ತಾವು ಸ್ವತಃ ಅಸಹಾಯಕರಾಗಿರುತ್ತಾರೆ. ವ್ಯಂಗ್ಯ ವಿಡಂಭನೆಗಳು, ಹೇಳಿದಂತೆ ನಡೆಯದಿರುವುದು ಇವರ ಸ್ವಭಾವ. ಮೇಲ್ನೋಟಕ್ಕೆ ಒಳ್ಳೆಯವರಂತೆ ಕಾಣಿಸಿದರೂ ಒಳಗೆ

ಪೊಳ್ಳುತನವನ್ನು ಬದಲಾಗಿ ಭೀತಿಯ ವಾತಾವರಣವನ್ನು ಸೃಷ್ಟಿಸಿಬಿಡುತ್ತಾರೆ. ಬದಕಿನ ಬಗ್ಗೆ ಭ್ರಮ ನಿರಸನವನ್ನಷ್ಟೇ ಇವರು ತಾಳುತ್ತಾರೆ. ಇದು ಈ ಕತೆಗಳ ಪ್ರಮುಖ ಕೊರತೆಯಾಗಿದೆ. ಸಾಮಾಜಿಕವಾಗಿ ನಿಕಟವಾಗುತ್ತಿರುವ ಇಲ್ಲಿನ ಕತೆಗಳಲ್ಲೂ ದೋಷ ಉಳಿದುಕೊಂಡಿದೆ."[೫] ಹೀಗೆ ಸಣ್ಣ ಕತೆಗಳಲ್ಲಿ ನನ್ನ ಅಧ್ಯಯನಕ್ಕೆ ಸಂಬಂಧಿಸಿದಂತೆ ನವೋದಯ, ನವ್ಯದ ಕಾಲಘಟ್ಟವನ್ನು ಪ್ರಮುಖವಾಗಿ ಗುರುತಿಸಲಾಗಿದೆ.

ಮೋಹನ ಕುಂಟಾರ್‌ರವರ ಅಧ್ಯಯನವು ಗ್ರಾಮೀಣ ಸಂಸ್ಕೃತಿಯ ಬಗ್ಗೆ ಸಣ್ಣಕತೆಗಳಲ್ಲಿ ನವೋದಯ ಮತ್ತು ನವ್ಯದ ಕಾಲಘಟ್ಟವನ್ನು ಪ್ರಮುಖ ಕತೆಗಾರರು ಚಿತ್ರಿಸಿರುವುದನ್ನು ತುಂಬಾ ಸೂಕ್ಷ್ಮವಾಗಿ ತೌಲನಿಕವಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ.

"ಸಾಂಸ್ಕೃತಿಕವಾಗಿ ಮತ್ತು ಶೈಕ್ಷಣಿಕವಾಗಿ ಅಕ್ಷರದ ಮೂಲಕ ಅಭಿವ್ಯಕ್ತಿಸಲು ತೊಡಗಿದ ಅವಮಾನಿತ ಅಕ್ಷರಸ್ಥ ಸಮುದಾಯವೊಂದು ತಮ್ಮ ಅಭಿವ್ಯಕ್ತಿಯ ಮಾಧ್ಯಮವನ್ನು ತಮ್ಮ ಕೇರಿಯ, ಪ್ರದೇಶದ ಭಾಷೆಯನ್ನು ಉಪಯೋಗಿಸಿಕೊಂಡು ತಮ್ಮ ಸಹಜ ಅನುಭವಗಳ, ಅವಮಾನ ದೌರ್ಜನ್ಯಗಳನ್ನು ಸ್ಪಷ್ಟವಾಗಿ ದಾಖಲಿಸ ತೊಡಗಿದ ಕೂಡಲೆ ಒಂದು ಜನಾಂಗೀಯ ಸಾಹಿತ್ಯ ಸಿದ್ದವಾಯಿತು, ಅದನ್ನೇ ನಾವು ವಿಶಾಲ ಅರ್ಥದಲ್ಲಿ 'ದಲಿತ ಸಾಹಿತ್ಯ' ಎಂದು ಕರೆಯುತ್ತೇವೆ. ಆಂಧ್ರದ ವಿರಸಂ, ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್, ಕರ್ನಾಟಕ ದಲಿತ ಕಲಾವಿದರ ಮತ್ತು ಲೇಖಕರ ಒಕ್ಕೂಟ, ಬೂಸಾ ಪ್ರಕರಣ ಹೀಗೆ ರಾಜಕೀಯ ಮತ್ತು ಸಾಂಸ್ಕೃತಿಕ ಅಂಶಗಳ ಹಿನ್ನೆಲೆಯಲ್ಲಿ ರೂಪುಗೊಂಡ ದಲಿತ ಸಾಹಿತ್ಯವನ್ನು ನಾವು ಮೊದಲು ಗುರುತಿಸುವುದು ದೇವನೂರು ಮಹಾದೇವರು ಬರೆದ ಏಳು ಕಥೆಗಳ "ದ್ಯಾವನೂರು" ಸಂಕಲನದಿಂದ. ೧೯೭೩ರಲ್ಲಿ ಪ್ರಕಟವಾದ ಈ ಕೃತಿ ಆವರೆಗೂ ಬೇರು ಬಿಟ್ಟಿದ್ದ ಸಾಹಿತ್ಯ ಸಿದ್ಧಭಾಷೆ, ನುಡಿಗಟ್ಟು, ವಸ್ತು ಅನುಭವಗಳನ್ನು ಭಂಜಕಗೊಳಿಸಿತು. ದಲಿತ ಬರಹಗಾರರು ಪ್ರತಿಭಟನೆಯ ಮೂಲಕ ತಮ್ಮ ಎಚ್ಚರವನ್ನು ಸ್ವಲ್ಪ ರೊಚ್ಚಿನಿಂದಲೇ ಹೇಳ ಬಯಸಿದರು. ಅಲ್ಲದೆ ಸಾಂಸ್ಕೃತಿಕ ಮತ್ತು ಸಾಹಿತ್ಯಕ ಹಾಗೂ ರಾಜಕೀಯ ಸಂಘಟನೆಗಳ ಅನಿವಾರ್ಯತೆಯನ್ನು ಮನಗಂಡು ಕರ್ನಾಟಕ ದಲಿತ ಸಂಘರ್ಷ ಸಮಿತಿ ರೂಪುಗೊಂಡಿತು. ಮೈಸೂರು ವಲಯದಲ್ಲಿ ದೇವನೂರು ಮಹಾದೇವ, ಗೋವಿಂದಯ್ಯ, ಇಂಧೂದರ ಹೊನ್ನಾಪುರ, ಶಿವಾಜಿಗಣೇಶನ್, ರಾಮದೇವರಾಕೆ, ದೇವನೂರು ಶಿವಮಲ್ಲು, ಅವರುಗಳು ಆರಂಭಿಸಿದ. 'ಪಂಚಮ' ಪತ್ರಿಕೆ ದಲಿತ ಸಾಹಿತ್ಯದ ಹೊಸ ಆಲೋಚನೆ, ಅಭಿವ್ಯಕ್ತಿಗೆ ವೇದಿಕೆ ರೂಪಿಸಿ ಕೊಡುವಲ್ಲಿ ಯಶಸ್ವಿಯಾಗಿ ಕಾರ್ಯ ನಿರ್ವಹಿಸಿತು.

ಈ ಪ್ರತಿಕೆಯು ನಾಡಿನ ತುಂಬಾ ಹೊಸ ಬರಹಗಾರರನ್ನು ಹುಟ್ಟು ಹಾಕಿತು. ದಲಿತರು ಬರೆದ ವಿಚಾರ, ವಿಮರ್ಶೆ, ಕಥೆ, ಕಾದಂಬರಿ, ಕಾವ್ಯಗಳು ಹೃದಯ ಕಲಕಬಲ್ಲ ಜೀವಂತಿಕೆಯನ್ನು ಪಡೆದುಕೊಂಡವು. ದಲಿತ ಸಾಹಿತ್ಯದಲ್ಲಿ ಕಲೆಗಾರಿಕೆಗಿಂತಲೂ ವಾಸ್ತವ ಬದುಕಿನ ಬರ್ಬರತೆ ಎದ್ದು ಕಾಣುತ್ತದೆ. ಕಲೆಗಾರಿಕೆಯೇ ಸಾಹಿತ್ಯವಲ್ಲ, ಬದುಕು ಸತ್ಯ ಎಂಬ ನಿಲುವಿನಲ್ಲಿರುವ ಸಿದ್ದಲಿಂಗಯ್ಯನವರ ಹೊಲೆ ಮಾದಿಗರ ಹಾಡು, ೧೯೭೫ ರಲ್ಲಿ ಪ್ರಕಟಗೊಂಡಿತು. ಅಲ್ಲಿಂದ ಮುಂದೆ ಕಥೆ, ಕಾವ್ಯ, ಕಾದಂಬರಿ, ನಾಟಕ ಕ್ಷೇತ್ರದಲ್ಲಿ ಅತಿ ಹೆಚ್ಚು ಕೃಷಿ ನಡೆಯಿತು."[೬]

ಭಾರತದಲ್ಲಿ ಸ್ವಾತಂತ್ರಪೂರ್ವ ಕಾಲದಲ್ಲಿ ನಡೆದ ರಾಷ್ಟ್ರೀಯ ಚಳುವಳಿಯಿಂದ ಉತ್ತೇಜಿತರಾದ ಅನೇಕ ಜನ ಗಾಂಧೀಜಿಯ ಅನುಯಾಯಿಗಳು ದಲಿತರ ಉದ್ಧಾರಕ್ಕಾಗಿ ಪ್ರಗತಿಪರ ಕಾರ್ಯಗಳನ್ನು ಮಾಡಿರುವುದು ಕಂಡುಬರುತ್ತದೆ. ಇದರಲ್ಲಿ ಗೋಪಾಲಸ್ವಾಮಿ ಅಯ್ಯರ್, ತಗಡೂರು ರಾಮಚಂದ್ರರಾಯರು, ಕುದ್ಮಲ್ ರಂಗರಾಯರು, ಹರ್ಡೇಕರ್ ಮಂಜಪ್ಪ, ಕಾರ್ನಾಡ ಸದಾಶಿವರಾವ್ ಮೊದಲಾದವರು ದಲಿತರನ್ನು ಹುರಿದುಂಬಿಸಿದ ಹಿನ್ನೆಲೆಯು ಐತಿಹಾಸಿಕ ಹೆಗ್ಗಳಿಕೆಗೆ ಪಾತ್ರವಾಗಿದೆ. ೧೯೭೩ರಲ್ಲಿ ನಡೆದ ಭೂಸಾ ಪ್ರಕರಣದಲ್ಲಿಯೂ ಸಹ ಮೇಲೆ ಕಾಣಿಸಿದ ಬುದ್ಧಿಜೀವಿಗಳು ಕ್ರಿಯಾತ್ಮಕವಾಗಿ ಭಾಗವಹಿಸಿದ್ದರು. ಇದೇ ಸಂದರ್ಭದಲ್ಲಿ ಬಸವಲಿಂಗಪ್ಪನವರು ರಾಜಕಾರಣಿಯಾಗಿದ್ದರೂ ಸಹ ನಗರ ಪ್ರದೇಶಗಳಲ್ಲಿ ದಲಿತರು ಮಲಾ ಹೊರುವುದನ್ನು ನಿಲ್ಲಿಸಲು ಕರೆ ಕೊಟ್ಟರು. ಇವರೊಂದಿಗೆ ಅನೇಕ ಯುವಜನರು ದೇವರು, ಧರ್ಮ, ಜಾತಿ ವಿರುದ್ಧ ಕೂಗೆಬ್ಬಿಸಿದರು. ಇವೆಲ್ಲದರ ಪರಿಣಾಮವಾಗಿ ೧೯೭೩ರ ಆಗಸ್ಟ್ ೨೫, ೨೬ ರಂದು ಮೈಸೂರಿನಲ್ಲಿ ವಿಶೇಷವಾಗಿ ಕ್ರಾಂತಿಕಾರಕವಾದ ಜಾತಿ ವಿನಾಶ ಸಮ್ಮೇಳನ ನಡೆಸಲಾಯಿತು. ಈ ಸಮ್ಮೇಳನದಲ್ಲಿ ಪ್ರಮುಖವಾಗಿ ಲೋಹಿಯಾರವರ ವಿಚಾರಮಂಥನ ಎದ್ದು ಕಾಣುತ್ತಿತ್ತು. ಈ ಸಮ್ಮೇಳನದಲ್ಲಿ ಲಂಕೇಶ್, ತೇಜಸ್ವಿ, ರಾಮದಾಸ್, ಶ್ರೀ ಕೃಷ್ಣ ಆಲನಹಳ್ಳಿ, ದೇವನೂರ ಮಹಾದೇವ, ಸಿದ್ದಲಿಂಗಯ್ಯ ಮೊದಲಾದವರೆಲ್ಲ ಭಾಗವಹಿಸಿ ಕರ್ನಾಟಕದಾದ್ಯಂತ ಜನರು ಪುಳಕಿತರಾಗುವಂತೆ ಮಾಡಿದರು.

ಈ ಪ್ರಕಾರ ದಲಿತ ಬಂಡಾಯ ಚಳುವಳಿ ಮತ್ತು ರೈತ ಚಳುವಳಿಯ ಪ್ರಭಾವಗಳನ್ನು ಗ್ರಾಮೀಣ ಸಾಮಾನ್ಯ ಜನರ ಜೀವನ ವಿಧಾನಗಳ ಮೂಲಕ ಸೂಕ್ಷ್ಮವಾಗಿ ಗ್ರಹಿಸಿರುವುದನ್ನು ಕಾಣಬಹುದಾಗಿದೆ. ಸಾಮಾನ್ಯ ಜನರ ಜೀವನ ವಿಧಾನಗಳನ್ನು ಒಂದು ಸಾಹಿತ್ಯ ರಚಿಸುವುದಕ್ಕೆ ಅಳವಡಿಸಿಕೊಂಡಿರುವುದನ್ನು ಇಲ್ಲಿ ಬಹಳ ಚೆನ್ನಾಗಿ ಹೇಳಿದ್ದಾರೆ. ಇವರ ಹೇಳಿಕೆಗಳು ತುಂಬಾ ಸಮಂಜಸವಾಗಿದೆ.

ಕೆ.ಪಿ.ಪೂಣಚಂದ್ರ ತೇಜಸ್ವಿಯವರ "ಅಬಚೂರಿನ ಪೋಸ್ಟಾಫೀಸು" (೧೯೭೩) ನವ್ಯಕ್ಕೆ ವಿದಾಯ ಹೇಳಿ ಬಂಡಾಯದ ಬಾಗಿಲನ್ನು ತೆರೆದ ಐತಿಹಾಸಿಕ ಕಥಾ ಸಂಕಲನ. ಸಾಮಾಜಿಕ ಸಮಸ್ಯೆಗಳನ್ನು ಸಾಂದ್ರವಾಗಿ, ಕಲಾತ್ಮಕವಾಗಿ ದಾಖಲು ಪಡಿಸುವಲ್ಲಿ ತೇಜಸ್ವಿಯವರು ಸಿದ್ಧಹಸ್ತರು. ಆಧುನಿಕತೆಯ ಪ್ರವೇಶದಿಂದ ಗ್ರಾಮೀಣ ಪ್ರದೇಶದಲ್ಲಿ ಉಂಟಾಗುವ ಸ್ಥಿತ್ಯಂತರವನ್ನು ಅವರ ಕತೆಗಳು ಚೆನ್ನಾಗಿ ವಿವರಿಸಿ ಹೇಳುತ್ತವೆ. ಅಬಚೂರಿಗೆ ಹೊಸದಾಗಿ ಬಂದ ಅಂಚೆ ಕಛೇರಿಯು ಬೋಬಣ್ಣನ ಜೀವನದ ನೆಮ್ಮದಿಯನ್ನೇ ಕಲಕಿ, ಅವನನ್ನು ಊರಿನಿಂದಲೇ ಅಟ್ಟಿ ಬಿಡುವ ದುರಂತ ವಿನ್ಯಾಸದ ಘಟನಾ ಪರಂಪರೆಯನ್ನು ಗಮನಿಸಬೇಕು. ಬದಲಾವಣೆಯ ಬಗ್ಗೆ ತೀವ್ರವಾದ ಅನುಕಂಪವಿದ್ದು, ಸಹಾನುಭೂತಿಯಿದ್ದು, ಈ ಕತೆಯು ಹಳೆಯ ಸಮಾಜದೊಡನೆ ಒಂದು ಅರ್ಥಪೂರ್ಣ ಸಂಬಂಧವನ್ನು ಏರ್ಪಡಿಸಿಕೊಂಡಿದೆ.

ಮಹಾದೇವರು ದಲಿತ ಲೋಕದ ಒಳಗಿನಿಂದ ಬಂದವರು. ಇತರರು ನೋಡಿದಂತೆ ದಲಿತ ಜಗತ್ತನ್ನು ಅವರು ಮೇಲೆ ನಿಂತು ರಕ್ಷಿಸಿ, ಬರೆಯುವುದಿಲ್ಲ. ಬದಲಾಗಿ ತನ್ನ ಲೋಕದಲ್ಲಿ ಗಟ್ಟಿಯಾಗಿ ತಳವೂರಿ, ಇತರರನ್ನು ಅಲ್ಲಿಂದಲೇ ನೋಡುತ್ತಾರೆ. ಹೀಗಾಗಿ ಇವರು ಇತರರನ್ನು ನೋಡುವಲ್ಲಿ ಮತ್ತು ತಮ್ಮ ಲೋಕದ ವಿವರವನ್ನು ಇತರರಿಗೆ ಕಾಣಿಸುವಲ್ಲಿ ಇನ್ನಿಲ್ಲದ ಹೊಸತನವಿದೆ. ದಲಿತರ ದಟ್ಟ ದಾರಿದ್ರ್ಯವನ್ನು

ಚಿತ್ರಿಸುವುದರೊಂದಿಗೆ ಆ ಲೋಕದ ಅಮೂಲ್ಯ ಚೇತನಗಳನ್ನು, ಉತ್ಸಾಹವನ್ನೂ, ಅದ್ಭುತ ಸೃಜನಶೀಲತೆಯನ್ನು ಮಹಾದೇವರು ಅಭಿವ್ಯಕ್ತಿಸುತ್ತಾರೆ. ಎಂತಹ ಸ್ಥಿತಿಯಲ್ಲೂ ಈ ದಲಿತರು ಎಷ್ಟು ಜೀವಂತವಾಗಿದ್ದಾರೆ ಎಂದು ನಮಗೆ ಅನ್ನಿಸುತ್ತಿರುವಂತೆಯೇ ಅವರನ್ನು ಅಮುಕಿರುವ ದಾರಿದ್ರ್ಯ ಮಾಯವಾದಲ್ಲಿ ಅವರ ಶಕ್ತಿ ಎಷ್ಟು ಅಪಾರ ಸಾಧ್ಯತೆಗಳನ್ನು ಪಡೆದಿರುವಂಥದ್ದು ಎಂದು ನಮಗೆ ತಿಳಿಸಿ ಹೇಳುವಂತೆ ದೇವನೂರರ ಕತೆಗಳು ನಮ್ಮ ಗಮನವನ್ನು ಪ್ರಚೋದಿಸುತ್ತವೆ.

ಹೀಗೆ ಇನ್ನೂ ಹೆಚ್ಚಿನ ವಿವರಗಳನ್ನು ಈ ಕೆಳಕಂಡ ಮೂರು ಉಪ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ.

## ೪. ೧. ಜಾನಪದದ ಪ್ರಭಾವ

ಜಾನಪದವೆಂಬ ಈ ಶಾಸ್ತ್ರಕ್ಕೆ ಇಂಗ್ಲೀಷಿನಲ್ಲಿ ಬಳಕೆಯಲ್ಲಿರುವ ಹೆಸರು 'ಪೋಕ್‌ಲೋರ್' ಈ ಹೆಸರನ್ನು ಸೃಷ್ಟಿಸಿದವನು ವಿಲಿಯಂ ಥಾಂಸ್ ಎಂಬಾತ ೧೮೪೬ರಲ್ಲಿ ಅವನು 'ದಿ ಅಥೇನಿಯಂ ಎಂಬ ಸಾಹಿತ್ಯ ಕಲೆಗಳನ್ನು ಕುರಿತ ಪತ್ರಿಕೆಗೆ ಬರೆದ ಒಂದು ಕಾಗದದಲ್ಲಿ ಈ ಹೆಸರನ್ನು ಸೂಚಿಸಿದ. ಮಾನವನ ಕನಸುಗಳು ಜನಪದ ಕಥೆಗೆ ಪ್ರೇರಕವಾಗಿರಬಹುದೆ? ದುಷ್ಟಶಕ್ತಿಗಳು ಅಟ್ಟಿಸಿಕೊಂಡು ಬರುತ್ತವೆ. ಭಯಂಕರ ಪರೀಕ್ಷೆಗಳಲ್ಲಿ ಪಾರಾಗುತ್ತಾನೆ. ಕನಸಿನ ದೃಶ್ಯಗಳೇ ಜನಪದ ಕಥೆಗಳಾಗಿ ಏಕೆ ಅವ ತರಿಸಿರಬಾರದು ಎಂಬೆಲ್ಲಾ ಊಹೆಗಳೂ ಇವೆ. ಒಟ್ಟಿನಲ್ಲಿ ಜನಪದ ಕಥಾ ಪ್ರಪಂಚ ವಿದ್ವಾಂಸರ ಆಸಕ್ತಿಯನ್ನು ಸೆಳೆದಿರುವ ಜನಪದ ಸಾಹಿತ್ಯದ ಒಂದು ಪ್ರಮುಖ ಪ್ರಕಾರ."[೨]

ಜೀ.ಶಂ. ಪರಮಶಿವಯ್ಯನವರ ಜನಪದ ಸಾಹಿತ್ಯದ ಬಗ್ಗೆ ಅಧ್ಯಯನ ಮಾಡಿರುತ್ತೇನೆ. ಇವರು ಗ್ರಾಮದಲ್ಲೇ ಹುಟ್ಟಿ ಜನಪದ ಸಾಹಿತ್ಯದ ವಿಚಾರದ ಬಗ್ಗೆ ಗ್ರಾಮೀಣ ಮತ್ತು ನಗರವಾಸಿಗಳಿಗೆ ಅದರಲ್ಲೂ ಯಕ್ಷಗಾನ, ಸೋಬಾನೆ ಹಾಡುಗಳು ಮುಂತಾದ ಗ್ರಾಮೀಣ ಪ್ರತಿಭೆಗಳಿಗೆ ಪ್ರೋತ್ಸಾಹ ನೀಡಿರುವುದು ಅತ್ಯಂತ ಪ್ರಶಂಸನೀಯವಾಗಿದೆ.

"ಭಾರತದಲ್ಲಿ ಋಗ್ವೇದ ಕಾಲದಿಂದಲೂ, ಜಾನಪದ ಮೂಲವನ್ನು ಅರಸಲಾಗುತ್ತದೆ. ಪಂಚತಂತ್ರ, ಹಿತೋಪದೇಶ, ಬೇತಾಳ, ಪಂಚವಿಂಶತಿ, ಶುಕ ಸಪ್ತತಿ, ಗುಣಾಢ್ಯನ ಬೃಹತ್ಕಥೆಯ ಆಧಾರದ ಮೇಲೆ ರಚಿತವಾದ, ಕ್ಷೇಮೇಂದ್ರನ ಬೃಹತ್ಕಥಾಮಂಜರಿ, ಸೋಮದೇವನ ಕಥಾ ಸರಿತ್ಸಾಗರ ಮುಂತಾದುವು ಜನಪದ ಕಥೆಗಳ ದೊಡ್ಡ ಕೋಶಗಳೆನಿಸುತ್ತವೆ. ಕನ್ನಡದಲ್ಲಿ ಪ್ರಥಮ ಗದ್ಯಗ್ರಂಥ 'ವಡ್ಡಾರಾಧನೆ'ಯೇ ಕನ್ನಡದ ಪ್ರಥಮ ಜನಪದ ಕಥಾ ಸಂಕಲನ ಎನಿಸುತ್ತದೆ. ಅಲ್ಲಿನ ಅನೇಕ ಕಥೆಗಳು ಇಂದಿಗೂ ಜನಪದ ಜೀವನದಲ್ಲಿ, ಮೌಖಿಕ ಸಂಪ್ರದಾಯದಲ್ಲಿ ಲಭ್ಯವಾಗುತ್ತದೆ. ರಾಘವಾಂಕ, ಕುಮಾರವ್ಯಾಸ, ಲಕ್ಷ್ಮೀಶ, ಅಪಾರ ಸಂಖ್ಯೆಯ ಸಾಂಗತ್ಯ ಕವಿಗಳು, ನೇಮಿಚಂದ್ರ ಮೊದಲಾದವರು ಜಾನಪದ ಭಂಡಾರದಿಂದ ಅಪಾರ ಸಾಮಗ್ರಿಯನ್ನು ಸ್ವೀಕರಿಸಿ ತಮ್ಮ ಕೃತಿಗಳ ಸತ್ವವನ್ನು ಹೆಚ್ಚಿಸಿಕೊಂಡಿದ್ದಾರೆ. ನೇಮಿಚಂದ್ರನ ಲೀಲಾವತಿ ಕಾವ್ಯ, ನಂಜುಂಡನ ಪಾಂಚಾಲಗಂಗ ಮೊದಲಾದವರ ಕೃತಿಗಳು ಸಂಪೂರ್ಣವಾಗಿ ಜನಪದ ಕಥೆಗಳನ್ನೋ, ಕಾವ್ಯಗಳನ್ನೋ, ಆಧರಿಸಿಯೇ ರಚಿತವಾದ ಕಾವ್ಯಗಳಾಗಿವೆ.

ಜನಪದ ಸಾಹಿತ್ಯ ಶಿಷ್ಟ ಸಾಹಿತ್ಯದಂತೆಯೇ ಗದ್ಯಪದ್ಯಾತ್ಮಕವಾದುದು. ಇಲ್ಲಿನ ಗದ್ಯ ಪ್ರಮುಖವಾಗಿ ಜನಪದ ಕಥೆಗಳಲ್ಲಿ ಕಂಡುಬರುತ್ತದೆ. ಜನಪದ ಕಥೆಗಳ ಭಾಷೆ ಒಬ್ಬೊಬ್ಬ ಕಥೆಗಾರನ ಬಾಯಲ್ಲಿ ಒಂದೊಂದು ಸ್ವರೂಪದಲ್ಲಿ ಅವತರಿಸುತ್ತದೆ. ಆಯಾ ಪ್ರದೇಶದ ಉಪ ಭಾಷೆ ಅದರ ಮೇಲೆ ಸಂಪೂರ್ಣ ಪ್ರಭಾವ ಬೀರಿರುತ್ತದೆ. ಆಡು ಮಾತಿನಲ್ಲಿ ಅಭಿವ್ಯಕ್ತಗೊಳ್ಳುವ ಈ ಕತೆಯ ಚೌಕಟ್ಟು ಹಳೆಯದು.''೮

ಭಾರತದಲ್ಲಿ ಗ್ರಾಮೀಣ ಪ್ರದೇಶದಲ್ಲಿ ಋಗ್ವೇದ ಕಾಲದಿಂದಲೂ ಜಾನಪದ ಕಥಾ ಸಾಹಿತ್ಯ ಬೆಳೆದು ಬಂದಿರುವುದನ್ನು ಉದಾಹರಣೆಗಳ ಮೂಲಕ ಮತ್ತು ಅನೇಕ ಕವಿಗಳ ಮೂಲಕ ವ್ಯಕ್ತಪಡಿಸಿರುವುದನ್ನು ತುಂಬಾ ಅರ್ಥಪೂರ್ಣವಾಗಿ ಜೀ.ಶಂ. ಪರಮಶಿವಯ್ಯನವರು ವಿವರಿಸಿರುವುದನ್ನು ಈ ಅಧ್ಯಯನದ ಮೂಲಕ ತಿಳಿದುಕೊಳ್ಳಬಹುದು.

ಹಿಂದಿನ ಕಾಲದಲ್ಲಿ ಸಾಹಿತ್ಯ ರಚನೆಯು ಕೆಲವೇ ಕೆಲವು ವಿದ್ಯಾವಂತರ ಹಾಗೂ ಬುದ್ಧಿವಂತರು ಎನಿಸಿಕೊಂಡವರಿಗೆ ಮಾತ್ರ ಸೀಮಿತವಾಗಿತ್ತು. ಆದರೆ ಜನಪದ ಸಾಹಿತ್ಯ ಈ ರೀತಿಯದಲ್ಲ. ಗ್ರಾಮೀಣ ಪ್ರದೇಶದಿಂದ ಹಿಡಿದು ನಗರ ಪ್ರದೇಶಗಳವರೆಗೂ ಪ್ರತಿಯೊಬ್ಬ ಮಾನವನ ಮಾತಿನಿಂದಲೇ ಪ್ರಾರಂಭವಾಗುವ ಶಬ್ದಗಳಿಂದಲೇ ಜನಪದ ಸಾಹಿತ್ಯ ರೂಪುಗೊಂಡಿರುವುದನ್ನು ಕಾಣಬಹುದು. ಜನಪದ ಮಾತು ಮಾತಿಗೂ ಆಡಬಹುದಾದ ಗಾದೆಗಳು, ಪ್ರತಿಯೊಂದು ಗ್ರಾಮೀಣ ಪ್ರದೇಶದ ಸಮಾರಂಭಗಳಲ್ಲಿಯೂ ಜನಪದ ಆಚರಣೆ ಎದ್ದು ಕಾಣುವುದನ್ನು ಇಂದಿಗೂ ನಾವು ನೋಡುತ್ತೇವೆ. ವಯಸ್ಸಾದವರು ಮಕ್ಕಳನ್ನು ಮಲಗಿಸುವುದರಿಂದ ಹಿಡಿದು ಆಟವಾಡಿಸಲು, ಊಟ ಮಾಡಿಸಲು ಸಹ ಅನೇಕ ರೀತಿಯ ಕಥೆಗಳನ್ನು ಹೇಳಿ ಅವರನ್ನು ರಂಜಿಸುತ್ತಿದ್ದರು. ಜನಪದ ಸಾಹಿತ್ಯದ ಬಗ್ಗೆ ಒಳಹೊಕ್ಕು ನೋಡಿದಾಗ ಪ್ರತಿಯೊಂದು ಜನಪದ ವಾಕ್ಯವೂ ಸಹ ರೀತಿ, ನೀತಿ, ಮನರಂಜನೆ, ಜೀವನಾನುಭವ, ಬುದ್ಧಿವಾದ, ಮಾರ್ಗದರ್ಶನ ತೋರಿಸುವಂತಹ ಆತ್ಮಮೂಲ್ಯ ಅಂಶಗಳನ್ನು ಒಳಗೊಂಡಿರುವುದು ಕಂಡುಬರುತ್ತದೆ. ಈ ವಿಷಯವನ್ನು ಮೂರು ತಲೆಮಾರುಗಳಿಗೂ ಹೋಲಿಸಿ ನೋಡಿದಾಗ ಯಾವ ಸಾಹಿತ್ಯಕ್ಕೂ ಕಡಿಮೆ ಇಲ್ಲದಂತೆ ಶಿಷ್ಟ ಸಾಹಿತ್ಯಗಳೊಂದಿಗೆ ಪೈಪೋಟಿ ನಡೆಸುತ್ತಿದೆ. ಈಗಿನ ವಿದ್ಯಾವಂತರ ಸಾಹಿತ್ಯಕ್ಕೆ ಜಾನಪದವನ್ನು ಒಂದು ಅಧ್ಯಯನ ವಿಷಯ ಎಂಬಂತೆ ಪರಿಗಣಿಸಲು ಯೋಗ್ಯವಾಗಿದೆ ಎಂಬುದು ಅನೇಕ ತಜ್ಞರ ಅಭಿಪ್ರಾಯವೂ ಸಹ ಆಗಿರುತ್ತದೆ. ಇದರಲ್ಲಿ ಜನಪದ ಕಥೆಗಳು ಪ್ರಮುಖ ಪಾತ್ರ ವಹಿಸುತ್ತವೆ.

"ಕಥೆಗಳನ್ನು ಹೇಳುವ ಮತ್ತು ಕೇಳುವ ಕ್ರಿಯೆಯು ಮಾನವನ ಜೀವನದಲ್ಲಿ ತುಂಬಾ ಹಿಂದಿನಿಂದಲೂ ನಡೆದು ಬಂದಿದೆ. ಇದು ಎಲ್ಲಾ ಕಾಲಗಳು, ಎಲ್ಲ ಎಲ್ಲೆಗಳು, ಸಂಗತಿ, ನಾಟಿ, ಕಳೆ ಕೀಳುವಿಕೆ, ಕೊಯ್ಲು, ಕಣದ ಕೆಲಸ, ಮುಂತಾದ ದುಡಿಮೆಯ ಸಂದರ್ಭದಲ್ಲಿ ಹೇಳಲಾಗುವ ಕಥೆಯು ದಣಿವನ್ನು ಮರೆಸಿ ಮನಸ್ಸಿಗೆ ಗೆಲುವು ತರುತ್ತದೆ. ಎಮ್ಮೆ, ದನ, ಕುರಿ, ಆಡುಗಳನ್ನು ಕಾಯುವಾಗ ಕಾಡಿನಲ್ಲಿ ಬಯಲಿನಲ್ಲಿ, ಸಿಗುವ ಆರಾಮದ ವೇಳೆಯಲ್ಲಿ ಮಕ್ಕಳನ್ನು ಮಲಗಿಸುವಾಗ ಸೆಕೆ ಉಕ್ಕುವ ಬೇಸಿಗೆಯ ರಾತ್ರಿಗಳಲ್ಲಿ ಕಥೆಗಳನ್ನು ಕೇಳುವ ಕಿವಿಗಳು ಹೆಚ್ಚಿನ ಕುತೂಹಲದಿಂದ ಕೂಡಿರುತ್ತವೆ.

ಮನುಷ್ಯನು ವೈಯುಕ್ತಿಕವಾದ ಹಾಗೂ ಸಾಮಾಜಿಕವಾದ ಆವಶ್ಯಕತೆಯ ಆಧಾರದ ಮೇಲೆ ರಚಿತವಾಗಿರುವ ಕಥೆಗಳಲ್ಲಿ ಜನತೆಯ ಗತಕಾಲದ ಅನುಭವವಿದೆ. ನಿಜ ಜೀವನದಲ್ಲಿಯ ನಿರಾಶೆಯ ವಿರುದ್ಧದ ಕನಸು ಇಲ್ಲಿ ಕಂಡುಬರುತ್ತದೆ. ಸಾವು ನೋವು ರೋಗಗಳ ಬಗೆಗಿನ ಭಯಂಕರವಾದ ಹೆದರಿಕೆಯು ದೆವ್ವ, ದೇವರು, ರಾಕ್ಷಸ, ಬೇತಾಳಗಳನ್ನು ಸೃಷ್ಟಿಸಿಕೊಂಡಿರುವುದು ಕಾಣುತ್ತದೆ. ಮಾನವ ಮನಸ್ಸಿನ ಈ ತನಕದ ವಿಕಾರ, ದೌರ್ಬಲ್ಯ, ವೈಶಿಷ್ಟ್ಯಗಳನ್ನು ಗುರುತಿಸುವಲ್ಲಿ ಈ ಕಥೆಗಳು ನಮಗೆ ಹೆಚ್ಚು ನೆರವಾಗುತ್ತವೆ. ಸಮಾಜದ ನಂಬಿಕೆಗೆ ವಿರುದ್ಧವಾದ  ಕಥೆಯನ್ನು ಕಾಣಲಾಗುವುದಿಲ್ಲ."[೬]

"ಆಧುನಿಕ ಕನ್ನಡ ಸಾಹಿತ್ಯದಲ್ಲಿಯೂ ಜನಪದ ಸಾಹಿತ್ಯದ ಪ್ರಭಾವಕ್ಕೆ ಒಳಗಾದ ಅನೇಕ ಗಣ್ಯ ಕವಿಗಳನ್ನು ಕಾಣಬಹುದು. ಬೇಂದ್ರೆ, ಮಾಸ್ತಿ, ನರಸಿಂಹಸ್ವಾಮಿ, ಕಂಬಾರ ಮೊದಲಾದವರ ಕವಿತೆಗಳ ಮೇಲೆ ಜನಪದ ಗೀತೆಯ ಮಟ್ಟುಗಳೂ, ವಸ್ತು ವಿನ್ಯಾಸವೂ ಪ್ರಭಾವ ಬೀರಿದೆ."

ತೇಜಸ್ವಿಯವರ ಅಬಚೂರಿನ ಪೋಸ್ಟಾಫೀಸು ಕಥಾ ಸಂಕಲನದ 'ಕುಬಿ ಮತ್ತು ಇಯಾಲ' ಕತೆಯಲ್ಲಿ ಜಾನಪದ ಪ್ರಭಾವವಾಗಿರುವುದನ್ನು ಕಾಣಬಹುದು.

ಪೂರ್ಣಚಂದ್ರ ತೇಜಸ್ವಿಯವರ ಕುಬಿ ಮತ್ತು ಇಯಾಲ ಕತೆಯಲ್ಲಿ ಗ್ರಾಮೀಣ ಜನತೆಯನ್ನು ಪರಿವರ್ತಿಸಲು ಆಧುನಿಕತೆಯ ಬದಲಾಗಿ ಅಜ್ಞಾನ ಮತ್ತು ಮೂಢನಂಬಿಕೆಯ ಮೂಲಕವೇ ಪರಿವರ್ತನೆಯಲ್ಲಿ ವಿಫಲವಾಗುತ್ತಾರೆ. ಕೊನೆಗೆ ಅವರದೇ ಮೌಢ್ಯಗಳಿಗೆ ಒಳಗಾಗುವುದನ್ನು ನಾವು ನೋಡಿದಾಗ ಜಾನಪದದ ಪ್ರಭಾವ ಗ್ರಾಮೀಣ ಜನರ ಮೌಢ್ಯತೆಯಲ್ಲಿ ತುಂಬಿಕೊಂಡಿರುವುದು ಕಂಡುಬರುತ್ತದೆ.

ತೇಜಸ್ವಿ ಕತೆಗಳ ಕುರಿತು ಹೆಚ್.ಎಮ್.ಮಹೇಶ್ವರಯ್ಯನವರು ತೇಜಸ್ವಿ ಕತೆಗಳಲ್ಲಿ ಜಾನಪದದ ಪ್ರಭಾವವಾಗಿರುವುದನ್ನು ತಮ್ಮದೇ ಆದ ಅಭಿಪ್ರಾಯದಲ್ಲಿ ವಿವರಿಸಿರುವುದನ್ನು ಕಾಣಬಹುದು. ಈ ವಿವರಣೆಯು ನಮ್ಮ ಗ್ರಾಮೀಣ ಸಂಸ್ಕೃತಿಯಲ್ಲಿ ಆಗಿರುವ ಪಲ್ಲಟಗಳನ್ನು ಗಮನಿಸಬಹುದು.

ಈ ಸಂದರ್ಭವನ್ನು ಈ ಕತೆಯ ಮೂಲಕ ವಿವರಿಸಿದ್ದೇನೆ. "ಬೆಳಿಗ್ಗೆ ಲೋರಿಯ ವಾರ್ತೆ ಕಾಳ್ಗಿಚ್ಚಿನಂತೆ ಊರೆಲ್ಲಾ ಹಬ್ಬಿತು. ಇನ್ಸ್‌ಪೆಕ್ಟರೇ ಅರವರ ಸೇಸನನ್ನು ಕೊಂದಿದ್ದಾರೆಂದು ಅರವರ ಕೇರಿಯವರೆಲ್ಲಾ ಏಕಾಏಕಿ ಪೋಲೀಸ್ ಸ್ಟೇಷನ್ನಿನ ಮೇಲೆ ಸಶಸ್ತ್ರ ಧಾಳಿಗೆ ಸಿದ್ಧರಾದರು.

ಕುಬಿಯ ಗ್ರಹಿಕೆಗಿಂತ ವೇಗವಾಗಿ ಘಟನೆಗಳು ಸಂಭವಿಸತೊಡಗಿದವು. ಆದರೆ ಬೈರಾಪುರದ ಜನರಿಗೆ ಎಲ್ಲವೂ ತಿಳಿ ನೀರಿನಂತೆ ಸ್ಪಷ್ಟ. ಲೋರಿ ಪುಟ್ಟ ಸುಂದರಿ ಇಯಾಲಳ ಮೇಲೆ ಅತ್ಯಾಚಾರ ಮಾಡಿ ಕೊಂದ. ಅದಕ್ಕೆ ಅವಳು ಇವರು ಬಂಡೆ ಒಡಿಯುತ್ತಿರಬೇಕಾದರೆ ರಣವಾಗಿ ಬಂದು ಬಡಿದಳು. ಇಲ್ಲದಿದ್ದರೆ ಒಂದು ದಿನದವರೆಗೂ ಸುಪ್ತವಾಗಿ ಉಳಿದಿದ್ದ ಕಿಡಿ ಯಾರಿಗೂ ತೊಂದರೆ ಕೊಡದೆ ಇವರನ್ನೇ ಕೊಲ್ಲಲು ಇನ್ನೇನು ಕಾರಣ?

ಕುಬಿ ಡಾಕ್ಟರು ಸತ್ತ ಲೋರಿಯ ಹೆಣದ ಮೇಲೆ ಅವನ ಪ್ರೇತವನ್ನು ಆವಾಹನೆ ಮಾಡಿ ಈ ಎಲ್ಲ ಸತ್ಯಗಳನ್ನು ಕೇಳಿ ತಿಳಿದರು. ಮಹಾಸತ್ಯನಿಷ್ಠ ಕುಬಿ ಡಾಕ್ಟರು ಎಂದರೆ ಧೈಯ್ಯ, ಪ್ರೇತ, ಪಿಶಾಚಿಗಳು ತಗ್ಗಿ ನಡೆಯುತ್ತವೆ.

ಹೀಗೆಲ್ಲಾ ಆಲೋಚಿಸಿ ಜನ ಧೂಪದ ಮರದ ಬಂಡೆಯನ್ನು ಕುಬಿ ಡಾಕ್ಟರನ್ನು ಕೊಂಡಾಡತೊಡಗಿದರು. ಕುಬಿ ತಾನು ಯಾವುದನ್ನು ನಂಬದೆ ವಿರೋಧಿಸಿ ತಿರಸ್ಕರಿಸಿದ್ದನೋ ಅದನ್ನೇ ಗೂಢವಾಗಿ ಇನ್ನೊಂದು ಕಡೆಯಿಂದ ಪ್ರತಿಪಾದಿಸುತ್ತಲೂ ಬಂದುದು ಕಾಲಪುರುಷನ ಅಪಹಾಸ್ಯ ಇತಿಹಾಸದ ವ್ಯಂಗ್ಯ."[೧೦]

ಇವರದೇ ಕತೆಯಾದ 'ಅವನತಿ'ಯಲ್ಲಿಯೂ ಕೂಡ ಜನಪದದ ಪ್ರಭಾವವು ಸ್ಪಷ್ಟವಾಗಿ ಕಾಣಬಹುದು.

"ಅಸಾಮಾನ್ಯ ಕಲೆಗಾರಿಕೆಯನ್ನು ಹೊಂದಿದ್ದ ಸೂರಾಚಾರಿ ಇಸ್ಲಾಂಪುರದ ಹಳ್ಳಿಯ ಪರಿಸರದಲ್ಲಿ ತನ್ನ ಕಲಾವಂತಿಕೆಯನ್ನು ಬಳಸಿಕೊಳ್ಳಲಾರದ ಅವನತಿಯತ್ತ ಸಾಗುವ ಚಿತ್ರಣವೇ 'ಅವನತಿ' ಕಥೆಯ ವಸ್ತುವಾಗಿದೆ." ಹೊಯ್ಸಳರ ಕಾಲದ ಶ್ರೇಷ್ಠ ಶಿಲ್ಪಿಗಳ ಪರಂಪರೆಗೆ ಸೇರಿದ ತನ್ನೆಲ್ಲಾ ಅದ್ಭುತವಾದ ಶಿಲ್ಪ ನೈಪುಣ್ಯ ಮನೆಯ ತುಳಸಿಕಟ್ಟೆಗೆ ಬರಲೆಂದೂ ಕಲ್ಲಿಗೆ ಉಳಿ ಹಾಕಿ ಕೂಡುವುದಕ್ಕೂ, ಮಾರಿ ಮಸಣಿಗಳನ್ನು ಮಾಡಿ ಕೊಡುವುದಕ್ಕೂ ಬಳಸಿಕೊಳ್ಳುತ್ತಾನೆ. ಸೂರಾಚಾರಿಗೆ ತನ್ನಲ್ಲಿ ಹುದುಗಿರುವ ಕಲೆಯನ್ನು ಅರ್ಥಮಾಡಿಕೊಳ್ಳುವುದಾಗಲಿ ಅಥವಾ ಅದನ್ನೊಂದು ಅಭಿವ್ಯಕ್ತಿ ಮಾಧ್ಯಮವೆಂದು ತಿಳಿದುಕೊಳ್ಳುವುದಾಗಲಿ ಸಾಧ್ಯವಾಗುವುದಿಲ್ಲಾ. 'ಅವನತಿ' ಕಥೆಯಲ್ಲಿ ಬರುವ ಮತ್ತೊಂದು ಪಾತ್ರ ಇತ್ತಾವರದ ಗೌರಿ. ಸೌಂದರ್ಯವೇ ಮೈವೆತ್ತಿದ ದೇಹದ ವಿನ್ಯಾಸಗಳಿಂದಾಗಿ ಸೌಂದರ್ಯ ಛಂದೋಬದ್ಧವಾದಂತೆ ಕಾಣುತ್ತಿದ್ದರೂ, ಅವಳಿಗೆ ಅದರತ್ತ ಗಮನವೇ ಇರಲಿಲ್ಲ. ತನ್ನಲ್ಲಿ ಅಗಾಧವಾದ ಸೌಂದರ್ಯವಿದ್ದರೂ ಅದನ್ನು ಅರಿಯದ ಗೌರಿ, ಹಳ್ಳಿಯ ರೈತ ಸುಬ್ಬಯ್ಯನ ಮಡದಿಯಾಗಿ ಕಾಲ ಕಳೆಯಬೇಕಾದ ಪ್ರಸಂಗವನ್ನು ನಿರೂಪಿಸಿದ್ದಾರೆ."[೧೧]

ಸೂರಾಚಾರಿಯು "ತನ್ನ ಮಾವನ ಕರ್ಮಗಳನ್ನೆಲ್ಲಾ ಮುಗಿಸಿ ಹೆಂಡತಿ ಕರೆದುಕೊಂಡು ಪನ್ನಾಥಪುರದ ಕಡೆ ಹೊರಟ. ಆದರೆ ಮಲೆಸೀಮೆ ಗಡಿ ದಾಟುವಲ್ಲಿ ದಿಡ್ಡಿ ಎನ್ನುವ ಹಳ್ಳಿ ದಾಟಿದೊಡನೆಯೇ, ಯಾವುದೋ ಒಂದು ಪಿಚಾಚಿಯೋ, ದೆವ್ವವೋ ಅವನ ಹೆಂಡತಿ ಮೈಮೇಲೆ ಬಂದು ಕಾಡತೊಡಗಿತು. ಮತ್ತೆ ಗಡಿ ದಾಟಿ ಮಲೆಸೀಮೆಗೆ ಹಿಂದಿರುಗುವವರೆಗೂ ತೊಂದರೆ ಕೊಡುವುದನ್ನು ಬಿಡಲೇ ಇಲ್ಲ. ಏನು ಮಾಡಿದರೂ ಪರಿಸ್ಥಿತಿ ಹತೋಟಿಗೆ ಬರದೆ ಕೊನೆಗೆ ನಿರುಪಾಯನಾಗಿ ಇಸ್ಲಾಂಪುರಕ್ಕೆ ಹಿಂದಿರುಗಿದನು.

ಇಲ್ಲಿ ಸೂರಾಚಾರಿಯು ಹೆಂಡತಿಯನ್ನು ತನ್ನ ಊರಿಗೆ ಕರೆದುಕೊಂಡು ಬರುವುದಕ್ಕೆ ಪ್ರಯತ್ನ ಮಾಡುತ್ತಾನೆ. ಆದರೆ ತೇಜಸ್ವಿಯವರು ವಿವರಿಸಿರುವಂತೆ ಹೆಂಡತಿಯ ಮೈ ಮೇಲೆ ದೆವ್ವ ಬಂದಂತೆ ನಟಿಸುವುದು, ಗಂಡನ ಜೊತೆಯಲ್ಲಿ ಹೋಗಲು ವಿರೋಧಿಸುವುದನ್ನು ನಾವು ಮಾನಸಿಕವಾಗಿ ಅಸ್ವಸ್ಥಳು ಎಂಬುದನ್ನು ನಿರೂಪಿಸಲು ಸೂರಾಚಾರಿಗೆ ಸಾಧ್ಯವೇ ಆಗುವುದಿಲ್ಲ. ಮೂಢ ನಂಬಿಕೆಗಳಿಗೆ ಶರಣು ಹೋಗುತ್ತಾನೆ. ಅಲ್ಲಿಯ ವಾತಾವರಣಕ್ಕೆ ತಕ್ಕಂತೆ ಜನಗಳ ಅಭಿಪ್ರಾಯದಂತೆ ಅವಳನ್ನು ಆರೋಗ್ಯಕರ ಸ್ಥಿತಿಗೆ ತರಲು ಪ್ರಯತ್ನಿಸಿ ವಿಫಲನಾಗುತ್ತಾನೆ. ಸೂರಾಚಾರಿಯಂತಹ ಮಹಾನ್ ಶಿಲ್ಪಿ, ಜ್ಞಾನಿ ಹೆಸರಾಂತ ಕಲಾವಿದ ತನ್ನ ಎಷ್ಟೇ ನೈಪುಣ್ಯತೆಯನ್ನು ಉಪಯೋಗಿಸಿದರೂ ಸಹ ಮೂಢನಂಬಿಕೆ, ಅಜ್ಞಾನ, ಅಂಧಕಾರಗಳನ್ನು ಹೋಗಲಾಡಿಸಲು ಸಾಧ್ಯವಾಗಲೇ ಇಲ್ಲ. ಇದನ್ನು ತೇಜಸ್ವಿಯವರು ತುಂಬಾ ಮನನಾಟುವಂತೆ ತೋರಿಸಿಕೊಟ್ಟಿದ್ದಾರೆ.

"ಸ್ತ್ರೀರತ್ನ ಗೌರಿಯನ್ನು ಯಾರೂ ಗುರುತಿಸದೇ ಹೋಗುವುದು ಈ ಕಥೆಯ ವಿಪರ್ಯಾಸಗಳಲ್ಲಿ ಒಂದಾಗಿದೆ. ಗೌರಿಗೆ ಹುಟ್ಟುವ ಮೂರು ಮಕ್ಕಳೂ ತೀರಿಕೊಂಡಾಗ ಗೌರಿಯಲ್ಲಿಯೇ ದೋಷವನ್ನು ಹುಡುಕುವ

ಸಮಾಜ, ಗಂಡನಾದ ಸುಬ್ಬಯ್ಯ ಕೂಡ ಗೌರಿಯ ಮೇಲೆ ದೋಷಾರೋಪಣೆ ಮಾಡುವುದು, ಇವೆಲ್ಲ ಅವರ ಅಜ್ಞಾನವನ್ನು ಹಾಗೂ ಕುಹಕ ಮನಸ್ಸನ್ನು ತೋರಿಸುತ್ತವೆ. ಸೂರಾಚಾರಿ ಕೂಡ ಇಂಥ ಮೌಢ್ಯದ ಪ್ರಭಾವಕ್ಕೊಳಗಾಗಿ ಗೌರಯನ್ನು ದೂಷಿಸುವ ಮಟ್ಟಕ್ಕೆ ಇಳಿಯುತ್ತಾನೆ. ಪಾತ್ರಗಳು ಅವನತಿಯತ್ತ ಸಾಗುತ್ತಿರುವ ಅಂಶವನ್ನು ಲೇಖಕರು ಇಲ್ಲಿ ತೆರೆದಿಡುತ್ತಾರೆ."[೧೨]

"ಸೂರಾಚಾರಿಯ ಮೂಲ ಕಸುಬು ಕಲ್ಲಿನ ಕೆತ್ತನೆಯ ಕೆಲಸ. ಹೊಯ್ಸಳರ ಕಾಲದಿಂದ ಶಿಲ್ಪಿಗಳಾಗಿದ್ದ ಮನೆತನ ಅವನದು. ಇದೂ ಸಾಲದೆ ಸೂರಾಚಾರಿ ಇನ್ನೂ ಇತರ ಕಸುಬುಗಳನ್ನು ಮಾಡತೊಡಗಿದನು. ಮಂತ್ರ, ತಂತ್ರ, ತಾಯಿತ ಕೊಡುವುದು, ಮದ್ದು ತೆಗೆಯುವುದು ಮುಂತಾದುವನ್ನು ಅಭ್ಯಸಿಸಿದನು. ಇದರೊಡನೆಯೇ ಇನ್ನೂ ನೂರಾರು ಅರ್ಥಹೀನವಾದ, ಅಸಂಬದ್ಧವಾದ ಯಾವು ಯಾವುವೋ ಕಸುಬುಗಳನ್ನು ಮಾಡಿ ಆ ಊರಿನ ಜನಗಳ ಸಹನೆ ಸಹಿಷ್ಣುತೆಗಳಿಗೆ ಸೂರಾಚಾರಿ ಒಂದು ಉದಾಹರಣೆಯಾಗಿದ್ದನು.

ಆದರೆ ಅವನ 'ಶನಿ' ಹೆಂಡತಿಯೊಬ್ಬಳು ದಿಡ್ಡಿ ಗಡಿದಾಟುವ ಹಾಗೆ ಇರಲಿಲ್ಲ. ಈ ವಯಸ್ಸಿನಲ್ಲಿ ಮತ್ತೆ ಒಬ್ಬನೇ ಜೀವನವನ್ನು ಎದುರಿಸುವಷ್ಟು ಚೈತನ್ಯ ಸೂರಾಚಾರಿಗೆ ಬರಲಿಲ್ಲ. ಸೂರಾಚಾರಿಯೂ, ಅಜಮೀರಿನ ಫಕೀರಪ್ಪನೂ ಕೈಗೊಂಡ ಭೂತೋಚ್ಚಾಟನೆ ವಿಧಾನಗಳಿಂದ ಯಶೋಧೆ ಸವೆದು ಹೋದಳು. ಜೋಲು ಮೊಲೆಯ ಗುಳಿಕಣ್ಣಿನ ಯಶೋದೆಗೆ ಕೈಗೆ ಒಂದು ಖಡ್ಗವನ್ನೋ, ತ್ರಿಶೂಲವನ್ನೊ ಕೊಟ್ಟರೆ ಮಾರಿಗೊಂಬೆಯಂತೆಯೇ ಕಾಣಬಹುದಾದ ಸ್ಥಿತಿಗೆ ಬಂದಿದ್ದಳು."[೧೩]

ಗ್ರಾಮ ಜೀವನದಲ್ಲಿ ಗ್ರಾಮೀಣ ಜನತೆ ತಮಗೆ ಅರಿವಿಲ್ಲದೆಯೇ ಅನೇಕ ಅಜ್ಞಾನ ಮೌಢ್ಯಗಳಿಗೆ ಒಳಗಾಗಿರುವುದು ಕಂಡುಬರುತ್ತದೆ. ಉದಾ ಕುಬಿ ಮತ್ತು ಇಯಾಲ ಅವನತಿ ಈ ಕತೆಗಳನ್ನು ಅವಲೋಕಿಸಿದಾಗ ಈ ಎರಡೂ ಕತೆಗಳಲ್ಲಿಯೂ ಅನೇಕ ಜನರಿಗೆ ಬದುಕಿಗೆ ವಿರುದ್ಧವಾದ ಅಜ್ಞಾನ ಮೌಢ್ಯಗಳನ್ನು ಕಾಣಬಹುದು. ಕುಬಿ ಡಾಕ್ಟರು ಇವರು ವಿದ್ಯಾವಂತರಾಗಿದ್ದರೂ ಸಹ ಒಂದು ವಿಷಯವನ್ನು ಮನದಟ್ಟು ಮಾಡಲು ಅಲ್ಲಿ ಜನರು ಅನುಸರಿಸುವ ನಿಯಮಗಳನ್ನೇ ಅನುಸರಿಸಬೇಕಾಗುತ್ತದೆ. ನಮ್ಮ ಗ್ರಾಮೀಣ ಜನರು ಬೇಗನೆ ತಮ್ಮ ಜೀವನ ಕ್ರಮದಲ್ಲಿ ಹೊಸದನ್ನು ಅನುಸರಿಸಲು ಮುಂದಾಗುವುದಿಲ್ಲ.

ಸ್ವಾತಂತ್ರ್ಯಾನಂತರದ ದಿನಗಳಲ್ಲಿ ನಮ್ಮ ಗ್ರಾಮಗಳಲ್ಲಿ ಅನೇಕ ರೀತಿಯಾದ ಬದಲಾವಣೆ ಬಂದಿದೆ. ಗ್ರಾಮಗಳಲ್ಲಿ ಮುಕ್ಕಾಲು ಜನರು ಹೆಚ್ಚಿನ ಶಿಕ್ಷಣ ಹೊಂದಿದವರಾಗಿದ್ದು ಇಂತಹ ಹಳೆಯ ಕಂದಾಚಾರಗಳನ್ನು ಪ್ರತಿಭಟಿಸುವುದನ್ನು ನಮ್ಮ ಗ್ರಾಮಗಳಲ್ಲಿ ಕಾಣಬಹುದು. ಇಲ್ಲಿ ಕತೆಗಾರರು ಕಾಲಘಟ್ಟದ ನೆಲೆಯಿಂದ ಕತೆ ಬರೆದಿರುವವರಾದ್ದರಿಂದ ಆಗಿನ ಕಾಲಘಟ್ಟಕ್ಕೆ ಆ ಕತೆ ಸಮಂಜಸವಾಗಿರುತ್ತದೆ.

ಈ ಮೇಲಿನ ಎಲ್ಲ ಅಂಶಗಳು ಜಾನಪದದ ಪ್ರಭಾವವನ್ನು ಎತ್ತಿ ತೋರಿಸುತ್ತದೆ. ಸ್ವಾತಂತ್ರ್ಯಪೂರ್ವದಲ್ಲಿ ಮತ್ತು ನಂತರ ಪ್ರತಿಯೊಂದು ಕತೆಗಳಲ್ಲಿಯೂ ಸಹ ಜಾನಪದದ ಕಲೆಗಳು ಮತ್ತು ಸಂಭವನೀಯ ಸಂದರ್ಭಗಳನ್ನು ಚಿತ್ರಿಸಿರುವುದನ್ನು ಲೇಖಕರ ಕತೆಗಳಲ್ಲಿ ಮಹೇಶ್ವರಯ್ಯನವರು ಅತ್ಯಂತ ಸಮಂಜಸವಾಗಿ ಗುರುತಿಸಿದ್ದಾರೆ.

ಹೀಗೆ ಅವನತಿ ಕತೆಯಲ್ಲಿ ಕೆಲವು ಮೂಢನಂಬಿಕೆಗಳನ್ನು ನಂಬಿ ಜನರು ಅವರ ಜೀವನವನ್ನು ಅವನತಿಯ ಸ್ಥಿತಿಗೆ ಕೊಂಡೊಯ್ಯುವುದನ್ನು ಕಾಣಬಹುದು.

ರಾಮಣ್ಣನವರ ಮಹಾನವಮಿ ಕಥೆಯಲ್ಲಿ, ಮಹಾನವಮಿ ಎಂದೊಡನೆ ಒಂದು ಹಬ್ಬ, ಆಚರಣೆ ಎಂಬುದು ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಕಾಣಬಹುದು. ಹಿರಿಯರಿಗೆ ಎಡೆ ಹಾಕುವುದು ನಮ್ಮ ಮಹಾನವಮಿ ಹಬ್ಬದ ಸಂಕೇತವಾಗಿದೆ. ಹಾಗೆಯೇ ರಾಮಣ್ಣನವರ ಮಹಾನವಮಿ ಕತೆಯಲ್ಲಿ ಹಬ್ಬ ಹತ್ತಿರಕ್ಕೆ ಬಂದಾಗ ಯಾವ ಗಾಬರಿ, ಆಂತಕ ಮತ್ತು ಸಿದ್ಧತೆ ಹೇಗಿದೆ ಎಂಬುದನ್ನು ಈ ಸಂದರ್ಭದ ಮೂಲಕ ವಿವರಿಸಲಾಗಿದೆ.

ರಾಮಣ್ಣನವನರ ಮಹಾನವಮಿ ಕತೆಯಲ್ಲಿ ಮಹಾನವಮಿ ಹಬ್ಬಕ್ಕೆ ಮುಂಚಿತವಾಗಿ ಇಲ್ಲಿ ಬರುವ ಅತ್ತೆ ಪಾತ್ರದ ಮಹಿಳೆಯು ಬೆಳಗಿನಿಂದ ಸಂಜೆಯವರೆಗೂ ಹಬ್ಬದ ಸಿದ್ಧತೆಯಲ್ಲಿ ಕೆಲಸ ಮಾಡುತ್ತಾ ತನ್ನ ಸೊಸೆಗೆ ಪರೋಕ್ಷವಾಗಿ ತನಗೆ ಸಹಾಯ ಮಾಡುವುದಿಲ್ಲ ಎಂಬುದನ್ನು ತನ್ನಷ್ಟಕ್ಕೆ ತಾನೇ ಗೊಣಗಿಕೊಳ್ಳುತ್ತಾ ಕೆಲಸ ಮುಂದುವರಿಸಿರುತ್ತಾಳೆ. ಇಲ್ಲಿ ತನ್ನ ಮಾತನ್ನು ಯಾರೂ ಕೇಳುವುದಿಲ್ಲ. ತನ್ನನ್ನು ಕಸಕ್ಕಿಂತ ಕಡೆಯಾಗಿ ಕಾಣುತ್ತಾರೆ ಎಂದು ಸೊಸೆಯ ಬಗ್ಗೆ ಹಾಗೂ ಸಕಾಲದಲ್ಲಿ ಹಬ್ಬದ ತಯಾರಿ ಮಾಡಬೇಕೆಂಬ ಜವಾಬ್ದಾರಿ ಮಗನಿಗೂ ಇಲ್ಲ. ನಾನಿರುವುದರಿಂದ ಇವನ್ನೆಲ್ಲ ನೋಡಿಕೊಳ್ಳುತ್ತಿದ್ದೇನೆ, ಮಾಡುತ್ತಿದ್ದೇನೆ ಗತಿಸಿದ ತಂದೆಗೆ ಎಡೆ ಹಾಕಬೇಕೆಂಬ ಆತುರ ತೋರಿಸದೇ ಇರುವ ಮಗನ ಬಗ್ಗೆ ತನ್ನ ಅಸಹಾಯಕತೆಯನ್ನು ತಾನು ಇರುವವರೆಗೆ ಮಾತ್ರ ಇದನ್ನು ಮಾಡುತ್ತಿದ್ದನೇನೋ ತಾನು ಇಲ್ಲದೇ ಇದ್ದರೆ ಮಗ, ಸೊಸೆ ಇವರುಗಳು ಹಬ್ಬ ಮಾಡಲು ಸ್ಪಂದಿಸದೇ ಇರುವರೆಂಬ ಕಳವಳದ ಮೂಲಕ ತನ್ನ ನೋವನ್ನು ಹುಲ್ಲಟ್ಟಿಯ ತಿಮ್ಮಕ್ಕನಿಗೆ ಒಪ್ಪಿಸುತ್ತಿದ್ದ ವಾಣಿಯನ್ನು ಕೇಳಿ ಸೊಸೆಯ ಮನಸ್ಸಿಗೆ ತುಂಬಾ ಖೇದವಾಯಿತು. ಈ ಕತೆಯಲ್ಲಿ ಪುಟ್ಟನಿಂಗಿ ಅತ್ತೆಯ ಅಸಹನೆ ಎದ್ದು ಕಾಣುತ್ತದೆ. ಸೊಸೆಯ ಬಗ್ಗೆ ತಾತ್ಸಾರ ಮನೋಭಾವ ತನ್ನ ರಕ್ತ ಸಂಬಂಧಿಯನ್ನು ಮಗನಿಗೆ ತಂದುಕೊಂಡಿದ್ದರೆ ತಾನು ತುಂಬಾ ಸಂತೋಷವಾಗಿರುತ್ತಿದ್ದನೇನೋ ಎಂಬ ಬಯಕೆ ಇಲ್ಲಿ ಎದ್ದು ಕಾಣುತ್ತದೆ.

ಬೆಸಗರಹಳ್ಳಿ ರಾಮಣ್ಣನವರ ಮಹಾನವಮಿ ಹಬ್ಬ ಆಚರಣೆಯ ಬಗ್ಗೆ ಗ್ರಾಮೀಣ ಜನತೆ ಮುಂಚಿತವಾಗಿ ತಯಾರಾಗುವ ಸಂದರ್ಭವನ್ನು ಮನನಾಟುವಂತೆ ವರ್ಣಿಸಿರುವುದನ್ನು ಇಲ್ಲಿ ಗಮನಿಸಲಾಗಿದೆ.

ಇವರದೇ ಆದ 'ಸುಗ್ಗಿ' ಕತೆಯಲ್ಲಿಯೂ ಸಹ ಹೊಲದಲ್ಲಿ ರಾಶಿ ಪೂಜೆ ಮಾಡುವಾಗ ಕೆಲವು ಆಚರಣೆಯನ್ನು ನಾವು ಗಮನಿಸಬಹುದು.

ಬೆಸಗರಹಳ್ಳಿರಾಮಣ್ಣನವರ ಕೆಂಪು ಹುಂಜ ಕತೆಯಲ್ಲಿ ಕೋಳಿ ಹುಂಜ ಕಾಣೆಯಾದ ಒಂದು ಸಂದರ್ಭವನ್ನು ಗ್ರಾಮೀಣ ಮಹಿಳೆ ತನಗೆ ಆದ ನೋವು ಮತ್ತು ತನಗಾದ ನಷ್ಟವನ್ನು ಸಾರ್ವಜನಿಕವಾಗಿ ಬೈಗುಳದ ಮುಖಾಂತರ ಮಾರಮ್ಮನಿಗೆ ಹರಕೆ ಕಟ್ಟುವ ಮುಖಾಂತರ ತನ್ನ ಮನಸ್ಸಿನಲ್ಲಿ ಇಂತಹವರೇ ಕದ್ದರೆಂಬ ಸಂಶಯದೊಂದಿಗೆ ಅವರಿಗೆ ಕೇಡಾಗುವಂತೆ ಶಪಿಸಿ ಮಾರಮ್ಮ ಗ್ರಾಮದೇವತೆಯ ಮೂಲಕ ಕಳ್ಳರನ್ನು ಶಿಕ್ಷಿಸಬೇಕೆಂಬ ಹಂಬಲವನ್ನು ಇವರ ಕತೆಯಲ್ಲಿ ಜನಪದ ಚಿತ್ರಣವನ್ನು ನಾವಿಲ್ಲಿ ಕಾಣಬಹುದು.

ಹೀಗೆ ನಮ್ಮ ಜನಪದದಲ್ಲಿ ಯಾರಾದರೂ ಕಳ್ಳತನ ಮಾಡಿದರೆ ಊರಿನ ದೇವತೆಯಾದ ಮಾರಮ್ಮನಲ್ಲಿ ಹರಸಿಕೊಂಡರೆ ನಮ್ಮ ಬಯಕೆ ಈಡೇರುತ್ತದೆ ಎಂಬ ನಂಬಿಕೆ ಇದೆ.

ಇದೇ ಲೇಖಕರ ಹರಕೆಯ ಹಣ ಕತೆಯಲ್ಲಿ ಗ್ರಾಮೀಣ ಜನತೆ ಜಾತಿವಾರು ದೇವರುಗಳನ್ನು ಪೂಜಿಸುವುದನ್ನು ನಾವು ಗಮನಿಸಬಹುದು. ಆದರೆ ಇಲ್ಲಿ ಮುಖ್ಯ ಅಂಶವನ್ನು ಗಮನಿಸುವುದೇನೆಂದರೆ ಇಲ್ಲಿ ಎಲ್ಲಾ ದೇವರುಗಳ ಜಾತ್ರೆಗಳನ್ನು ಒಟ್ಟಿಗೆ ನಡೆಸುವುದು ಹಾಗೂ ಗ್ರಾಮಗಳಲ್ಲಿ ಹರಿಜನರು ಒಕ್ಕಲಿಗರು ಎಂಬ ಮೇಲು ಕೀಳು ಜಾತಿ ಎಂಬ ಬೇದಭಾಗಗಳಿದ್ದರೂ ಸಹ ಹರಿಜನರನ್ನೇ ಪೂಜಾರಿಗಳನ್ನಾಗಿ ನೇಮಿಸಿಕೊಂಡಿರುವುದು ಸ್ವಾತಂತ್ರ್ಯಪೂರ್ವ ಮತ್ತು ನಂತರ ಮುಂದುವರಿಸಿಕೊಂಡು ಬಂದಿರುವುದನ್ನು ನಾವು ಕಾಣಬಹುದು. ಇದರಲ್ಲಿ ಬಹುಮುಖ್ಯವಾಗಿ ಜಾತ್ರೆಗಳ ಸಂದರ್ಭಗಳಲ್ಲಿ ವಿವಿಧ ರೀತಿಯ ಆಚರಣೆಗಳನ್ನು ಗಮನಿಸಬಹುದು.

"ದಂಡಿಗನಮ್ಮ ಒಕ್ಕಲಿಗರ ದೇವರಾದುದರಿಂದ, ಜೊತೆಗೆ ಒಕ್ಕಲಿಗರ ಕುಳಗಳು ಗಟ್ಟಿಯಾಗಿ ರಸವಾಗಿರುವುದರಿಂದ ಅವಳ ದೇವಸ್ಥಾನಕ್ಕೆ ಗೋಪುರ, ಸುತ್ತ ಅರ್ಧ ಆಳುದ್ದದ ಗೋಡೆ ಉಂಟು. ದಂಡಿಗಮ್ಮನ ಮೈಮೇಲೆ ಅಡ್ಡಿಕೆ, ವಾಲೆ, ಮೂಗುತಿ ಎಲ್ಲಾ ಇವೆ. ದಂಡಿಗನಮ್ಮನ ಪೂಜಾರಿ ಮೆಣಸಲು ಚಿಟ್ಟಿಗೆ ಇಪ್ಪತ್ತೂರೋ, ಇಪ್ಪತ್ತೈದೋ ವಯಸ್ಸಾಗಿರ ಬೋದು. ಇವನು ಗುಡ್ಡನಾದ ಮೇಲೆ ಒಂದೇ ಸಾರಿ ದೊಡ್ಡ ಜಾತ್ರೆ, ಕೊಂಡ ಎಲ್ಲಾ ಆಗಿರೋದು. ಇವರ ದೊಡ್ಡಪ್ಪ ಗರಿಕೆ ಮೂರು ವರ್ಷದ ಹಿಂದೆ ದೊಡ್ಡ ಜಾತ್ರೆ ಆದ ಮೂರುದಿನಕ್ಕೆ ಗೊಟಕ್ ಅಂದ. ಅವನಿಗೆ ಒಬ್ಬಳೇ ಚಲುವಿ ಅಂತ ಮಗಳು. ಇವಳು ಗುಡ್ಡನಾಗೂವಂಗಿಲ್ಲ. ಹೆಣ್ಣು ದೇವರಿಗೆ ಗಂಡಸೇ ಗುಡ್ಡನಾಗಿರಬೇಕೆಂದು ಆಸೆ ಅಂತ ಕಾಣ್ತದೆ. ಅದು ಚಿಟ್ಟೆ ಕತ್ತಿಗೇ ಗಂಟು ಬೀಳ್ತು ಗರಿಕೆ ಸತ್ತಿದ್ದೇ ಒಂದು ಕತೆ.

ಇನ್ನು ಮಾಸ್ತಮ್ಮ, ಹುಚ್ಚಮ್ಮನ ದೇವಸ್ಥಾನಗಳು ಹರಿಜನ ಕೇರಿಯ ಮಧ್ಯದಲ್ಲಿ ಒಂದು ತಾವು ಅವೆ. ಮಣ್ಣಿನ ಗುಡಿಗಳು ಅಲ್ಲಲ್ಲಿ ಬಡಕಲು ದನಗಳ ಮೈಮೇಲೆ ಮೂಳೆಗಳು ಕಾಣುವಂಗೆ ಒಂದೊಂದು ಕಲ್ಲುಗಳು ಉಂಟು. ಸುತ್ತ ನಾಲ್ಕಾರು ಬೇವಿನ ಮರಗಳು ಮುಂದೆ ಗುಳಿ ಇರುವ, ತಲತಲಾಂತರದಿಂದ ಎಣ್ಣೆ ಊದುಬತ್ತಿ ಹಚ್ಚಿ ಹಚ್ಚಿ ಕಪ್ಪು ಕಪ್ಪುಗೆ ಜಿಡ್ಡುಗಟ್ಟಿದ ಎರಡು ಮೋಟು ಕಲ್ಲುಗಳು ಇಷ್ಟೆ ಜೊತೆಗೆ ಒಂದೊಂದು ಹೆಣ್ಣು ವಿಗ್ರಹ ಅದೂ ಬರೀ ತಲೆ ಮಾತ್ರ, ಹುಚ್ಚಮ್ಮನ ಗುರುತಿಸಲೋ ಏನೋ ಎನ್ನುವಂತೆ ಅವಳಿಗೆ ಆಕಡೆ ಈಕಡೆ ಕೋರೆ ಹಲ್ಲುಗಳು. ಇವಳಿಗೆ ಕೊಂಡದ ಹಕ್ಕು ಇಲ್ಲಾ, ದಂಡಿಗಮ್ಮನ ಕೊಂಡದಲ್ಲೇ ಅವಳು ಗುಡ್ಡನ ಹಿಂದೆ ಇವಳ ಗುಡ್ಡರೂ ಹಾಯಬೇಕು. ಆಮೇಲೆ ಪರದ ಉಂಟು. ಒಕ್ಕಲಿಗರಿಗೆ ಇತರ ದೊಡ್ಡ ಜಾತಿಯರಿಗೆಲ್ಲಾ ದಂಡಿಗಮ್ಮನ ಗುಡಿಯ ಸುತ್ತಮುತ್ತ ಕೂರಿಸಿ ಉಣ್ಣುವುದಕ್ಕೆ ಇಕ್ಕಿದ ಮೇಲೆ ಹರಿಜನರಿಗೆ ಮಿಕ್ಕಿದ್ದು ಗಿಕ್ಕಿದ್ದು. ಒಮ್ಮೊಮ್ಮೆ ಏನೂ ಮಿಗದೆ ಪುನಃ ಅಕ್ಕಿ ಹಾಕಿ ನೀರು ಸಾರು ಮರಳಿಸಿ ಇಕ್ಕಿದ ಕತೆಗಳು ನಡೆದಿವೆ. ಕಾರಣ ಬಾಡಿನ ಪರ ಎಂದರೆ ಹತ್ತಾರು ಮೈಲಿ ದೂರದಿಂದಲೇ ದಂಡಿಗಮ್ಮನ ಭಕ್ತವೃಂದ ವಾಸನೆ ಪತ್ತೆ ಹಚ್ಚಿ ರಾತ್ರಿ ಊಟಕ್ಕೆ ಮಧ್ಯಾಹ್ನದಿಂದಲೇ ಘೇರಾಯಿಸಿಬಿಡುವುದು."[೧೮]

ಇವರದೇ ಆದ ಹರಕೆಯ ಹಣ ಗ್ರಾಮದೇವತೆಯ ಹಬ್ಬಗಳ ಆಚರಣೆಯಲ್ಲಿ ಕೆಲವು ಹಳೆಯ ತಲೆಮಾರಿನ ವ್ಯಕ್ತಿಗಳು ಮತ್ತು ಪೂಜಾರಿಗಳು ಅವರ ನಿರ್ದೇಶನದಂತೆ ಜನತೆಗೆ ಮನನಾಟುವಂತೆ ಕೆಲವ್ಯಾಕರ್ಷಣೆಯುಳ್ಳ ಆಚರಣೆಗಳನ್ನು ಮಾಡುತ್ತಾರೆ. ಉದಾ. ಸ್ನಾನ, ಶುಭ್ರತೆ ಮತ್ತು ಉಪವಾಸದೊಂದಿಗೆ ಬರಿಗಾಲಿನಲ್ಲಿ ಬೆಂಕಿಯ ಮೇಲೆ ನಡೆಯುವುದು. ಸಿಡಿ ಹಾಯಿಸುವುದು, ಬಾಯಿ ಬೀಗ ಹಾಕುವುದು, ಸೋಮನ ಕುಣಿತ, ಹುಲಿ

ವೇಷಗಳು, ಆರತಿ ಹಾಡುವುದು, ಕಳಸ ಹೊರುವುದು, ನೆಡಮುಡಿ ಹಾಕುವುದು, ದೇವಾಲಯದ ಸುತ್ತ ಪ್ರದಕ್ಷಿಣೆ ಹಾಕುವುದು ಇದರ ಜೊತೆಗೆ ಕುರಿಕೋಳಿ ದನಗಳನ್ನು ಕಡಿಯುವುದು ಅದನ್ನು ಅಡಿಗೆ ಮಾಡಿ ಸಾರ್ವಜನಿಕರಿಗೆ ಬಡಿಸುವುದು. ಹೀಗೆ ಈ ಮೇಲಿನ ಎಲ್ಲ ಅಂಶಗಳನ್ನು ಗಮನಿಸಿದಾಗ ಜಾನಪದ ಲೋಕವನ್ನು ಇಲ್ಲಿ ಸೃಷ್ಟಿಸಿರುವುದು ಕಂಡುಬರುತ್ತದೆ.

ಹೀಗೆ ಒಂದು ಆಚರಣೆಯ ಸಂದರ್ಭದಲ್ಲಿ ನಡೆಯುವ ಜಾತಿ ಜಾತಿಗಳಲ್ಲೇ ಭೇದ ಭಾವವನ್ನು ಕಾಣಬಹುದು.

ಇವರದೇ ಆದ ಇನ್ನೊಂದು ಕತೆ 'ಶೂಲ' ಒಂದು ದುರಂತ ಪ್ರೇಮಕತೆ. ಇದು ಮಂಡ್ಯ ಜಿಲ್ಲೆಯ ಅರಕೆರೆ ಗ್ರಾಮದಲ್ಲಿ ನಡೆಯುವ ವಿಶಿಷ್ಟ ಹಬ್ಬವೊಂದರ ಹಿನ್ನೆಲೆಯಲ್ಲಿ ರಚಿತವಾದ ಕತೆ. ಅಪರೂಪಕ್ಕೊಮ್ಮೆ ನಡೆಯುವ ಈ ಹಬ್ಬವನ್ನು ಲೇಖಕರು ಮತ್ತು ಎಂ.ಚಿದಾನಂದಮೂರ್ತಿ ಹಾಗೂ ಅನೇಕ ಸ್ನೇಹಿತರೊಡನೆ ನೋಡುವ ಅದೃಷ್ಟ ೧೯೭೭ರಲ್ಲಿ ನನಗೆ ಲಭಿಸಿತ್ತು ಎಂದು ಬೆಸಗರಹಳ್ಳಿ ರಾಮಣ್ಣ ಹೇಳಿಕೊಂಡಿದ್ದಾರೆ.

ಪ್ರತಿವರ್ಷ ಆಚರಿಸಿಕೊಂಡು ಬರುತ್ತಿದ್ದ ಶೂಲದ ಹಬ್ಬ ಈಗ ಐದು ವರ್ಷಗಳಿಗೊಮ್ಮೆ ನಡೆಯುತ್ತಿದೆ. ಈ ಹಬ್ಬವನ್ನು ಊರಿನ ಎಲ್ಲರೂ ಸೇರಿ ಸಿದ್ಧತೆ ಮಾಡುತ್ತಾರೆ. ಈ ಹಬ್ಬ ಬೇರೆ ಹಬ್ಬಗಳಂತೆ ಸಾಮಾನ್ಯವಾದ ಹಬ್ಬವಲ್ಲ. ಇದಕ್ಕೆ ತಿಂಗಳಿಗೆ ಮುಂಚೆಯೇ ತಯಾರಿ ನಡೆಯಬೇಕು. ಹಾಗೂ ಹಬ್ಬಕ್ಕೆ ಒಂದು ತಿಂಗಳು ಮುಂಚೆಯೇ ಊರಿನಲ್ಲಿ ಕಟ್ಟುನಿಟ್ಟಾಗಿ ಯಾವುದೇ ಮಾಂಸ ಆಹಾರ ತಯಾರಿಕೆ, ಮೆಣಸಿನಕಾಯಿ ಘಾಟು ಮಾಡುವಂತಿಲ್ಲ ಎಂಬುದು ಪ್ರತೀತಿ. ಈ ಹಬ್ಬದ ವಿಶೇಷವೇನೆಂದರೆ ಶೂಲದ ಬೋರೆಯಲ್ಲಿ ಗುಂಡಿಗಳನ್ನು ತೆಗೆಯಲು ಮುಸಲ್ಮಾನರೇ ಪ್ರಮುಖರು. ನೂರಾರು ಬಲಿಷ್ಠ ಯುವಕರುಗಳು ಸೇರಿ ಅರವತ್ತು ಅಡಿ ಎತ್ತರದ ನಾಲ್ಕು ಅಡಿಕೆ ಮರಗಳನ್ನು ಕಡಿದು ನೆಲಕ್ಕೆ ತಾಕಿಸದಂತೆ ಮಾರಮ್ಮನ ಗುಡಿಗೆ ತಂದು ಪೂಜಿಸುವುದು ವಿಶೇಷ. ನಂತರ ಬೋರೆಗೆ ಸಾಗಿಸಿ ಮತ್ತೆ ಮರಗಳಿಗೂ ಹಾಗೂ ಹೂಳಬೇಕಾದ ಗುಂಡಿಗಳಿಗೂ ಪೂಜೆ ಸಲ್ಲಿಸಿ ನೆಡುತ್ತಾರೆ. ಮರಗಳ ಮೇಲೆ ನಿಂತುಕೊಳ್ಳಲು ಮಣೆಯನ್ನು ಸಹ ಜೋಡಿಸಿರುತ್ತಾರೆ. ಇವೆಲ್ಲ ಆದ ನಂತರ ಶೂಲ ಆಡುವರು. ಈ ಕತೆಯನ್ನು ರಾಮಣ್ಣನವರು ಕಣ್ಣಾರೆ ಕಂಡು ಅನುಭವಿಸಿ ಬರೆದ ನೈಜ ಚಿತ್ರಣವನ್ನು ಇಲ್ಲಿ ಕಾಣಬಹುದು.

ಶೂಲದ ಹಬ್ಬದ ದಿನ ಮಾರಮ್ಮನ ಪೂಜೆಯನ್ನು ಕೆರೆಯಿಂದ ಶೂಲದ ಬೋರೆಗೆ ಹುಮ್ಮಸ್ಸಿನಿಂದ ತಮಟೆಗಳು, ಕಹಳೆಗಳ ಸದ್ದಿನ ನಡುವೆ ಭಕ್ತರ ಕಾಕು, ಕೇಕೆಗಳೊಂದಿಗೆ ತಂದು; ಅಲ್ಲಿಂದ ಪೂಜೆ ಮಾರಮ್ಮನ ಗುಡಿಗೆ ನಡೆದು ಅಲ್ಲಿ ಪೂಜೆ ನಡೆಯುತ್ತಿದ್ದಂತೆಯೇ ಶೂಲ ಆಡುವವರು, ಬಲಿ ಬೀಳುವವರು ಬರುತ್ತಾರೆ. ಬಲಿಯವರು ಬಿದ್ದ ನಂತರ, ಶೂಲ ಆಡುವವರು ಮರಹತ್ತಿ ಆಡ ತೊಡಗುತ್ತಾರೆ. ಅಲ್ಲಿಂದ ಇಲ್ಲಿಗೆ ಬಳುಕುತ್ತ ಇನ್ನೇನು ನೆಲಕ್ಕೆ ಮಲಗಿ ಬಿಟ್ಟವೇನೋ ಎನ್ನುವಂತೆ ತೂಗುವ ಮರಗಳನ್ನು ಆಡುವವರನ್ನು ಜನರು ಉಸಿರು ಕಟ್ಟಿ ನೋಡುತ್ತಾ ನಿಂತುಬಿಡುತ್ತಾರೆ; ಒಮ್ಮೊಮ್ಮೆ ಹಿಂದಿನ ಕಾಲದಲ್ಲಿ ಶೂಲ ಆಡುವವರು ಪಕ್ಕದಲ್ಲಿರುವ ಮನೆಗಳ ಬೆನ್ನೆಂಚನ್ನು ಬಗ್ಗಿ ಎತ್ತಿಕೊಳ್ಳುತ್ತಿದ್ದುದೂ ಉಂಟಂತೆ.

ನಾಡಗೌಡರು ಕೊಟ್ಟು 'ಪೀಡಗಡವು' ಮರಿಯನ್ನು ಕಡಿದು ಮೂಲೆ ಮರ (ಮಧ್ಯದ ಶೂಲ ಆಡುವ ಮರ)ದ ಸುತ್ತ ಎಳೆದ ನಂತರ ಬಲಿಯವರನ್ನು ಎತ್ತಿಕೊಂಡು, ಶೂಲದವರನ್ನು ಕರೆದುಕೊಂಡು ಮಾರಮ್ಮನ ಗುಡಿಗೆ ದೌಡಾಯಿಸುವ ಆ ದೃಶ್ಯ! ಅನಂತರ ಬಿಸಿರಕ್ತದ ಪ್ರಾಯದ ಹುಡುಗರು ಶೂಲದ ಮರಗಳನ್ನೇರಿ ಒಬ್ಬರನ್ನೊಬ್ಬರು ಮೀರಿಸಿ ಶೂಲ ಆಡತೊಡಗುತ್ತಾರೆ. ಆಡುವಾಗ ಪ್ರಾಯದ ಹುಡುಗೀರು ಕಣ್ಣಿಗೆ ಬಿದ್ದು, ಅವರೇನಾದರೂ ಕಿರುನಗೆ ಬೀರಿದರೆಂದರೆ ತೀರಿತು."[೧೫] "ನೋಡುವವರ ಎದೆ ನಡುಗುವಂತೆ ರಭಸದಿಂದ ಆಡತೊಡಗುತ್ತಾರೆ. ಇಷ್ಟೆಲ್ಲಾ ನಡೆಯುತ್ತಿರುವಾಗ ಊರಿನ ಪ್ರಮುಖರನ್ನು ಅಶ್ಲೀಲವಾಗಿ ಆದರೆ ಕಾವ್ಯ ಶೈಲಿಯಲ್ಲಿ ಬೈಯ್ಯುವ 'ದಿಮ್ಮಿನಾಲೆ'ಯ ಪಾತ್ರದಾರಿ ಎಲ್ಲ ಮುಗಿದ ನಂತರ ಶೂಲ ಆಡಿದವರಿಗೆ, ಶೂಲದ ಬೋರೆಯ ಸರಹದ್ದಿಗೆ ಅಂಟಿಕೊಂಡಿರುವ ಶೆಟ್ಟರ ಮನೆಯಲ್ಲಿ ಊಟ, ಉಪಚಾರ. ಶೂಲದ ದಿನ ಈ ಶೆಟ್ಟರ ಮನೆಯಲ್ಲಿ ಎಳನೀರಿನಲ್ಲಿ ದೀಪ ಉರಿಯುವುದಂತೆ ಹಬ್ಬ ಮುಗಿದ ಒಂದು ತಿಂಗಳು ನಂತರ ಮರಗಳನ್ನು ಪೂಜೆ ಮಾಡಿದ ನಂತರ ಹರಿಜನರು ಭಕ್ತಿಯಿಂದ ಕೀಳುತ್ತಾರೆ."[೧೬]

ಇಲ್ಲಿ ಲೇಖಕರು ಆರಿಸಿಕೊಂಡಿರುವ ವಿಷಯ ಗ್ರಾಮೀಣ ಜನರು ವರ್ಷದ ಮಾರಮ್ಮನ ಪೂಜೆಯೊಂದಿಗೆ ಶೂಲದ ಹಬ್ಬದಂತಹ ಮನರಂಜನೆಯನ್ನು ಗ್ರಾಮೀಣ ಜನತೆ ಎಷ್ಟು ಭಕ್ತಿಯಿಂದ, ಉತ್ಸಾಹದಿಂದ, ಮನರಂಜನೆಯ ದೃಷ್ಟಿಯಿಂದ ಆಚರಿಸುವುದುನ್ನು ಹಾಗೂ ಮೂಢನಂಬಿಕೆಗಳನ್ನು ಕಣ್ಣಾರೆ ನೋಡಿ ಚಿತ್ರಿಸಿದ್ದಾರೆ. ಈ ಒಂದು ಸಂದರ್ಭದಲ್ಲಿ ನಾವು ಗಮನಿಸಬೇಕಾದ ಅಂಶ ಗ್ರಾಮೀಣರು ಆಚರಿಸುವ ಹಬ್ಬದಲ್ಲಿ ಯಾವ ಯಾಂತ್ರಿಕತೆಯಾಗಲಿ, ವೈಜ್ಞಾನಿಕತೆಯಾಗಲಿ, ಆಧುನಿಕತೆಯಾಗಲಿ ಇಲ್ಲದಿರುವುದು ಕಂಡುಬರುತ್ತದೆ. ಇದರಲ್ಲಿ ಅವರದೇ ಆದಂತಹ ಜಾನಪದ ಶೈಲಿಯಲ್ಲಿ ಆಚರಿಸುವುದು ತುಂಬಾ ಮನರಂಜನೆಯೊಂದಿಗೆ, ಭಕ್ತಿಯೊಂದಿಗೆ, ಮೂಢನಂಬಿಕೆಯೊಂದಿಗೆ ಅಪಾಯಕಾರಿಯಾದ ಆಚರಣೆಯನ್ನು ನಾವಿಲ್ಲಿ ಕಾಣುತ್ತೇವೆ.

ಅನಂತಮೂರ್ತಿಯವರ ಸಾಹಿತ್ಯ ಕುರಿತಂತೆ ಅವಲೋಕಿಸಿ ನೋಡಿದಾಗ ಉತ್ತಮ ಸಾಹಿತಿಯೆಂಬ ಹೆಗ್ಗಳಿಕೆ ಪಡೆದ ಲೇಖಕರ ಕೃತಿಗಳ ಬಗ್ಗೆ ವಿಮರ್ಶಿಸಬೇಕಾದ ಅಥವಾ ವಿಶ್ಲೇಷಣೆ ಮಾಡಬೇಕಾದ ಅಳತೆಗೋಲಿನ ಆಯ್ಕೆ ಬಹಳ ಕ್ಲಿಷ್ಟಕರವಾದದ್ದು. ಆದರೆ ಇವರ ಸಾಹಿತ್ಯ ರಚನೆಗಳನ್ನು ಪರಾಮರ್ಶಿಸಿದಾಗ ಮಾನವ ಮತ್ತು ಸಂಸ್ಕೃತಿ ಇವೆರಡಕ್ಕೂ ಇರುವ ಸಂಬಂಧದ ಬಗ್ಗೆ ಲೇಖಕರು ಹೊಂದಿರುವ ಅಭಿಪ್ರಾಯಗಳು ಗಹನವಾಗಿರುತ್ತವೆ. ಪ್ರತಿಯೊಬ್ಬ ಲೇಖಕನೂ ಮನುಷ್ಯನ ಚಿತ್ರ ವಿಚಿತ್ರ ಗುಣಗಳ ಬಗ್ಗೆ ವಿವರಣೆ, ವಿಶ್ಲೇಷಣೆ ಹಾಗೂ ತುಲನೆ ಮಾಡಬೇಕಾದ ಅವಶ್ಯಕತೆ ಇದ್ದೇ ಇರುತ್ತದೆ. ಈ ವಿಷಯವನ್ನು ಈ ಲೇಖಕರು ಈಗಾಗಲೇ ಒಪ್ಪಿಕೊಂಡಿರುವುದನ್ನು ನಾವು ಗಮನಿಸಬಹುದು. ಪ್ರತಿಯೊಬ್ಬ ಸಾಹಿತ್ಯ ರಚನೆಕಾರರು, ವಿಮರ್ಶಕರು, ಓದುಗರು ಈ ಎಲ್ಲಾ ಅಂಶಗಳನ್ನು ಮನುಷ್ಯ ಮತ್ತು ಅವನ ನೈತಿಕ ಆಯ್ಕೆ ಮತ್ತು ಅವನ ವ್ಯಕ್ತಿತ್ವಕ್ಕೆ ಸಂಬಂಧಪಟ್ಟಂತೆ ಸ್ವಾಯುತ್ತತೆಯ ಹಿನ್ನೆಲೆಯಲ್ಲಿಯೂ ಕೂಡ ಗಮನಿಸಬೇಕಾಗುತ್ತದೆ.

ಇಲ್ಲಿ ದೀಪಾವಳಿಯ ಹಬ್ಬ ಒಂದು ಆಚರಣೆಯ ಸಂಪ್ರದಾಯದ ಪ್ರತೀಕವಾಗಿ ಬಂದಿದೆ. "ಕಾರ್ತೀಕದ ರಾತ್ರಿ ಕಳೆದ ಕಾರ್ತೀಕದ ನೆನಪುಗಳನ್ನು ಹೊತ್ತಿಸುತ್ತದೆ. ಆ ದೀಪಾವಳಿಯ ಬಗ್ಗೆ ಬರೆಯಬೇಕು. ಕಾರ್ತೀಕದ ದಿನಗಳು ಋತುಚಕ್ರದಲ್ಲಿ ಮರಳಿ ಹತ್ತಿಸಿಟ್ಟ ಹಣತೆಗಳು ಮುಂತಾಗಿ ಉರಿಯುವುದು ನೋಡಿದಾಗ ಸತ್ತದ್ದು,

ಕೆಟ್ಟದ್ದು, ನೊಂದದ್ದು, ಬೇಕೆಂದೇ ನೋಯಿಸಿದ್ದು ನೆನಪಾಗುತ್ತದೆ. ತಾನೇ ಆ ಬಾಲಕ ಆದರೂ ಈಗಿನ ನನಗೆ ಪರಕೀಯ ಆದ್ದರಿಂದ ಈ ಕಣ್ಣಿನಿಂದ ಆ ಕಣ್ಣಿನಿಂದ ಒಟ್ಟಾಗಿ ಕಾಲವನ್ನು ನೋಡಬಹುದು.

ಸಗಣಿಯ ಪುಟ್ಟ ಪುಟ್ಟ ಉಂಡೆಯನ್ನು ಮಾಡಿ ಹೊಸಲಿನ ಮೇಲಿಟ್ಟು, ಮೇಲೆ ದೂರುವೆ ನೆಟ್ಟು, ಒಂದೊಂದು ಚೆಂಡು ಹೂವಿಟ್ಟು ಅಲಂಕರಿಸುವುದು, ಎರೆದುಕೊಳ್ಳುವುದು ಹಬ್ಬದ ಹಿಂದಿನ ದಿನವೆ? ಅಂಗಳದಲ್ಲಿ ಗೊಬ್ಬರದ ಗುಂಡಿಯ ಬಳಿ ಕೊಟ್ಟಿಗೆಯ ಹತ್ತಿರ, ಅಶ್ವತ್ಥ ವೃಕ್ಷದ ಕೆಳಗೆ, ಗ್ರಾಮದ ಮುಖ್ಯ ಬೀದಿಗಳಲ್ಲಿ ಪಾತಾಳದಿಂದ ಬಲೀಂದ್ರ ಲೋಕವನ್ನು ನೋಡಿ ಹೋಗಲು ಬರುವನೆಂದು ಪಂಜುಗಳನ್ನು ನೆಟ್ಟು 'ದೀಪ್ ದೀಪ್, ದೀಪ್ ಹೋಳ್ಗೆ- ಹಬ್ಬಕ್ಕೊಂದು ಹೋಳ್ಗೆ' ಎಂದು ಕೂಗುವುದು, ಕೇರಿಗೆ ಕೇಳಿಸುವ ಹಾಗೆ ಪೈಪೋಟಿಯಲ್ಲಿ ಗಂಟಲೆತ್ತಿ ಕೂಗುವುದು ಯಾವ ರಾತ್ರೆ? ಮಧ್ಯರಾತ್ರಿಯಲ್ಲಿ ಒಂದು ಕನಸಿನಿಂದ ಇನ್ನೊಂದು ಕನಸಿಗೆ ಮಗ್ಗುಲಾಗುವ ಅರೆವು-ಮರೆವಿನಲ್ಲಿ ಅಂಟಿಕೆ ಪಂಟಿಕೆಯ ತಂಡದವರು ಕಾರ್ತೀಕಕ್ಕೆಲ್ಲ ಕೊರಳು ಕೊಟ್ಟು ಹಾಡುವುದು ಯಾವ ದಿನ? ಮಂಕಾಗಿ ಉರಿಯುವ ಹಣತೆ ಮಿಣಕ್ ಮಿಣಕ್ ಎನ್ನುತ್ತದೆ. ನರಸಿಂಹ ಮಾವ ಸತ್ತ. ರಾಗಜ್ಜ ಸತ್ತರು. ಅಮ್ಮ ಸತ್ತಳು. ಒಂದಲ್ಲ ಒಂದು ದಿನ ಎಲ್ಲರೂ ಸಾಯಬೇಕೆನ್ನುವ ಮೃತ್ಯು ಪ್ರಜ್ಞೆಯಲ್ಲಿ ಹಬ್ಬ ಹುಣ್ಣಿಮೆ ಸಡಗರವೆಲ್ಲಾ ಆಹಾ! ಎಷ್ಟು ಸುಂದರ, ನೋಯುವುದು, ನೋಯಿಸುವುದು ಎಷ್ಟು ವ್ಯರ್ಥ ಎಂದು ಬಾಳು ಹದವಾಗಿರಬೇಕು, ಮೃದುವಾಗಿರಬೇಕು ಅದರ ಬದಲು ಎಷ್ಟೆಲ್ಲಾ ತಿಳಿದರೂ ಈಗ ನಾನೇ.

ಬೇಗ ಕೈಕಾಲು ತೊಳೆದುಕೋ ಹಂಡೆ ಖಾಲಿ ಮಾಡಿ ತೊಳೆದು ಶುದ್ಧ ಮಾಡಬೇಕೆಂದು ಅಮ್ಮ ಹೇಳಿದಳು. ಕೈಕಾಲು ತೊಳೆದು ಚಾವಡಿಯಲ್ಲಿ ಶಾಲು ಹೊದ್ದು ಮಾತಾಡದೆ ಕೂತ"೧೭ "ರಾಗಜ್ಜನ ಎದುರು ಮಗ್ಗಿ ಬರೆಯುತ್ತ ಕೂತೆ. ಲಾಟೀನಿನ ಎದುರು ಕೂತು ಕನ್ನಡಕವನ್ನು ಮೂಗಿನ ತುದಿಗೆ ಸಿಕ್ಕಿಸಿಕೊಂಡು ಅಪ್ಪ ರೂಲು ದೊಣ್ಣೆಯಿಂದ ಲೈನುಗಳನ್ನೆಳೆಯುತ್ತಿದ್ದರು. ಬಚ್ಚಲನ್ನು ಗುಡಿಸಿ ತೊಳೆಯುತ್ತಿರುವ ಶಬ್ದ ಹಿತ್ತಲಲ್ಲಿ ಕಿವಿಯಲ್ಲಿ ಒಳಗೆ ಒಳಗೆ ಹೋಗುವ ಅವಸರ. ನೆವಕ್ಕಷ್ಟು ಬರೆದು ಅಪ್ಪ ಮಗ್ನರಾಗಿ ಕೂತಿರುವುದು ನೋಡಿ ಒಳಕ್ಕೋಡಿದೆ.

ಪಳ ಪಳ ಹೊಳೆಯುತ್ತಿತ್ತು ಹಂಡೆ. ಒಲೆ ನೆಲವೆಲ್ಲಾ ಸಗಣಿ ಹಾಕಿ ಸಾರಿಸಿ ಹಸಿ ಹಸಿಯಾಗಿತ್ತು. ರಂಗೋಲೆ ಹಾಕುತ್ತ ಕೂತಿದ್ದಳು ಅಮ್ಮ. "ಎಲ್ಲಾ ನಾನೇ ಮಾಡಿ ಸಾಯಬೇಕು" ಎಂದು ಗೊಣಗಿದಳು. ಆಮೇಲೆ ಹಂಡೆಯ ಮೈಮೇಲೆ ಕೆಮ್ಮಣ್ಣಿನ ಮತ್ತು ಜೇಡಿಯ ಪಟ್ಟೆಗಳನ್ನೆಳೆದು, ಕೊರಳಿಗೆ ಹಿಂಡ್ಳಚ್ಚಿ ಬಳ್ಳಿಗಳನ್ನು ಕಟ್ಟಿ ಮಡಿಯಲ್ಲಿ ನೀರು ತುಂಬಿಸುವುದನ್ನು ನೋಡುತ್ತಾ ಪರವಶನಾದೆ.

ಸಮಾಜದಲ್ಲಿ ಮಹಿಳೆಯ ಬಗ್ಗೆ ಚರ್ಚೆ ಮಾಡಬೇಕಾದ ವಿಷಯವನ್ನು ಎಷ್ಟು ವರ್ಣಿಸಿದರೂ ಕಡಿಮೆಯೇ. ಆದರೂ ಸಹ ಪುರುಷ ಪ್ರಧಾನವಾದ ಈ ಸಮಾಜದಲ್ಲಿ ಮಹಿಳಾ ಸಾಹಿತ್ಯ ಮತ್ತು ಅಧ್ಯಯನಗಳ ಬಗ್ಗೆ ಮಹಿಳೆಯ ಸ್ಥಾನಮಾನ, ವಿದ್ಯಾಭ್ಯಾಸ, ನಡವಳಿಕೆ, ಸಂಪಾದನೆ, ಅಧಿಕಾರ, ಅಂತಸ್ತು, ಉದ್ಯೋಗ, ಆಕರ್ಷಣೆ, ಸನ್ನಿವೇಶ, ಪರಿಸರ ಇನ್ನೂ ಹಲವು ಅಂಶಗಳ ಬಗ್ಗೆ ಹಾಗೂ ಮಹಿಳೆಯ ಹಿನ್ನೆಲೆಯ ಬಗ್ಗೆ ಅಧ್ಯಯನ ಮಾಡಬಹುದಾಗಿದೆ. ಅವಳ ಸಾಹಿತ್ಯ ಪ್ರತಿಭೆ ಸಮಾನತೆಗಳನ್ನು ಕುರಿತು ವಿಶ್ಲೇಷಣೆ ಮಾಡಲೇಬೇಕಾಗುತ್ತದೆ.

ಮಹಿಳೆಯು ಎಲ್ಲಾ ರಂಗಗಳಲ್ಲಿಯೂ ಪ್ರವೇಶಿಸಲು ಅವಕಾಶ ದೊರೆಯಬೇಕು ಎಂಬುದರ ಚಿಂತನೆ ಆವಶ್ಯಕವಾಗಿ ಮಾಡಬೇಕಾಗಿದೆ.

ಈ ಹಿನ್ನೆಲೆಯಲ್ಲಿ ಇದರೊಂದಿಗೆ ನಾವು ಆಧುನಿಕ ಸಂದರ್ಭದಲ್ಲಿ ಸಾಹಿತ್ಯದಲ್ಲಿನ ಮಹಿಳಾ ವಿಷಯಗಳನ್ನು ಚರ್ಚಿಸಬೇಕಾಗಿದೆ. ನಾವಿಲ್ಲಿ ಸಂಸ್ಕೃತಿಯಿಂದ ಹೊರಟು ಸಾಹಿತ್ಯವನ್ನು ತಲುಪುತ್ತೇವೆಯೋ, ಸಾಹಿತ್ಯದಿಂದ ಹೊರಟು ಸಂಸ್ಕೃತಿಯನ್ನು ತಲುಪುತ್ತೇವೆಯೋ ಅನ್ನುವುದು ಅಧ್ಯಯನದ ಅನುಕೂಲದ ಪ್ರಶ್ನೆ ಅಷ್ಟೆ. ಒಟ್ಟಿನಲ್ಲಿ ಸಾಹಿತ್ಯ ಮತ್ತು ಮಹಿಳೆ ಅಂದಾಗ ಸಂಸ್ಕೃತಿಯ ಪ್ರಶ್ನೆಯನ್ನು ಬಿಟ್ಟಂತೂ ಮಾತನಾಡಲಾಗುವುದಿಲ್ಲ.[೪೦]

ಇದನ್ನು ಅವಲೋಕಿಸಿ ನೋಡಿದಾಗ ಮಹಿಳೆಯು ತನ್ನ ಸಾಂಸ್ಕೃತಿಕ ಚಟುವಟಿಕೆಗಳನ್ನು ಪುರುಷನೊಂದಿಗೆ ಸರಿಸಮಾನವಾಗಿ ನಡೆಸುವಂತಾಗಿರುವುದನ್ನು ಇಲ್ಲಿ ಗಮನಿಸಬಹುದು. ಇಲ್ಲಿ ಲೇಖಕರು ಸ್ವಾತಂತ್ರ್ಯೋತ್ತರದ ನಂತರದಲ್ಲಿ ಮಹಿಳೆಯ ಸ್ಥಾನಮಾನದ ಬಗ್ಗೆ ತುಂಬಾ ಸೂಕ್ಷ್ಮವಾಗಿ ಗುರುತಿಸಿರುವುದು ಕಂಡುಬರುತ್ತದೆ.

"ವಿವಾಹ ಮಹಿಳೆಗೆ ಬಹುಮುಖ್ಯವಾಗುವುದು ಸಾಮಾಜಿಕ ಕಾರಣಗಳಿಂದ. ಹೆಣ್ಣನ್ನು ಪೂಜಿಸುವ ಈ ಪವಿತ್ರ ನಾಡಿನಲ್ಲಿ, ಹೆಣ್ಣು ಪೂಜಿಸಲ್ಪಡುವುದು, ಆಕೆ ವಿವಾಹಿತಳೋ, ತಾಯಿಯೋ ಆಗಿದ್ದಾಗ ಮಾತ್ರ. ಪ್ರತಿಯೊಂದು ಮದುವೆ, ಮುಂಜಿ, ಸೀಮಂತನ ಮುಂತಾದ ಕೌಟುಂಬಿಕ ಸಮಾರಂಭಗಳಲ್ಲಿ ಮುತ್ತೈದೆಯರಿಗೆ ಪ್ರಾಶಸ್ತ್ಯ. ಇಲ್ಲಿ ವಿಧವೆಗೆ, ವಿಚ್ಛೇದಿತಳಿಗೆ, ಅವಿವಾಹಿತಳಿಗೆ ಗೌರವದ ಸ್ಥಾನವಿಲ್ಲ. ಗಂಡ ಕುಡುಕನಿರಲಿ, ಕೆಡುಕನಿರಲಿ, ಈಕೆ ದನ ಬಡಿಸಿಕೊಂಡಂತೆ, ಬಾಯ್ಮುಚ್ಚಿ ಬಡಿಸಿಕೊಂಡವಳಿರಲಿ, ಸಮಾಜದಲ್ಲಿ ವಿವಾಹಿತ ಸ್ತ್ರೀಗೆ ಒಂದು ವಿಶಿಷ್ಟ ಸ್ಥಾನ, ಮಾನ, ಗೌರವ.

ಧರ್ಮಾರ್ಥ ಕಾಮ ಮೋಕ್ಷಗಳಲ್ಲಿ, ಅರ್ಥ ಕಾಮದ ಪೂರೈಕೆಯೇ ಮುಖ್ಯವಾಗಿ ರೂಪುಗೊಂಡ ವಿವಾಹ ಸಂಸ್ಥೆ, ಹೆಣ್ಣಿನ ಬದುಕನ್ನು ಪೂರ್ಣವಾಗಿ ಬದಲಾಯಿಸುವ ಘಟನೆ ಗಂಡು ಹೆಣ್ಣನ್ನು ಮಾತ್ರ ವಿವಾಹವಾಗುತ್ತಾನೆ. ಹೆಣ್ಣು ಗಂಡನ್ನು, ಅವನ ಇಡೀ ಕುಟುಂಬವನ್ನೂ ಅವನ ಬಂಧು ಬಳಗವನ್ನು ವಿವಾಹವಾಗುತ್ತಾಳೆ. ವಿವಾಹ ಆಕೆಗೆ ಪುನರ್ಜನ್ಮದಷ್ಟು ದೊಡ್ಡ ಘಟನೆಯಾಗುತ್ತದೆ. ಕಾರಣ ಆಕೆ ತನ್ನ ಪರಿಚಿತ ತವರನ್ನು, ತವರಿನವರನ್ನು ತೊರೆಯುವುದಷ್ಟೆ ಅಲ್ಲಾ ತಾನು ಬಯಸಿದಾಗ ತನ್ನ ತಾಯ್ತಂದೆಯರನ್ನು ಬಂದು ಭೆಟ್ಟಿಯಾಗುವ ಸ್ವಾತಂತ್ರ್ಯವನ್ನು ಬಹಳಷ್ಟು ಮಹಿಳೆಯರು ಕಳೆದುಕೊಳ್ಳುತ್ತಾರೆ. "ಮಗಳ ಮನೆಯಲ್ಲಿ ಹನಿ ನೀರು ಕುಡಿಯಬಾರದು" ಎಂಬ ಉತ್ತರ ಭಾರತದ ಸಂಪ್ರದಾಯಗಳು, ತೌರಿನವರಿಗೆ ಮಗಳ ಮನೆಯನ್ನು ಸಂಪೂರ್ಣವಾಗಿ ಹೊರತಾಗಿಸುತ್ತದೆ. ತವರು ಮನೆಯ ರೂಢಿ, ಆಚರಣೆ ಎಲ್ಲವನ್ನೂ ಈಕೆ ಬಿಟ್ಟು ಅತ್ತೆ ಮನೆಯ ಊಟ, ತಿಂಡಿ, ಮಡಿ, ಹುಡಿ, ಜೀವನಕ್ರಮ ಎಲ್ಲಕ್ಕೂ ಹೊಂದಿಕೊಳ್ಳಬೇಕಾಗುತ್ತದೆ. ಎಲ್ಲವನ್ನೂ ಹೊಸದಾಗಿ ಕಲಿಯಬೇಕಾಗುತ್ತದೆ. ವಿವಾಹದಲ್ಲಿ ಹೊಂದಾಣಿಕೆ ಪೂರಾ ಹೆಣ್ಣಿನದಾಗಿರುತ್ತದೆ.

ಹೀಗಾಗಿ ಮಾರಿಗುಡಿಯ ಮಾರಮ್ಮನಿಗೆ ಒಂದು ಆರತಿ ಪೂಜೆಯಾದರೆ ಊರ ಹೊರಗೆ ಒಂದು ನಿರ್ಧಿಷ್ಟವಾದ ಜಾಗದಲ್ಲಿ ಇನ್ನೊಂದು ಆರತಿ ಪೂಜೆ ನಡೆಯುತ್ತಿತ್ತು.

ವರ್ಷಕ್ಕೆ ಎರಡು ಬಾರಿ ಮಾರಮ್ಮನ ಗುಡಿಯಲ್ಲಿ ಮಾರಮ್ಮನಿಗೆ ಪೂಜೆ ಸಲ್ಲುತ್ತಿತ್ತು. ಒಂದು 'ಕೊಲ್ಲಾಪುರದ ಹಬ್ಬ'ವೆಂತಲೂ ಇನ್ನೊಂದು 'ಮಾರಮ್ಮನ ಹಬ್ಬ'ವೆಂಬ ಹೆಸರಿನಿಂದಲೂ ನಡೆಯುತ್ತಿದ್ದವು."[೧೮] "ಮಾರಮ್ಮನ ಹಬ್ಬ ಮಂಗಳವಾರ ಸಂಜೆ ಮೂರು ಗಂಟೆಗೆ ಶುರುವಾಗಿ ಐದು ಗಂಟೆಗೆ ಮುಗಿಯುತ್ತಿತ್ತು. ಸಂಜೆ ಏಳು ಗಂಟೆಗೆ ಒಂದು ಮನೆಯ ಹತ್ತಿರ ಅಗಸರು, ತಮಟೆ ಬಡಿಯುವವರು ಸೇರಿ 'ನಾಡ ಮಾರಮ್ಮ'ನನ್ನು ಸೃಷ್ಟಿಸಿ ಊರವರೆಲ್ಲಾ ತರುತ್ತಿದ್ದ 'ಉಪಾರ'ವನ್ನು ದೇವಿಗೆ ನೈವೇದ್ಯ ರೂಪದಲ್ಲಿ ಅರ್ಪಿಸಿ ಅವಳನ್ನು ಊರಿನಿಂದಾಚೆ ವಿಸರ್ಜಿಸಿ ಬಂದು ನೈವೇದ್ಯವನ್ನು ಹಂಚಿಕೊಂಡು ಊಟ ಮಾಡುತ್ತಿದ್ದರು. ನೈವೇದ್ಯದಲ್ಲಿ ಮಾಂಸದ ಸಾರು, ಅನ್ನ, ಮುದ್ದೆ ಮತ್ತು ತಂಬಿಟ್ಟು ಸೇರಿರುತ್ತಿದ್ದವು. ಅಕ್ಟೋಬರ್ ತಿಂಗಳಲ್ಲಿ ಆಚರಿಸುತ್ತಿದ್ದ ಈ ಹಬ್ಬ 'ತಂಪು' ಅನ್ನುವ ಹೆಸರಿನಿಂದ ಕರೆಯಲ್ಪಡುತ್ತಿತ್ತು. ಕೊಲ್ಲಾಪುರದಮ್ಮನ ಹಬ್ಬವು ಬುಧವಾರ ರಾತ್ರಿಯಿಂದ ಶುರುವಾಗಿ ಗುರುವಾರ ಬೆಳಗಿನ ಜಾವ ನಾಲ್ಕು ಗಂಟೆಯಿಂದ ಏಳು ಗಂಟೆಯವರೆಗೆ ನಡೆಯುತ್ತಿತ್ತು. ಜನ ಇದನ್ನು 'ಊರಬ್ಬ' ಎಂಬ ಹೆಸರಿನಿಂದಲೂ ಕರೆಯುತ್ತಿದ್ದರು. ಇದು ಯುಗಾದಿ ಹಬ್ಬ ಆದ ಹದಿನೈದು ದಿವಸಗಳಾದ ನಂತರ ಆಚರಿಸಲ್ಪಡುತ್ತಿತ್ತು. ಇದು ಊರ ಜನರಿಗೆ ಸಂಭ್ರಮದ ಹಬ್ಬವಾಗಿತ್ತು.

ಮಾರಿಗುಡಿಗೆ ಸುಣ್ಣ, ಬಣ್ಣ ಬಳಿಯುವ ಕೆಲಸದಿಂದ ಹಬ್ಬವು ಅಧಿಕೃತವಾಗಿ ಆರಂಭವಾದಂತಾಗುತ್ತಿತ್ತು. ಊರಿನ ಮುಖ್ಯಸ್ಥರು ಮುಂದಾಳಾಗಿ ನಿಂತು ಹಬ್ಬದ ಕೆಲಸಗಳನ್ನು ವಹಿಸಿಕೊಂಡು ಅದನ್ನು ನಡೆಸಲು ನಿರ್ದೇಶಿಸುತ್ತಿದ್ದರು.

ಹಬ್ಬಗಳನ್ನು ಆಚರಿಸುವ ಸಂದರ್ಭದಲ್ಲಿ ಮನೆಯಲ್ಲಿನ ಧೂಳು ಕೊಡವಿ ಸುಣ್ಣ, ಬಣ್ಣ ಬಳಿದು ಸೂತಕವನ್ನು ಕಳೆದುಕೊಳ್ಳುವುದು ಹಳ್ಳಿಗಳಲ್ಲಿ ಮೊದಲಿನಿಂದಲೂ ರೂಢಿಯಲ್ಲಿತ್ತು. ಮಾರಮ್ಮನ ಹಬ್ಬದ ಸಂದರ್ಭದಲ್ಲೂ ಇದು ಹೆಚ್ಚಾಗಿಯೇ ನಡೆಯುತ್ತಿತ್ತು. ಮನೆಯಲ್ಲಿರುವ ಹಳೆ ಮಡಿಕೆ, ಕುಡಿಕೆಗಳೆಲ್ಲಾ ಕಿರು ಮನೆಗೆ ಸೇರಿ ಹೊಸ ಮಡಿಕೆಗಳು ತಮ್ಮ ಅಸ್ತಿತ್ವವನ್ನು ನೆಲೆಗೊಳಿಸುತ್ತಿದ್ದವು. ಪಾತ್ರೆ ಪಡಗಗಳೆಲ್ಲಾ ನೀರು, ಹುಣಿಸೆಹಣ್ಣು ಕಂಡು ಹೊಳೆಯತನಕ ಹೋಗಿ ಬರುತ್ತಿದ್ದವು. ಹೆಂಗಸರಿಗಂತು ಒಂದು ವಾರಕ್ಕೆ ಮುಂಚಿನಿಂದಲೂ ಈ ಎಲ್ಲಾ ಕೆಲಸಗಳ ಒತ್ತಡ ಹೆಚ್ಚಾಗಿ ಇರುತ್ತಿದ್ದವು. ಬಟ್ಟೆ ಬರೆಗಳಲ್ಲಿ ಕೆಲವು ಅಗಸರ 'ಮಡಿ' ಕಂಡು ಬಂದರೆ, ಇನ್ನುಳಿದವು ತೊರೆಯ ನೀರನ್ನು ಕಾಣುತ್ತಿದ್ದವು. ನೆಲವೆಲ್ಲಾ ಅಕ್ಕಿ ರಂಗೋಲೆಯಿಂದ ಕಂಗೊಳಿಸುತ್ತಿತ್ತು."[೧೯]

"ಊರಿನಲ್ಲಿ ಯಾವುದೇ ಘಟನೆಗಳ ಬಗ್ಗೆ ಊರ ಜನಕ್ಕೆ ತಿಳಿಸಬೇಕಾದರೆ ತಳವಾರ ತಮಟೆ ಬಡಿದುಕೊಂಡು ಊರೆಲ್ಲಾ ಸುತ್ತಿ ವಿಷಯವನ್ನು ಹೇಳುತ್ತಿದ್ದ ಸಂಜೆ ಹೊತ್ತು ತಮಟೆ ಶಬ್ದ ಕೇಳಿದರೆ ಎಲ್ಲರಿಗೂ ಕಿವಿ ಒಂದು ಕ್ಷಣ ನೆಟ್ಟಗಾಗಿ ಅವನು ಸಾರುವ ವಿಷಯವನ್ನು ಕೇಳಲು ಎಲ್ಲರೂ ಕುತೂಹಲ ತಾಳುತ್ತಿದ್ದರು.

ಕುಸುಮರವರ ಆಚರಣೆ ಕತೆಯಲ್ಲಿ ಗ್ರಾಮೀಣ ಸಂಸ್ಕೃತಿಯ ಸೊಗಡು ಕಂಡುಬರುತ್ತದೆ. ಇದರಲ್ಲಿ ಗ್ರಾಮೀಣ ಜನರು ಸುಗ್ಗಿಯಾದ ನಂತರ ಅಂದರೆ ಸಾಮಾನ್ಯವಾಗಿ ಯುಗಾದಿ ಆದನಂತರ ಜಾತ್ರೆ, ಊರಹಬ್ಬ ಹಾಗೂ ವಿವಿಧ ಮನರಂಜನೆಗಳನ್ನು ಏರ್ಪಡಿಸುವುದು ವಾಡಿಕೆ. ಇದರಂತೆ ಕುಸುಮರವರ ಆಚರಣೆ ಕತೆಯಲ್ಲಿ ಬರುವ ಕೊಲ್ಲಾಪುರದಮ್ಮ ಮತ್ತು ಮಾರಮ್ಮನ ಜಾತ್ರೆ ಆಚರಣೆ ಮಾಡುವುದನ್ನು ಅನೇಕ ಉದಾಹರಣೆಗಳ

ಮೂಲಕ ಚಿತ್ರಿಸಿದ್ದಾರೆ. ನಮ್ಮ ಗ್ರಾಮೀಣ ಜನರು ಈ ಜಾತ್ರೆ ಮಾಡುವುದಕ್ಕೆ ಒಂದು ವ್ಯವಸ್ಥೆಯನ್ನು ಮಾಡಿಕೊಳ್ಳುತ್ತಾರೆ. ಜಾತ್ರೆ ಪ್ರಾರಂಭವಾಗುವುದಕ್ಕೆ ಮುಂಚಿತವಾಗಿ ಊರಿನ ಮುಖ್ಯಸ್ಥರೆಲ್ಲ ಕಲೆತು ಜಾತ್ರೆಯ ನಿರ್ದಿಷ್ಟ ದಿನವನ್ನು ಗೊತ್ತು ಪಡಿಸುತ್ತಾರೆ. ಈ ಜಾತ್ರೆ ಸಾಮಾನ್ಯವಾಗಿ ಊರಲ್ಲಿ ಮತ್ತು ಊರ ಹೊರಗಡೆ ನಡೆಯುತ್ತದೆ. ಇದಕ್ಕೆ ಹಣದ ವ್ಯವಸ್ಥೆಯನ್ನು ಊರಿನ ಪ್ರತಿಯೊಂದು ಮನೆಯಿಂದ ಇಂತಿಷ್ಟು ಚಂದ ಹಣ ಹಾಕಿರುತ್ತಾರೆ. ಹಾಗು ಊರಿನಲ್ಲಿ ನ್ಯಾಯ ಪಂಚಾಯಿತಿಗಳಿಂದ ವಸೂಲಾದ ದಂಡದ ಹಣವನ್ನು ಒಟ್ಟುಗೂಡಿಸಿ ಜನಗಳಿಗೆ ಬಡ್ಡಿ ರೂಪದಲ್ಲಿ ಕೊಟ್ಟು ಹಣವನ್ನು ಬೆಳೆಸುತ್ತಾರೆ. ಇದನ್ನು ದೇವರ ಚೀಟಿ ಎಂತಲೂ ಮಾರಮ್ಮನ ಚೀಟಿ ಎಂತಲೂ ಹೆಸರಿಸಿ ಬಹಳ ನಿಷ್ಠೆಯಾಗಿ ನಡೆಸಿಕೊಂಡು ಹೋಗುತ್ತಾರೆ. ಆದ್ದರಿಂದ ಹಣದ ಕೊರತೆ ಜಾತ್ರೆ ನಡೆಸಲು ಅಷ್ಟೊಂದು ಕಷ್ಟವಾಗುವುದಿಲ್ಲ. ಜಾತ್ರೆ ಪ್ರಾರಂಭವಾಗುವುದಕ್ಕೆ ಒಂದು ವಾರ ಮುಂಚೆ ದೇವರ ಗುಡಿಗಳಿಗೆ ಹಾಗೂ ಸಾರ್ವಜನಿಕ ಸ್ಥಳಗಳಿಗೆ ಸುಣ್ಣ ಬಣ್ಣ ಮುಂತಾದವುಗಳನ್ನು ಬಳಿಯುತ್ತಾರೆ. ಜಾತ್ರೆಯ ದಿನವನ್ನು ನಿಗಧಿಪಡಿಸುತ್ತಿದ್ದಂತೆಯೇ ಊರಿನಲ್ಲಿ ಸಾರ್ವಜನಿಕವಾಗಿ ಡಂಗೂರ ಹೊಡೆಯುತ್ತಾರೆ. ಡಂಗೂರವನ್ನು ಕೇಳಿ ಗ್ರಾಮದ ಜನರು ಅಂದಿನಿಂದಲೇ ಜಾತ್ರೆಗೆ ತಯಾರಿ ನಡೆಸುತ್ತಾರೆ. ನಮ್ಮ ಗ್ರಾಮೀಣ ಜನರ ವ್ಯವಸ್ಥೆಯಲ್ಲಿ ಇನ್ನೊಂದು ವಿಶೇಷತೆ ಏನೆಂದರೆ ಒಂದೊಂದು ವಿಭಾಗಕ್ಕೂ ವಿವಿಧ ಜನಾಂಗದ ಜನರು ತಮ್ಮ ಕಾರ್ಯಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸುವುದನ್ನು ಕಾಣಬಹುದು. ಉದಾ. ಊರಿನ ಜಾತ್ರೆಯ ಬಗ್ಗೆ ಪ್ರಚಾರಪಡಿಸಲು ತಮಟೆ ಹೊಡೆಯುವವನು, ಜಾತ್ರೆಯ ಸಂದರ್ಭದಲ್ಲಿ ದೇವರಿಗೆ ವಾದ್ಯ ಬಾರಿಸುವವನು, ಊರಿನ ತಳವಾರ ಪ್ರತಿಯೊಬ್ಬರಿಗೂ ಮುಖ್ಯಸ್ಥ ಹೇಳಿದ ವರದಿಗಳನ್ನು ತಿಳಿಸುತ್ತಾನೆ. ಅಗಸ ದೇವರ ಕೆಲಸವನ್ನು ಶುದ್ದೀಕರಣ ಕೆಲಸ ಮಾಡುತ್ತಾನೆ. ಉದಾ. ದೇವರಿಗೆ ನೆಡಮುಡಿ ಹಾಕುವುದು, ಪಂಜು ಹಿಡಿಯುವುದು ಗ್ರಾಮದ ಚೀಟಿ ಹಣದಲ್ಲಿ ಮರಿಗಳನ್ನು ಕೊಂಡು ತಂದು ದೇವರಿಗೆ ಬಲಿಯನ್ನು ಕೊಟ್ಟ ನಂತರ ಸಾಮೂಹಿಕವಾದ ಭೋಜನ ಕೂಟ ಏರ್ಪಡಿಸುತ್ತಾರೆ. ವಿಶೇಷವಾಗಿ ಊರಿನ ಹೊರಗಿನ ದೇವರಿಗೆ ಪೂಜೆ ಮಾಡಿ ಬಲಿಕೊಟ್ಟು ಅದನ್ನು ಪಾಲುಮಾಡಿಕೊಳ್ಳುತ್ತಾರೆ. ಆರತಿಯಲ್ಲಿ ಅಕ್ಕಿಯಿಂದ ಮಾಡಿದ ತಂಬಿಟ್ಟನ್ನು ಒಂದು ಚೌಕಾಕೃತಿಯಲ್ಲಿ ಆಕಾರವನ್ನು ಮಾಡಿ ಒಂದು ದಬರೆ ಪಾತ್ರೆಯಲ್ಲಿಟ್ಟು ಅರಿಸಿನ, ಕುಂಕಮ ಹಚ್ಚುತ್ತಾರೆ. ಅಂಚಿಕಡ್ಡಿಯಿಂದ ಮತ್ತು ಹೂವಿನಿಂದ ತಂಬಿಟ್ಟಿಗೆ ಸಿಂಗಾರ ಮಾಡುತ್ತಾರೆ. ಮತ್ತು ಮಧ್ಯದಲ್ಲಿ ಗುಳಿ ಮಾಡಿ ಎಣ್ಣೆ ಹಾಕಿ ದೀಪ ಹಚ್ಚುತ್ತಾರೆ. ಆರತಿಯನ್ನು ಪ್ರತಿಯೊಂದು ಮನೆಯ ಹೆಣ್ಣು ಮಕ್ಕಳು ಸಿಂಗಾರ ಮಾಡಿಕೊಂಡು ಆರತಿ ಹೊತ್ತುಕೊಂಡು ತಮಟೆ ವಾದ್ಯಗಳ ಮೂಲಕ ಮಾರಮ್ಮನ ಗುಡಿಯ ಹತ್ತಿರ ಎಲ್ಲರೂ ಒಟ್ಟಾಗಿ ಸೇರುತ್ತಾರೆ. ವಿಶೇಷವಾಗಿ ಆರತಿ ಹೋಗುವಾಗ ಕ್ರಮವಾಗಿ ಊರಿನ ಮುಖ್ಯಸ್ಥರಾದ ಗೌಡರು ಶ್ಯಾನುಬೋಗರ ಮನೆಯಿಂದ ಆರತಿ ಪ್ರಾರಂಭವಾಗುತ್ತದೆ. ಆಮೇಲೆ ವಾದ್ಯಗಳನ್ನು ಮಾಡಿಕೊಂಡು ಎಲ್ಲರನ್ನೂ ಕಲೆ ಹಾಕುತ್ತಾರೆ. ಎಲ್ಲರೂ ಕಲೆತು ಜೊತೆಗೆ ಜಾನಪದ ಹಾಡುಗಳನ್ನು ಹಾಡಿಕೊಂಡು ಮುಂದೆ ಹೋಗುತ್ತಾರೆ. ಇದಾದ ನಂತರ ಗ್ರಾಮದಲ್ಲಿ ಎಲ್ಲರೂ ಒಟ್ಟಾಗಿ ಸೇರಿ ಮಾರಮ್ಮನ ಗುಡಿಯನ್ನು ಕೇಕೆಯೊಂದಿಗೆ, ಸಂತೋಷದಿಂದ ಹೋಗುತ್ತಾರೆ. ಆರತಿ ಹೋಗುವಾಗ ಊರಿನ ಜನರನ್ನು ಅಗಸ ನೆಡೆಮುಡಿ ಹಾಕಿಕೊಂಡು ಮಾರಮ್ಮನ ಗುಡಿಗೆ ಕರೆದುಕೊಂಡು ಹೋಗುತ್ತಾನೆ. ಇದು ಪ್ರಾರಂಭದಿಂದಲೂ ದೇವರ ಗುಡಿಯವರೆಗೂ ಬಹಳ ನಿಷ್ಠೆಯಿಂದ ಅಗಸ ಈ ಕೆಲಸವನ್ನು ನಿರ್ವಹಿಸುತ್ತಾನೆ.

ಎಲ್ಲರೂ ಮಾರಮ್ಮನ ಗುಡಿಗೆ ಒಟ್ಟಿಗೆ ಸೇರಿ ಆನಂತರ ಪೂಜಾರಿಯು ಮಾರಮ್ಮನಿಗೆ ಮಂಗಳಾರತಿ ಮಾಡಿ ಪ್ರತಿಯೊಂದು ವಿಷಯದಲ್ಲೂ ಊರಿನ ಮುಖ್ಯಸ್ಥರು ಮೊದಲು ಪೂಜೆ ಸಲ್ಲಿಸುತ್ತಾರೆ. ಇದಾದ ನಂತರ ಗ್ರಾಮದಿಂದ ಗ್ರಾಮ ದೇವತೆಗೆ ಮೀಸಲಾದ ಕೋಣ ಕುರಿಗಳನ್ನು ಸಾರ್ವಜನಿಕವಾಗಿ ಪೂಜಾರಿಯ ಪೂಜೆಯೊಂದಿಗೆ ಊರಿನ ತಳವಾರ ತನ್ನದೇ ಆದ ವಿಶಿಷ್ಟವಾದ ಆಯುಧದಿಂದ (ತನ್ನ ಆಯುಧವನ್ನು ಸಿಂಗರಿಸಿರುತ್ತಾನೆ) ಮಾರಮ್ಮನಿಗೆ ಬಲಿ ಕೊಡುತ್ತಾನೆ. ಇದಾದ ನಂತರ ವೈಯಕ್ತಿಕವಾಗಿ ಜನರು ತಾವು ತಂದ ಆರತಿಗಳಿಗೆ ಪೂಜೆ ಸಲ್ಲಿಸಿಕೊಂಡು ಅದರ ಜೊತೆಗೆ ತಮ್ಮ ತಮ್ಮ ಆರತಿಗಳಿಗೆ ತಮ್ಮ ಮನೆಗಳ ಜನಸಂಖ್ಯೆಗಳಿಗನುಗುಣವಾಗಿ ಕುರಿ ಕೋಳಿಗಳನ್ನು ಬಲಿಕೊಟ್ಟು ಅದನ್ನು ಹಬ್ಬದ ಅಡಿಗೆ ಮಾಡಿ ನೆಂಟರಿಷ್ಟರೊಂದಿಗೆ ಸಂತೋಷದಿಂದ ಊಟವನ್ನು ಮಾಡುತ್ತಾರೆ. ಈ ಆಚರಣೆಗಳನ್ನು ಇಂದಿಗೂ ನಾವು ಕಾಣಬಹುದು. ಇಂತಹ ಆಚರಣೆಗಳು ನಮ್ಮ ಗ್ರಾಮೀಣ ಸಂಸ್ಕೃತಿಗೆ ಹಿಡಿದ ಕನ್ನಡಿಯಾಗಿವೆ. ಆ ಆಚರಣೆಯನ್ನು ಕೆಲವು ಕಡೆ ಪ್ರತಿವರ್ಷ ಮಾಡುತ್ತಾರೆ. ಇನ್ನು ಕೆಲವು ಕಡೆ ಮೂರು ವರ್ಷ, ಐದು ವರ್ಷಕ್ಕೊಂದು ಬಾರಿ ಮಾಡುತ್ತಾರೆ. ಮೂರು ಅಥವಾ ಐದು ವರ್ಷಕ್ಕೊಮ್ಮೆ ನಡೆದ ಮಾರಮ್ಮನ ಹಬ್ಬವು ಇನ್ನು ಹೆಚ್ಚು ವಿಜೃಂಭಣೆಯಿಂದ ಜರುಗುವುದು.

ಶ್ರೀಕೃಷ್ಣ ಆಲನಹಳ್ಳಿಯವರ 'ತಪ್ತ' ಕಥಾಸಂಕಲನದ ಬಗ್ಗೆ ಹೇಳುವುದಾದರೆ ಇವರ ಕತೆಗಳಲ್ಲಿ ಪ್ರೀತಿ, ಪ್ರೇಮ, ಹಳ್ಳಿ ಮತ್ತು ನಗರ, ಬಾಲ್ಯ ಮತ್ತು ಯೌವ್ವನ, ತಾಯಿ ಮತ್ತು ಮಗುವಿನ ಸಂಬಂಧ, ಮನುಷ್ಯ ಮತ್ತು ಬದುಕು ಇವುಗಳ ಬಗ್ಗೆ ಒಂದು ಮಾನವೀಯ ನೆಲೆಯನ್ನು ಕಂಡುಹಿಡಿದು ಅದಕ್ಕೆ ಪರಿಪೂರ್ಣ ಅರ್ಥವನ್ನು ಕೊಡಲು ಪ್ರಯತ್ನಿಸಿರುವುದನ್ನು ನಾವು ಕಾಣಬಹುದು. ಮಕ್ಕಳಲ್ಲಿ ಪ್ರತಿಯೊಂದು ವಿಚಾರಕ್ಕೂ ಕುತೂಹಲ ಉಂಟಾಗುವುದು ಸಹಜ. ಯೌವ್ವನದಲ್ಲಿ ಉತ್ಸಾಹ ಮತ್ತು ನಿರುತ್ಸಾಹಗಳ ಗೊಂದಲ, ವಿಚಾರಗಳ ಸಮತೋಲನ ಕಾಯ್ದುಕೊಳ್ಳುವ ಹಂತವನ್ನು ಪಾಲಿಸುವುದು ಇಲ್ಲಿ ಮುಖ್ಯ ವಿಷಯವಾಗಿದೆ. ಕತೆಗಳಲ್ಲಿ ಬರುವ ಘಟನೆಗಳು ಮತ್ತು ಪಾತ್ರಗಳನ್ನು ಹಾಗೂ ನಡೆಯುವ ಸಂದರ್ಭಗಳನ್ನು ಅವಲೋಕಿಸಿದಾಗ ಕತೆಗಾರರಿಗೆ ಹಳ್ಳಿಯ ಸಂಬಂಧ ನೈಜವಾಗಿದ್ದು ಹೆಚ್ಚು ಪರಿಣಾಮಕಾರಿಯಾಗಿದೆ. ನಗರ ಸಂಬಂಧಗಳ ಬಗ್ಗೆ ನೋಡಿದಾಗ ನೈಜತೆಯಿಂದ ದೂರವಿರುವುದು ಕಂಡುಬರುತ್ತದೆ. ಇಲ್ಲಿ ಲೇಖಕರು ಓದುಗರ ಮನಸ್ಸಿಗೆ ನಾಟುವಂತೆ ಹೇಳುವ ಚಾಣಾಕ್ಷತನ ಉಳ್ಳವರಾಗಿರುತ್ತಾರೆ. ಈ ಕತೆಗಳಲ್ಲಿ ಬರುವ ಘಟನೆಗಳಿಗೆ ಜೀವಂತ ಶಕ್ತಿಯನ್ನು ತುಂಬಿರುವುದು ಕಂಡುಬರುತ್ತದೆ. ಹಾಗೂ ಇವರ ಕತೆಗಳಲ್ಲಿ ವಿಶಾಲ ಮನೋಭಾವನೆಯನ್ನು ಕಾಣಬಹುದು.

'ಸುಟ್ಟತಿಕದ ದೇವರು' ಕತೆಯಲ್ಲಿ ಮನೆದೇವರ (ಶನಿದೇವರ) ಹೆಸರಿನಲ್ಲಿ ಮಾದಪ್ಪ ಎನ್ನುವ ವ್ಯಕ್ತಿ ಜನರಲ್ಲಿ ಒಂದು ರೀತಿಯಲ್ಲಿ ಎಲ್ಲರಲ್ಲೂ ಭಯ, ಭಕ್ತಿ ಮೂಡಿಸುವಂತಹವನಾಗಿದ್ದ. ಸಣ್ಣ ಹುಡುಗರಿಗೆ ಶನಿದೇವರು ಎಂಬ ಹೆಸರನ್ನು ಇಟ್ಟುಕೊಂಡ ವ್ಯಕ್ತಿ ಯಾವ ರೀತಿಯ ಭಾವನೆ ಉಂಟಾಗುತ್ತಿತ್ತು ಎನ್ನುವುದಕ್ಕೆ ಈ ಕೆಳಗಿನ ಸಂದರ್ಭವನ್ನು ವಿವರಿಸುತ್ತೇನೆ. ಹುಡುಗರು ದನ ಕಾಯಲು ಜಮೀನಿನ ಕಡೆಗೆ ಹೋದಾಗ "ಕೋತಿಗಳ ಕಾಟದ ಜೊತೆಗೆ ಒಂದು ಹೊಸ ಕಾಟ ಶುರುವಾಗಿತ್ತು. ಅದು ಶನಿದೇವರ ಕಾಟವಾಗಿತ್ತು. ಮಟ ಮಟ ಮಧ್ಯಾಹ್ನ ಆಗುತ್ತಿದ್ದಂತೆ ಅದೆಲ್ಲಿಂದಲೋ ದಿಕ್ಕೇ ಬೆಚ್ಚುವಂತೆ ಕೇಕೆ ಹಾಕುತ್ತಾ ಶನಿದೇವರು ದಯಮಾಡಿಸಿ ಬಿಡುತ್ತಿತ್ತು. ನಾವೆಲ್ಲಾ ಗಡಗಡ ನಡುಗುತ್ತಾ ಅದರ ಮುಂದೆ ಕೈಮುಗಿದು ನಿಲ್ಲುತ್ತಿದ್ದೆವು.

ತುಂಬಾ ಚಿಕ್ಕವನಾದ ನಾನಿರಲಿ, ರಾಜ ಕೂಡ ಕೈಮುಗಿದು ನಿಲ್ಲುತ್ತಿದ್ದ. ಹಣೆ ತುಂಬ ಕುಂಕುಮ, ಕೆದರಿದ ಕೂದಲು ಕೈಯಲ್ಲಿ ಹಸಿ ಹುಣಿಸೆ ಸಿಪ್ಪೆ ಹಿಡಿದು, ಒಂದು ಬಗೆಯ ಶಿಳ್ಳಿನ ದನಿಯಲ್ಲಿ ದೇವರು ಹೇಳಿದ್ದನ್ನೆಲ್ಲಾ ನಾವು ಕ್ಷಣವೂ ತಡೆಯದೆ ಪರಿಪಾಲಿಸಬೇಕು. ಕೊಂಚ ಏರುಪೇರಾದರೂ ಹಸಿ ಸಿಪ್ಪೆಯಿಂದ ಮೈಸುಲಿದು ಹೋಗುವಂಥ ಹೊಡೆತ. ಮೊದ ಮೊದಲು ಹಸಿ ಕಾಯಿಕಿತ್ತು ಸಿಪ್ಪೆ ಸುಲಿದು ಕಾಳನ್ನು ಅದರ ಮುಂದೆ ಒಂದು ಚೌಕದ ಮೇಲೆ 'ಎಡೆ' ಇಟ್ಟಕೂಡಲೆ ಮೊಕಾಡ ಬಿದ್ದು ಗಬಗಬ ತಿನ್ನುತ್ತಿತ್ತು. ಅದಕ್ಕೂ ಬೆಲ್ಲದ ರುಚಿ ಹತ್ತಿ ಕಾಳಿನ ಜೊತೆಗೆ ಬೆಲ್ಲದ ಚೂರನ್ನು 'ಎಡೆ'ಗೆ ಇಡಬೇಕಾಗಿ ಬಂತು.

ದೇವರು ಯಾವತ್ತೂ ಏನನ್ನೂ ಕೈಯಲ್ಲಿ ಮುಟ್ಟುತ್ತಿರಲಿಲ್ಲ. ಕೈಗಳಿದ್ದುದು ಸೆಬ್ಬೆಯಲ್ಲಿ ಬಾರಿಸುವುದಕ್ಕೆ. ಶನಿದೇವರು ಅಂದರೆ ಹುಡುಗಾಟವೇ? ಅವನು ಹುಟ್ಟಿಸಿದ ಅಪ್ಪನನ್ನೆ ಬಿಡಲಿಲ್ಲ. ವಿಕ್ರಮರಾಜನಂಥವನಿಗೇ ಕೈಕಾಲು ಕಡಿಸಿ ಗಾಣ ಹೊಡೆಯುವ ಕೆಲಸಕ್ಕೆ ನೂಕಿದ. ಇಂಥ ಉಗ್ರದೇವರು ಇದು.

ಕಡೆಗೊಂದು ದಿನ ನಮಗೆ 'ಶನಿದೇವ'ರಾಗಿದ್ದ ದೊಡ್ಡೋರ ಮಾದಪ್ಪ ಹಾಸಿಗೆ ಬಿಟ್ಟು ಎದ್ದು ಓಡಾಡುವಂತಾಗಿ ಬೀದಿಗೆ ಕಾಲಿಟ್ಟ ದಿನವೇ 'ಸುಟ್ಟ ತಿಕದ ದೇವರು' ಎಂತ ಯಾರೋ ಕೂಗಿಯೇ ಬಿಟ್ಟರಂತೆ. ಅವತ್ತಿನಿಂದ ಮಸಿದೇವರ ಹೆಸರಾದ ಮಲೆ ಮಾದಪ್ಪನ ಹೆಸರು ಇಲ್ಲವಾಗಿತ್ತು."[೨೦]

ಶ್ರೀಕೃಷ್ಣ ಆಲನಹಳ್ಳಿಯವರ 'ಸುಟ್ಟ ತಿಕದ ದೇವರು' ಕತೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಇಲ್ಲಿ ಬರುವ ಪಾತ್ರಗಳ ಬಗ್ಗೆ ವಿಚಾರ ಮಾಡಿದಾಗ ಮಾನವೀಯತೆಯ ಅಂಶ ಕ್ಷೀಣವಾಗಿದೆ ಎಂಬುದು ಕಂಡುಬರುತ್ತದೆ. ಚಿನ್ನಮ್ಮ ದೊಡ್ಡವರು ಮತ್ತು ಮಾದಪ್ಪ ಇವರುಗಳ ಬಗ್ಗೆ ಅತ್ಯಂತ ಕಳಕಳಿಯನ್ನು ತರುತ್ತದೆ. ಒಟ್ಟಾರೆ ಹೇಳುವುದಾದರೆ ಇವರುಗಳ ಬಗ್ಗೆ ನಿಜವಾದ ನೈತಿಕ ನಿರ್ಧಾರಕ್ಕೆ ಬರಲು ಅಸಾಧ್ಯ ಎಂಬುದನ್ನು ಘಂಟಾಘೋಷವಾಗಿ ಹೇಳಬಹುದು.

ಗ್ರಾಮೀಣ ಜನತೆಯಲ್ಲಿ ಮೂಢನಂಬಿಕೆಗಳನ್ನು ಹುಟ್ಟುಹಾಕುವ ಪರಿಪಾಠ ಬಹಳ ಹಿಂದೆಯೇ ಪ್ರಾರಂಭ ಆಗಿದೆ ಎನ್ನುವುದನ್ನು ಆಲನಹಳ್ಳಿಯವರ ಸುಟ್ಟ ತಿಕದ ದೇವರು ಕತೆಯಲ್ಲಿ ನಾವು ಕಾಣಬಹುದು. ನಮ್ಮ ಗ್ರಾಮಗಳ ಹೊರಗಡೆ ಒಬ್ಬ ವ್ಯಕ್ತಿ ಬಂದು ತಾರೆ ಮರ ಎಂಬುದನ್ನು ಆರಿಸಿಕೊಂಡು ಅಲ್ಲಿ ಒಂದು ಶನಿದೇವರ ಫೋಟೋವನ್ನು ಇಟ್ಟು ಚಿಕ್ಕದಾಗಿ ಒಂದು ಗುಡಿಯನ್ನು ಕಟ್ಟಿ ಪೂಜೆಯನ್ನು ಪ್ರಾರಂಭಿಸಿ ಜನಗಳನ್ನು ಆಕರ್ಷಿಸಲು ಭಕ್ತಿ ಹುಟ್ಟುವಂತೆ ಮಾಡಲು ಶನಿದೇವರು ಮೈಮೇಲೆ ಬಂದಂತೆ ಹಾವಭಾವಗಳಿಂದ ಉದಾ. ಎಲವೋ ಭಕ್ತ ನನ್ನನ್ನು ಮರೆತಿದ್ದೀಯಾ ನನನ ಸೇವೆಗೆಬರಲಿಲ್ಲ, ನೀನು ನನ್ನನ್ನು ಮರೆತರೆ ನಿನಗೆ ಕಷ್ಟವನ್ನು ಕೊಡುತ್ತೇನೆ ಎಂದು ವಿಕಾರವಾಗಿ ಗರ್ಜಿಸುತ್ತ ಗ್ರಾಮೀಣ ಜನರ ಮೌಢ್ಯವನ್ನು ಉಪಯೋಗಿಸಿಕೊಂಡು ಸ್ವಾರ್ಥಸಾಧನೆಗಾಗಿ ತನಗೆ ಅನುಕೂಲವಾಗುವಂತೆ ಜನರನ್ನು ಉಪಯೋಗಿಸಿಕೊಳ್ಳುತ್ತಾರೆ. ಇದರಲ್ಲಿ ನಾನು ಗರಹಿಸಿದಂತೆ ಜಾನಪದದ ಪ್ರಭಾವವಾಗಿದ್ದು ನಮ್ಮ ಗ್ರಾಮಗಳಲ್ಲಿ ಇದನ್ನು ಇಂದಿಗೂ ಕಾಣಬಹುದಾಗಿದೆ.

ಕಾಳೇಗೌಡ ನಾಗವಾರರ ಕಥೆಗಳಲ್ಲಿ ಜಿ.ಎಸ್.ಸದಾಶಿವರವರು ಹೇಳುವಂತೆ ಗ್ರಾಮೀಣ ಬದುಕಿನ ಹಿನ್ನೆಲೆಯಲ್ಲಿ ಬರೆದ ಇವರ ಕಥೆಗಳಲ್ಲಿ ನೇರ ನಿರೂಪಣೆ, ಉಲ್ಲಾಸಕರ ವಿವರ, ಬದುಕಿನ ಸೂಕ್ಷ್ಮ ಬದಲಾವಣೆಗಳನ್ನು ಗುರುತಿಸುವ ತವಕಗಳನ್ನು ಕಾಣಬಹುದು.

ಕಾಳೇಗೌಡ ನಾಗವಾರರ ಮಾಯೆ ಕತೆಯಲ್ಲಿ ಗಮನಿಸಲೇಬೇಕಾದ ಅಂಶವೇನೆಂದರೆ ಗ್ರಾಮೀಣ ಜನರು ಎಷ್ಟು ಮುಗ್ಧರು ಎನ್ನುವುದಕ್ಕೆ ಈ ಕತೆ ಅತ್ಯುತ್ತಮ ಉದಾಹರಣೆಯಾಗಿದೆ. ಗ್ರಾಮದ ಒಬ್ಬ ವಯಸ್ಸಾದ ಮುದುಕ ತನ್ನ ಮೌಢ್ಯವನ್ನು ಪ್ರದರ್ಶಿಸುತ್ತಾನೆ. ಪೆದ್ದಯ್ಯ ಆಕಸ್ಮಿಕವಾಗಿ ಸಿಕ್ಕ ಒಂದು ಹೆಣ್ಣನ್ನು ತನ್ನ ಊರಿಗೆ ಕರೆದುಕೊಂಡು ಬರುತ್ತಾನೆ. ಊರಿಗೆ ಆ ಹೆಣ್ಣು ಬಂದ ನಂತರ ಜನರು ಅನೇಕ ರೀತಿಯಲ್ಲಿ ಪೆದ್ದಯ್ಯ ಮತ್ತು ಹೆಂಗಸಿನ ಬಗ್ಗೆ ಮಾತನಾಡಿಕೊಳ್ಳುತ್ತಾರೆ. ಮುದುಕ ಊರಿನ ಹಿರಿಯನಾದ್ದರಿಂದ ಜನರು ಅವನು ಹೇಳಿದ ಮಾತುಗಳನ್ನು ಕೇಳುತ್ತಾರೆ. ಇದನ್ನು ಉಪಯೋಗಿಸಿಕೊಂಡು ಮುದುಕನು ಆ ಹೆಣ್ಣು ಮಗಳನ್ನು ದೇವರು ಇವಳ ರೂಪದಲ್ಲಿ ನಮ್ಮ ಗ್ರಾಮಕ್ಕೆ ಬಂದಿದ್ದಾಳೆ ಇವಳಿಗೆ ಅಪಚಾರ ಮಾಡಬೇಡಿ, ಬಯ್ಯಬೇಡಿ ಎಂದು ಹೇಳುವಾಗ ಮುದುಕ ತನಗೆ ದೇವರು ಬಂದಂತೆ ನಡುಗುತ್ತಾ ಹೇಳುತ್ತಾನೆ. ಆಗ ಜನರಲ್ಲಿ ಆ ಹೆಣ್ಣು ಮಗಳ ಬಗ್ಗೆ ಇರುವ ಅಭಿಪ್ರಾಯ ಬದಲಾಗುತ್ತದೆ. ಮುದುಕ ಈ ದೇವತೆಗೆ ಗುಡಿಯನ್ನು ಕಟ್ಟಿಸಿ ಪೂಜಿಸಿ ಎಂದು ಕೇಳಿಕೊಳ್ಳುತ್ತಾನೆ. ಇದಕ್ಕೆ ಸಮ್ಮತಿಸಿ ಗ್ರಾಮೀಣ ಜನರು ಅವಳ ಹೆಸರಿನಲ್ಲಿ ಆಶ್ರಮ ಕಟ್ಟಿಕೊಡುತ್ತಾರೆ. ಇವಳನ್ನೇ ಗ್ರಾಮ ದೇವತೆಯೆಂದು ಭಾವಿಸಿಕೊಂಡು ಜನ ಕಾಯಿಲೆ, ರೋಗ, ರುಜಿನಗಳು ಬಂದಾಗ ಅವಳ ಮೊರೆ ಹೋಗುತ್ತಾರೆ. ಹರಕೆ ಕಾಣಿಕೆ ಸಲ್ಲಿಸುತ್ತಾರೆ. ಒಡವೆ, ವಸ್ತ್ರ, ಬಟ್ಟೆಗಳನ್ನು ಕಾಣಿಕೆಯಾಗಿ ನೀಡುತ್ತಾರೆ. ಇಲ್ಲಿ ಜನರ ಮೂಢ ನಂಬಿಕೆ ತಮ್ಮ ಕಷ್ಟ, ಕಾರ್ಪಣ್ಯಗಳಿಗೆ ಯಾವ ರೀತಿ ಸ್ಪಂದಿಸುತ್ತದೆ ಹಾಗೂ ಜನರಲ್ಲಿ ಮೂಢ ನಂಬಿಕೆಯೇ ದೇವರು ಎಂಬುದನ್ನು ಕಾಣಬಹುದು. ಇಂಥಹ ಮೌಢ್ಯಗಳನ್ನು ಹಲವಾರು ಗ್ರಾಮಗಳಲ್ಲಿ ಇಂದಿಗೂ ಕಾಣಬಹುದಾಗಿದೆ.

ಇವರದೇ ಆದ ಕಾಡು ಕತೆಯಲ್ಲಿ ತಮ್ಮಯ್ಯನೆಂಬ ಯುವಕ ಜಾತ್ರೆಗೆ ಹೋದ ರೀತಿ ಮತ್ತು ಅವನಿಗಾದ ಅನುಭವವನ್ನು ಕತೆಗಾರರು ಮನದಲ್ಲಿ ಉಳಿಯುವಂತೆ ಚಿತ್ರಿಸಿರುತ್ತಾರೆ. ಇದರಲ್ಲಿ ಜಾತ್ರೆಗೆ ಇನ್ನೂ ಸ್ವಲ್ಪ ಮುಂಚಿತವಾಗಿ ಜಾತ್ರೆಗೆ ಹೋಗುವವರು ಅನೇಕ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಾರೆ. ಆ ಯುವಕ ಜಾತ್ರೆ ನೋಡಲು ಸಿದ್ಧತೆ ಮಾಡಿಕೊಂಡು ಹೊರಟಿದ್ದಾನೆ. ಸಾಮಾನ್ಯವಾಗಿ ಜಾತ್ರೆಗಳು ಬೇಸಿಗೆ ಕಾಲದಲ್ಲಿ ನಡೆಯುವುದರಿಂದ ತುಂಬಾ ಬಿಸಿಲು ಇರುತ್ತದೆ. ಈ ಯುವಕ ಗವಿ ಗಂಗಾಧರ ಜಾತ್ರೆಯ ಆವರಣವನ್ನು ತಲುಪಿದಾಗ ಜನರ ವಿಪರೀತ ನೂಕು ನುಗ್ಗಲು ಉಂಟಾಗಿರುತ್ತದೆ. ಮಧ್ಯ ನುಸುಳಿಕೊಂಡು ಮುಂದೆ ಹೋಗಲು ಪ್ರಯತ್ನಿಸಿರುತ್ತಾನೆ. ಇವನು ಯುವಕನಾಗಿರುವುದರಿಂದ ಸ್ವಲ್ಪ ಜೋರು ಜೋರಾಗಿ ಹೋಗುವಾಗ್ಗೆ ವಯಸ್ಸಾದವರಿಗೆ, ಹೆಂಗಸರಿಗೆ, ಮಕ್ಕಳಿಗೆ ಡಿಕ್ಕಿ ಹೊಡೆಯುತ್ತಾನೆ. ಆಗ ವಯಸ್ಸಾದವರು ಇವನಿಗೆ ಬಯ್ಯುತ್ತಾರೆ. ಹೆಂಗಸರು ನೋಡಿಕೊಂಡು ಓಡಾಡುವುದಕ್ಕೆ ಆಗುವುದಿಲ್ಲವೇನೋ ಎಂದು ಛೀಮಾರಿ ಹಾಕುತ್ತಾರೆ. ಹುಡುಗಿಯರಲ್ಲಿ ಕೆಲವರು ಮುಖ ಕಿವುಚಿಕೊಳ್ಳುತ್ತಾರೆ. ಮತ್ತೆ ಕೆಲವರು ಮಂದಹಾಸ ಬೀರುತ್ತಾರೆ. ಮತ್ತೆ ಕೆಲವರು ಪರಿಚಯವಾಗುತ್ತಾರೆ. ಹೀಗೆ ಮುನ್ನುಗ್ಗುತ್ತಾ ಅವನು ನಡೆಯುವಾಗ ಬೆವರು ಸುರಿಯುತ್ತದೆ. ಜಾತ್ರೆಯ ರಥೋತ್ಸವ ಸಂದರ್ಭದಲ್ಲಿ ರಥದ ಹತ್ತಿರಕ್ಕೆ ಹೋಗುವ ಹಂಬಲ ರಥವನ್ನು ಎಳೆಯಬೇಕೆಂಬ ಆಸೆ ಈ ಮಧ್ಯೆ ರಥಾ ಎಳೆಯುವುದು ಪ್ರಾರಂಭವಾಗುತ್ತದೆ. ಜನರು ಒಕ್ಕೊರಲಿನಿಂದ ಕೂಗುತ್ತಾರೆ. ಇದನ್ನು ಎಳೆಯುವಾಗ ಜಾತ್ರೆಗೆ ಬಂದಿರುವ ಎಲ್ಲಾ ಜನರು ದೇವರ ಮೇಲೆ, ರಥದ ಮೇಲೆ ಬಾಳೆಹಣ್ಣು, ಹೂವುಗಳನ್ನು

ಎಸೆಯುತ್ತಿರುತ್ತಾರೆ. ಈ ರೀತಿ ಎಸೆಯುತ್ತಿರುವಾಗ ಕೈಗೆ ಸಿಕ್ಕಿದ ಬಾಳೆಹಣ್ಣು ಪ್ರಸಾದವೆಂದು ತಮ್ಮಯ್ಯ ಸ್ವೀಕರಿಸುತ್ತಾನೆ. ಇವನೂ ಸಹ ಬಾಳೆಹಣ್ಣು ಎಸೆಯುತ್ತಾನೆ. ಜಾತ್ರೆಗೆ ಬಂದ ತಮ್ಮಯ್ಯನಿಗೆ ಕಸಿವಿಸಿ ಉಂಟಾಗುವುದರ ಜೊತೆಗೆ ದೇವರ ದರ್ಶನದೊಂದಿಗೆ ಪೂಜೆ ಮಾಡಿಸಿದೆನೆಂಬ ಭಕ್ತಿ, ಭಾವ ತೃಪ್ತಿ ಸಿಗುತ್ತದೆ. ಇದರಿಂದ ಸಂತೋಷಗೊಂಡ ತಮ್ಮಯ್ಯ ಹಿಂದಿರುಗುವುದನ್ನು ಕಾಣಬಹುದು.

ಇದರ ಜೊತೆಗೆ ಜಾತ್ರೆಯಲ್ಲಿ ಜಾಗಟೆ, ಶಂಖ ಹಿಡಿದವರು, ಗಡ್ಡಧಾರಿ ಸನ್ಯಾಸಿಗಳು, ಕುರ್ರಮಾಮ, ದೇವರ ಫೋಟೊ ಹಿಡಿದವರು, ಜುಂಜಪ್ಪ ಇವರೇ ಅಲ್ಲದೆ ಮನರಂಜನೆಗೆ ರಾಟೆ ಆಡಿಸುವವರು, ಹಾವಾಡಿಗರು, ಕಡ್ಲೆಪುರಿ ಮಿಠಾಯಿ ಮಾರುವವರು ಅನೇಕ ಬಗೆಬಗೆಯ ತಿಂಡಿತಿನಿಸುಗಳನ್ನು ಕಾಣಬಹುದು. ಇದರ ಜೊತೆಗೆ ಬೊಂಬೆ ಪ್ರದರ್ಶನ, ಬಟ್ಟೆ, ಬಳೆ, ಮನೆಗೆ ಬೇಕಾದ ಗೃಹ ಬಳಕೆಯ ವಸ್ತುಗಳು, ದನಕರುಗಳ ವ್ಯಾಪಾರ ಇವೆಲ್ಲವನ್ನು ತಮ್ಮಯ್ಯ ಸಂತೋಷದಿಂದ ನೋಡುತ್ತಾನೆ.

ಈ ಮೇಲಿನ ಎಲ್ಲಾ ಅಂಶಗಳಲ್ಲಿಯೂ ಗ್ರಾಮೀಣ ಮತ್ತು ನಗರ ಸಂಸ್ಕೃತಿಯ ಪರಂಪರೆಯ ಬೇರುಗಳನ್ನು ನಾವಿಲ್ಲಿ ಒಂದು ಆಚರಣೆಯ ಮೂಲಕ ಗಮನಿಸಬಹುದಾಗಿದೆ. ಇದನ್ನು ಇಂದಿಗೂ ನಮ್ಮ ಗ್ರಾಮೀಣ ಜನರು ಆಚರಿಸಿಕೊಂಡು ಬಂದಿರುವುದನ್ನು ಕಾಣಬಹುದು. ಜಾತ್ರೆಗಳಿಗೆ ಒಂದು ಊರಿನಿಂದ ಇನ್ನೊಂದು ಊರಿಗೆ ಹೋಗಬೇಕಾದರೆ ಮುಕ್ಕಾಲುಪಾಲು ನಡೆದೇ ಹೋಗುತ್ತಿದ್ದರು ಮತ್ತು ಎತ್ತಿನ ಗಾಡಿಗಳನ್ನು ಉಪಯೋಗಿಸುತ್ತಿದ್ದರು. ಸ್ವಾತಂತ್ರ್ಯಾನಂತರ ಖಾಸಗಿಯವರು ಮತ್ತು ಸರ್ಕಾರದವರು ವಿಶೇಷವಾದ ಪ್ರೋತ್ಸಾಹ ನೀಡಿ ರಸ್ತೆಗಳು, ನೀರಿನ ವ್ಯವಸ್ಥೆ, ಆಸ್ಪತ್ರೆ, ಪಶುವೈದ್ಯಕೀಯ ಜೊತೆಗೆ ವಿದ್ಯುತ್ ಸಂಪರ್ಕ ಕಲ್ಪಿಸಿರುವುದೇ ಅಲ್ಲದೆ ಸ್ವಚ್ಛತೆ, ಕುಡಿಯಲು ನೀರು ಇವುಗಳಿಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟಿರುವುದನ್ನು ಕಾಣಬಹುದು. ಅರಕ್ಷಕ ಠಾಣೆಗಳನ್ನು ಜೊತೆಗೆ ವಿಶೇಷವಾಗಿ ಸಾರಿಗೆ ವ್ಯವಸ್ಥೆಯನ್ನು ಕಲ್ಪಿಸಿರುವುದು ಕಂಡುಬರುತ್ತದೆ.

ಕರೀಗೌಡ ಬೀಚನಹಳ್ಳಿಯವರ 'ಕಲ್ಯಾಣಿ' ಕತೆಯಲ್ಲಿ ಜಾನಪದದ ಪ್ರಭಾವವನ್ನು ಕಾಣಬಹುದು. 'ಕಲ್ಯಾಣಿಗೆ ರಾತ್ರಿ ನಿದ್ದೆ ಬಂದುದು ಯಾವಾಗ ಎಂದು ಗೊತ್ತಾಗಲೇ ಇಲ್ಲ. ಬೆಳಕಾದಾಗ ಕಣ್ಣು ಬಿಟ್ಟಳು. ರಾತ್ರಿ ಹಚ್ಚಿದ್ದ ದೀಪ ಯಾವಾಗಲೋ ಆರಿಹೋಗಿತ್ತು. ತನ್ನ ಗಂಡ ರಂಗಣ್ಣ ಆಗಲೇ ಎದ್ದು ಎಲ್ಲೋ ಹೊರಗೆ ಹೊರಟು ಹೋಗಿದ್ದ. ಮಕ್ಕಳೆರಡೂ ಇನ್ನೂ ಮಂದಲಿಕೆಗೆ ಕಚ್ಚಿ ಮಲಗಿದ್ದವು. ಕಲ್ಯಾಣಿ ಎದ್ದು ಹೊರಬಾಗಿಲು ಗುಡಿಸಿ ಸಗಣಿ ನೀರು ತಂದು ಚೆಲ್ಲಿ ರಂಗೋಲಿ ಎಳೆದು ಒಳಗೆ ಬಂದು, ಮಕ್ಕಳನ್ನು ಎಬ್ಬಿಸಿದಳು. ಅವು ಎದ್ದು ಆಕಳಿಸಿ ಮೈಮುರಿದವು. ಅವಕ್ಕೆ ಎಷ್ಟೋ ಹೊತ್ತಿನ ಮೇಲೆ ರಾತ್ರಿಯ ಅಪ್ಪ ನೆನಪಾಗಿ "ಅಪ್ಪ ಎಲ್ಲವ್ವ?" ಎಂದು ಕೇಳಿದವು. ಅಪ್ಪ ಎಲ್ಲೋ ಹೊತ್ನಂತೇನೆ ಎದ್ದು ಹೋಗಿದೆ. ಕೆರೆ ಕಡೆಗೋ ಬಾವಿ ಕಡೆಗೋ ಹೋಗಿರ್ಬೇಕು ಬರ್‍ತದೆ" ಎಂದು ಕಲ್ಯಾಣಿ ಮಕ್ಕಳಿಗೆ ಸಮಜಾಯಿಸಿ ನೀಡಿದಳು. ಮಕ್ಕಳ ಕಣ್ಣಲ್ಲಿ ರಾತ್ರಿಯ ಅಪ್ಪ ಮೂಡತೊಡಗಿದ್ದ.

ಕಲ್ಯಾಣಿ ಹಳೆ ಒಲೆ ಮೇಲಿದ್ದ ಹಳಗೆಗೆ ಊರುಮುಂದಿನ ಬಾವಿಯಿಂದ ನೀರು ತುಂಬಿ ಬೆಂಕಿ ಇಟ್ಟು ಕಾಯಿಸಿದಳು. ತಾನೂ ಸ್ನಾನ ಮಾಡಿ, ತನ್ನ ಮಕ್ಕಳಿಗೂ ಸ್ನಾನ ಮಾಡಿಸಿದಳು. ಅವತ್ತು ಶನಿವಾರ ಊರಗೌಡರ

ಬಾವಿ ಹತ್ತಿರ ಹೋಗಿ "ಗಂಗೆ ಪೂಜೆ " ಮಾಡಿಕೊಂಡು ಬರುವ ಎಂದುಕೊಂಡಳು. ಆದರೆ ಬೆಳಿಗ್ಗೆ ಊರಿನ ಮಾಮೂಲು ಮೇಸ್ತ್ರವ್ವ, ಬಂದು ಕಲ್ಯಾಣಿಯನ್ನು ಕೂಲಿಗೆ ಕರೆದಳು. ಕಲ್ಯಾಣಿ "ನನಗೆ ಆಗಾಗ ಹೊಟ್ಟೆ ನೋವು ಬರ್‍ತಿತ್ತು. ಅದು ವಾಸಿಯಾದ್ರೆ ನಿನ್ನ ಪೂಜೆ ಮಾಡ್ತೀನಿ ಅಂತ ಗಂಗಮ್ಮನಿಗೆ ಹರಕೆ ಹೊತ್ತುಕೊಂಡಿದ್ದೆ. ಇವತ್ತು ಕೂಲಿಗೆ ಬರುವುದಿಲ್ಲ" ಎಂದಳು. ಆಕೆಗೆ, ಕಲ್ಯಾಣಿ ಸ್ನಾನ ಮಾಡಿ ಹೋದ ಯುಗಾದಿ ಹಬ್ಬದಲ್ಲಿ ತನ್ನ ಅವ್ವ ತಂದು ಕೊಟ್ಟಿದ್ದ ಹೊಸ ಕಡ್ಡಿ ಸೀರೆಯನ್ನು ಉಟ್ಟು, ನಗುನಗುತ್ತಾ ಉಲ್ಲಾಸದಿಂದ ಇದ್ದದ್ದನ್ನು ಕಂಡು ಮೇಸ್ತ್ರವ್ವ, "ಹಾಗಾದರೆ ಹೋಗಿ ಪೂಜೆ ಮಾಡ್ಕಂಡು ಬಾ, ಕೂಲಿ ಮಾಡೋದು ನಿತ್ಯ ಇದ್ದೆ ಇದೆ" ಎಂದು ಹೇಳಿ ಹೊರಟು ಹೋದಳು. ಕಲ್ಯಾಣಿ ಮಕ್ಕಳಿಗೂ ಹೋದ ಯುಗಾದಿ ಹಬ್ಬದಲ್ಲಿ ತಂದಿದ್ದ ಹೊಸ ಬಟ್ಟೆಗಳನ್ನು ತೊಡಿಸಿದಳು. ಮಕ್ಕಳು 'ಹೊಟ್ಟೆ ಹಸಿತದೆ' ಅಂದರೂ "ಮಧ್ಯಾಹ್ನಕ್ಕೆ ಒಂದೇ ಸಾರಿ ಊಟ ಮಾಡುವ" ಎಂದು ಹೇಳಿ ಅವುಗಳನ್ನು ಬೆಳಿಗ್ಗೆಯಿಂದ ಮಧ್ಯಾಹ್ನದವರೆಗೂ ಹಸಿಸಿದಳು. ದೇವರು ಮಾಡುವಾಗ ಹಸಿದುಕೊಂಡು ಇರಬೇಕೆಂದುಕೊಂಡು ಅವುಗಳಿಗೆ ಹೇಳಿ ಸಮಾಧಾನ ಮಾಡಿದಳು. ಮಕ್ಕಳಿಗೆ "ಏನು ಅಡಿಗೆ ನಿಮಗೆ ಇಷ್ಟ" ಎಂದು ವಿಚಾರಿಸಿದಳು. ಅವು ಒಮ್ಮೆಲೇ ಪಾಯಸ ಅಂದವು. ಮನೆಯಲ್ಲಿದ್ದ ಒಂದು ಅಚ್ಚು ಬೆಲ್ಲವನ್ನು ಹಾಕಿ ಪಾಯಸ ಮಾಡಿ ಅವುಗಳಿಗೆ ಕುಡಿಯುವಷ್ಟು ಕುಡಿಸಿದಳು. ಆಮೇಲೆ ಅನ್ನ ಉಣ್ಣಿಸಿ, ತಾನು ಪೂಜೆಯಾದ ಮೇಲೆ ಉಣ್ಣುವುದಾಗಿ ಹೇಳಿ "ಗಂಗೆ ಪೂಜೆ ಮಾಡಿಕೊಂಡು ಬರುವ ಬನ್ನಿ" ಎಂದು ಮನೆಯಿಂದ ಹೊರಟಳು. ಆಕೆ ಮಕ್ಕಳನ್ನು ತನ್ನ ಜೊತೆ ಕರೆದುಕೊಂಡು ಮನೆ ಬಿಟ್ಟಾಗ ಮಧ್ಯಾಹ್ನದ ಸೂರ್ಯ ಪಡುವಣ ದಿಕ್ಕಿಗೆ ವಾಲಿದ್ದ"[೨೧]

ಹೀಗೆ ಆಧುನಿಕತೆ ಇದ್ದರೂ ಸಹ ನಮ್ಮ ಕತೆಗಳಲ್ಲಿ ಜಾನಪದ ಪ್ರಭಾವವಾಗಿರುವುದನ್ನು ಕಾಣಬಹುದು. ಪ್ರತಿಯೊಂದು ವಸ್ತು ಜನ ಜೀವನ ಆಚಾರ ವಿಚಾರಗಳೆಲ್ಲಾ ಜನಪರವು. ತನ್ನ ಆಸಕ್ತಿಯನ್ನು ಹೊತ್ತುಕೊಂಡು ಬಂದಿದೆ ಎಂದು ಹೇಳಬಹುದು.

## ೪. ೨. ನವೋದಯ ಮತ್ತು ನವ್ಯದ ಪ್ರಭಾವ

"ನವೋದಯ ಪೂರ್ವ ಅಥವಾ ನವೋದಯದ ಪ್ರಥಮ ಘಟ್ಟದಲ್ಲಿಯೇ ಸಣ್ಣಕಥೆ ಮತ್ತು ಕಾದಂಬರಿ ಕನ್ನಡದಲ್ಲಿ ಮೊಳಕೆ ಇಟ್ಟವು. ಸಣ್ಣಕಥೆ ಭಾರತಕ್ಕಾಗಲಿ, ಕನ್ನಡ ನಾಡಿಗಾಗಲಿ ಹೊಸದಲ್ಲ ಎಂಬ ಮಾತು ನಿಜ. ಪಂಚತಂತ್ರದ ಕಥೆಗಳು, ಉಪನಿಷತ್ತಿನ ಕಥೆಗಳು, ಜಾತಕದ ಕಥೆಗಳು ಈ ನಾಡಿನವರಿಗೆ ಸುಪರಿಚಿತ. ಆದರೆ ಸಾಹಿತ್ಯದ ಒಂದು ವಿಶಿಷ್ಟರೂಪವಾಗಿ ಸಣ್ಣ ಕಥೆ ಅರಳಿದ್ದು ಪಾಶ್ಚಾತ್ಯರಲ್ಲಿ ಪ್ರಾಯಶಃ ಕನ್ನಡದಲ್ಲಿ ಮೊದಲು ಸಣ್ಣ ಕಥೆಗಳನ್ನು ಬರೆದವರು ಪಂಜೆ ಮಂಗೇಶರಾಯರು. ಎಂ.ಎಂ. ಕಾಮತರೂ, ವಾಸುದೇವಾಚಾರ್ಯರೂ ಕೆಲವು ಸಣ್ಣ ಕಥೆಗಳನ್ನು ಬರೆದರು. ಮಾಸ್ತಿಯವರ ಸಣ್ಣ ಕಥೆಗಳು ೧೯೧೦- ೧೯೧೯ರ ಹೊತ್ತಿಗೆ ಪ್ರಕಟವಾಗಲು ಪ್ರಾರಂಭವಾದಂತೆ ಕಾಣುತ್ತದೆ."[೨೨]

"'ನವೋದಯ' ಎಂದರೆ ಹೊಸದು. ಭಾರತೀಯರಲ್ಲಿ ಬಂಗಾಳದಲ್ಲಿ ಮೊದಲು ನವೋದಯ ಆರಂಭವಾಯಿತು. ಇದು ಸಾಮಾಜಿಕ ಬದುಕನ್ನು ಒಳಗೊಂಡ ಸಾಹಿತ್ಯ ಪ್ರಕಾರ. ಕನ್ನಡದಲ್ಲಿ ಈ ಪದ ಇಂಗ್ಲಿಷಿನ ರೋಮ್ಯಾಂಟಿಕ್ ಎಂಬ ಪದಕ್ಕೆ ಸಂವಾದಿಯಾಗಿ ಬಳಕೆಯಾಗುತ್ತದೆ. ಸಾಮಾನ್ಯವಾಗಿ ಬಿ.ಎಂ.

ಶ್ರೀಯವರ 'ಇಂಗ್ಲಿಷ್ ಗೀತೆಗಳು' ಕೃತಿಯಿಂದ ಆರಂಭವಾಗಿ ಪ್ರಗತಿಶೀಲರವರೆಗಿನ ಕಾಲಾವಧಿಯ ಸಾಹಿತ್ಯವನ್ನು ನವೋದಯ ಎಂಬ ಹೆಸರಿನಲ್ಲಿ ಗುರುತಿಸಲಾಗುತ್ತದೆ. ಹೊಸ ಬಗೆಯ ಕಾವ್ಯ, ಕತೆ, ಕಾದಂಬರಿ, ಪ್ರಬಂಧ, ನಾಟಕ, ವಿಮರ್ಶೆ ಮುಂತಾದ ಸಾಹಿತ್ಯಕ್ಕೆ ವೈವಿಧ್ಯತೆಯನ್ನು ನೀಡಿದ್ದು ನವೋದಯ ಕಾಲದ ಸಾಹಿತ್ಯ ನಿಸರ್ಗಕ್ಕೆ ಪ್ರತಿಕ್ರಿಯೆ ಮತ್ತು ಆಧ್ಯಾತ್ಮಿಕತೆಯ ಕಾಳಜಿಗಳು ಈ ಪಂಥದ ಕಾವ್ಯದಲ್ಲೂ ಮುಖ್ಯವಾದುವು. ಭಾವಗೀತೆ ಈ ಕಾಲದ ಪ್ರಮುಖ ಅಭಿವ್ಯಕ್ತಿ ಪ್ರಕಾರ ವಾಯಿತು. ಇದರೊಳಗೆ ಸುನೀತ, ಶೋಕಗೀತೆ, ಪ್ರಗಾಥ, ಕಥನಕಾವ್ಯ, ಖಂಡಕಾವ್ಯ, ಮಹಾಕಾವ್ಯ ಮುಂತಾಗಿ ಹಲವಾರು ಹೊಸ ರಚನೆಗಳಾದವು. ಗೋವಿಂದಪೈ, ಡಿ.ವಿ.ಗುಂಡಪ್ಪ, ಪಂಜೆಮಂಗೇಶರಾಯರು, ಎಸ್.ಜಿ. ನರಸಿಂಹಾಚಾರ್, ಹಟ್ಟಿಯಂಗಡಿ ನಾರಾಯಣರಾಯ, ಶಾಂತಕವಿ, ಬೇಂದ್ರೆ, ಮಾಸ್ತಿ, ಕುವೆಂಪು, ಪುತಿನ, ಕೆ.ಎಸ್. ನರಸಿಂಹ ಸ್ವಾಮಿ ಮುಂತಾದವರು ಭಾವಗೀತೆಯನ್ನು ಹೊಸಬದುಕಿನ ಸಂದರ್ಭಗಳ ತುಯ್ತಗಳನ್ನು ಅಭಿವ್ಯಕ್ತಿಸಲು ಬಳಸಿಕೊಂಡರೆ, ಶಿವರಾಮ ಕಾರಂತರು ನಾಟಕ, ನೃತ್ಯ, ಕಲೆ, ಸಿನಿಮಾ, ಕಾದಂಬರಿ ಮುಂತಾದ ವೈವಿಧ್ಯಮಯ ಸಾಧ್ಯತೆಗಳನ್ನು ತೋರಿಸಿದರು. ಬಿ.ಎಂ.ಶ್ರೀಯವರ 'ಅಶ್ವತ್ಥಾಮನ್' ನಾಟಕದಿಂದ ದುರಂತ ನಾಟಕಗಳ ಪರಂಪರೆ ಆರಂಭವಾಯಿತು.

ಇದೇ ಸಂದರ್ಭದಲ್ಲಿ ಸಣ್ಣ ಕತೆಯೆಂಬ ಹೊಸ ಪ್ರಕಾರ ತನ್ನ ಸ್ವರೂಪವನ್ನು ಸ್ಪಷ್ಟವಾಗಿ ಪಡೆಯಿತು. ಮಾಸ್ತಿ, ಕುವೆಂಪು, ಅಶ್ವತ್ಥ, ಆನಂದಕಂದ ಮುಂತಾದವರು ಪರಿಣಾಮಕಾರಿ ಸಣ್ಣ ಕತೆಗಳನ್ನು ರಚಿಸಿದರು. ಟಿ.ಎಸ್.ವೆಂಕಣ್ಣಯ್ಯ, ಎ.ಆರ್. ಕೃಷ್ಣಶಾಸ್ತ್ರಿ, ಕುವೆಂಪು, ಪು.ತಿ.ನ., ಎಸ್.ವಿ.ರಂಗಣ್ಣ ಮುಂತಾದವರು ಭಾರತೀಯ ಮತ್ತು ಪಾಶ್ಚಾತ್ಯ ಕಾವ್ಯಮೀಮಾಂಸೆಯ ಹಿನ್ನೆಲೆಯಲ್ಲಿ ವಿಮರ್ಶೆಗೆ ಹೊಸರೂಪ ಕೊಡ ತೊಡಗಿದರು. ಕುವೆಂಪು, ರಸೋ ವೈ ಸಃ, ದ್ರೌಪದಿಯ ಶ್ರೀಮುಡಿ, ವಿಭೂತಿ ಪೂಜೆ ಇತ್ಯಾದಿ ಮುಂತಾದ ಕೃತಿಗಳು ಒಂದು ಕಡೆಯಾದರೆ ಪು.ತಿ.ನ. ಅವರ 'ಕಾವ್ಯ ಕುತೂಹಲ' ಎಸ್.ವಿ.ರಂಗಣ್ಣನವರ 'ಹೊನ್ನಶೂಲ' 'ಶಾಕುಂತಲ' ನಾಟಕ ವಿಮರ್ಶೆ, 'ಶೈಲಿ' ಇತ್ಯಾದಿ ಪಾಶ್ಚಾತ್ಯ ಗಂಭೀರ ನಾಟಕಗಳು ಮುಂತಾದ ಮುಖ್ಯ ಕೃತಿಗಳು ವಿಮರ್ಶೆಯನ್ನು ಶ್ರೀಮಂತಗೊಳಿಸಿದೆ. ಈ ಕಾಲದಲ್ಲಿ ಬಹಳ ದೊಡ್ಡ ವಿಚಾರ ಸಾಹಿತ್ಯವೂ ರಚನೆಯಾಯಿತು. ಅದರಲ್ಲೂ ಕುವೆಂಪು ವಿಚಾರ ಕ್ರಾಂತಿಗೆ ಆಹ್ವಾನ 'ನಿರಂಕುಶಮತಿ' ಮುಂತಾದ ಕೃತಿಗಳು, ಅವರ ವಿಚಾರ ಶಕ್ತಿಯ ಪ್ರಕರತೆಗೆ ಸಾಕ್ಷಿಯಾಗಿವೆ. ವಸುದೇಭೂಪಾಲಂ ಅವರ 'ದೇವರ ಸತ್ತ' ಈ ಕಾಲದ ಮುಖ್ಯ ಕೃತಿಯಾಗಿದೆ. ಹೀಗೆ ಕನ್ನಡ ನವೋದಯ ಸಾಹಿತ್ಯ ಮುಂದಿನ ಕನ್ನಡ ಸಾಹಿತ್ಯದ ಅಭ್ಯಾಸಯೋಗ್ಯ ಮತ್ತು ಬಗೆ ಬಗೆಯ ವಿಮರ್ಶೆ ವ್ಯಾಖ್ಯಾನಕ್ಕೆ ಬಳಕೆಯಾಗುತ್ತಿದೆ. ಒಳ್ಳೆಯ ಪರಂಪರೆಯನ್ನೂ ನಿರ್ಮಾಣ ಮಾಡಿದ ನವೋದಯಕ್ಕೆ ಸಾಹಿತ್ಯ ಬದುಕಿನ ಹೊಸ ಅನುಭವಗಳಿಗೆ, ಪ್ರಮುಖ ಪ್ರತಿಕ್ರಿಯೆಯಾಗಿದೆ."[೨೩]

" 'ನವ್ಯ' ಎಂದರೆ ಹೊಸದು. ಇಂಗ್ಲಿಷಿನ Modernism ಎಂಬುದಕ್ಕೆ ಸಂವಾದಿಯಾಗಿ ಈ ಪದವನ್ನು ಪಾರಿಭಾಷಿಕವಾಗಿ ಬಳಸಲಾಗುತ್ತದೆ. ೧೯೫೦ರಲ್ಲಿ ಗೋಕಾಕರು ಈ ಕುರಿತು ಮಾಡಿದ ಒಂದು ಭಾನುಲಿ ಭಾಷಣವೇ ಇದರ ಆರಂಭ. ಮುಂದೆ ಗೋಪಾಲಕೃಷ್ಣ ಅಡಿಗರು ತಮ್ಮ ಕಾವ್ಯದ ಮುಖ್ಯ ಕಾಳಜಿ ಯನ್ನಾಗಿಸಿಕೊಂಡ ಮೇಲೆ ವೈವಿಧ್ಯವನ್ನು ಕಂಡ ಕನ್ನಡ ಸಾಹಿತ್ಯ, ಪಾಶ್ಚಾತ್ಯ, ಆಧುನಿಕ ತಾತ್ವಿಕ ಚಿಂತನೆಗಳಾದ 'ಅಸ್ತಿತ್ವವಾದ' 'ಅಸಂಗತವಾದ'ಗಳನ್ನು ರೂಢಿಸಿಕೊಂಡು ಬೆಳೆಯಿತು. 'ಅನಾಥ ಪ್ರಜ್ಞೆ', 'ಪರಕೀಯತೆ',

'ಸಿನಿಕತನ' ಮುಂತಾದ ಆಧುನಿಕ ಬದುಕಿನ ಒತ್ತಡಗಳ ಶೋಧಗಳಾಗಿ ರಚನೆಗೊಂಡಿತು. ಕಾವ್ಯ ಕಥಾವಸ್ತು, ಸಾಹಿತ್ಯ, ಕಾದಂಬರಿ, ಮತ್ತು ವಿಮರ್ಶೆಯಲ್ಲಿ ನಾವು ನವ್ಯತೆಯನ್ನು ಕಾಣಬಹುದಾಗಿದೆ. ಪಾಶ್ಚಾತ್ಯ ಆಧುನಿಕ ಕಾವ್ಯದ ಎಜ್ರಾ ಪೌಂಡ್, ಟಿ.ಎಸ್.ಎಲಿಯಟ್ ಮುಂತಾದವರ ಪ್ರಭಾವದಿಂದ ಬಂದ ಅಡಿಗರ ಕಾವ್ಯ ಮತ್ತು ಅದರ ವಿಮರ್ಶೆ, ಆಲ್ಬರ್ಟಕಮು, ಫ್ರಾನ್ಜಕಾಫ್ಕ, ಜೀನ್, ಪಾಲ್ ಸಾತ್ರೆಯರ, ಕಥಾಸಾಹಿತ್ಯದಿಂದ ಪ್ರಭಾವಿತರಾದ, ಅನಂತಮೂರ್ತಿ, ಗಿರಿ, ಚಿತ್ತಾಲ, ಲಂಕೇಶ್, ಶಾಂತಿನಾಥ ದೇಸಾಯಿ, ಆಲನಹಳ್ಳಿ, ತೇಜಸ್ವಿ ಮುಂತಾದ ಬರಹಗಾರರು.

ಯು.ಆರ್.ಅನಂತಮೂರ್ತಿಯವರ 'ಸಂಸ್ಕಾರ', 'ಭಾರತೀಪುರ', 'ಅವಸ್ಥೆ', 'ಭವ' ಕಾದಂಬರಿಗಳು 'ನವಿಲುಗಳು', 'ಕ್ಲಿಪ್‌ಜಾಯಿಂಟ್' 'ಸೂರ್ಯನ ಕುದುರೆ' ಮುಂತಾದ ಕತೆಗಳು ಗಿರಿಯವರ 'ಗತಿಸ್ಥಿತಿ', ಕಾದಂಬರಿ, ಶಾಂತಿನಾಥ ದೇಸಾಯಿ ಅವರ 'ಮುಕ್ತಿ', ವಿಕ್ಷೇಪ' ಮುಂತಾದ ಕಾದಂಬರಿಗಳು, 'ಕ್ಷಿತಿಜ', 'ರಾಕ್ಷಸ', ದಂತಕತೆಗಳು. ಖಾಸನೀಸರ 'ತಬ್ಬಲಿಗಳು', ಟಿ.ಜಿ.ರಾಘುವರವರ 'ಶ್ರಾದ್ಧ' ಎ.ಕೆ. ರಾಮಾನುಜನ್ ಅವರ 'ಅಣ್ಣಯ್ಯನ ಮಾನವ ಶಾಸ್ತ್ರ' ಮುಂತಾದ ಸಣ್ಣ ಕಥೆಗಳು, ಚಂದ್ರಶೇಖರ ಕಂಬಾರರ 'ಜೋಕುಮಾರ ಸ್ವಾಮಿ' ನಾಟಕ, ಗಿರೀಶ್ ಕಾರ್ನಾಡರ 'ತುಘಲಕ್', 'ಹಯವದನ', 'ನಾಗಮಂಡಲ' ಮುಂತಾದ ನಾಟಕಗಳು ಅಯನೆಸ್ಕೊ, ಬೆಕೆಟ್‌ರ ಪ್ರಭಾವದಿಂದ ಅಸಂಗತ ನಾಟಕಗಳು, ಚಂದ್ರಶೇಖರ ಪಾಟೀಲ, ಚಂದ್ರಕಾಂತ ಕುಸನೂರ, ಲಂಕೇಶ್, ನ.ರತ್ನ, ತೇಜಸ್ವಿ ಮುಂತಾದವರಿಂದ ನವ್ಯದಲ್ಲಿ ಬೇರೆಯಾಗಿಯೇ ಚಿಂತಿಸಿ, ಬರೆದ ಲೇಖಕರು, ಚನ್ನಯ್ಯನವರಂಥ ಕಾಮಕೇಂದ್ರಿತ ಪ್ರಜ್ಞೆಯಿಂದಿಡಿದು, ತೇಜಸ್ವಿಯಂಥವರ ಸಮಾಜ ಕೇಂದ್ರದವರೆಗೆ ಕನ್ನಡ ನವ್ಯ ಸಾಹಿತ್ಯದ ವಿಸ್ತಾರವನ್ನು ಗುರುತಿಸಬಹುದು."[೨೪]

ನವ್ಯ ಘಟ್ಟವು ಎರಡು ನೆಲೆಗಳಲ್ಲಿ ರೂಪುಗೊಂಡಿತು. ಮೊದಲನೆಯ ನೆಲೆಯಲ್ಲಿ ನವ್ಯ ಸಾಹಿತ್ಯವು ಇಂಗ್ಲೀಷ್ ಚಿಂತನೆಗಳ ನೇರ ಪ್ರಭಾವಕ್ಕೆ ಒಳಗಾಗಿತ್ತು. ಹಸಿ ಹಸಿ ಭಾವನೆಗಳು ಆಗಾಗ್ಗೆ ಸಾಹಿತ್ಯದಲ್ಲಿ ವ್ಯಕ್ತವಾಗಿರುವುದುಂಟು. ಆದರೆ ಎರಡನೆಯ ನೆಲೆಯಲ್ಲಿ ಬಂದ ನವ್ಯ ಗ್ರಾಮೀಣ ಸೊಗಡನ್ನು ಸಂಪೂರ್ಣವಾಗಿ ಅಭಿವ್ಯಕ್ತಿಸಿತು ಎಂತಲೇ ಇದನ್ನು ಡಿ.ಆರ್. ನಾಗರಾಜ್ ಅವರು ಪರಿವರ್ತನಶೀಲ ನವ್ಯ ಎಂದು ಕರೆದಿದ್ದಾರೆ. ಈ ನೆಲೆಯಲ್ಲಿ ನವ್ಯ ಸಾಹಿತ್ಯವು ಮನುಷ್ಯ ಬದುಕಿನ ಸಾಂಸ್ಕೃತಿಕ ವಿಚಾರಗಳನ್ನು ಗಂಭೀರವಾಗಿ ಖಂಡರಿಸಿತು. ಸಮಕಾಲೀನ ವಿಘಟಿತ ಬದುಕು ಉಂಟುಮಾಡಿದ್ದ ಸಂಕೀರ್ಣತೆಗೆ ಗ್ರಾಮೀಣರ 'ಕೂಡು ಬದುಕು' ಮುಖ್ಯ ಪರಿಹಾರವಾಗಿ ಕಂಡುಬಂದಂತೆ ಇಲ್ಲಿ ಚಿತ್ರಿತವಾಗಿದೆ.

ನವೋದಯ ಹಾಗೂ ನವ್ಯ ಸಾಹಿತ್ಯದ ಬಗ್ಗೆ ಪರಾಮರ್ಶಿಸಿದಾಗ ಜಿ.ಆಸ್.ಆಮೂರರ ಅರ್ಥಲೋಕ, ಜಿ.ಹೆಚ್.ನಾಯಕ್ ಅವರ ಅನಿವಾರ್ಯ, ಸಮಕಾಲೀನ, ನಿರಪೇಕ್ಷ, ನಿಜದನಿ, ಗಿರಡ್ಡಿಯವರ ನವ್ಯ ವಿಮರ್ಶೆ ಹಾಗೂ ಕುರ್ತುಕೋಟಿಯವರ ಯುಗಧರ್ಮ ಹಾಗೂ ಸಾಹಿತ್ಯದರ್ಶನ ಇವುಗಳು ಕನ್ನಡದಲ್ಲಿ ನವ್ಯ ಸಾಹಿತ್ಯ ಮುಖ್ಯವಾಗಿ ವ್ಯಕ್ತಿವಾದಿ ನೆಲೆಯಲ್ಲಿದ್ದರಿಂದ ಬಂಡಾಯ ಸಾಹಿತ್ಯದ ವಿವಿಧ ಮುಖಗಳನ್ನು ಪರಿಚಯಿಸತೊಡಗಿ ಹೊಸ ಹೊಸ ರೂಪ ಪಡೆಯತೊಡಗಿದೆ. ಒಟ್ಟಾರೆ ಮೇಲ್ಕಂಡ ಲೇಖಕರ ಹಾಗೂ ಇನ್ನಿತರ ನವೋದಯ ಮತ್ತು ನವ್ಯ ಲೇಖಕರ ಅಭಿಪ್ರಾಯಗಳು ಸಾಹಿತ್ಯ ಜಗತ್ತಿನಲ್ಲಿ ಮನುಷ್ಯನ ಬದುಕನ್ನು ಭಿನ್ನಭಿನ್ನವಾಗಿ ಆಲೋಚಿಸುವಂತೆ ಮಾಡಿದೆ.

"ಕನ್ನಡ ಸಾಹಿತ್ಯದಲ್ಲಿ ನವೋದಯ ಮನೋಧರ್ಮದ ಬರವಣಿಗೆಯನ್ನು ಈ ಶತಮಾನದ ಆರಂಭದ ನಾಲ್ಕು ದಶಕಗಳಲ್ಲಿ ಕಾಣಬಹುದು. ನವೋದಯ ಕಾವ್ಯಗಳಿಗೆ ಬಿ.ಎಂ.ಶ್ರೀಯವರು ಪ್ರೇರಣೆ ನೀಡಿದಂತೆ ಈ ಶತಮಾನದ ಆರಂಭದ ಗದ್ಯ ಬರವಣಿಗೆಗೆ ಶ್ರೀನಿವಾಸರು ಪ್ರೇರಕ ಶಕ್ತಿಯಾಗಿದ್ದಾರೆ. ಶ್ರೀನಿವಾಸರು ಪಾಶ್ಚಾತ್ಯ ಸಾಹಿತ್ಯದ ಪ್ರೇರಣೆಯಿಂದ ಆಧುನಿಕ ಸಣ್ಣಕತೆಗೊಂದು ರೂಪವನ್ನು ಒದಗಿಸಿಕೊಟ್ಟರು. ಶ್ರೀನಿವಾಸರು ಹಾಕಿಕೊಟ್ಟ ಹೊಸ ಆಧುನಿಕ ಕನ್ನಡ ಸಣ್ಣಕಥಾ ಪರಂಪರೆಯನ್ನು ಆನಂದ, ಆನಂದಕಂದ, ಅಶ್ವತ್ಥ ಮುಂತಾದ ಲೇಖಕರು ಮುಂದುವರಿಸಿಕೊಂಡು ಬಂದರಾದರೂ ಶ್ರೀನಿವಾಸರಲ್ಲಿರುವಂತೆ ಜೀವನದ ವಿವಿಧ ಮುಖಗಳನ್ನು ಇದರಲ್ಲಿ ಕಾಣುವುದು ಸಾಧ್ಯವಿಲ್ಲ.

ಮುಂದೆ ಕನ್ನಡ ಸಾಹಿತ್ಯದಲ್ಲಿ ಪ್ರಗತಿಶೀಲ, ನವ್ಯ ಪಂಥಗಳು ಹುಟ್ಟಿಕೊಂಡಾಗಲೂ, ಮಾಸ್ತಿಯವರ ಪರಂಪರೆಯನ್ನು ಕೆಲವು ಮಂದಿ ಲೇಖಕರು ಮುಂದುವರಿಸಿಕೊಂಡೇ ಬಂದರು. ನಂತರದ ಹೊಸ ಬೆಳವಣಿಗೆಗಳು ಅವರಿಗೆ ಆರೋಗ್ಯಕರವಾಗಿ ಕಾಣಲಿಲ್ಲವಾಗಿ, ತಮ್ಮ ಬರವಣಿಗೆಯನ್ನು ನವೋದಯ ಲೇಖಕರ ಬರವಣಿಗೆಯ ಮಾದರಿಯಲ್ಲೇ ರೂಢಿಸಿಕೊಂಡರು. ಎಪ್ಪತ್ತರ ದಶಕದಲ್ಲೂ ಶ್ರೀನಿವಾಸರು ಕತೆಗಳನ್ನು ಬರೆದಿದ್ದಾರೆ. ಅಶ್ವತ್ಥ, ಈಶ್ವರಚಂದ್ರ, ರಾವ್ ಬಹದ್ದೂರ ಮೊದಲಾದ ಲೇಖಕರಲ್ಲಿ ನವೋದಯದ ಧೋರಣೆಗಳನ್ನು ಈ ದಶಕದಲ್ಲೂ ಕಾಣುತ್ತೇವೆ."[೨೫]

ಮಾಸ್ತಿಯವರು ಎಪ್ಪತ್ತು ವರ್ಷಗಳ ಕಾಲ ಸಾಹಿತ್ಯ ಕ್ಷೇತ್ರದಲ್ಲಿ ಪಳಗಿರುವುದು ಸರ್ವವಿಧಿತ. ಆದರೆ ಇವರ ಕಥಾರಚನೆಗಳಲ್ಲಿ ಸಣ್ಣ ಕತೆಗಳಿಗೆ ಸ್ಪಷ್ಟವಾದ ಪ್ರಾಧಾನ್ಯತೆ ಕೊಟ್ಟು ಸಣ್ಣಕತೆಗಳ ರಚನೆಗೆ ಅಸ್ತಿಭಾರವನ್ನು ಹಾಕಿದ ಪಿತಾಮಹರು. ಇವರು ಸಣ್ಣಕತೆಯ ರಚನೆಯೊಂದಿಗೆ ಆಧುನಿಕ ಸಾಹಿತ್ಯವನ್ನು ಬೆಳೆಸಿದ ಮಹಾನ್ ವ್ಯಕ್ತಿ. ಇವರ ಸಣ್ಣಕತೆಗಳಲ್ಲಿ ಬರುವ ಪಾತ್ರಗಳಿಗೆ ಜೀವತುಂಬಿ ಕೃತಿಗಿಳಿಸುವುದರಲ್ಲಿ ಎತ್ತಿದಕೈ. ಇವರಿಗೆ ಸರಿಸಮಾನರಾಗಿ ಕನ್ನಡದಲ್ಲಿ ಮತ್ತೊಬ್ಬ ಸಾಹಿತಿ ಹುಟ್ಟಿಲ್ಲವೆಂದೇ ಹೇಳಬಹುದು. ಇತ್ತೀಚಿನ ದಿನಗಳಲ್ಲಿ ಹಳ್ಳಿಯ ಜೀವನದಲ್ಲಿ ಬರುವ ವಿವಿಧ ಸಾಂಸ್ಕೃತಿಕ ಬದುಕಿನ ಅನೇಕ ಮುಖಗಳನ್ನು ಆಧುನಿಕತೆಗೆ ಪರಿವರ್ತಿಸಿ ಸಾಹಿತ್ಯ ರಚನೆಗೆ ಆಧುನೀಕತೆಯ ಛಾಪು ಮೂಡಿಸಿ ಅದರಿಂದುಂಟಾಗುವ ಪರಿಣಾಮಗಳನ್ನು ಗಮನದಲ್ಲಿಟ್ಟುಕೊಂಡು ಕೀಳುಭಾವನೆ ಹಾಗೂ ಮೂಢ ನಂಬಿಕೆಗಳನ್ನು ಹೋಗಲಾಡಿಸಬೇಕೆಂಬ ಅಭಿಪ್ರಾಯವನ್ನು ಗೊರೂರರು ಸಹ ತಮ್ಮ ಕತೆಗಳಲ್ಲಿ ಉತ್ತಮವಾಗಿ ಅಭಿವ್ಯಕ್ತಿಸಿದ್ದಾರೆ. ನವೋದಯದ ಪ್ರಭಾವವನ್ನು ನಾವಿಲ್ಲಿ ಗಮನಿಸಬಹುದಾಗಿದೆ.

ಅದರಂತೆಯ ಅಶ್ವತ್ಥರ ಕತೆಗಳು ಮಾಸ್ತಿಯವರ ಕತೆಗಳಲ್ಲಿಯಂತೆ ಸಮಾಜದ ಹಿತವನ್ನು ಬಯಸುವ ಉತ್ತಮ ಆಶಯವನ್ನು ಆದರ್ಶಗಳನ್ನು ಪ್ರತಿಪಾದಿಸುವಂಥವುಗಳು. ನವುರಾಗಿ, ಸರಳವಾಗಿ ಕತೆಗಳನ್ನು ಹೇಳುವ ಇವರ ಕತೆಗಳಲ್ಲಿ ಸಾಮಾಜಿಕ ಕಳಕಳಿ ಇದೆ. ಬದುಕಿನ ಆಗುಹೋಗುಗಳನ್ನು ಹಾಸ್ಯಮಿಶ್ರಿತವಾಗಿ ಹೇಳುವುದನ್ನು ಸಾಂಪ್ರದಾಯಕ ಮೂಢ ನಂಬಿಕೆಗಳನ್ನು ಖಂಡಿಸುವುದನ್ನು ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯುವುದನ್ನು ಇವರ ಕತೆಗಳಲ್ಲಿ ಕಾಣಬಹುದು.

ಅದೇ ರೀತಿ ಎಂ.ವಿ. ಸೀತಾರಾಮಯ್ಯನವರ ಕತೆಗಳ ಉದ್ದೇಶ "ಆದರ್ಶಗಳನ್ನು ಪ್ರತಿಪಾದಿಸುವುದು ಒಂದು ಸ್ವಾರಸ್ಯಕರವಾದ ಘಟನೆಯನ್ನು ಕುತೂಹಲಕರವಾಗಿ ಬೆಳೆಸಿ, ಓದುಗರ ಮನರಂಜಿಸುವುದು ಇವರ ಕತೆಗಳ ಮುಖ್ಯ ಗುರಿ.

ನವೋದಯದ ಲೇಖಕರಲ್ಲಿ ಸ್ವಲ್ಪ ಭಿನ್ನವಾದ ಬರವಣಿಗೆಯನ್ನು ರೂಢಿಸಿಕೊಂಡವರು ಈಶ್ವರಚಂದ್ರ ಅವರು. ಇವರ ಎರಡು ಸಂಕಲನಗಳು ಈ ದಶಕದಲ್ಲಿ ಪ್ರಕಟವಾಗಿದೆ.

ಸಿ.ಬಿ.ಸಣ್ಣಪ್ಪನವರ ಕತೆಗಳು ಜನಪದ ಬದುಕಿನ ವಿಶಿಷ್ಟ ಘಟನೆಗಳನ್ನು ಚಿತ್ರಿಸುತ್ತವೆ. ಜನಜೀವನದಲ್ಲಿ ಹಾಸುಹೊಕ್ಕಾಗಿರುವ ಅತ್ತೆ, ಸೊಸೆ, ಸವತಿ ಮಾತ್ಸರ್ಯ, ಸಹೋದರ ಮಾತ್ಸರ್ಯ, ಬಂಧುಪ್ರೇಮ, ಈ ಎಲ್ಲಾ ಆಶಯಗಳು ಗ್ರಾಮೀಣ ಬದುಕಿನ ಹಿನ್ನೆಲೆಯಲ್ಲಿ ಅನಾವರಣಗೊಂಡಿದೆ.

ಗ್ರಾಮೀಣ ಬದುಕಿನ ಆಶಯಗಳನ್ನು ಗ್ರಾಮೀಣ ಪ್ರದೇಶದಿಂದ ವಸ್ತುಗಳನ್ನಾಯ್ದುಕೊಂಡು ಕತೆ ರಚಿಸಿದವರಲ್ಲಿ ರಾವ್‌ಬಹದ್ದೂರ್‌ರು ಇನ್ನೊಬ್ಬ ಕತೆಗಾರರು. ಇವರ 'ನೆರೆಹೊರೆ' (೧೯೭೫) ಗ್ರಾಮೀಣ ಜನತೆಯಲ್ಲಿ ಹಾಸು ಹೊಕ್ಕಾಗಿರುವ ಸಂಪ್ರದಾಯಗಳು, ಆಚರಣೆಗಳು, ಇವುಗಳಿಂದಾಗುವ ಸಂಘರ್ಷದ ಚಿತ್ರಣವನ್ನು ನೀಡಿ ಆದರ್ಶವನ್ನು ಇವರ ಕತೆಗಳು ಪ್ರತಿಪಾದಿಸುತ್ತವೆ.

ಗ್ರಾಮೀಣ ಬದುಕಿನ ಆಶಯಗಳನ್ನು ಕತೆಯೊಳಗೆ ಅನಾವರಣಗೊಳಿಸಿದುದು ಈ ಬರಹಗಾರರ ವೈಶಿಷ್ಟ್ಯಗಳಲ್ಲೊಂದು. ಗ್ರಾಮೀಣ ಜನರಲ್ಲಿ ಮನೆಮಾಡಿರುವ ವೈಶಮ್ಯಗಳು, ಮಾನವೀಯಸಂಬಂಧಗಳು, ಸಿಟ್ಟು, ದ್ವೇಷ, ಕಾಮ, ಪ್ರೇಮ, ಮೊದಲಾದ ಭಾವನೆಗಳಿಗೆ ಇವರು ಪ್ರತಿಸ್ಪಂದಿಸುವ ವೇಳೆ ಅದರ ಹಿಂದಿನ ಕ್ರೌರ್ಯವನ್ನಾಗಲಿ, ಸಾಮಾಜಿಕ ಅವ್ಯವಸ್ಥೆಯನ್ನಾಗಲಿ ಇವರು ಅಷ್ಟಾಗಿ ಗಮನಿಸದೇ ಹೋದದ್ದು ಇವರ ಬರವಣಿಗೆಯ ಮಿತಿಯನ್ನು ಸೂಚಿಸುತ್ತದೆ.

ಒಂದು ಸಾಹಿತ್ಯ ಕೃತಿಯ ಯೋಗ್ಯತೆಯನ್ನು ನಿರ್ಧರಿಸಬೇಕಾದ ಮಾನದಂಡ ಅದರಲ್ಲಿ ಮಾನವೀಯ ಮೌಲ್ಯಗಳು, ಒಳ್ಳೆಯ ಬದುಕಿಗೆ ಪೋಷಕವಾಗುವಂಥ ಮೌಲ್ಯಗಳು, ಎಷ್ಟು ಪರಿಣಾಮಕಾರಿಯಾಗಿ ಹಾಗೂ ಕಲಾತ್ಮಕವಾಗಿ ಬಂದಿದೆಯಂದಷ್ಟೇ ಹೊರತು, ಆ ಕೃತಿಯನ್ನು ರಚಿಸಿದ ಸೃಜನಶೀಲ ಪ್ರತಿಭೆ ಯಾವುದೊಂದು ವೈಚಾರಿಕ ಪ್ರಣಾಳಿಕೆ ಯಾವರೀತಿ ಬದ್ಧವಾಗಿದೆಯೆಂಬುದರಿಂದಲ್ಲ.

ಎಪ್ಪತ್ತರ ದಶಕದ ವೇಳೆಗೆ ನವ್ಯ ಪಂಥ ಕ್ಷೀಣ ದಿಸೆಗಿಳಿಯಿತಾದರೂ ಕೆಲವು ಮಂದಿ ನವ್ಯ ಲೇಖಕರು ತಮ್ಮ ಬರವಣಿಗೆಯನ್ನು ಮುಂದುವರಿಸುವುದನ್ನು ಕಾಣುತ್ತೇವೆ. ಈ ಲೇಖಕರು ನವ್ಯದ ಆಳ ವಿಸ್ತಾರಗಳನ್ನು ಹಿಗ್ಗಿಸುತ್ತಾ ಹೊಸಮಗ್ಗುಲುಗಳತ್ತ ಹೊರಳಿಕೊಳ್ಳುತ್ತಿರುವುದನ್ನು ಈ ದಶಕದಲ್ಲಿ ಕಾಣಬಹುದು. ನವ್ಯ ಬರವಣಿಗೆಯ ಮಾದರಿಯನ್ನೇ ಪ್ರಮುಖವಾಗಿಟ್ಟುಕೊಂಡು ಅನುಭವಕ್ಕೆ ಅಭಿವ್ಯಕ್ತಿ ನೀಡಿದ ಯು.ಆರ್.ಅನಂತಮೂರ್ತಿ, ಲಂಕೇಶ್, ರಾಮಚಂದ್ರಶರ್ಮ, ಶಾಂತಿನಾಥ ದೇಸಾಯಿ, ಕೆ.ಸದಾಶಿವ, ಬಿ.ಎಸ್.ಸದಾಶಿವ, ಯಶವಂತ ಚಿತ್ತಾಲ, ಮೊದಲಾದವರ ಸಣ್ಣ ಕತೆಗಳಲ್ಲಿ ಕಾಣಬಹದು.

"ನವೋದಯ ಲೇಖಕರು ಮಾಸ್ತಿಯವರು ಹಾಕಿಕೊಟ್ಟ ಕಥಾ ಪರಂಪರೆಯನ್ನು ಅನುಕರಣೆ ಮಾಡುತ್ತಾ ಒಂದು ರೀತಿಯ ಯಾಂತ್ರಿಕ ಬರವಣಿಗೆಯನ್ನು ಮುಂದುವರಿಸುತ್ತಲೇ ಬಂದಿದ್ದರು. ಸ್ವಾತಂತ್ರ್ಯಾನಂತರದ

ಬದಲಾವಣೆ ಆದ ದೇಶದ ಸ್ಥಿತಿಗತಿಗಳ ಹಿನ್ನೆಲೆಯಲ್ಲಿ ಪ್ರತಿಯೊಬ್ಬ ಪ್ರಜೆಯೂ ವೈಯಕ್ತಿಕ ಜವಾಬ್ದಾರಿಯನ್ನು ಅರಿತುಕೊಳ್ಳುವುದು ಅನಿವಾರ್ಯವೆನಿಸಿತು. ನವೋದಯದ ಆದರ್ಶಗಳನ್ನು ಹಿಂದೆ ನಿಲ್ಲಿಸಿ, ವೈಯಕ್ತಿಕ, ಅನುಭವದ ಹಿನ್ನೆಲೆಯಲ್ಲಿ ಚಿಂತನೆಗೆ ಲೇಖಕರು ಮುಂದಾದರು. ಇಂಥ ಹೊಸ ಗದ್ಯ ಬರವಣಿಗೆಗೆ ಅನಂತಮೂರ್ತಿಯವರು ಅರವತ್ತರ ದಶಕದಲ್ಲಿ ಮಾರ್ಗದರ್ಶಕರಾಗಿ ಕಾಣಿಸಿಕೊಂಡರು. ಮೊದಲನೆಯದಾಗಿ ಅನಂತಮೂರ್ತಿಯವರು ನವ್ಯದ ವೈಚಾರಿಕತೆಯನ್ನು ರೂಪಿಸಿಕೊಟ್ಟರು. ಎರಡನೆಯದಾಗಿ ಈ ವೈಚಾರಿಕತೆಯ ಅಭಿವ್ಯಕ್ತಿಗೆ ಬೇಕಾದ ತಾಂತ್ರಿಕ ಸಾಧ್ಯತೆಗಳನ್ನು ತೋರಿಸಿಕೊಟ್ಟರು. ಮೂರನೆಯದಾಗಿ ಈ ವೈಚಾರಿಕತೆಯನ್ನು ಸಮರ್ಥವಾಗಿ ಧ್ವನಿಸಬಲ್ಲ ವಸ್ತುಗಳನ್ನು ಹುಡುಕಿಕೊಟ್ಟರು. ಕೊನೆಯದಾಗಿ ಇವೆಲ್ಲಕ್ಕೂ ಸೂಕ್ತವಾದ ವಿಕಸನಶೀಲವಾದ ಭಾಷೆಯನ್ನು ನಿರ್ಮಿಸಿದರು. ನವೋದಯ ಮಾರ್ಗದ ಸವಕಲು ಹಾದಿಯಿಂದ ಕನ್ನಡ ಸಣ್ಣಕತೆಯನ್ನು ಅನಂತಮೂರ್ತಿ ಹೊಸಹಾದಿಗೆ ತಂದರು.''[೨೬]

"ಸಾಹಿತ್ಯಕವಾಗಿ ನವ್ಯಕತೆಗಳು ಯಶಸ್ವಿಯಾದರೂ ಬದುಕಿಗೆ ಏನನ್ನು ಕೊಡುತ್ತವೆ ಎಂಬುದನ್ನು ಯೋಚಿಸಿದಾಗ ಇವುಗಳ ಮಿತಿ ವ್ಯಕ್ತವಾಗುತ್ತದೆ. ಈ ಕತೆಗಳಲ್ಲಿ ಸಾಮಾಜಿಕ ಪ್ರಜ್ಞೆಯಿದ್ದರೂ ಅದು ಒಂದು ರೀತಿಯ ಸಂದೇಹದಿಂದಲೇ ನೋಡುವ ದೃಷ್ಟಿಯುಳ್ಳದ್ದು. ಪ್ರಾಮಾಣಿಕವಾದ ವ್ಯಕ್ತಿಯೇ ಅಲ್ಲವೆಂಬ ಭ್ರಮೆಯನ್ನು ಇವರ ಕೃತಿಗಳು ಹುಟ್ಟಿಸುತ್ತವೆ. ಇವರ ಕಥಾನಾಯಕರು ಪ್ರಜ್ಞಾವಂತರಾಗಿದ್ದರೂ ನಿಶ್ಚಿತಗುರಿಯುಳ್ಳವೆಂದಲ್ಲ. ದ್ವಂದ್ವದಿಂದಲೇ ಬದುಕನ್ನು ಸ್ವೀಕರಿಸುವ, ತಿರಸ್ಕರಿಸುವ, ಸ್ವಭಾವವುಳ್ಳವರು. ಯಾವಾಗಲೂ ಇತರರ ಬಗ್ಗೆ ಸಂದೇಹವುಳ್ಳವರಾಗಿದ್ದು ತಾವು ಸ್ವತಃ ಅಸಹಾಯಕರಾಗಿರುತ್ತಾರೆ. ವ್ಯಂಗ್ಯ ವಿಡಂಬನೆಗಳು, ಹೇಳಿದಂತೆ ನಡೆಯದಿರುವುದು, ಇವರ ಸ್ವಭಾವ. ಮೇಲ್ನೋಟಕ್ಕೆ ಒಳ್ಳೆಯವರಂತೆ ಕಾಣಿಸಿದರೂ ಒಳಗೆ ಪೊಳ್ಳುತನವನ್ನು ಪ್ರಕಟಿಸುವವರಾಗಿದ್ದಾರೆ. ಸಮಾಜವನ್ನು ತಿದ್ದುವುದಕ್ಕೆ ಮನಸ್ಸನ್ನು ಸಿದ್ಧಪಡಿಸುವುದಕ್ಕೆ ಬದಲಾಗಿ ಭೀತಿಯ ವಾತಾವರಣವನ್ನು ಸೃಷ್ಟಿಸಿಬಿಡುತ್ತಾರೆ. ಬದುಕಿನ ಬಗ್ಗೆ ಭ್ರಮನಿರಸನವನ್ನಷ್ಟೆ ಇವರು ತಾಳುತ್ತಾರೆ. ಇದು ಈ ಕತೆಗಳ ಪ್ರಮುಖ ಕೊರತೆಯಾಗಿದೆ. ಸಾಮಾಜಿಕವಾಗಿ ನಿಕಟವಾಗುತ್ತಿರುವ ಇಲ್ಲಿನ ಕತೆಗಳಲ್ಲೂ ಈ ದೋಷ ಉಳಿದುಕೊಂಡಿದೆ.''[೨೭]

ಈ ಮೇಲಿನ ನವೋದಯ ಮತ್ತು ನವ್ಯದ ಪ್ರಭಾವವು ಈಗಾಗಲೇ ಅನೇಕ ಕಥಾ ಲೇಖಕರಿಂದ ಸಣ್ಣ ಕತೆಗಳ ಬಗ್ಗೆ ತಮ್ಮ ವಿಮರ್ಶೆಗಳನ್ನು ಮತ್ತು ಅನುಭವಗಳನ್ನು ಕತೆಗಳ ಮೂಲಕ ವ್ಯಕ್ತಪಡಿಸಿದ್ದಾರೆ. ಇವುಗಳ ಆಧಾರದಿಂದ ನಾವು ಸ್ವಾತಂತ್ರ್ಯಾನಂತರ ಅನೇಕ ಸಣ್ಣಕತೆಗಳು ಆಧುನಿಕತೆ ಮತ್ತು ನವೀನ ರೀತಿಯ ಪ್ರಕಾರಗಳನ್ನು ಬಳಸಿಕೊಂಡು ಸಾಮಾನ್ಯ ಜನರಿಗೂ ಮನಸ್ಸಿಗೆ ನಾಟುವಂತೆ ರಚಿಸಿರುವುದನ್ನು ಗಮನಿಸಲಾಗಿದೆ.

ಬೆಸಗರಹಳ್ಳಿ ರಾಮಣ್ಣನವರ ಬೇಲ ಕತೆಯಲ್ಲಿ ನವೋದಯ ಮತ್ತು ನವ್ಯದ ಪ್ರಭಾವವನ್ನು ಲೇಖಕರು ಉತ್ತಮವಾಗಿ ಚಿತ್ರಿಸಿದ್ದಾರೆ. ಆದರೆ ಈ ಕತೆಯ ನಾಯಕ ಬೇರೆ ಹೆಣ್ಣುಗಳೊಡನೆ ಸಂಬಂಧವಿರಿಸಿಕೊಂಡು ಸಂತೋಷದಿಂದ ಕಳೆದ ದಿನಗಳನ್ನು ಮೆಲುಕು ಹಾಕುವಂತೆ ತನ್ನ ಪತ್ನಿ ತನ್ನಂತೆಯೇ ಪರಪುರುಷನ ಸಹವಾಸ ಮಾಡಿದರೆ ಏನಾಗಬಹುದು ಎಂಬ ಪ್ರಶ್ನೆ ಅವನ ಮನಸ್ಸಿನಲ್ಲಿ ಹಾದು ಹೋಗುವುದನ್ನು ಪ್ರತಿಯೊಬ್ಬ ಓದುಗರು ಗಮನಿಸಿದಾಗ ಹೆಣ್ಣು ಗಂಡಿನ ಬಗ್ಗೆ ಸಮಾನತೆ ಇಲ್ಲದಿರುವುದನ್ನು ಉತ್ತಮ ಉದಾಹರಣೆ

ಯೊಂದಿಗೆ ಚಿತ್ರಿಸಿದ್ದಾರೆ. ಈ ಕತೆಯನ್ನು ತೌಲನಿಕವಾಗಿ ನೋಡಿದಾಗ ಪ್ರತಿಯೊಬ್ಬ ಲೇಖಕರು ತಮ್ಮ ಅಭಿಪ್ರಾಯವನ್ನು ಹೇಳುತ್ತಾರೆಯೇ ಹೊರತು ಆದೇಶವನ್ನಲ್ಲ ಎಂಬುದು ಇದರಿಂದ ನಮಗೆ ತಿಳಿಯುತ್ತದೆ. ಈ ವಿಚಾರವನ್ನು ಭಗವಾನರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿರುವುದರಲ್ಲಿ ಯಾವುದೇ ಅಸಮಂಜಸತೆ ಕಂಡುಬರುವುದಿಲ್ಲ.

೧೯೭೪ರಲ್ಲಿ ಬಿಹಾರ್ ರಾಜ್ಯದಲ್ಲಿ ಸಿಡುಬು ರೋಗ ನಿರ್ಮೂಲನಕ್ಕಾಗಿ ವಿಶ್ವ ಆರೋಗ್ಯ ಸಂಸ್ಥೆಯ ಕಾರ್ಯಕ್ರಮದಲ್ಲಿ ಭಾಗವಹಿಸಲು ಹೋಗಿದ್ದಾಗ ಉಂಟಾದ ಅನುಭವದಿಂದ ಲೇಖಕರು ಬೇಲ ಕತೆಯನ್ನು ಬರೆದಿದ್ದಾರೆ. ಭಾಗಲ್‌ಪುರ ಜಿಲ್ಲೆಯ ಪಿರ್‌ಶಾಂತಿ ಬ್ಲಾಕಿನ ಬಿಸಾಲ್ ಗ್ರಾಮದಲ್ಲಿ ಪರಿಚಯವಾದ ಗ್ರಾಮ ನರ್ತಕಿಯೋರ್ವಳ 'ಸ್ನೇಹಫಲ'ದ ನಿರೂಪಣೆಯೇ ಈ ಕತೆ.

ಈ ಕತೆಯಲ್ಲಿ ಬಿಸಾಲ್ ಗ್ರಾಮದ ಪರಿಸರವನ್ನು ಈ ರೀತಿ ವರ್ಣಿಸಲಾಗಿದೆ : "ಬಿಸಾಲ್‌ನ ಸುತ್ತಮುತ್ತ ಫಲವತ್ತಾದ ಗದ್ದೆಯ ಬಯಲು, ಕೆಲವರು ಭತ್ತವನ್ನು ಕುಯ್ದು ಬಡಿಯುತ್ತಿದ್ದರು, ಕೆಲವರು ತೂರುತ್ತಿದ್ದರು. ಇನ್ನೂ ಕೆಲವು ಗದ್ದೆಗಳಲ್ಲಿ ಹೊಂಬಣ್ಣದ ಹಣ್ಣುಭತ್ತ ಭೂಮಿಯೊಡನೆ ಗುಟ್ಟನ್ನು ಮಾತನಾಡಿ ನಗುತ್ತ, ಉಯ್ಯಾಲೆ ಆಡುತ್ತಿತ್ತು. ಭತ್ತದ ಬೆಳೆಯ ಸಿರಿಯನ್ನು ನೋಡಿದ ನನ್ನ ಮನಸ್ಸು 'ಕರ್ನಾಟಕದ ಭತ್ತದ ಕಣಜ' ಎಂದು ಪ್ರಸಿದ್ಧವಾದ ನನ್ನ ತೌರು ಜಿಲ್ಲೆ ಮಂಡ್ಯವನ್ನು ನೆನಪಿಗೆ ತಂದು ನನಗೆ ಅಪೂರ್ವವಾದ ಆನಂದವನ್ನು ನೀಡಿತು.

ಜೀಪು ನಿಂತಿತು. ನಾನು ಎಚ್ಚೆತ್ತು ನೋಡಿದೆ. ಗೋಪಾಲ್ ಪ್ರಸಾದ್ ಒಂದು ಮನೆಯ ಮುಂದೆ ಜೀಪನ್ನು ನಿಲ್ಲಿಸಿದ್ದ. ಕಿವಿಗಳ ಮೇಲೆ ಅಲೆ ಅಲೆಯಾಗಿ ನಾಲ್ಕೂ ದಿಕ್ಕುಗಳಿಂದಲೂ ಹಾರ್ಮೋನಿಯಂ, ತಬಲ, ಗೆಜ್ಜೆನಾದ, ಹಾಗೂ ಸಾರಂಗಿಯ ನಾದ! ಇವುಗಳಿಗೆ ಹೊಂದಿಕೊಂಡು ಹಾಡುತ್ತಿರುವ ಹೆಣ್ಣುಗಳ ಧ್ವನಿ! ನಾನು ಬೆರಗಾಗಿ ನೋಡಿದೆ. ಇದೇನು ನಾನು ಎಲ್ಲಿದ್ದೇನೆ? ಅಪ್ಪಿತಪ್ಪಿ ಗಂಧರ್ವ ಲೋಕಕ್ಕೆ ಬಂದು ಬಿಟ್ಟೆನೋ ಏನು ಕಥೆ?

"ರಾಮಚಂದ್ರ ಮಿಶ್ರಾಜಿ ಇದೇನು? ಈ ದಿನ ಈ ಊರಿನಲ್ಲಿ ವಿಶೇಷವಾದ ಯಾವುದಾದರೂ ಸಮಾರಂಭ ಅಥವಾ ಹಬ್ಬ ನಡೆಯುತ್ತಿದೆಯೇ?"ಎಂದೆ.

ಇಲ್ಲ ಈ ಊರಿನಲ್ಲಿ ಸದಾ ಹೀಗೆಯೆ! ಹಣ ನೀಡುವ ಧಾರಾಳ ರಸಿಕ ಶಿಖಾಮಣಿಗಳ ಮನಸ್ಸು ತೃಪ್ತಿಪಡಿಸಲು ನೃತ್ಯ ಕಛೇರಿಗಳು ನಡೆಯುತ್ತಿರುತ್ತವೆ" ಎಂದು ಹೇಳಿದ ರಾಮಚಂದ್ರ ಮಿಶ್ರಾಜಿ."[೨೮]

ಲೇಖಕರು ವಿಶ್ವ ಆರೋಗ್ಯ ಸಂಸ್ಥೆಯ ಕಾರ್ಯಕ್ರಮದಲ್ಲಿ ಭಾಗವಹಿಸಲು ಹೋದಾಗ ಬಿಹಾರದಂತಹ ಹಿಂದುಳಿದ ರಾಜ್ಯದಲ್ಲಿ ಒಂದು ಜಿಲ್ಲೆಯ ಒಂದು ಗ್ರಾಮದಲ್ಲಿ ತಮ್ಮ ಸಹಪಾಠಿಗಳ ಮೂಲಕ ತಾವು ನೋಡಿದಾಗ ಆ ಪ್ರದೇಶದಲ್ಲಿ ಬೆಳೆದು ನಿಂತು ಕೊಯ್ಲಿಗೆ ಬಂದಿರುವ ಭತ್ತದ ಬೆಳೆಯ ಪರಿಸರವನ್ನು ತಮ್ಮ ಸ್ವಂತ ಜಿಲ್ಲೆಯ ಪರಿಸರಕ್ಕೆ ಹೋಲಿಕೆ ಮಾಡಿಕೊಂಡು ಮನಸ್ಸು ತೃಪ್ತಿಪಡುವುದನ್ನು ಗಮನಿಸಬಹುದು. ನಂತರ ಮುಂದೆ ಒಂದು ಗ್ರಾಮದಲ್ಲಿ ಕಂಡ ಕಿವಿಗೆ ಇಂಪಾದ ಹಾರ್ಮೋನಿಯಂ, ತಬಲ, ಗೆಜ್ಜೆನಾದ, ಸಾರಂಗಿಯನಾದ ಇದರ ಜೊತೆಗೆ ಹೆಣ್ಣುಗಳ ಧ್ವನಿ ಕೇಳುವುದನ್ನು ಗಮನಿಸಿ ಲೇಖಕರು ಬೇರೆ ಯಾವುದೋ

ಲೋಕಕ್ಕೆ ಬಂದಿದ್ದೇನೆಯೇ ಎಂಬುದನ್ನು ಅರ್ಥವತ್ತಾಗಿ ಚಿತ್ರಿಸಿದ್ದಾರೆ. ಇದರ ಬಗ್ಗೆ ತಮ್ಮ ಸಂಗಡಿಗರನ್ನು ವಿಚಾರಿಸಿದಾಗ ಸುಖ ಸಂತೋಷಪಡಿಸುವ ನೃತ್ಯ ಕಛೇರಿಗಳು ನಡೆಯುತ್ತಿರುವುದನ್ನು ನೋಡಿದಾಗ ರಾಜಮಹಾರಾಜರುಗಳ ಕಾಲದಿಂದಲೂ ನಡೆದು ಬಂದಿರುವ ಈ ಪದ್ಧತಿಯು ಈ ನವೋದಯಕ್ಕೆ ಪರಿವರ್ತನೆಗೊಂಡು ಹಣಗಳಿಸುವ ಮತ್ತು ವಿಲಾಸಿಗಳಿಗೆ, ಶ್ರೀಮಂತರಿಗೆ, ಆಸಕ್ತರಿಗೆ ಸಂತೋಷ ನೀಡುವಂತಹ ವಿಷಯವಾಗಿರುವುದು ಕಂಡುಬರುತ್ತದೆ.

ಕರೀಗೌಡ ಬೀಚನಹಳ್ಳಿಯವರ 'ಒಂದು ಬೆಳದಿಂಗಳ ರಾತ್ರಿ' ಕತೆ ಚೈನೀಸ್ ಕತೆಯೊಂದರ ರೂಪಾಂತರ. ಇಲ್ಲಿ ಲೇಖಕರು ದೋಣಿಯೊಂದು ಪಟ್ಟಣಕ್ಕೆ ಪ್ರಯಾಣ ಬೆಳೆಸಲು ಸಿದ್ಧವಾಗಿ ತೀರದಲ್ಲಿ ನಿಂತಾಗ ಅಲ್ಲಿನ ಪ್ರಕೃತಿಯ ಸೌಂದರ್ಯವನ್ನು ವರ್ಣಿಸಿದ್ದಾರೆ.

"ಪೂರ್ವದಿಗಂತದ ಪರ್ವತಶ್ರೇಣಿಯ ಮರೆಯಲ್ಲಿ ಕೆಂಪುಚಂದ್ರ ಆಗತಾನೆ ನಿಧಾನಗತಿಯಲ್ಲಿ ಮೇಲೇರುತ್ತಿದ್ದರಿಂದ ಅದರ ಉಜ್ವಲವಾದ ಕಿರಣಗಳು ನದಿಯ ತೀರದ ಮೇಲೆಲ್ಲಾ ಚೆಲ್ಲಿದ್ದವು.

ಅದೊಂದು ಅತ್ಯಂತ ಕಿರಿದಾದ ನದಿ. ಪರ್ವತದಿಂದ ಕೆಲವಾರು ಅಡಿ ದೂರದಲ್ಲಿ ಹಾಗೂ ದಟ್ಟವಾದ ಕತ್ತಲೆಯ ಪ್ರದೇಶದಲ್ಲಿ ಆ ನದಿ ಇತ್ತು. ಅತ್ಯಂತ ಪ್ರಕಾಶಮಾನವಾಗಿ ಮತ್ತು ಗಂಭೀರವಾಗಿ ಜುಳುಜುಳು ಹರಿಯುತ್ತಿದ್ದ ಆ ನದಿಯ ನೀರು ಬೆಳದಿಂಗಳಲ್ಲಿ ಕಣ್ಣಿಗೆ ರಮಣೀಯವಾದ ನೋಟವನ್ನುಂಟುಮಾಡಿತ್ತು. ಆ ಬೆಳದಿಂಗಳು ನದಿಯ ಮೇಲೆಲ್ಲಾ ಹಬ್ಬುತ್ತಾ ಹೋದಂತೆಲ್ಲಾ ಕ್ಷಣಕ್ಷಣಕ್ಕೂ ಅಲ್ಲಿಯ ಕಗ್ಗತ್ತಲು ಅದೃಶ್ಯವಾಗುತ್ತಾ ಸಾಗಿತ್ತು.

ಕ್ಷಣಾರ್ಧದಲ್ಲಿ ಚಂದ್ರ ಅಲ್ಲಿನ ಪರ್ವತಗಳು, ಮರಗಳು, ನದಿಗಳು, ಮನೆಗಳು, ಬಯಲುಗಳು ಹೀಗೆ ನಿಸರ್ಗದ ಚರಾಚರ ವಸ್ತುಗಳ ಮೇಲೆಲ್ಲಾ ತನ್ನ ಚಂದ್ರಿಕೆಯ ಬಲೆಯನ್ನು ನೇಯ್ದಿದ್ದ. ಆ ಹಾಲಿನ ಬೆಳದಿಂಗಳು ಮರಗಿಡಗಳ ಕಂಡಿಕಂಡಿಯಲ್ಲಿ ಸೋರುತ್ತಿತ್ತು."[೨೯]

ಕರೀಗೌಡ ಬೀಚನಹಳ್ಳಿಯವರ ಒಂದು ಬೆಳದಿಂಗಳ ರಾತ್ರಿ ಕತೆಯಲ್ಲಿ ಚೈನಿಸ್ ಕತೆಯೊಂದರ ಆಧಾರವಾಗಿಟ್ಟುಕೊಂಡು ರಾತ್ರಿಯ ಚಂದ್ರ ತನ್ನ ಬೆಳಕನ್ನು ಚೆಲ್ಲಿರುವ ಬೆಳದಿಂಗಳಿನಲ್ಲಿ ಪಟ್ಟಣಕ್ಕೆ ಪ್ರಯಾಣ ಬೆಳೆಸಲು ನಿಂತಿರುವ ಒಂದು ದೋಣಿಯು ಸಾಗುವ ನದಿಯ ಸುತ್ತಮುತ್ತಲಿನ ಹಾಗೂ ಪರ್ವತ ಶ್ರೇಣಿಗಳ ಮರಗಿಡಗಳ, ಕಲ್ಲುಬಂಡೆಗಳ ಮೇಲೆ ಹಾಗೂ ರಭಸವಾಗಿ ಹರಿಯುತ್ತಿದ್ದ ನದಿಯ ಮೇಲೆ ಬೀಳುವ ದೃಶ್ಯವನ್ನು ಹಾಗೂ ಬಿದ್ದ ಬೆಳದಿಂಗಳು ದೋಣಿಯ ಒಳಗೆ ಇಟ್ಟಿದ್ದ ದೀಪದ ಬೆಳಕಿನ ಪ್ರಭೆಯನ್ನು ಮಂದಗೊಳಿಸಿ ತನ್ನದೇ ಆದ ಪ್ರಕಾಶಮಾನವನ್ನು ಉಂಟುಮಾಡಿತ್ತು. ಹೀಗೆ ಇದರಲ್ಲಿ ಲೇಖಕರು ಕಲ್ಪಿಸಿಕೊಂಡಿರುವ ನವೋದಯ ಸಾಹಿತ್ಯದ ಪ್ರಭಾವವನ್ನು ಇಲ್ಲಿ ಕಾಣಬಹುದು.

ಬೆಸಗರಹಳ್ಳಿ ರಾಮಣ್ಣನವರ 'ಮಹಾನವಮಿ' ಕತೆ ರಾಷ್ಟ್ರೀಯ ಸಮಸ್ಯೆಯನ್ನು ಒಳಗೊಂಡ ಕತೆಗಳ ಗುಂಪಿಗೆ ಸೇರುತ್ತದೆ.

ನಮ್ಮ ದೇಶದ ಮೇಲೆ ನೆರೆಯ ರಾಷ್ಟ್ರಗಳು ದಾಳಿ ಮಾಡಿದಾಗ ಶೇಕಡ ಅರವತ್ತಕ್ಕೂ ಹೆಚ್ಚು ಅನಕ್ಷರಸ್ಥರೂ, ಕಡುಬಡುವರೂ ಇರುವ ಭಾರತದ ಹಳ್ಳಿಗಾಡುಗಳಲ್ಲಿ ಶ್ರೀಸಾಮಾನ್ಯರ ಮನಸ್ಥಿತಿ ಹೇಗಿತ್ತು? ಅವರ ಪ್ರತಿಕ್ರಿಯೆ

ಏನು? ಎಂಬುದಕ್ಕೆ 'ಮಹಾನವಮಿ' ಒಂದು ಉಜ್ವಲ ಉದಾಹರಣೆ. ಅದು ಬಡಬಗ್ಗರ ದೇಶಭಕ್ತಿಗೆ ನಿರ್ಮಿಸಿದ ಸ್ಮಾರಕ. ವರ್ಷಕ್ಕೊಮ್ಮೆ ಬರುವ ಮಹಾನವಮಿ ಹಬ್ಬ ಮಾಡಲು ದುಡ್ಡಿಲ್ಲದಿದ್ದರೂ, ತಮಗೆ ಮಾನ ಮುಚ್ಚಲು ಸೀರೆ ಇಲ್ಲದಿದ್ದರೂ, ಇರುವ ದುಡ್ಡಿನಲ್ಲೇ ಸ್ವಲ್ಪ ಭಾಗವನ್ನು ದೇಶದ ಯುದ್ಧದ ಫಂಡ್‌ಗೆ ಖಜಾನೆಯಲ್ಲಿ ಕಟ್ಟುವುದು ದೊಡ್ಡ ತ್ಯಾಗವಾಗಿದೆ. ಇದೇ ನಿಜವಾದ ಮಹಾನವಮಿ ಹಬ್ಬ! ಹೀಗೆ ಸಾಂಕೇತಿಕತೆಯನ್ನು ರಾಮಣ್ಣನವರು ತಮ್ಮ ಕತೆಗಳಲ್ಲಿ ನಿರಾಯಾಸವಾಗಿ ತರುತ್ತಾರೆ.

ಜೊತೆಗೆ ಇಲ್ಲಿ ಒಂದು ಊರಿನ ನಿಸರ್ಗದ ವರ್ಣನೆಯನ್ನೂ ಗಮನಿಸಬಹುದು. ಮಧ್ಯಾಹ್ನ, ಹೊತ್ತು ನೆತ್ತಿಯ ಮೇಲೆ ಬಂದಿದ್ದರೂ ಮೋಡಗಳ ಹಾವಳಿಯಿಂದ ಆಕಾಶ ಬೂದು ಬಣ್ಣ ಬಳಿದುಕೊಂಡಿದೆ. ಭೂಮಿಯ ಮೇಲೆ ಮಂದವಾದ ಬೆಳಕು ಹಸಿರು ಗದ್ದೆಯ ಮೇಲೂ ಅಷ್ಟೆ. ಗಾಳಿ ಬೀಸಿದಾಗ ಅತ್ತ ಇತ್ತ ಬಳುಕಿ ವಾಲಾಡುವ ಭತ್ತದ ತೆನೆಗಳು ಅಲ್ಲಲ್ಲಿ 'ಚಿಲಿಪಿಲಿ'ಗುಟ್ಟುವ ಹಕ್ಕಿಗಳ ಗುಂಪು ಏರಿಕೆಳಗಿನ ಗದ್ದೆ ಬಯಲಲ್ಲಿ ಮುಗಿಲೊಡನೆ ಆಟವಾಡುವಂತೆ ತಮ್ಮ ಗರಿಗಳನ್ನು ಮೇಲೆ ಹಿಡಿದು ಬರಡು, ಬರಡಾಗಿ, ಒಂಟಿಯಾಗಿ ದೂರದಲ್ಲಿ ನಿಂತು ಒಂದನ್ನೊಂದು ಮೌನವಾಗಿ ದೃಷ್ಟಿಸುತ್ತ; ಹತ್ತಾರು ವರ್ಷಗಳ ಆಚೆ ಹೆಸರುವಾಸಿಯಾಗಿ ಮೆರೆದಿದ್ದ ತೆಂಗಿನ ತೋಪಿಗೆ ಸಾಕ್ಷಿಯಾಗಿ ನಿಂತಿವೆ. ಹಲವು ತೆಂಗಿನ ಮರಗಳು, ಮಾವಿನ ತೋಪಿನ ಸವಿಯೇ ಸವಿ. ಆಗ ಈಗ ಉಳಿದುಕೊಂಡಿರುವ ಮರಗಳು ಮುದಿಯಾಗಿವೆ. ಅಪ್ಪಟ ಹುಳಿಮಾವಿನ ಮರಗಳು ಬುಡಭದ್ರವಿಲ್ಲದೆ ನೆಲದ ಕಡೆಗೆ ಒಂದಂತೂ ತೀರಾ ವಾಲಿದೆ. ಅಲ್ಲೊಬ್ಬರು, ಇಲ್ಲೊಬ್ಬರು, ಗದ್ದೆ ಪಾತಿಯ ತೆವರಿಗಳ ಮೇಲೆ ತಿರುಗುತ್ತಾ ಕೈಯಲ್ಲಿ ಗುದ್ದಲಿಯನ್ನು ಹಿಡಿದುಕೊಂಡು ಗದ್ದೆಗೆ ನೀರು ಹಾಯಿಸುವುದರಲ್ಲಿ ಮಗ್ನರಾದ ಜನ."[೩೦]

ಬೆಸಗರಹಳ್ಳಿ ರಾಮಣ್ಣನವರ ಮಹಾನವಮಿ ಕತೆಯ ಬಗ್ಗೆ ಭಗವಾನರು ಹೇಳಿರುವಂತೆ ಮಹಾನವಮಿ ಆಚರಣೆ ಮಾಡಲಿರುವ ಆ ಗ್ರಾಮದ ಜನ ಬಡತನ ಮತ್ತು ಅಸಹಾಯಕ ಸ್ಥಿತಿಯಲ್ಲಿದ್ದರೂ ಸಹ ದೇಶಪ್ರೇಮವನ್ನು ಪ್ರಕಟಿಸಿರುವುದನ್ನು ರಾಮಣ್ಣನವರು ತುಂಬಾ ಮನೋಜ್ಞವಾಗಿ ಚಿತ್ರಿಸಿದ್ದಾರೆ. ಇದರೊಂದಿಗೆ ನಿಸರ್ಗದ ವರ್ಣನೆ, ಬೆಳಗಿನ ಸಮಯ ಮಧ್ಯಾಹ್ನದ ಸಮಯ, ಸಂಜೆಯ ಸಮಯಗಳಲ್ಲಿ ನದಿಯ, ಹೊಲದ, ತೋಟದ ಬೆಳೆಗಳ ಬೆಳಕು ಬೀಳುವುದರ ಜೊತೆಗೆ ಪಕ್ಷಿಗಳು ಚಿಲಿಪಿಲಿಗುಟ್ಟುವ ತೋಟಗಳಲ್ಲಿ ತೆಂಗಿನ, ಬಾಳೆಯ, ಅಡಿಕೆಯ ಮರಗಳ ಮೇಲೆ ಬೀಸುವ ಗಾಳಿಯಿಂದ ಉಂಟಾಗುವ ಮನಮೋಹಕ ತರಂಗಗಳನ್ನು ಕೇಳುವುದು ತುಂಬಾ ಮನಸ್ಸಿಗೆ ಉಲ್ಲಾಸವನ್ನುಂಟು ಮಾಡುತ್ತದೆ. ಇದನ್ನು ನವೋದಯ ಮತ್ತು ನವ್ಯ ಲೇಖಕರಲ್ಲಿ ಚಿತ್ರಿಸಿರುವುದು ಕಂಡುಬರುತ್ತದೆ.

ಬಿ.ಸಿ.ರಾಮಚಂದ್ರಶರ್ಮರ ಮಂದಾರ ಕುಸುಮ ಕೃತಿಯಲ್ಲಿ ನವ್ಯತೆಯು ತುಂಬಾ ಎದ್ದು ಕಾಣುವಂತಹ ದಾಗಿದೆ. ಆದ್ದರಿಂದ ಶರ್ಮರು ನವ್ಯ ಕತೆಗಾರರೆಂದು ಪರಿಗಣಿಸಬಹುದು. ಇವರು ಪ್ರಾರಂಭಿಸಿದ ಧಾಟಿಯು ನವ್ಯತನವನ್ನು ಬಿಂಬಿಸುತ್ತದೆ. ನಂತರ ಯು.ಆರ್.ಅನಂತಮೂರ್ತಿಯವರ 'ಎಂದೆಂದು ಮುಗಿಯದ ಕತೆ' ಸಂಕಲನವಾದರೂ ಕಥಾ ಸಾಹಿತ್ಯ ಮಾರ್ಗದ ಎರಡನೆಯ ಕೃತಿಯಾಗಿದೆ. ಅನಂತಮೂರ್ತಿಯವರ ಪ್ರಯತ್ನ ನವ್ಯ ಸಾಹಿತಿಗಳಿಗೆ ಮಾರ್ಗದರ್ಶನ ನೀಡುವಂತಹುದಾಗಿದೆ. ಇವರ ಸಮಕಾಲೀನರಾಗಿ ಕೆ.ಸದಾಶಿವ,

ಯಶವಂತ ಚಿತ್ತಾಲ, ಶಾಂತಿನಾಥ ದೇಸಾಯಿ, ಪಿ.ಲಂಕೇಶ್, ಬೆಸಗರಹಳ್ಳಿ ರಾಮಣ್ಣ, ತೇಜಸ್ವಿ, ದೇವನೂರು ಮಹಾದೇವ ಈ ಕತೆಗಾರರಿಂದ ಕನ್ನಡದಲ್ಲಿ ನವ್ಯ ಸಾಹಿತ್ಯವು ವಿಸ್ತಾರಗೊಂಡು ವೈವಿಧ್ಯಪೂರ್ಣವಾಗಿ ನಿರ್ಮಾಣಗೊಂಡಿತು. ಇವರ ಕೃತಿಗಳಲ್ಲಿ ನವ್ಯ ಕಥಾಸಾಹಿತ್ಯದ ಇತಿಹಾಸ ಪ್ರಜ್ಞೆಯನ್ನು ಕಾಣಬಹುದು. ಇವರ ಜೊತೆಗೆ ಅರವತ್ತು ಮತ್ತು ಎಪ್ಪತ್ತರ ದಶಕಗಳಲ್ಲಿ ಹೊಸ ಹೊಸ ಕಥಾಸಾಹಿತ್ಯವನ್ನು ರಚಿಸಿ ಇನ್ನಿತರ ಹೊಸ ಕತೆಗಾರರು ಸಹ ಕಾರಣರಾಗಿರುತ್ತಾರೆ. ಇನ್ನೂ ಮುಂದುವರೆದು ನೋಡಿದಾಗ ಇತ್ತೀಚಿನ ಯುವ ಬರಹಗಾರರಾದ ಬರಗೂರರ 'ಕಪ್ಪುನೆಲದ ಕೆಂಪುಕಾಲು', ಟಿ.ಜಿ.ರಾಘವರ 'ಸಂಬಂಧಗಳು', ಯು.ಆರ್.ಅನಂತಮೂರ್ತಿಯವರ 'ಆಕಾಶ ಮತ್ತು ಬೆಕ್ಕು', ಎಸ್. ದಿವಾಕರ ಅವರ 'ಇತಿಹಾಸ', ಬಿ.ಟಿ. ದೇಸಾಯಿಯವರ 'ನಾವು ಮತ್ತು ಇತರ ಕತೆಗಳು' ಬೊಳುವಾರರ 'ದೇವರುಗಳ ರಾಜ್ಯದಲ್ಲಿ', ಕರೀಗೌಡ ಬೀಚನಹಳ್ಳಿಯವರ 'ಕರಿಮಣ್ಣಿನ ಗೊಂಬೆಗಳು', 'ಖಾಸನೀಸರ ಕತೆಗಳು', ಬಿ.ಸಿ.ರಾಮಚಂದ್ರಶರ್ಮರ 'ಕತೆಗಾರನ ಕತೆ', ನಾಗವಾರರ 'ಅಲೆಗಳು'. ಈ ಮೇಲ್ಕಂಡ ಎಲ್ಲಾ ಕತೆಗಳು ೧೯೮೦ರಲ್ಲಿ ಪ್ರಕಟವಾಗಿದ್ದರೂ ಸಹ ಇವುಗಳಲ್ಲಿರುವ ಹಲವಾರು ಕತೆಗಳು ಅನೇಕ ನವ್ಯಕತೆಗಳ ಸಾಲಿಗೆ ಸೇರಿದ್ದರೂ ಸಹ ೭೦ರ ದಶಕದಲ್ಲಿಯೇ ನವ್ಯಕತೆಗಳಾಗಿ ಕನ್ನಡದ ಅನೇಕ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದನ್ನು ನಾವು ಅವಶ್ಯವಾಗಿ ನೆನಪಿಸಿಕೊಳ್ಳಬೇಕಾದ ಅಂಶ. ಒಟ್ಟಾರೆ ನವ್ಯ ಸಾಹಿತ್ಯ ೨೦-೩೦ ವರ್ಷಗಳ ಹಿಂದಿನಿಂದಲೇ ಪ್ರಚಲಿತವಾಗಿರುವುದನ್ನು ಮೇಲೆ ಕಾಣಿಸಿದ ಅಂಶಗಳಲ್ಲಿ ಗಮನಿಸಬಹುದು.

ಕರೀಗೌಡ ಬೀಚನಹಳ್ಳಿಯವರ ಮೇಲಿನ ಅಂಶಗಳನ್ನು ಅವಲೋಕಿಸಿದಾಗ ನಮ್ಮ ನವ್ಯ ಕತೆಗಳನ್ನು ಮತ್ತು ನವ್ಯ ಕಥಾ ಸಾಹಿತ್ಯದ ಬಗ್ಗೆ ಹೆಚ್ಚು ಮಾಹಿತಿಗಳು ನಮಗೆ ಸಿಗುತ್ತದೆ. ಇದರಲ್ಲಿ ನನ್ನ ಅಧ್ಯಯನಕ್ಕೆ ಸಂಬಂಧಿಸಿದಂತೆ ನವ್ಯದ ಪ್ರಭಾವವು ನಮ್ಮ ಗ್ರಾಮೀಣ ಕತೆಗಾರರ ಮೇಲೆ ಹೇಗೆ ಪ್ರಭಾವವನ್ನುಂಟುಮಾಡಿದೆ ಎಂಬುದನ್ನು ಈ ಕೆಳಗಿನ ಕತೆಗಾರರ ಕತೆಗಳ ಸಂದರ್ಭಗಳ ಮೂಲಕ ವಿವರಣೆಯನ್ನು ಕೊಡಲಾಗಿದೆ.

ಸಣ್ಣಕತೆ ಹಾಗೂ ನವ್ಯಕತೆಗಳ ಬಗ್ಗೆ ಅನೇಕ ಮಹನೀಯರು ಕೃತಿಗಳನ್ನು ರಚಿಸಿರುವುದರ ಬಗ್ಗೆ ತಿಳಿಯಲಾಗಿದೆ. ಸಣ್ಣ ಕತೆ ಮತ್ತು ನವ್ಯ ಕತೆಗಳ ರಚನೆಯಲ್ಲಿ ಮಹಿಳೆಯರು ಹಿಂದುಳಿದಿಲ್ಲ ಎಂಬುದನ್ನು ಗಮನಿಸಬಹುದು. ವೀಣಾ ಶಾಂತೇಶ್ವರ ಅವರ ಸಂಪಾದಕತ್ವದಲ್ಲಿ ಪ್ರಕಟವಾಗಿರುವ ಮಹಿಳೆಯ ಕತೆಗಳು ಎಂಬ ಕೃತಿ ಗಮನಾರ್ಹವಾಗಿದೆ. ಇದರೊಂದಿಗೆ ಇನ್ನೂ ಅನೇಕ ಮಹಿಳೆಯರ ಅತ್ಯುತ್ತಮ ಕತೆಗಳು ಇರುವುದನ್ನು ಗಮನಿಸಬಹುದು.

ಹಾಗೆಯೇ ಕಾಳೇಗೌಡ ನಾಗವಾರರವರ 'ಅಲೆಗಳು' ಕತೆಯಲ್ಲಿ ನವ್ಯದ ಪ್ರಭಾವವನ್ನು ಗುರುತಿಸಲಾಗಿದೆ. "ಚೆಲ್ಲದಹಳ್ಳಿ, ಬೇವೂರು, ನುಗ್ಗೆದೊಡ್ಡಿ, ಕೃಷ್ಣಾಪುರ, ಬ್ಯಾಲದಕೆರೆ ಮುಂತಾದ ಹೊಲೆದಂಡೆಯ ಗ್ರಾಮಗಳಿಗೆ ತನ್ನದೇ ಆದ ವಿಚಿತ್ರ ಸೊಬಗು ಇದೆಯೆಂದು, ಹೂವಣ್ಣ ನಂಬಿದ್ದಾನೆ. ಈ ಸುತ್ತಲ ಗಿಡ ಮರ, ಹೊಲ ಗದ್ದೆಗಳ ಹಸಿರು ಎಂದಾದರೂ ಒಂದು ದಿನ ನಮ್ಮ ಜನಗಳ ಮನಸ್ಸನ್ನು ಕೋಮುಗೊಳಿಸಲು, ಆರೋಗ್ಯಕರವನ್ನಾಗಿಸಲು ಸಾಧ್ಯವೆನ್ನುವ ಆಶಾವಾದ ಅವನ ನಂಬಿಕೆಗೆ ಬೆನ್ನೆಲುಬಾಗಿದೆ.

ಹತ್ತು ವರ್ಷಗಳ ಹಿಂದೆ, ಇದೇ ಬೆಲ್ಲದ ಹಳ್ಳಿಯಲ್ಲಿ ಹರಿದ ಬಟ್ಟೆಗಳ, ಬರಿಗಾಲ, ಅಸ್ಪೃಶ್ಯ ಪುಟಾಣಿಯಾಗಿ ತಾನು ಅಲೆದಾಡುತ್ತಿದ್ದ ಕ್ಷಣಗಳು ಅವನ ಕಣ್ಣಲ್ಲಿವೆ. ಆಗ ತಾನು ಊರ ಹೊರಗಿನ ತನ್ನ ಕೇರಿಯ ಹೊರತಾಗಿ ಒಳಗಿನ ಸವರ್ಣೀಯರ ಮನೆಗಳ ಪಡಸಾಲೆ ಅಂಚನ್ನು ಕೂಡ ತಲುಪಲು ಸಾಧ್ಯವಾಗುತ್ತಿರಲಿಲ್ಲ. ದೈತ್ಯಾಕಾರವಾಗಿ ಕಾಣಿಸುತ್ತಿದ್ದ ಈ ಮನೆಗಳು ತಂತಾವೆ ಈ ಕುಬ್ಜವೂ ಹತ್ತಿರದವೂ ಆದಂತೆ ಭಾಸವಾಗತೊಡಗಿವೆ. ಈ ಹಿಂದೆ ಗುಂಪುಗಲಭೆಗಳಲ್ಲಿ ರಕ್ತಪಾತವಾಗಿದೆ. ಆದ್ದರಿಂದಲೇ ಇಲ್ಲಿ ಅಂಗವಿಕಲರಿದ್ದಾರೆ; ಜನರ ಮನಸ್ಸಿನಲ್ಲಿ ತೀವ್ರವಾದ ನೋವಿನ ನೆನಪುಗಳಿವೆ. ಕರಿಮೊಡ್ಡಯ, ನೆತ್ತಿಯ ಗಾಯ, ಚೋಟಿಯ ಮಗಳ ಹರಿದಕಿವಿ, ಪೊತ್ತೆಯ ಕುಂಟಕಾಲು, ಕೋಳಿಮೊಟ್ಟೆ ಈರನ ನಿಶ್ಚೇಷ್ಟಿತ ಬಲಗೈ - ಎಲ್ಲವೂ ಬೆಲ್ಲದ ಹಳ್ಳಿಯ ಗತಕಾಲದ ಇಂಥ ಬೇವಿನ ಚಟುವಟಿಕೆಗಳಿಗೆ ಮೂಕಸಾಕ್ಷಿಗಳಾಗಿವೆ. ಹೆಂಡದ ಗುಂಡಪ್ಪನ ಭಾರಿಹೆಣ ಊರಾಚೆಯ ದೊಡ್ಡಾಲದ ಮರದ ರೆಂಬೆಗಳ ಕೆಳಗೆ ತೂಗಾಡುತ್ತಿದ್ದುದನ್ನು ಈತ ಬಾಲ್ಯದಲ್ಲಿಯೇ ಕಂಡಿದ್ದ. ಗುಂಡಪ್ಪನ ಹೆಣಕ್ಕೆ ಆತುಕೊಂಡಂತೆ ಆತನ ಬಹುಕಾಲದ ಪ್ರೇಯಸಿ ಗಿರ್ಗಿಯ ಹೆಣ ಸತ್ತಮೇಲೂ ತನ್ನ ಪ್ರಿಯಕರನಿಗೆ ಮುತ್ತಿಡುತ್ತಿರುವಂತೆ ಅದೇ ಹಗ್ಗದಲ್ಲಿ ನೇಡಾಡುತ್ತಿತ್ತು. ಹೂವಣ್ಣ ಆಗ ಹೈಸ್ಕೂಲ್ ವಿದ್ಯಾರ್ಥಿ. ಹೆದರಿಕೆ ಮತ್ತು ಗಾಬರಿಗಳಲ್ಲಿ ಬಳಲಿ ಸುಣ್ಣವಾಗಿದ್ದ. ಇಡೀ ಈ ಊರು ಅಲ್ಲಿ ನೆರದಿತ್ತು. ಒಳ ರಾಜಕೀಯದ ಶೀತಲ ಪರಿಣಾಮವಾದ ಈ ಅಚಾತುರ್ಯವೇನೋ ದೊಡ್ಡದು ನಿಜ, ಆದರೆ ಅದರಿಂದ ಯಾರಿಗೂ ಖುಷಿಯಾಗಿರಲಿಲ್ಲ. ಅದೊಂದು ಪ್ರೀತಿಪೂರ್ವಕವಾದ ಜೋಡಿ. ಆತ್ಮಹತ್ಯೆ ಎಂಬ ಭ್ರಮೆ ಹುಟ್ಟಿಸಲು ಕೊಂದವರು ಈ ಸನ್ನಾಹ ನಡೆಸಿದ್ದರು. ಸತ್ಯ ಮಾತ್ರ ಸ್ಪಷ್ಟವಾಗಿತ್ತು, ಅದು ಹೊಳೆಯುತ್ತಿತ್ತು."[೩೧]

ಕಾಳೇಗೌಡ ನಾಗವಾರರ ಅಲೆಗಳು ಕತೆಯಲ್ಲಿ ಬರೆದಿರುವ ವಿಷಯಕ್ಕೆ ಸಂಬಂಧಿಸಿದಂತೆ ಗಿರಡ್ಡಿ ಗೋವಿಂದರಾಜು ಅವರು, ಮೇಲಿನ ಕತೆಯಲ್ಲಿ ನವ್ಯತೆಯ ಸ್ವರೂಪವನ್ನು ಬಹಳ ಚೆನ್ನಾಗಿ ವಿವರಿಸಿದ್ದಾರೆ ಎಂಬುದಾಗಿ ಮತ್ತು ಜಿ.ವಿ.ಆನಂದಮೂರ್ತಿಯವರು ಹೇಳುವಂತೆ ಇದೇ ಲೇಖಕರ ಮೇಲಿನ ಕತೆಯಲ್ಲಿ ನವ್ಯೋತ್ತರ ಸಾಹಿತ್ಯಕ್ಕೆ ಉತ್ತಮವಾಗಿ ಚಾಲನೆ ನೀಡಿರುವುದನ್ನು ಒಪ್ಪಿಕೊಂಡಿದ್ದಾರೆ. ಈ ಕತೆಯಲ್ಲಿ ಬರುವ... ಗುಂಡಪ್ಪ ತನ್ನ ಸ್ವಂತ ಹೆಂಡತಿ ಇದ್ದರೂ ಸಹ ವಿವಾಹಿತಳಾದ ಪರಸ್ತ್ರೀಯಾದ ಗಿರ್ಗಿಯನ್ನು ಪರಸ್ಪರ ಪ್ರೀತಿಸುವುದನ್ನು ಇಡೀ ಊರಿನ ಜನ ಸಹಿಸಲಿಲ್ಲ. ಊರಿನ ಬಗ್ಗೆ ಕಾಳಜಿ ಹೊಂದಿರುವ ಜನರು ತಮ್ಮ ಊರಿನಲ್ಲಿ ಕಂಡುಬರುವ ಈ ಅನೈತಿಕ ಸಂಬಂಧವನ್ನು ಪ್ರತಿಭಟಿಸಲು ಅವರನ್ನೇ ಮುಗಿಸಿಬಿಡಬೇಕೆಂಬ ಸಂಚನ್ನು ಊರೆಲ್ಲ ಒಂದಾಗಿ ಮಾಡಿ ಆತ್ಮಹತ್ಯೆ ಎಂಬ ಸಂಶಯ ಬರುವಂತೆ ಊರ ಜನರೇ ಕೊಂದು ಹೊರಗಿನ ಪ್ರಪಂಚಕ್ಕೆ ತೋರಿಸುವುದು ಕಂಡುಬರುತ್ತದೆ. ಇವರನ್ನು ಸಾಯಿಸಿದ ನಂತರ ಕಳೆಬರದ ಯಾವುದೇ ಕುರುಹು ಉಳಿಯದಂತೆ ಗ್ರಾಮಸ್ಥರೆಲ್ಲ ಒಣಸೌದೆಯನ್ನು ಕೂಡಿಸಿ ಗಂಡಸಿನ ಶವದ ಮೇಲೆ ಹೆಂಗಸಿನ ಶವವನ್ನು ಇಟ್ಟು ಸಂತೋಷದಿಂದ ಸುಟ್ಟು ಹಾಕುತ್ತಾರೆ. ಇದರಿಂದ ಇಂತಹ ಘಟನೆಗಳು ನವ್ಯ ಸಾಹಿತ್ಯದ ಪ್ರಭಾವವನ್ನು ಈ ಕತೆಗಳನ್ನು ಕಾಣಬಹುದಾಗಿದೆ.

"ಜಿ.ವಿ.ಆನಂದಮೂರ್ತಿಯವರು ಹೇಳುವಂತೆ "ನವ್ಯೋತ್ತರ ಗದ್ಯಸಾಹಿತ್ಯಕ್ಕೆ ಹೊಸ ಜೀವಂತ ಚಾಲನೆ ನೀಡಬಲ್ಲ ಸಮರ್ಥ ಕಥೆಗಾರರಾಗಿ, ಈ ನೆಲದ ಅಂತರಾಳದ ಅವ್ಯಕ್ತ ನಿಗೂಢಗಳನ್ನು ಕಲೆಯಲ್ಲಿ ಸಾಕ್ಷಾತ್ಕರಿಸುವ

ಲೇಖಕರಾಗಿ ಒಡಮೂಡಿರುವ ಡಾ.ಕಾಳೇಗೌಡ ನಾಗವಾರರ ಎಲ್ಲ ಬರವಣಿಗೆಗಳು, ಸಮಾಜವಾದಿ ಆಶಯಗಳ ನೆಲೆಗಟ್ಟಿನ ಅಡಿಪಾಯದ ಮೇಲೆ ನಿಂತಿವೆ. ಮಾನವೀಯ ಸಂಬಂಧಗಳನ್ನು ಎಂತಹುದೇ ವಿಷಮ ಸ್ಥಿತಿಯಲ್ಲಿಯೂ ಪಡೆದುಕೊಳ್ಳುವುದು ಮತ್ತು ಉಳಿಸಿಕೊಳ್ಳುವುದು ಇಲ್ಲಿನ ಕಥಾಹಂದರಗಳ ಒಟ್ಟು ಚೌಕಟ್ಟಾಗಿದೆ."[೩೨]

ಕರೀಗೌಡ ಬೀಚನಹಳ್ಳಿಯವರು ನವ್ಯ ಸಾಹಿತ್ಯದ ಬಗ್ಗೆ ಕುರಿತು ಈ ರೀತಿಯಾಗಿ ಹೇಳುತ್ತಾರೆ. "ಇಪ್ಪತ್ತನೇ ಶತಮಾನದ ಪೂರ್ವಾರ್ಧದಲ್ಲಿ ಪದ್ಯ ಮತ್ತು ಗದ್ಯದ ಬಗ್ಗೆ ಇದ್ದ ಪರಿಕಲ್ಪನೆ ಇಂದು ಸಂಪೂರ್ಣವಾಗಿ ಬದಲಾಗಿದೆ. ನವ್ಯಕತೆಗಳ ಒಲವು ನಿಲವುಗಳ ಹಿಂದಿನ ಸಾಹಿತ್ಯ ಪರಂಪರೆಗಿಂತ ಭಿನ್ನವಾಗಿದೆ. ವರ್ಣ, ವರ್ಗ, ಲಿಂಗಬೇಧ ಮತ್ತು ಮಾನವೀಯ ಸಮಾಜ ನಿರ್ಮಾಣದತ್ತ ಒಲವು ಈ ನವ್ಯಕತೆಗಳಲ್ಲಿ ಪ್ರಧಾನವಾಗಿ ಕೆಲಸ ಮಾಡಿರುವ ಸೃಜನಶೀಲ ಪ್ರಕ್ರಿಯೆಗಳಲ್ಲಿ ಒಂದು. ನವ್ಯ ಕಥಾ ಸಾಹಿತ್ಯದಲ್ಲಿ ಗದ್ಯಕ್ಕೆ ಇರುವ ನಾವಿನ್ಯತೆಯ ಬಗ್ಗೆ ಪಿ.ಲಂಕೇಶರ ಅಭಿಪ್ರಾಯದಲ್ಲಿ ಹೇಳುವುದಾದರೆ "ಆಧುನಿಕ ನವ್ಯಕಥೆಗಳಲ್ಲಿ ಕಾವ್ಯಗುಣ ಮುಖ್ಯವಾದದ್ದು. ಕಾವ್ಯದ ಕಾವಿಲ್ಲದೆ ದ್ವಂದ್ವ ಪ್ರವೃತ್ತಿಗಳನ್ನು ಬೆಸೆಯಲು ಸಾಧ್ಯವಿಲ್ಲ. ಆದರೆ ಕಾವ್ಯಕ್ಕೆ ಇಲ್ಲದ ಸ್ವಚ್ಛಂದ ಗದ್ಯಕ್ಕಿರುವುದರಿಂದ ಹೆಚ್ಚು ವಿಸ್ತಾರವುಳ್ಳ ಅನುಭವಗಳನ್ನು ಕಥೆಯ ಕಟ್ಟಿನೊಳಕ್ಕೆ ತರಲು ಸಾಧ್ಯವಾಗಿದೆ. (ಪ್ರಸ್ತುತ, ಪುಟ ೧೭) ನವ್ಯಕಥೆಗಳ ರಚನೆಯ ನಿಲುವು ನೇರವೂ ಹೌದು, ಸಂಕೀರ್ಣವೂ ಹೌದು. ಹಳೆಯ ಕಥೆಗಳಲ್ಲಿ ಕಂಡುಬರುತ್ತಿದ್ದ ಆರಂಭ, ಮದ್ಯ, ಅಂತ್ಯ, ಇವೆಲ್ಲಾ ಈ ನವ್ಯಕಥೆಗಳ ನಿಲುವಿನಲ್ಲಿ ಭಿನ್ನವಾಗಿವೆ. ಬದಲಾದ ಚಾರಿತ್ರಿಕ ಸನ್ನಿವೇಶಗಳಿಗನುಗುಣವಾಗಿ ನವ್ಯ ಕಥೆಯ ತಾತ್ವಿಕ ಸ್ವರೂಪ ಸಂಕೀರ್ಣವಾಗಿ ಸೂಕ್ಷ್ಮವಾಗಿ ಅಭಿವ್ಯಕ್ತಿಯನ್ನು ಪಡೆದಿದೆ. ಚಿತ್ತಾಲರು ತಮ್ಮ 'ಕಥೆಯಾದಳು ಹುಡುಗಿ' ಕಥೆಯನ್ನು ಆರಂಭಿಸುವುದಕ್ಕೆ ಮುನ್ನ ಬನ್ನಿ ಕುಳಿತುಕೊಳ್ಳಿ ಒಂದು ಕಥೆ ಹೇಳುತ್ತೇನೆ."[೩೩] ಯಾಕೆ ಹೇಳುತ್ತೇನೋ ಗೊತ್ತಿಲ್ಲ. ನಿಮಗೆಲ್ಲಾ ಕೇಳಬೇಕು ಅನ್ನಿಸಿದ್ದರಿಂದಲೇ ಹೇಳುತ್ತಿದ್ದೇನೆ. "ಎಂದು ಇಟ್ಟುಕೊಳ್ಳಿ, ಕಥೆಯನ್ನು ಇಲ್ಲಿಂದಲೇ ಆರಂಭಿಸಲಿಕ್ಕೆ ಕಾರಣ ಇದನ್ನು ಎಲ್ಲಿಂದ ಆರಂಭಿಸಬಹುದು ಎನ್ನುವುದೆ." (ಸಮಗ್ರ ಕಥೆಗಳು, ೧೯೮೩, ಪುಟ ೩೮೯) ಎಂದು ಹೇಳಿ ಕೂಡಲೇ ಆ ಕಥೆಯನ್ನು ಆರಂಭಿಸುತ್ತಾರೆ. ಮುಖ್ಯವಾಗಿ ಕಳೆದ ದಶಕದಲ್ಲಿ ನವ್ಯ ಕಥೆಯ ತಾತ್ವಿಕ ಸ್ವರೂಪದಲ್ಲಿ ಹಲವಾರು ಬದಲಾವಣೆಗಳು ಜರುಗಿವೆ. ಅವುಗಳಲ್ಲಿ ಪ್ರಧಾನವಾಗಿ ಎರಡು ಅಂಶಗಳನ್ನು ಕೆ.ವಿ.ನಾರಾಯಣ ಅವರು ತಮ್ಮ 'ಸೃಜನ ಸಾಹಿತ್ಯ ಪ್ರಗತಿ' ಎಂಬ ಲೇಖನದಲ್ಲಿ ಹೀಗೆ ಗುರುತಿಸಿದ್ದಾರೆ.

೧. ವ್ಯಕ್ತಿಕೇಂದ್ರಿತ ಗ್ರಹಿಕೆಯ ಮಿತಿಗಳನ್ನು ಕಂಡುಕೊಂಡು ಸಾಮಾಜಿಕ ವೈರುಧ್ಯಗಳ ಹಿನ್ನೆಲೆಯಲ್ಲಿ ಜೀವನವನ್ನು ನೋಡುವ ದೃಷ್ಟಿಯನ್ನು ರೂಢಿಸಿಕೊಳ್ಳಲಾಯಿತು. ಇದರಿಂದಾಗಿ ಸಣ್ಣಕಥೆ ಸಾಮಾಜಿಕ ಮೌಲ್ಯಗಳನ್ನು ಕುರಿತು ಚರ್ಚೆಯನ್ನು ನಂಬತೊಡಗಿದೆ. ಬಹುಮಂದಿ ಕಥೆಗಾರರಿಗೆ ಇದು ಸರಳಗೊಳಿಸಿದ ಹಾದಿಯಾಗಿ ತೋರಿದೆ. ಪತ್ರಿಕೆಯ ಹುಸಿ ಅಧಿಕೃತ ಧೋರಣೆಯಲ್ಲೇ ಸಮಾಜವನ್ನು ವಿವರಿಸುವ ಜವಾಬ್ದಾರಿಯನ್ನು ಇಂಥ ಕಥೆಗಾರರು ನಿರ್ವಹಿಸುತ್ತಿದ್ದಾರೆ. ಆದರೆ ಸಾಮಾಜಿಕವೆನಿಸುವ ವಸ್ತುವನ್ನು ನಿರ್ದಿಷ್ಟ ಸಾಮಾಜಿಕ ಚಿಂತನೆಯ ಮೂಲಕ ಗ್ರಹಿಸದೆ ಆ ವಸ್ತುವಿನ ಆಂತರಿಕ ದ್ವಂದ್ವಗಳನ್ನು ಅದರ ಪರಿಣಾಮವಾಗಿ

ಅದರ ಜೀವಂತ ಸ್ವರೂಪವನ್ನು ನಮ್ಮ ಕೆಲವು ಕಥೆಗಾರರು ಚಿತ್ರಿಸಲು ತೊಡಗಿದ್ದಾರೆ. ಈ ದಿಕ್ಕಿನ ಬದಲಾವಣೆ ಇಂಥ ಕಥೆಗಾರರಿಂದ ಅರ್ಥಪೂರ್ಣವಾಗಿದೆ.

೨. ನವ್ಯ ಕಥೆಯ ವ್ಯಕ್ತಿ ಕೇಂದ್ರಿತ ದೃಷ್ಟಿಯನ್ನು ಬಿಟ್ಟುಕೊಡದೆ ಆ ವ್ಯಕ್ತಿಯನ್ನೆ ವಿಸ್ತರಿಸುವ ಯತ್ನಗಳನ್ನು ಕೆಲವು ಕಥೆಗಾರರು ಯೋಜಿಸಿದ್ದಾರೆ. ವ್ಯಕ್ತಿ ಮತ್ತು ಸಮಾಜದ ಸಂಬಂಧದ ವಿವಿಧ ಮುಖಗಳನ್ನು ಗ್ರಹಿಸಬಲ್ಲ ಕಥೆಯ ಕೇಂದ್ರ ಪ್ರಜ್ಞೆ, ಕೇವಲ ಸ್ವಂತವನ್ನು ಮಾತ್ರ ಕಾಣುವ ವ್ಯಕ್ತಿಗೆ ಮಿತಗೊಳ್ಳಲು ಸಾಧ್ಯವಿಲ್ಲ. ವೈಯಕ್ತಿಕ ಬದುಕನ್ನು ಅದರ ಬೆಳವಣಿಗೆಯನ್ನು ಮೂಲ ಸಾಮಗ್ರಿಯನ್ನಾಗಿ ಮಾಡಿಕೊಂಡು ಈ ಸಾಮಗ್ರಿಯ ನೆರವಿನಿಂದ ಸಾಮಾಜಿಕ ವ್ಯಕ್ತಿಯ ಚಹರೆಗಳನ್ನು ಕಾಣುವ ನೆಲೆಯನ್ನು ಆಶ್ರಯಿಸಲಾಗುತ್ತಿದೆ. ಈ ಪ್ರಯೋಗ ಕನ್ನಡ ಸಣ್ಣಕಥೆಗೆ ಹೊಸ ಜವಾಬ್ದಾರಿಯನ್ನು ತಂದು ಕೊಟ್ಟಿದೆ.

ನವ್ಯ ಕಥೆಗಳಲ್ಲಿ ಗದ್ಯ ಒಂದು ಸಹಜ ಕ್ರಿಯೆಯಾಗಿ ಅಭಿವ್ಯಕ್ತಿ ಪಡೆದಿದೆ. ಸೃಜನಾತ್ಮಕವಾಗಿ ಅದು ತನ್ನ ಸ್ವರೂಪದ ಸೂಕ್ಷ್ಮಾತಿಸೂಕ್ಷ್ಮತೆಗಳನ್ನೆಲ್ಲಾ ವಿಸ್ತರಿಸಿಕೊಂಡಿದೆ. ನವ್ಯ ಕಥೆಗಳಲ್ಲಿ ಕಥೆ ಹೇಳುವ ಪದ್ಧತಿ, ಬರವಣಿಗೆಯ ಕ್ರಮ, ಆಲೋಚನೆಯ ದಿಕ್ಕು, ಬದುಕಿನ ಪ್ರಯೋಗಶೀಲತೆ, ಸಮಾಜದ ಘಟಕವಾದ ಭಾಷೆಯ ಬಳಕೆಯಲ್ಲಿ ಪರಿಣತಿ ಪ್ರತಿಮೆ, ಸಂಕೇತ, ರೂಪಕಗಳ, ಉಪಯೋಗದಲ್ಲಿ ಹೊಸತನ ಇದೆಲ್ಲಾ ಕಂಡು ಬರುತ್ತದೆ."[೩೪]

ನವ್ಯ ಬರವಣಿಗೆ ಒಂದು ದೃಷ್ಟಿಯಲ್ಲಿ ನಿಗೂಢವಾದುದು. ಕಾರಣ ಆ ಹೊತ್ತಿಗೆ ವಿದ್ಯಾಭ್ಯಾಸ ಸಾರ್ವತ್ರಿಕವಾಗಿತ್ತು. ಬದುಕಿನ ಸಂಕೀರ್ಣತೆ ನಾನಾ ಮುಖಗಳಿಂದ ಗ್ರಾಹ್ಯವಾಗಿದ್ದು, ಅದನ್ನು ಬಹುಮುಖೀ ಅರ್ಥ ಮತ್ತು ಬಹುಮುಖೀ ಗ್ರಹಿಕೆಯಾಗಿ ಸಾಹಿತ್ಯದ ರಚನೆಯಲ್ಲಿ ವ್ಯಕ್ತವಾಗುತ್ತಿದ್ದರಿಂದ ಈ ಸ್ವರೂಪಕ್ಕೆ ಖಚಿತ ಅರ್ಥವಿದೆ. ಜೀವನವನ್ನು ಏನೆಲ್ಲಾ ರೀತಿಯಲ್ಲಿ ನೋಡಿದಾಗಲೇ ಅದರ ವಿರಾಟ್ ಸ್ವರೂಪ ವ್ಯಕ್ತವಾಗುವುದಕ್ಕೆ ಸಾಧ್ಯ. ಎಷ್ಟೋ ಸಾರಿ ಮನುಷ್ಯವರ್ಗ ಏನೆಲ್ಲಾ ವಿಚಾರಗಳಿಗೆ ಪ್ರಯೋಗಶೀಲ ವಸ್ತುವೂ ಬಲಿಪಶುವೂ ಆಗುವುದು ಅನಿವಾರ್ಯವಾಗಿತ್ತು. ರಾಜಕೀಯ ಮತ್ತು ಸಾಮಾಜಿಕ ಏರುಪೇರುಗಳು ಸಾಂಸ್ಕೃತಿಕ ಸ್ಥಿತ್ಯಂತರಕ್ಕೆ ಕಾರಣವಾಗಿ ಬಿಡುತ್ತದೆ. ನವ್ಯರು ಪರಿವರ್ತನಶೀಲ ನೆಲೆಯಲ್ಲಿ ಮನುಷ್ಯ ಬದುಕಿನ ಸಾಂಸ್ಕೃತಿಕ ಹಿನ್ನೆಲೆಯ ಅನಾವರಣ, ಅರ್ಥವ್ಯಾಖ್ಯಾನಕ್ಕೆ ಹೆಚ್ಚು ಒತ್ತುಕೊಟ್ಟುದೇಕೆಂದು ಇಲ್ಲಿ ಗಮನಿಸಬಹುದು. ಪ್ರತಿಯೊಂದನ್ನು ಪರಿಶೀಲಿಸುವ ನಂತರ ಒಪ್ಪುವ ವಿಚಾರವು ಸೂಕ್ಷ್ಮವಾದುದು.

"ಸಂಘಜೀವಿಯಾದ ಮಾನವ ನವ್ಯಕಥೆಗಳ ಆಸಕ್ತಿಯ ಕೇಂದ್ರ ಭಿತ್ತಿಯಾಗಿದ್ದಾನೆ. ವ್ಯಕ್ತಿಯ ಮಾನಸಿಕ ಹಾಗೂ ಬೌದ್ಧಿಕ ಜಗತ್ತು ಮತ್ತು ನಿಗೂಢತೆಗಳನ್ನು ನವ್ಯ ಕಥೆಗಾರರು ಶೋಧಿಸುವ ನಿಲುವನ್ನು ತಲುಪಿಸಿದ್ದಾರೆ. ಮನುಷ್ಯನ ಪ್ರಜ್ಞೆಯ ಅಮೂಲ್ಯ ಹಾಗೂ ವಿವಿಧ ಅವಸ್ಥೆಗಳನ್ನು ನವ್ಯಕಥೆಗಳು ತಮ್ಮ ತಾತ್ವಿಕ ನಿಲುವನ್ನಾಗಿ ಸ್ವೀಕರಿಸಿವೆ. ನವ್ಯ ಕಥೆಗಾರರು ತಮ್ಮ ಸುತ್ತಣ ಪರಿಸರದ ಸಂಕೀರ್ಣತೆಯೊಂದಿಗೆ ಬದುಕಿನ ರಹಸ್ಯವನ್ನು ಅನಾವರಣಗೊಳಿಸುವ ಒಲವನ್ನು ತೋರಿದ್ದಾರೆ. ಕಾಲ ಹಾಗೂ ಕಾಮದ ಬಗ್ಗೆ ನವ್ಯ ಕಥೆಗಾರರಿಗೆ ಇರುವ ಪ್ರಜ್ಞೆ ವಿಶೇಷವಾದುದು. ನವ್ಯಕಥೆಗಳ ವಸ್ತು, ಭಾಷೆ, ಇವೆಲ್ಲಾ ಹಿಂದಿನ ಪರಂಪರೆಗಿಂತ ಭಿನ್ನವಾಗಿದ್ದು ನಾವೀನ್ಯತೆಯಿಂದ ಕೂಡಿವೆ.

ಹಳೆಯ ಸಂಪ್ರದಾಯ, ಪದ್ಧತಿ, ಮೌಲ್ಯ, ನಂಬಿಕೆಗಳ ಬಗ್ಗೆ ಪ್ರಶ್ನೆ ಶೋಧನೆ, ಹೊಸವಿಚಾರಗಳ ಸ್ವೀಕಾರ, ಹಳೆಯ ವಿಚಾರಗಳ ಆವಿಷ್ಕಾರ - ಇವೆಲ್ಲಾ ನವ್ಯಕಥೆಗಳ ತಾತ್ವಿಕ ಸ್ವರೂಪಗಳಾಗಿವೆ. ಆಳವಾದ ವೈಚಾರಿಕ ಚಿಂತನೆ, ನಿಕಟವಾದ ಜೀವನಾನುಭವ, ಬದುಕಿನ ಬಗ್ಗೆ ತೀವ್ರವಾದ ಗ್ರಹಿಕೆ, ಹೊಸ ಬಾಳಿನ ಬಗ್ಗೆ ಉತ್ಕಟವಾದ ಹಂಬಲ, ಸಜೀವಭಾಷೆಯ ಮೇಲಿನ ಬಿಗಿ ಹಿಡಿತ, ಆರೋಗ್ಯಶಾಲಿ ಸಮಾಜ ನಿರ್ಮಾಣದತ್ತ ಒಲವು, ಮೂಲತಃ ಕಾವ್ಯಭಾಷೆಯ ಅಂಗಗಳಾದ ಪ್ರತಿಮೆ, ಪ್ರತೀಕಗಳನ್ನು ಗದ್ಯದಲ್ಲಿ ಅಳವಡಿಸಿಕೊಂಡ ಶೈಲಿ, ಎಲ್ಲಕ್ಕಿಂತ ಮಿಗಿಲಾಗಿ ಅನುಭವಕ್ಕೆ ಮೂರ್ತರೂಪ ಕೊಡಬಲ್ಲ ಭಾಷೆ ಹೀಗೆ ಆಧುನಿಕ ಜಗತ್ತಿನ ವಿವಿಧ ಸಮಸ್ಯೆಗಳನ್ನು ಸವಾಲಾಗಿ ನವ್ಯ ಕಥೆಗಳನ್ನು ಹಿಡಿದಿಡಲು ಸ್ವೀಕರಿಸಿವೆ. ಇವು ನವ್ಯಕಥೆಗಳ ತಾತ್ವಿಕ ಸ್ವರೂಪ ಮತ್ತು ಒಲವು ನಿಲುವುಗಳನ್ನಾಗಿ ರೂಪಿಸಿವೆ."[೨೫]

"ಆಧುನಿಕ ಕನ್ನಡ ಸಾಹಿತ್ಯದಲ್ಲಿ ನವ್ಯ, ನವ್ಯತೆ, ನವ್ಯಕಾವ್ಯ, ನವ್ಯ ಸಂಪ್ರದಾಯ, ನವ್ಯ ಕಾದಂಬರಿ, ನವ್ಯಕಥೆ ಇವೆಲ್ಲಾ ವಿಶಿಷ್ಟವಾದ ಸಂಕೀರ್ಣ ಅರ್ಥವನ್ನು ಒಳಗೊಂಡ ಪರಿಕಲ್ಪನೆಗಳಾಗಿವೆ. 'ನವ್ಯತೆ' ಎನ್ನುವುದು ಮೇಲ್ನೋಟಕ್ಕೆ ಸರಳವಾದ ಪದ. ಆದರೆ ಅದರ ಒಟ್ಟು ಸಮಾಜದ, ಸಂಸ್ಕೃತಿಯ ಸಂಕೀರ್ಣತೆಗಳನ್ನೆಲ್ಲಾ, ಒಳಗೊಂಡಂತೆ ವಿಶಿಷ್ಟ ಪರಿಕಲ್ಪನೆಯ ಗ್ರಹಿಕೆ. ಸಮಾಜದಿಂದ ಸಾಹಿತ್ಯವನ್ನು ಬೇರ್ಪಡಿಸಿ ನೋಡಲು ಸಾಧ್ಯವಿಲ್ಲ. ವಿಶೇಷವಾಗಿ ಅದು ಮಾನವ ಅಂತಃಕರಣದ ಮೂಲ ಚಟುವಟಿಕೆಗಳನ್ನು ಒಳಗೊಂಡಿರುತ್ತದೆ. ನವ್ಯ ಸಂಪ್ರದಾಯವನ್ನು ಕುರಿತು ವಿ.ಕೃ.ಗೋಕಾಕರು ಪ್ರಮುಖವಾಗಿ ಮೂರು ಅಂಶಗಳಲ್ಲಿ ಗ್ರಹಿಸಿದ್ದಾರೆ.

೧. ಆಧುನಿಕವಾದ್ದರೊಂದಿಗೆ ಸಹಾನುಭೂತಿ ಅಥವಾ ಸಾದೃಶ್ಯವನ್ನು ಪಡೆದಿರುವುದು.

೨. ಅಭಿವ್ಯಕ್ತಿ ವಿಧಾನ ಅಥವಾ ಪ್ರಯೋಗಗಳಲ್ಲಿ ಆಧುನಿಕ ಯುಗದ ಲಕ್ಷಣಗಳನ್ನು ಪಡೆದಿರುವುದು.

೩. ಆಧುನಿಕ ವೈಚಾರಿಕತೆ ಸತ್ವ ಅಥವಾ ಗುಣಗಳನ್ನು ಪಡೆದಿರುವುದು. (ನವ್ಯತೆ ೧೯೭೫, ಪುಟ ೧೦೫)

"ನವ್ಯಕಥೆಗಳು ಮೇಲಿನ ಅಂಶಗಳನ್ನೊಳಗೊಂಡೂ, ಅವು ಹೊಸ ಸಂದರ್ಭದಲ್ಲಿ ವೈವಿಧ್ಯಪೂರ್ಣವಾದ ಹಾಗೂ ಸ್ವತಂತ್ರವಾದ ಚೈತನ್ಯದ ಅವಿಷ್ಕಾರವನ್ನು ಮೂಡಿಸಿವೆ. ವ್ಯಕ್ತಿ ಮತ್ತು ಸಮಾಜದ ನಡುವೆ ಸಾಮರಸ್ಯ ಸ್ಥಾಪಿಸುವಲ್ಲಿ, ಎಲ್ಲಾ ಸರ್ವಾಧಿಕಾರೀ ಶಕ್ತಿಗಳ ವಿರುದ್ಧ ಸಮರ ಸಾರುವಲ್ಲಿ ನವ್ಯಕಥೆಗಳು ಎಂದೂ ಹಿಂಜರಿದಿಲ್ಲ."[೨೬]

"ಅಲ್ಲದೆ ಕನ್ನಡದ ನವ್ಯಕತೆಗಳು ಆಧುನಿಕ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ನೀಡಿರುವ ಪ್ರಧಾನ ಹಾಗೂ ವೈವಿಧ್ಯಮಯವಾದ ಮೌಲಿಕ ಅಂಶಗಳಲ್ಲಿ ವಾಸ್ತವತೆ ಮತ್ತು ಆದರ್ಶಗಳ ನಡುವಿನ ಸಂಬಂಧದ ಸಮಸ್ಯೆಯ ಶೈಲಿಯ ಶೋಧನೆ ಸಹ ಬಹುಮುಖ್ಯವಾದುದು. ವಾಸ್ತವತೆ ಬಾಹ್ಯ ಜಗತ್ತಿನಲ್ಲಿರುವ ಮನುಷ್ಯನ ಪ್ರಜ್ಞೆಯಲ್ಲಿ ವಾಸ್ತವತೆ ಮತ್ತು ಆದರ್ಶಗಳೆರಡಲ್ಲಿಯೂ, ನವ್ಯಕಥೆಗಳು ಅರ್ಥಪೂರ್ಣವಾದ ಪ್ರಕ್ರಿಯೆಯನ್ನುಂಟುಮಾಡಿ, ಭವಿಷ್ಯತ್‌ನಲ್ಲಿ ಆಸೆಯನ್ನು ಹುಟ್ಟಿಸಿವೆ. ವಾಸ್ತವ ಮಾರ್ಗದ ವಸ್ತುನಿಷ್ಠತೆ ಎರಡನ್ನೂ ಒಟ್ಟೊಟ್ಟಿಗೆ ಬೆಸೆಯುವ ಪ್ರಕ್ರಿಯೆಯಂಟಾಗಿ ನವ್ಯಕಥೆಗಳು ಹೊಸ ಮಾರ್ಗವೊಂದನ್ನು ಆಧುನಿಕ ಕನ್ನಡ ಸಾಹಿತ್ಯದಲ್ಲಿ ನಿರ್ಮಿಸಿವೆ.

ನವ್ಯಕಥೆಗಳಲ್ಲಿ ಕಂಡು ಬರುವ ಹೊಸತನಕ್ಕೂ ಮತ್ತು ಅವುಗಳ ಮೌಲ್ಯ ಪ್ರಜ್ಞೆಗೂ ಇರುವ ಸಂಬಂಧ ನಿಕಟವಾದುದು. ಆತ್ಮನಿಷ್ಠ ಅನುಭವವನ್ನೆ ಪ್ರಮಾಣವಾಗಿಟ್ಟುಕೊಳ್ಳುವ ಕಥಾನಾಯಕರು ಸಂಸ್ಕೃತಿಜನ್ಯ ಮೌಲ್ಯಗಳನ್ನು ಇದ್ದಕ್ಕಿದ್ದಂತೆ ತದ್ವತ್ತಾಗಿ ಒಪ್ಪಿಕೊಳ್ಳುವುದಿಲ್ಲ. ಇದು ನವ್ಯ ಕಥಾನಾಯಕರ ಪ್ರಮುಖ ಮನೋಧರ್ಮ ಮತ್ತು ತಾತ್ವಿಕ ದೃಷ್ಟಿಯಾಗಿದೆ. ವ್ಯಕ್ತಿ ಮತ್ತು ಆತನ ಪರಿಸರದೊಂದಿಗೆ ಹೊಂದಿದ ಸಂಕೀರ್ಣ, ಸಂಬಂಧ ಇವುಗಳ ಗಾಢವಾದ ಚಿಂತನೆ ನವ್ಯಕಥೆಗಳಲ್ಲಿ ವ್ಯಕ್ತವಾಗಿದೆ. ಪರಿಸರದಲ್ಲಿನ ಮೌಲಿಕತೆಯ ಜೊತೆಗೆ ಕೌರ್ಯ ಕ್ಷುದ್ರತೆಗಳಿಗೂ ಮೈಗೊಟ್ಟು ಕ್ರಿಯೆಗೆ ಸಿದ್ಧವಾಗುವ ನವ್ಯಕಥೆಗಳ ರೀತಿ ಅನನ್ಯವಾದದ್ದು. ಬದುಕಿನ ಅರ್ಥ, ಸೃಜನಶೀಲತೆಯ ಸ್ವೋಪಜ್ಞತೆ, ಸೃಷ್ಟ್ಯಾತ್ಮಕ ವೈಚಾರಿಕತೆ ವಸ್ತು ಮತ್ತು ಪರಿಸರಕ್ಕೆ ಕೊಟ್ಟ ಒತ್ತು. ಅಭಿವ್ಯಕ್ತಿ ವಿಧಾನದಲ್ಲಿ ಕಂಡು ಬರುವ ಸೂಕ್ಷ್ಮತೆ ಇವೆಲ್ಲಾ ನವ್ಯಕಥೆಗಳು ಆಧುನಿಕ ಕನ್ನಡ ಸಾಹಿತ್ಯಕ್ಕೆ ಸಲ್ಲಿಸಿರುವ ಅಪೂರ್ವ ಕಾಣಿಕೆಗಳಾಗಿವೆ. ಆದರೆ ಇದರ ನಡುವೆ ನವ್ಯಕಥೆಗಾರರು ನಗರ ಪ್ರಧಾನವಾದ ಸಂಕೀರ್ಣ ಬದುಕನ್ನು ಹಿಡಿಯುವಲ್ಲಿ ಪ್ರಯತ್ನ ಮಾಡಿದ್ದರೂ ಅವರೆಲ್ಲಾ ಪ್ರಧಾನವಾಗಿ ಗ್ರಾಮೀಣ ಬದುಕನ್ನು ಚಿತ್ರಿಸಿರುವಲ್ಲಿಯೇ ಹೆಚ್ಚು ಒತ್ತು ಕೊಟ್ಟಂತೆ ಕಂಡುಬರುತ್ತದೆ. ಹಾಗಾಗಿ ನಗರ ಜೀವನದ ಸಂಕೀರ್ಣ ಬದುಕಿನ ಚಿತ್ರಣವನ್ನು ನವ್ಯಕಥೆಗಳು ಚಿತ್ರಿಸುವಲ್ಲಿ ಆ ಕ್ಷೇತ್ರವನ್ನು ಹಾಗೆ ಉಳಿಸಿಕೊಂಡಿರುವುದು ಕೊರತೆಯ ಅಂಶ.''[೩೭]

ನವ್ಯಕತೆಗಳಲ್ಲಿ ವ್ಯಕ್ತಿಯ ಸಾಧ್ಯಾಸಾಧ್ಯತೆಗಳಿಗೆ ವ್ಯಕ್ತಿಯೇ ಕಾರಣವೆಂಬ ವೈಚಾರಿಕ ತಳಹದಿಯಲ್ಲಿ ಚಿಂತನೆ ನಡೆಸುವುದನ್ನು ಕಾಣುತ್ತೇವೆ. ಸ್ವಾನುಭವ ಮತ್ತು ವೈಚಾರಿಕ ತಾಕಲಾಟಗಳಿಂದಾಗಿ ವ್ಯಕ್ತಿ ಮತ್ತು ಸಮಾಜದ ಸಾವಯವ ಸಂಬಂಧಗಳು ಬಿರುಕುಗೊಳ್ಳುತ್ತವೆ. ಈ ಬಿರುಕಿನ ಮೂಲಕವೇ ವ್ಯಕ್ತಿತ್ವದ ಶೋಧನೆ ನವ್ಯಕತೆಗಳಲ್ಲಿದೆ. ಈ ಶೋಧನೆಗೆ ಸಹಜವಾಗಿಯೇ ಭಾಷೆಯಲ್ಲಿ ಸಂಕೇತಗಳನ್ನು ಬಳಸಿ ಸಂಕೀರ್ಣಗೊಳಿಸಿದ್ದರಿಂದ ಸಾಮಾನ್ಯ ಓದುಗನ ಬೌದ್ಧಿಕ ಮಟ್ಟಕ್ಕೆ ನಿಲುಕದೇ ಹೋಯಿತು. ಈ ಸತ್ಯವನ್ನು ಕಂಡುಕೊಂಡ ನವ್ಯ ಲೇಖಕರು ಬರವಣಿಗೆಯಲ್ಲಿ ಸರಳತೆಯನ್ನು ರೂಢಿಸಿಕೊಂಡಿರುವುದನ್ನು ಸ್ಪಷ್ಟವಾಗಿಯೇ ಈ ದಶಕದಲ್ಲಿ ಕಾಣುತ್ತೇವೆ. ಕತೆಗಿಂತಲೂ ವಿಚಾರ ಮುಖ್ಯವಾಗಿದ್ದು ಜೀವನದ ಸೂಕ್ಷ್ಮ ವಿಚಾರಗಳನ್ನು, ನಿಗೂಢಗಳನ್ನು ಬೇಧಿಸುವ ಪ್ರಯತ್ನವಿದೆ. ಸ್ವಾನುಭವದಿಂದ ಸಸ್ಯವನ್ನು ಕಂಡುಕೊಳ್ಳುವಲ್ಲಿ ಕತೆಯ ಭಾಷೆ, ತಂತ್ರ, ಶಿಲ್ಪದೆಡೆಗೆ ಗಮನಹರಿಸಿದರು.

ನವ್ಯೋತ್ತರ ಕಥೆಗಳಲ್ಲಿ ವ್ಯಕ್ತಿಯ ಸಮಸ್ಯೆಗಳಿಗೆ ಸಮಾಜದ ಒಂದು ಜನವರ್ಗ ಮತ್ತು ಅದು ನಿರ್ಮಿಸಿದ ಸಮಾಜ ವ್ಯವಸ್ಥೆಯೇ ಕಾರಣ ಎಂಬುದನ್ನು ಸ್ಪಷ್ಟವಾಗಿಯೇ ಪ್ರತಿಪಾದಿಸಿ ಅದಕ್ಕೆ ಪ್ರತಿಕ್ರಿಯೆಯನ್ನು, ಪ್ರತಿಭಟನೆಯನ್ನು ವ್ಯಕ್ತಪಡಿಸುವುದನ್ನು ಕಾಣಬಹುದು.

ನವೋದಯದವರು ಕತೆಯ ಕಥಾಂಶಕ್ಕೆ ಹೆಚ್ಚಿನ ಒತ್ತು ಕೊಟ್ಟಿದ್ದರು. ನವ್ಯರು ಭಾಷೆಗೆ ಮಹತ್ವ ನೀಡಿದರೆ, ನವೋತ್ತರರು ಇವೆರಡಕ್ಕೂ ಪ್ರಾಮುಖ್ಯತೆ ನೀಡಿದ್ದಲ್ಲದೆ ಕಥಾವಸ್ತುವಿಗೆ ಮಹತ್ವ ನೀಡಿದರು. ಬರವಣಿಗೆಯಲ್ಲಿ ವಾಸ್ತವತೆಯನ್ನು ಈ ಎಲ್ಲಾ ಲೇಖಕರು ಬಳಸಿಕೊಂಡಿದ್ದರು. ನವೋದಯರು ಸಮಾಜದ ಮೇಲ್ನೋಟಕ್ಕೆ ಸೀಮಿತವಾದ ವಾಸ್ತವತೆಯನ್ನು ಕತೆಗಳಲ್ಲಿ ಬಳಸಿದರು.

ನವೋದಯ ಮತ್ತು ನವ್ಯ ಲೇಖಕರು ಸಾಮಾಜಿಕ ಕಾಳಜಿಯುಳ್ಳವರು ಆದರೆ ಅವರು ಆಯ್ದುಕೊಂಡ ದಾರಿ ಭಿನ್ನವಾದದ್ದು. ನವೋದಯರು ಭಾವುಕರಾಗಿ ಆದರ್ಶದ ದಾರಿ ಹಿಡಿದರೆ, ನವ್ಯರು ಧ್ವನಿಪೂರ್ಣವಾಗಿ ವಾಸ್ತವತೆಯ ದಾರಿಯನ್ನು ಹಿಡಿದರು. ನವ್ಯೋತ್ತರದಲ್ಲಿ ಈ ಎರಡೂ ಗುಣಗಳ ಸಮ್ಮಿಲನವನ್ನು ಕಾಣುತ್ತೇವೆ. ಮೊದ ಮೊದಲು ನವ್ಯ ಮಾದರಿಯ ಕತೆಗಳನ್ನು ಬರೆದ ಪೂರ್ಣಚಂದ್ರ ತೇಜಸ್ವಿ, ಲಂಕೇಶರು, ಜನಪರವಾದ ಕಾಳಜಿಯಿಂದ, ಲೋಹಿಯಾ, ಮಾರ್ಕ್ಸ್‌ನ ವಿಚಾರಗಳ ನಲೆಯಲ್ಲಿ ನವೋತ್ತರದ ಕತೆಗಾರರಿಗೆ ಪ್ರೇರಣೆಯಾಗಿದ್ದಾರೆ.

## ೪. ೩. ಬಂಡಾಯ, ದಲಿತ ಚಳುವಳಿ ಮತ್ತು ರೈತ ಚಳುವಳಿ ಪ್ರಭಾವ

ದಲಿತ ಚಳುವಳಿ ಮತ್ತು ರೈತ ಚಳುವಳಿಗಳ ಪ್ರಭಾವವು ನಮ್ಮ ಗ್ರಾಮೀಣ ಕತೆಗಾರರ ಕತೆಗಳಲ್ಲಿ ಹೆಚ್ಚಾಗಿ ಕಾಣಬಹುದಾಗಿದೆ. ಸ್ವಾತಂತ್ರ್ಯಾನಂತರದ ಒಂದು ಎರಡು ದಶಕಗಳು ಕಳೆದ ನಂತರ ನವ್ಯ ಪರಂಪರೆಯ ಹುಟ್ಟಿನೊಂದಿಗೆ ಬಂಡಾಯ ದಲಿತ ಮತ್ತು ರೈತ ಚಳುವಳಿಗಳ ಪ್ರಭಾವ ಕಂಡುಬಂದಿತು. ಪ್ರಾರಂಭದಲ್ಲಿ ದಲಿತರಲ್ಲಿ ವಿದ್ಯಾವಂತರಾದ ವ್ಯಕ್ತಿಗಳ ಗುಂಪು ಕೂಡತೊಡಗಿತು. ಈ ಗುಂಪು ಸಾಮಾನ್ಯವಾಗಿ ದಲಿತರದೇ ಆಗಿತ್ತು. ಈ ವಿದ್ಯಾವಂತ ದಲಿತರು ತಮ್ಮ ಗ್ರಾಮಗಳಲ್ಲಿ ಹಾಗೂ ಸಮಾಜಗಳಲ್ಲಿ ಕಂಡುಬಂದ ಅವಮಾನ ಮತ್ತು ದೌರ್ಜನ್ಯಗಳನ್ನು ತಮ್ಮ ಬರಹದಲ್ಲಿ ದಾಖಲಿಸಲು ಪ್ರಾರಂಭಿಸಿದರು. ಇದು ಜನಾಂಗೀಯ ಸಾಹಿತ್ಯ ಸಿದ್ಧವಾಯಿತು. ಇದನ್ನೇ ನಾವು ದಲಿತ ಸಾಹಿತ್ಯ ಎಂದು ಕರೆಯುತ್ತೇವೆ. ಪ್ರಾರಂಭದಲ್ಲಿ ಆಂಧ್ರದ ವಿರಸಂ, ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್ ಕರ್ನಾಟಕ ದಲಿತ ಕಲಾವಿದರ ಮತ್ತು ಲೇಖಕರ ಒಕ್ಕೂಟದೊಂದಿಗೆ ಸಾಹಿತ್ಯ ಸಂಘಗಳು ಹುಟ್ಟಿಕೊಂಡವು. ಇವುಗಳ ಜೊತೆಗೆ ದಲಿತರೆಲ್ಲ ಒಂದುಗೂಡಿ ತಮ್ಮ ಜನಾಂಗಕ್ಕೆ ಆಗುವ ಅವಮಾನ ದೌರ್ಜನ್ಯಗಳನ್ನು ಪ್ರತಿಭಟಿಸಲು ಪ್ರಾರಂಭಿಸಿದರು. ಇದನ್ನು ದಲಿತ ಚಳುವಳಿ ಎಂತಲೂ ಕರೆಯಲಾಯಿತು. ತದನಂತರ ಗ್ರಾಮೀಣ ಭಾಗದ ರೈತರು ಮೇಲ್ಕಂಡ ಎರಡೂ ಚಳುವಳಿಗಳೊಂದಿಗೆ ಕೈಜೋಡಿಸಿ ತಮಗೆ ಆಗಬಹುದಾದ ಕಷ್ಟ, ನಷ್ಟ, ಹಿಂಸೆ, ಒತ್ತಡಗಳಿಂದ ಹೊರಬರಲು ಪ್ರಯತ್ನಿಸಿದರು. ಇದರಿಂದ ರೈತ ಚಳುವಳಿ ಪ್ರಾರಂಭವಾಗಿರುವುದನ್ನು ನಾವಿಲ್ಲಿ ಕಾಣಬಹುದು.

''ಸಾಂಸ್ಕೃತಿಕವಾಗಿ ಮತ್ತು ಶೈಕ್ಷಣಿಕವಾಗಿ ಅಕ್ಷರದ ಮೂಲಕ ಅಭಿವ್ಯಕ್ತಿಸಲು ತೊಡಗಿದ ಅವಮಾನಿತ ಅಕ್ಷರಸ್ಥ ಸಮುದಾಯವೊಂದು ತಮ್ಮ ಅಭಿವ್ಯಕ್ತಿಯ ಮಾಧ್ಯಮವನ್ನು ತಮ್ಮ ಕೇರಿಯ, ಪ್ರದೇಶದ ಭಾಷೆಯನ್ನು ಉಪಯೋಗಿಸಿಕೊಂಡು ತಮ್ಮ ಸಹಜ ಅನುಭವಗಳ ಅವಮಾನ ದೌರ್ಜನ್ಯಗಳನ್ನು ಸ್ಪಷ್ಟವಾಗಿ ದಾಖಲಿಸತೊಡಗಿದ ಕೂಡಲೇ ಒಂದು ಜನಾಂಗೀಯ, ಸಾಹಿತ್ಯ ಸಿದ್ಧವಾಯಿತು. ಅದನ್ನೇ ನಾವು ವಿಶಾಲ ಅರ್ಥದಲ್ಲಿ 'ದಲಿತ ಸಾಹಿತ್ಯ' ಎಂದು ಕರೆಯುತ್ತೇವೆ. ಆಂಧ್ರದ ವಿರಸಂ, ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್, ಕರ್ನಾಟಕ ದಲಿತ ಕಲಾವಿದರ ಮತ್ತು ಲೇಖಕರ ಒಕ್ಕೂಟ, ಬೂಸಾ ಪ್ರಕರಣ ಹೀಗೆ ರಾಜಕೀಯ ಮತ್ತು ಸಾಂಸ್ಕೃತಿಕ ಅಂಶಗಳ ಹಿನ್ನೆಲೆಯಲ್ಲಿ ರೂಪುಗೊಂಡ ದಲಿತ ಸಾಹಿತ್ಯವನ್ನು ನಾವು ಮೊದಲು ಗುರುತಿಸುವುದು ದೇವನೂರು ಮಹಾದೇವರು ಬರೆದ ಏಳುಕಥೆಗಳ 'ದ್ಯಾವನೂರು' ಸಂಕಲನದಿಂದ, ೧೯೭೩ರಲ್ಲಿ ಪ್ರಕಟವಾದ ಈ ಕೃತಿ ಆವರೆಗೂ ಬೇರುಬಿಟ್ಟಿದ್ದ ಸಾಹಿತ್ಯ ಸಿದ್ಧ, ಭಾಷೆ, ನುಡಿಗಟ್ಟು, ವಸ್ತು, ಅನುಭವಗಳನ್ನು ಭಂಜಕಗೊಳಿಸಿತು.

ದಲಿತ ಬರಹಗಾರರು ಪ್ರತಿಭಟನೆಯ ಮೂಲಕ ತಮ್ಮ ಎಚ್ಚರವನ್ನು ಸ್ವಲ್ಪ ರೊಚ್ಚಿನಿಂದಲೇ ಹೇಳಬಯಸಿದರು. ಅಲ್ಲದೆ ಸಾಂಸ್ಕೃತಿಕ ಮತ್ತು ಸಾಹಿತ್ಯಿಕ ಹಾಗೂ ರಾಜಕೀಯ ಸಂಘಟನೆಗಳ ಅನಿವಾರ್ಯತೆಯನ್ನು ಮನಗಂಡು ಕರ್ನಾಟಕ ದಲಿತ ಸಂಘರ್ಷ ಸಮಿತಿ ರೂಪುಗೊಂಡಿತು. ಮೈಸೂರು ವಲಯದಲ್ಲಿ ದೇವನೂರು ಮಹಾದೇವ, ಗೋವಿಂದಯ್ಯ, ಇಂದೂದರ ಹೊನ್ನಾಪುರ, ಶಿವಾಜಿ ಗಣೇಶನ್, ರಾಮದೇವರಾಕೆ, ದೇವನೂರು ಶಿವಮಲ್ಲು ಅವರುಗಳು ಆರಂಭಿಸಿದ 'ಪಂಚಮ' ಪತ್ರಿಕೆ ದಲಿತ ಸಾಹಿತ್ಯದ ಹೊಸ ಆಲೋಚನೆ ಅಭಿವ್ಯಕ್ತಿಗೆ ವೇದಿಕೆ ರೂಪಿಸಿ ಕೊಡುವಲ್ಲಿ ಯಶಸ್ವಿಯಾಗಿ ಕಾರ್ಯ ನಿರ್ವಹಿಸಿತು.

ಈ ಪತ್ರಿಕೆಯು ನಾಡಿನ ತುಂಬಾ ಹೊಸ ಬರಹಗಾರರನ್ನು ಹುಟ್ಟುಹಾಕಿತು. ದಲಿತರು ಬರೆದ ವಿಚಾರ, ವಿಮರ್ಶೆ, ಕಥೆ, ಕಾದಂಬರಿ, ಕಾವ್ಯಗಳು ಹೃದಯ ಕಲಕಬಲ್ಲ ಜೀವಂತಿಕೆಯನ್ನು ಪಡೆದುಕೊಂಡವು. ದಲಿತ ಸಾಹಿತ್ಯದಲ್ಲಿ ಕಲೆಗಾರಿಕೆಗಿಂತಲೂ ವಾಸ್ತವ ಬದುಕಿನ ಬರ್ಬರತೆ, ಎದ್ದು ಕಾಣುತ್ತದೆ. ಕಲೆಗಾರಿಕೆಯೇ ಸಾಹಿತ್ಯವಲ್ಲ, ಬದುಕು ಸತ್ಯ ಎಂಬ ನಿಲುವಿನಲ್ಲಿರುವ ಸಿದ್ಧಲಿಂಗಯ್ಯನವರ ಹೊಲೆ ಮಾದಿಗರ ಹಾಡು ೧೯೭೫ ರಲ್ಲಿ ಪ್ರಕಟಗೊಂಡಿತು. ಅಲ್ಲಿಂದ ಮುಂದೆ ಕಥೆ ಕಾವ್ಯ, ಕಾದಂಬರಿ, ನಾಟಕಕ್ಷೇತ್ರದಲ್ಲಿ ಅತಿ ಹೆಚ್ಚು ಕೃಷಿ ನಡೆಯಿತು. ಮಹಾದೇವರ 'ಒಡಲಾಳ', 'ಕುಸುಮಬಾಲೆ' ಕಾದಂಬರಿಗಳು ಸಿದ್ದಲಿಂಗಯ್ಯನವರ 'ಸಾವಿರಾರು ನದಿಗಳು' (೧೯೭೯) 'ಕಪ್ಪು ಕಾಡಿನ ಹಾಡು' (೧೯೮೩)''[೩೮]

ಈ ಮೇಲಿನ ಎಲ್ಲ ವಿಷಯಗಳನ್ನು ಅವಲೋಕಿಸಿದಾಗ ರಾಜಪ್ಪ ದಳವಾಯಿಯವರು ಗುರುತಿಸಿರುವ ಅನೇಕ ಬರಹಗಾರರು, ಸಾಹಿತಿಗಳು, ಬಂಡಾಯ ಮತ್ತು ರೈತ ಚಳುವಳಿ ಪ್ರಭಾವವನ್ನು ವಿಭಾಗವಾರು, ರಾಜ್ಯವಾರು, ರಾಷ್ಟ್ರವಾರು ಪ್ರಾರಂಭಿಸಿರುವುದನ್ನು ವಿಭಾಗವಾರು ರೂಪುಗೊಂಡ ಬರಹಗಾರರು, ಸಾಹಿತಿಗಳು, ಸಂಘಗಳು, ಸಮಿತಿಗಳು ಕೈಗೊಂಡ ಪ್ರಚಾರ ಚಳುವಳಿ ಮುಂತಾದವುಗಳನ್ನು ಅರ್ಥಗರ್ಭಿತವಾಗಿ ವಿವರಿಸಿರುವುದನ್ನು ಕಂಡುಕೊಳ್ಳಲಾಗಿದೆ.

'ಪಂಚಮ ನೆಲಸಮ' ಏಕಲವ್ಯ ಸಿದ್ಧಲಿಂಗಯ್ಯನವರ ನಾಟಕಗಳು, ಅರವಿಂದ ಮಾಲಗತ್ತಿಯವರ 'ಮೂಕನಿಗೆ ಬಾಯಿ ಬಂದಾಗ' (೧೯೮೧) 'ಕಪ್ಪುಕಾವ್ಯ' (೧೯೮೫) 'ಕಾರ್ಯ' (ಕಾದಂಬರಿ, ೧೯೮೮, ಗೌರ್ನಮೆಂಟ್ ಬ್ರಾಹ್ಮಣ (ಆತ್ಮಕಥೆ ೧೯೯೪) ಮುಳ್ಳೂರ ನಾಗರಾಜರವರ, 'ಮರಣ ಮಂಡಲ ಮದ್ಯದೊಳಗೆ' ೧೯೮೬ ಮ.ನ.ಜವರಯ್ಯನವರ 'ಕೇಳು ಜಗ ಮಾದಿಗ ಹೊಲೆಯ' ೧೯೮೧. 'ಅತ್ತೆ ಸೊಸೆ ಆತ್ಮಕಥೆ', ೧೯೮೭, 'ಮೂಗಿ' (ಕಾದಂಬರಿ) ಚೆನ್ನಣ್ಣ ವಾಲಿಕಾರರ 'ಪ್ಯಾಂಥರ್ಸ್' ಪದ್ಯಗಳು ಮೊಗಳ್ಳಿ ಗಣೇಶ್‌ರವರ 'ಬುಗುರಿ' ಸೋಮಣ್ಣಾ ಹೊಂಗಳ್ಳಿಯವರ 'ತಮಟೆ' (೧೯೯೪) ಮುಂತಾದ ದಲಿತ ಲೇಖಕರು ತಮ್ಮ ವಿಚಾರ ವಿಮರ್ಶೆ, ಕಾವ್ಯ, ಕಾದಂಬರಿ, ಕಥಾಸಾಹಿತ್ಯವನ್ನು ವಿಫುಲವಾಗಿ ಬೆಳೆಸುತ್ತಲೆ ಪ್ರಗತಿಪರ ಸಂಘಟನೆಗಳಲ್ಲಿ ತಮ್ಮನ್ನು ಗುರುತಿಸಿಕೊಂಡು, ಸಾಹಿತ್ಯ, ಸಂಸ್ಕೃತಿ ಮತ್ತು ರಾಜಕೀಯ ಹಿತಾಸಕ್ತಿಗಳನ್ನು ಬೆಳೆಸುತ್ತಿದ್ದಾರೆ.''[೩೯]

ಇದೇ ಲೇಖಕರು ಅನೇಕ ಲೇಖಕರನ್ನು ಹೆಸರಿಸಿ ತಮ್ಮ ತಮ್ಮ ಕತೆ, ಕಾವ್ಯ, ವಿಮರ್ಶೆ, ಕಾದಂಬರಿ ಮತ್ತು ಕಥಾ ಸಾಹಿತ್ಯವನ್ನು ಬೆಳೆಸುವುದರತ್ತ ವಿಶೇಷವಾಗಿ ಹಿಂದೆ ಸೂಚಿಸಿದ ಸಂಘಟನೆಗಳಲ್ಲಿ ತಮ್ಮನ್ನು ಗುರುತಿಸಿಕೊಂಡು ಸಾಹಿತ್ಯಿಕವಾಗಿ, ಸಾಂಸ್ಕೃತಿಕ ಹಿತಾಸಕ್ತಿಗಳನ್ನು ಬೆಳೆಸುತ್ತಿರುವುದು ಇಲ್ಲಿ ಕಂಡುಬರುತ್ತದೆ.

ನಾವು ಇದುವರೆಗೂ ಎಲ್ಲಾ ರೀತಿಯ ಸಾಹಿತ್ಯ ಘಟ್ಟಗಳನ್ನು ಪರಿಚಯ ಮಾಡಿಕೊಂಡಿರುತ್ತೇವೆ. ಹಾಗೆ ಹೊಸಗನ್ನಡ ಸಾಹಿತ್ಯದ ನಾಲ್ಕನೆ ಘಟ್ಟವನ್ನು ದಲಿತ ಬಂಡಾಯ ಸಾಹಿತ್ಯವೆಂದು ಗುರುತಿಸಿದ್ದೇವೆ. ಇವುಗಳಲ್ಲಿ ನವ್ಯ ಮತ್ತು ನವೋದಯದ ಅಂತರ ೧೯೭೦ರಿಂದ ಈಚೆಗೆ ಹೆಚ್ಚಾಗಿ ಕಂಡುಬರುತ್ತದೆ. ಇದನ್ನು ಸಮಕಾಲೀನ ಕನ್ನಡ ಸಾಹಿತ್ಯವೆಂದು ಗುರುತಿಸಬಹುದು. ಇದಾದ ನಂತರ ಮೊದಲು ಸಾಂದರ್ಭಿಕವಾಗಿ ನಂತರ ಖಾಯಂ ಆಗಿ ದಲಿತ ಸಾಹಿತ್ಯ ಹುಟ್ಟಿಕೊಂಡಿತು. ಮೊದಮೊದಲು ದಲಿತ ಸಾಹಿತ್ಯದ ಕಡೆ ಅಷ್ಟಾಗಿ ಪ್ರೋತ್ಸಾಹ ದೊರೆಯಲಿಲ್ಲ ಎಂಬುದು ಓದುಗರ ಅನಿಸಿಕೆ. ನಂತರ ಇವುಗಳಲ್ಲಿ ಮಾರ್ಪಾಟು ಹೊಂದಿ ಉತ್ತಮ ಕೃತಿ ರಚನೆಗಳೊಂದಿಗೆ ದಲಿತ ಸಾಹಿತ್ಯ ಪ್ರಕಾಶಿಸಿರುವುದನ್ನು ಕಾಣಬಹುದು. ಇದರೊಂದಿಗೆ ಬಂಡಾಯ ಸಾಹಿತ್ಯದ ರೂಪವನ್ನು ಅನೇಕ ಯುವ ಬಂಡಾಯ ಸಾಹಿತಿಗಳ ಮುಖೇನ ಕೃತಿಗಳು ರಚಿತವಾದವು. ಈ ರಚನೆಗಳು ಯುವ ಕವಿಗಳಲ್ಲಿ ಬಂಡಾಯದ ಕ್ರಾಂತಿಯನ್ನು ಮೂಡಿಸಿದವು. ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ನೋಡಿದಾಗ ಇತ್ತೀಚಿನ ದಿನಗಳಲ್ಲಿ ದಲಿತ ಸಾಹಿತ್ಯ ಮತ್ತು ಬಂಡಾಯ ಸಾಹಿತ್ಯದ ಬಗ್ಗೆ ಒಲವು ಹಾಗೂ ಅವುಗಳನ್ನು ರಚಿಸಿದ ಸಾಹಿತಿಗಳ ಬಗ್ಗೆ ಆಧರ, ಗೌರವ, ಮೆಚ್ಚುಗೆ, ಪ್ರೋತ್ಸಾಹವೂ ಹೆಚ್ಚಾಗಿರುವುದನ್ನು ಇಂದು ನಾವು ಕಾಣುತ್ತೇವೆ.

ಪುರುಷೋತ್ತಮ ಬಿಳಿಮಲೆಯವರು ಹೊಸಗನ್ನಡ ಸಾಹಿತ್ಯದ ಇತ್ತೀಚಿನ ಘಟ್ಟವನ್ನು ಬಂಡಾಯ ದಲಿತ ಸಾಹಿತ್ಯವೆಂದು ಗುರುತಿಸಿರುತ್ತಾರೆ. ಈ ಕೆಳವರ್ಗದ ಸ್ವಾತಂತ್ರ್ಯಾ ನಂತರ ಬಂಡಾಯ ಹಾಗೂ ಕ್ರಾಂತಿಕಾರಿಗಳಿಂದ ಹಿಂದುಳಿದ ಜಾತಿಗಳ ಬಗ್ಗೆ ಧ್ವನಿ ಎತ್ತಿರುವುದನ್ನು ಹಾಗೂ ಈ ಎಲ್ಲಾ ಹಿಂದುಳಿದವರು ಒಂದು ಕಡೆ ಸೇರಿ ಸಮ್ಮೇಳನ ಮಾಡುವಂತಾಯಿತು. ಆನಂತರ ದಲಿತ ಸಂಘರ್ಷ ಸಮಿತಿ ಪ್ರಾರಂಭವಾಯಿತು. ಆನಂತರ ಇದು ಕರ್ನಾಟಕ ದಲಿತ ಸಂಘರ್ಷ ಸಮಿತಿಯಾಗಿ ಪರಿವರ್ತನೆಯಾಯಿತು. ಈ ಸಮಿತಿ ಕರ್ನಾಟಕ ರೈತರನ್ನು, ಬಂಡಾಯ ಸಾಹಿತಿಗಳನ್ನು, ಕ್ರಾಂತಿಕಾರಿ ಯುವಕರುಗಳನ್ನು ಒಂದೇ ಭೂಮಿಕೆಯಲ್ಲಿ ತರಲು ಶ್ರಮಿಸಲು ಮುಂದಾದರು.

“ ‘ದಲಿತ’ ಪದವನ್ನು ವಿವರಿಸುವುದು ಸುಲಭವಾದ ಸಂಗತಿಯಲ್ಲ. ಆ ಪದವು ತುಂಬಾ ಸಂಕೀರ್ಣವೂ, ಪರಸ್ಪರ ವಿರೋಧವೂ ಅನ್ನಬಹುದಾದ ಕೆಲವು ಅರ್ಥಗಳನ್ನು ತನ್ನ ಒಡಲಲ್ಲಿ ಧರಿಸಿದೆ. ಅನೇಕ ಖ್ಯಾತನಾಮರುಗಳು ಈ ಪದದ ಅರ್ಥ ನಿರ್ದಿಷ್ಟತೆಗೆ ದುಡಿದಿದ್ದಾರೆ. ಇವರೆಲ್ಲರ ವಾದವನ್ನು ಅರವಿಂದ ಮಾಲಗತ್ತಿಯವರು (೧೯೮೮-೪) ಸಂಕ್ಷೇಪವಾಗಿ ಸಂಗ್ರಹಿಸಿ ಕೊಟ್ಟಿದ್ದಾರೆ. ಮಾಲಗತ್ತಿಯವರ ಪ್ರಕಾರ ‘ದಲಿತ’ ಪದದ ಅರ್ಥ ವಿವರಣೆಯಲ್ಲಿ ಮೂರು ಪ್ರಮುಖ ವಾದಗಳಿವೆ.

೧. ಶೊಷಣೆ ಎಂಬ ಪದಕ್ಕೆ ಜಾತಿ ಭೇದವಿಲ್ಲ. ಆರ್ಥಿಕ, ಸಾಮಾಜಿಕ, ರಾಜಕೀಯ, ರಂಗದಲ್ಲೆಲ್ಲಾ, ಶೋಷಣೆಗೆ ಒಳಗಾದ ಎಲ್ಲ ಜನರೂ ದಲಿತರು.

೨. ಪಂಚಮರು ಅಥವಾ ಬಹಿಷ್ಕೃತರು ಎಂದು ಕರೆಯಿಸಿಕೊಳ್ಳುವ ಅಸ್ಪೃಶ್ಯರೆಲ್ಲರೂ ದಲಿತರು.

೩. ಅಸ್ಪೃಶ್ಯರೂ ಸೇರಿದಂತೆ (ಆ ವ್ಯಾಖ್ಯಾನದ) ಅಸ್ಪೃಶ್ಯದ ನೋವನ್ನು ಅನುಭವಿಸದಿದ್ದರೂ, ಅಸ್ಪೃಶ್ಯತೆಯ ಹಾಗೆ ಆರ್ಥಿಕ, ಸಾಮಾಜಿಕ-ರಾಜಕೀಯ ರಂಗದಲ್ಲಿ ಶೋಷಣೆಗೆ ಒಳಗಾದ ಜನರೂ ಸೇರಿ ದಲಿತರಾಗುತ್ತಾರೆ.

ಇದರಲ್ಲಿ ಮೊದಲನೆ ವಾದವು ಬಹುಮಟ್ಟಿಗೆ ನಿಘಂಟುಗಳಲ್ಲಿ ದಲಿತ ಪದಕ್ಕೆ "ಹಿಂದುಳಿದವನು", ದಮನಕ್ಕೆ ಒಳಗಾದವನು, ಆರ್ಥಿಕವಾಗಿ, ಸಾಮಾಜಿಕವಾಗಿ ಕೆಳಮಟ್ಟದವನು" ಎಂಬ ಅರ್ಥ ನೀಡಲಾಗಿದೆ. (ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು, ಸಂಪುಟ ೪ - ೪೬೨೮)

ಸೈದ್ಧಾಂತಿಕವಾಗಿ ಮಾರ್ಕ್ಸ್‌ವಾದಿಗಳು ಈ ವಾದವನ್ನು ಮುಂದಿಡುತ್ತಾರೆ. ಎರಡನೆಯ ನಿರೂಪಣೆಯಲ್ಲಿ 'ದಲಿತ' ಪದಕ್ಕೆ ಜಾತಿಯನ್ನು ಮೂಲ ಮಾನದಂಡವಾಗಿರಿಸಿಕೊಳ್ಳಲಾಗಿದೆ. ಭಾರತದ ಜಾತಿ ಸಮಾಜದಲ್ಲಿ ಪೂರ್ಣ ಮೈಲಿಗೆಯೆಂದು ಪರಿಗಣಿಸಲಾದ ಪಂಚಮರು ಅಥವಾ ಅಸ್ಪೃಶ್ಯರು ಇಲ್ಲಿ ಸೇರ್ಪಡೆಯಾಗುತ್ತಾರೆ. ಶ್ರೇಣೀಕರಣದ ದೃಷ್ಟಿಯಿಂದ ಇವರು ಸಾಂಪ್ರದಾಯಕ ಭಾರತದಲ್ಲಿ ಅತ್ಯಂತ ಕೆಳಗಿನ ಸ್ಥಾನದಲ್ಲಿರುತ್ತಾರೆ. ಸಾಮಾನ್ಯವಾಗಿ ಅಂಬೇಡ್ಕರ್ ವಾದಿಗಳು ಈ ಚರ್ಚೆಯನ್ನು ಮುಂದಿಡುತ್ತಾರೆ."[೪೦]

"ಬಂಡಾಯ-ದಲಿತ ಸಾಹಿತ್ಯ ಚಳುವಳಿಯು ಪ್ರಬಲವಾಗಿ ಕಾಣಿಸಿಕೊಂಡಿದ್ದು ೧೯೭೦ರ ದಶಕದ ಉತ್ತರಾರ್ಧದಲ್ಲಿ. ಅದೇ ದಶಕದಲ್ಲಿ ನಡೆದ ಅನೇಕ ಘಟನೆಗಳು ಆ ಚಳುವಳಿಗೆ ಪ್ರೇರಣೆ ನೀಡಿವೆ ಮತ್ತು ಆ ಪ್ರೇರಣೆಗಳೇ ಚಳುವಳಿಯ ಮುಖ್ಯ ಪ್ರವೃತ್ತಿಗಳ ಸ್ವರೂಪವನ್ನು ನಿರ್ಧರಿಸಿವೆ.

೧೯೬೯ ರಿಂದೀಚೆಗೆ ನಡೆದ ಚಳುವಳಿಗಳು ಮತ್ತು ಅನೇಕ ಘಟನೆಗಳು ಬಂಡಾಯ-ದಲಿತ ಸಾಹಿತ್ಯದ ಮೇಲೆ ಒಂದಿಲ್ಲೊಂದು ರೀತಿಯಲ್ಲಿ ಪ್ರಭಾವ ಬೀರಿವೆ.

ಸ್ವಾತಂತ್ರ್ಯಪೂರ್ವ ಭಾರತದಲ್ಲಿ ನಡೆದ ರಾಷ್ಟ್ರೀಯ ಚಳುವಳಿಯಿಂದ ಪ್ರೇರಿತರಾದ ಹಲವಾರು ಜನ ಗಾಂಧೀ ಅನುಯಾಯಿಗಳು ದಲಿತೋದ್ಧಾರದಂಥ ಪ್ರಗತಿಪರ ಕೆಲಸಗಳನ್ನು ಮಾಡಿದ್ದುಂಟು. ಗೋಪಾಲಸ್ವಾಮಿ ಅಯ್ಯರ್, ತಗಡೂರು ರಾಮಚಂದ್ರರಾಯರು, ಕುದ್ಮಲ್ ರಂಗರಾಯರು, ವಿಜಾಪುರದ ಶಾಶಾ ಕಾರ್ಖಾನಿಸ್, ಹರ್ಡೇಕರ ಮಂಜಪ್ಪ, ಕಾರ್ನಾಡ ಸದಾಶಿವರಾವ್, ಸಿ.ಆರ್.ರೆಡ್ಡಿ ಮೊದಲಾದವರು ದಲಿತರಲ್ಲಿ ಹುಟ್ಟಿಸಿದ ಸ್ವಾಭಿಮಾನಕ್ಕೆ ಚಾರಿತ್ರಿಕ ಮಹತ್ವವಿದೆ. ೧೯೭೩ರಲ್ಲಿ ನಡೆದ ಬಸವಲಿಂಗಪ್ಪನವರ 'ಬೂಸಾ ಪ್ರಕರಣ'ದಲ್ಲಿ ಮೇಲಿನ ಬುದ್ಧಿ ಜೀವಿಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದರು. ೧೯೭೩ರಲ್ಲಿ ರಾಜಕಾರಣಿಯಾಗಿದ್ದ ಬಸವಲಿಂಗಪ್ಪನವರು ದಲಿತರು ತಲೆಯಲ್ಲಿ ಮಲಹೊರುವುದನ್ನು ನಿಲ್ಲಿಸಲು ಕೂಗೆಬ್ಬಿಸಿದರು. ಇದರ ಜೊತೆಗೆ ದೇವರು-ಧರ್ಮ ಜಾತಿಯ ವಿರುದ್ಧ ಕರ್ನಾಟಕದ ಯುವಜನತೆ ಕೂಗೆಬ್ಬಿಸಿತು. ಪರಿಣಾಮವಾಗಿ ೧೯೭೩ರ ಆಗಸ್ಟ್ ೨೫-೨೬ರಂದು ಮೈಸೂರಿನಲ್ಲಿ 'ಜಾತಿವಿನಾಶ' ಸಮ್ಮೇಳನ ನಡೆಯಿತು. ಈ ಸಮ್ಮೇಳನದ ಹಿಂದೆ ಲೋಹಿಯಾ ವೈಚಾರಿಕತೆಯಿತ್ತು. ಲಂಕೇಶ್, ತೇಜಸ್ವಿ, ರಾಮದಾಸ್, ಶ್ರೀಕೃಷ್ಣ ಆಲನಹಳ್ಳಿ, ದೇವನೂರ ಮಹಾದೇವ, ಸಿದ್ದಲಿಂಗಯ್ಯ, ಮೊದಲಾದವರೆಲ್ಲ ಈ ಸಮ್ಮೇಳನದಲ್ಲಿ ಪಾಲ್ಗೊಂಡು ಕರ್ನಾಟಕದಾದ್ಯಂತ ಒಂದು ಬಗೆಯ ರೋಮಾಂಚನ ಉಂಟು ಮಾಡಿದರು. ಇದೇ ಜನಗಳು ಮುಂದೆ ೧೯೭೪ (ಏಪ್ರಿಲ್ ೨೦-೨೧) ಬರಹಗಾರರ ಮತ್ತು ಕಲಾವಿದರ ಒಕ್ಕೂಟ ರಚಿಸಿಕೊಂಡು ಮೈಸೂರಿನಲ್ಲಿ ಸಮ್ಮೇಳನ ಮಾಡಿದರು."[೪೧]

ದಲಿತರಲ್ಲಿ ಉಂಟಾದ ಎಚ್ಚರದ ಪರಿಣಾಮವಾಗಿ ೧೯೭೪ರಲ್ಲಿ ಭದ್ರಾವತಿಯಲ್ಲಿ 'ದಲಿತ ಸಂಘರ್ಷ ಸಮಿತಿ' ರೂಪುಗೊಂಡಿತು. ಮುಂದೆ ಇದು 'ಕರ್ನಾಟಕ ದಲಿತ ಸಂಘರ್ಷ ಸಮಿತಿ'ಯಾಗಿ ಬೆಳೆದು ದಲಿತರ ಸಂರಕ್ಷಣೆಗೆ ಕಟಿಬದ್ಧವಾಯಿತು.

೧೯೭೫ ಜೂನ್ ೨೫ರಂದು ಜಾರಿಗೆ ಬಂದ 'ತುರ್ತು ಪರಿಸ್ಥಿತಿ'ಯಿಂದಾಗಿ ಕರ್ನಾಟಕದ ಕೆಲವು ಬರಹಗಾರರು ಮತ್ತು ಕಲಾವಿದರು ಬೀದಿಗಿಳಿಯ ಬೇಕಾಯಿತು. ಕೆಲವು ಭೂಗತರಾಗಿದ್ದುಕೊಂಡು ತುರ್ತುಸ್ಥಿತಿಯನ್ನು ವಿರೋಧಿಸಿದರು. ಚಂದ್ರಶೇಖರ ಪಾಟೀಲರು ಸೆರೆಮನೆ ಕಂಡರು.

ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರ ''ಅಬಚೂರಿನ ಪೋಸ್ಟಾಫೀಸು''(೧೯೭೩) ನವ್ಯಕ್ಕೆ ವಿದಾಯ ಹೇಳಿ ಹೊಸತರ ಬಾಗಿಲನ್ನು ತೆರೆದ ಐತಿಹಾಸಿಕ ಕಥಾ ಸಂಕಲನ. ಸಾಮಾಜಿಕ ಸಮಸ್ಯೆಗಳನ್ನು ಸಾಂದ್ರವಾಗಿ, ಕಲಾತ್ಮಕವಾಗಿ ದಾಖಲುಪಡಿಸುವಲ್ಲಿ ತೇಜಸ್ವಿಯವರು ಸಿದ್ಧಹಸ್ತರು. ಆಧುನಿಕತೆಯ ಪ್ರವೇಶದಿಂದ ಗ್ರಾಮೀಣ ಪ್ರದೇಶದಲ್ಲಿ ಉಂಟಾಗುವ ಸ್ಥಿತ್ಯಂತರವನ್ನು ಅವರ ಕತೆಗಳು ಚೆನ್ನಾಗಿ ವಿವರಿಸಿ ಹೇಳುತ್ತವೆ. ಅಬಚೂರಿಗೆ ಹೊಸದಾಗಿ ಬಂದ ಅಂಚೆ ಕಛೇರಿಯು ಬೋಬಣ್ಣನ ಜೀವನದ ನೆಮ್ಮದಿಯನ್ನೇ ಕಲಕಿ, ಅವನನ್ನು ಊರಿನಿಂದಲೇ ಅಟ್ಟಿಬಿಡುವ ದುರಂತ ವಿನ್ಯಾಸದ ಘಟನಾ ಪರಂಪರೆಯನ್ನು ಗಮನಿಸಬೇಕು. ಬದಲಾವಣೆಯ ಬಗ್ಗೆ ತೀವ್ರವಾದ ಅನುಕಂಪವಿದ್ದು ಸಹಾನುಭೂತಿಯಿದ್ದು ಈ ಕತೆಯು ಹಳೆಯ ಸಮಾಜದೊಡನೆ ಒಂದು ಅರ್ಥಪೂರ್ಣ ಸಂಬಂಧವನ್ನು ಏರ್ಪಡಿಸಿಕೊಂಡಿದೆ. 'ಅವನತಿ' ಕತೆ ವ್ಯಕ್ತಿಯ ಸತ್ತ್ವವನ್ನು ಅಲಕ್ಷಿಸಿ ತನ್ನ ಬೇಕು ಬೇಡಗಳಿಗೆ ಪಳಗಿಸಿಕೊಳ್ಳುವ ಪರಿಸರದ ಸೂಕ್ಷ್ಮ ಚಿತ್ರವನ್ನು ನೀಡುತ್ತದೆ. ವ್ಯಕ್ತಿಯ ಮೌಢ್ಯ ಮತ್ತು ಸಮಾಜದ ಮೌಢ್ಯ - ಇವೆರಡರ ದಾರುಣ ಸಮ್ಮಿಲನದ ಕತೆಯಿದು. 'ಕುಬಿ ಮತ್ತು ಇಯಾಲ' ದಲ್ಲಿ ಹಳಸಲು ಸಂಪ್ರದಾಯದ ಸಮಾಜದಲ್ಲಿ ವಿಚಾರವಾದದ ಆದರ್ಶ ನುಚ್ಚುನೂರಾಗುವ ದುರಂತ ಅನುಭವವನ್ನು ದಾಖಲಿಸಲಾಗಿದೆ. 'ತುಕ್ಕೋಜಿ ಮತ್ತು ಡೇರ್‌ಡೆವಿಲ್ ಮುಸ್ತಾಫಾ'ದಲ್ಲಿ ಅವನತಮುಖೀ ಸಮಾಜ ವ್ಯವಸ್ಥೆಯಲ್ಲಿ ಮಾನವತೆ ಕ್ಷೀಣಿಸುವುದರ ಚಿತ್ರವಿದೆ. ಸಂಕಲನದ ಕೊನೆಯ 'ತಬರನ ಕತೆ'ಯು ಸರಕಾರಿ ಅಧಿಕಾರಿಗಳು ಹೃದಯ ಹೀನತೆಯ ವ್ಯೂಹದಲ್ಲಿ ಸಿಲುಕಿ ಮತಿಭ್ರಷ್ಟನಾದ ಬಡವನೊಬ್ಬನ ದಾರುಣ ಕತೆಯಾಗಿದೆ. ಒಂದು ಕರಾಳ ಪರಿಸರದಲ್ಲಿ ಕಮರುತ್ತಿರುವ ಪ್ರತಿಭೆ, ಸೌಂದರ್ಯ ಮತ್ತು ಸೂಕ್ಷ್ಮಜ್ಞತೆಯನ್ನು ಕಂಡು ವ್ಯಗ್ರವಾಗಿ ತಮಾಷೆಯಾಗಿ ಕಲಾತ್ಮಕವಾಗಿ ತೇಜಸ್ವಿ ಕತೆಗಳನ್ನು ಬರೆದಿದ್ದಾರೆ.''[೪೨]

"ದೇವನೂರು ಮಹಾದೇವರು ಬಂಡಾಯ-ದಲಿತ ಚಳುವಳಿಯ ಅತ್ಯಂತ ಶಕ್ತಿಶಾಲಿ ಕತೆಗಾರ. ಅವರ 'ದ್ಯಾವನೂರು' ೧೯೭೩ ಸಂಕಲನ ದಲಿತ ಲೋಕವನ್ನು ಮೊದಲ ಬಾರಿಗೆ ಕನ್ನಡ ಓದುಗರ ಮುಂದೆ ತೆರೆದಿಟ್ಟು ಘೋಷಣೆಯಲ್ಲಿ ಒತ್ತಾಯದಿಂದ ತಂದು ತುರುಕಿದ ವೈಚಾರಿಕತೆಯಲ್ಲ. ಕ್ಲೀಷೆಯಾದ ಸಂವಾದಗಳಿಲ್ಲ. ವಸ್ತುವಿನ ಅತಿರಂಜಿತ ಅಭಿವ್ಯಕ್ತಿಯಲ್ಲ. ತಣ್ಣಗೆ ಕೊರೆಯುವ ಹಿಮದ ಹಾಗೆ ಅವರ ಬರೆಹ. ಆವೇಶ ಆರ್ಭಟಗಳಿಂದ ಮುಕ್ತರಾಗಿ ಒಂದು ಅನುಭವದ ವಿವಿಧ ಮುಖಗಳ ಪರಿಶೀಲನೆ ನಡೆಸುವಲ್ಲಿ, ದೇವನೂರರನ್ನು ಮೀರಿಸುವ ಇನ್ನೊಬ್ಬ ಕತೆಗಾರ ಈ ಚಳುವಳಿಯಲ್ಲಿ ಕಾಣಿಸಿಕೊಂಡಿಲ್ಲ.

ಮಹಾದೇವರು ದಲಿತ ಲೋಕದ ಒಳಗಿನಿಂದ ಬಂದವರು. ಇತರರು ನೋಡಿದಂತೆ, ದಲಿತ ಜಗತ್ತನ್ನು ಅವರು ಮೇಲೆ ನಿಂತು ರಕ್ಷಿಸಿ, ಬರೆಯುವುದಿಲ್ಲಾ. ಬದಲಾಗಿ ತನ್ನ ಲೋಕದಲ್ಲಿ ಗಟ್ಟಿಯಾಗಿ ತಳವೂರಿ, ಇತರರನ್ನು ಅಲ್ಲಿಂದಲೇ ನೋಡುತ್ತಾರೆ. ಹೀಗಾಗಿ ಇವರು ಇತರರನ್ನು ನೋಡುವಲ್ಲಿ ಮತ್ತು ತಮ್ಮ ಲೋಕದ ವಿವರವನ್ನು ಇತರರಿಗೆ ಕಾಣಿಸುವಲ್ಲಿ ಇನ್ನಿಲ್ಲದ ಹೊಸತನವಿದೆ. ದಲಿತರ ದಟ್ಟದಾರಿದ್ರ್ಯವನ್ನು

ಚಿತ್ರಿಸುವುದರೊಂದಿಗೆ ಆ ಲೋಕದ ಅಮೂಲ್ಯ ಚೇತನಗಳನ್ನು, ಉತ್ಸಾಹವನ್ನು, ಅದ್ಭುತ ಸೃಜನಶೀಲತೆಯನ್ನು ಮಹಾದೇವರು ಅಭಿವ್ಯಕ್ತಿಸುತ್ತಾರೆ. ಎಂಥ ಸ್ಥಿತಿಯಲ್ಲೂ ಈ ದಲಿತರು ಎಷ್ಟು ಜೀವಂತವಾಗಿದ್ದಾರೆ ಎಂದು ನಮಗೆ ಅನಿಸುತ್ತಿರುವಂತೆಯೇ ಅವರನ್ನು ಅವುಕಿರುವ ದಾರಿದ್ರ್ಯ ಮಾಯವಾದಲ್ಲಿ ಅವರ ಶಕ್ತಿ ಎಷ್ಟು ಅಪಾರ ಸಾಧ್ಯತೆಗಳನ್ನು ಪಡೆದಿರುವಂಥದ್ದು ಎಂದು ನಮಗೆ ತಿಳಿಸಿ ಹೇಳುವಂತೆ ದೇವನೂರರ ಕತೆಗಳು ನಮ್ಮ ಗಮನವನ್ನು ಪ್ರಚೋದಿಸುತ್ತವೆ.

'ಶೋಷಣೆ ' ಎಂಬ ಪದವನ್ನು ಅವರ ಕತೆಗಳಲ್ಲಿ ನಾವು ಕಾಣಲಾರೆವು. ಆದರೆ ಶೋಷಣೆಯ ಚಿತ್ರಣವಿಲ್ಲದೆ ಅವರು ಕತೆಗಳನ್ನೇ ಬರೆಯುವುದಿಲ್ಲಾ. ಈ ಅರ್ಥದಲ್ಲಿ ಬಂಡಾಯ ಅವರ ಕತೆಗಳಲ್ಲಿ ಗುಪ್ತಗಾಮಿನಿಯಾಗಿ ಹರಿಯುತ್ತದೆ. ಬಡತನ-ದಾರಿದ್ರ್ಯ, ಲೈಂಗಿಕ, ಶೋಷಣೆಯ ಸಂಯಮ ಪೂರ್ಣ ದಾಖಲಾತಿಗೆ ನಾವು ದೇವನೂರರ ಕತೆಗಳಿಗೇ ಮೊರೆ ಹೋಗಬೇಕು.''[೪೩]

ಇಲ್ಲಿ ಪುರುಷೋತ್ತಮ ಬಿಳಿಮಲೆಯವರು ದೇವನೂರು ಮಹಾದೇವರ ಸಾಹಿತ್ಯ ರಚನೆ, ತಂತ್ರದ ಬಗ್ಗೆ ಹಾಗೂ ಅವರು ತಮ್ಮ ಕತೆಯಲ್ಲಿ ದಲಿತರು ಯಾವ ಸ್ಥಿತಿಯಲ್ಲಿ ಇದ್ದಾರೆ ಎಂಬ ವಿಷಯವನ್ನು ಸ್ವತಃ ಅನುಭವಿಸಿ ಒಳಹೊಕ್ಕು ತಿಳಿಸಿ ಹೇಳುವುದನ್ನು ಇವರು ವಿವರಿಸಿರುವುದನ್ನು ಕಾಣಬಹುದು.

''ದ್ಯಾವನೂರು ಸಂಕಲನದ 'ಮಾರಿಕೊಂಡವರು' ಕತೆಯಲ್ಲಿ ಬೀರ ಮತ್ತು ಲಕ್ಷ್ಮಿಯರು ಪ್ರಧಾನ ಪಾತ್ರಗಳಾದರೂ ಕತೆ ಅವರಿಬ್ಬರನ್ನು ತಬ್ಬಿಕೊಂಡು ಇನ್ನೂ ಮುಂದಕ್ಕೆ ಚಾಚುತ್ತದೆ. ಶ್ರೀಮಂತರ ಕೈಯಲ್ಲಿ ಬಡವರು ತಮ್ಮನ್ನೇ ತಾವು ಮಾರಿಕೊಂಡ ಕತೆ ಒಂದು ಮಗ್ಗುಲಲ್ಲಿದ್ದರೆ, ಇನ್ನೊಂದು ಮಗ್ಗುಲಲ್ಲಿ ಬೀರನು ತನ್ನನ್ನು ಹೆಂಡಕ್ಕೆ ಮಾರಿಕೊಂಡಿದ್ದಾನೆ. ದಣಿ ಮಗನಾದ ಕಿಟ್ಟಪ್ಪನಿಗೆ ಲಕ್ಷ್ಮಿಯೂ ತನ್ನನ್ನು ಮಾರಿಕೊಂಡಿದ್ದಾಳೆ. ಪರೋಕ್ಷವಾಗಿ ಹೆಂಡ ಮತ್ತು ಲಕ್ಷ್ಮಿಗೆ ಧಣಿಮಗ ಕಿಟ್ಟಪ್ಪನೂ ಮಾರಿ ಕೊಂಡಿದ್ದಾನೆ. ಲಕ್ಷ್ಮಿ ಮತ್ತು ಕಿಟ್ಟಪ್ಪನವರ ನಡುವಣ ಲೈಂಗಿಕ ಸಂಬಂಧ ತಿಳಿದ ಅನಂತರವೂ ಬೀರ ಸುಮ್ಮನಿರುವುದು ಆ ವರ್ಗದ ವಿಷಣ್ಣತೆಯನ್ನು ಮಾರಿಕೊಂಡಿದ್ದರ ಪರಿಣಾಮವನ್ನು ತಿಳಿಸುತ್ತದೆ. ಹೆಂಡ ಕುಡಿದಾಗಲಾದರೂ ಬೀರ ಲಕ್ಷ್ಮಿಯ ವ್ಯಭಿಚಾರದ ವಿರುದ್ಧ ಧ್ವನಿ ಎತ್ತುತ್ತಾನೆ. ಲಕ್ಷ್ಮಿಗೆ ಇಂಥ ಅಭಿವ್ಯಕ್ತಿಯೂ ಇಲ್ಲ. ಹೀಗೆ ಇದು. 'ಮಾರಿಕೊಂಡವರ ಕರುಣ ಕಥೆ.' 'ಗ್ರಸ್ತರು' ಕಥೆಯಲ್ಲಿ ಮಠ ಮತ್ತು ಮಠಾಧೀಶರ ಬಗೆಗೆ ತೀವ್ರವಾಗಿ ಅಸಹನೆ ಪ್ರಕಟವಾಗಿದೆ. 'ಒಂದು ದಹನದ ಕಥೆ'ಯಲ್ಲಿ ಹೊಲೆಯರ ಹುಡುಗನೊಂದಿಗೆ ಗೌಡರ ಕಮಲಿಯ ಸಂಬಂಧವನ್ನು ಏರ್ಪಡಿಸಿ ಈ ಮೂಲಕ ಹುಟ್ಟಬೇಕಾದ ಹೊಸ ಸಂಸ್ಕೃತಿಯೊಂದರ ಕಡೆ ಬೊಟ್ಟುಮಾಡಿ ತೋರಿಸಲಾಗಿದೆ. ಈ ಕತೆಯಲ್ಲಿ ಮೊದಲ ಬಾರಿಗೆ ಮೇಲ್ಜಾತಿ ಹೆಂಗಸೊಬ್ಬಳನ್ನು ಕೆಳಜಾತಿಯ ಹುಡುಗ ಕೂಡುತ್ತಾನೆ. 'ದತ್ತ' ಕತೆಯ ನಾಯಕನಿಗೆ ಬದಕಿನ ಕ್ಷುದ್ರತೆಯನ್ನು ಮೀರಲಾಗುವುದೇ ಇಲ್ಲ. 'ಡಾಂಬರು ಬಂದುದು' ಆಧುನಿಕತೆಯ ಆಕ್ರಮಣದಿಂದ ಉಂಟಾಗುವ ಅವಾಂತರವನ್ನು, ಹಳ್ಳಿಯನ್ನು ಪ್ರವೇಶಿಸುವ ಹೊಸ ಮೌಲ್ಯಗಳು ನಿಶ್ಚಲ ಸ್ಥಿತಿಯನ್ನು ಕಲಕುವ ಪರಿಯನ್ನು ಹೇಳುತ್ತದೆ. ಇಲ್ಲಿ ಡಾಂಬರು ಕೇವಲ ಕ್ರೌರ್ಯದ ಪ್ರತಿನಿಧಿಯಲ್ಲ. ಬದಲು ಲಕುಮ, ರಾಜ, ಮಾದು, ಶಂಭು ಮೊದಲಾದವರ ಮನೋಧರ್ಮವನ್ನು ಸಂಕೇತಿಸುತ್ತದೆ. ತೇಜಸ್ವಿಯವರ 'ಅಬಚೂರಿನ ಪೋಸ್ಟಾಫೀಸು ಕತೆಯಲ್ಲಿ ಕಂಡುಬರುವ ಮೌಲ್ಯಗಳ ಸಂಘರ್ಷ

ಇಲ್ಲಿ ಬೇರೊಂದು ತೆರನಾಗಿ ಪ್ರಕಟವಾಗಿದೆ.' 'ಮೂಡಲ ಸೀಮೇಲಿ ಕೊಲೆಗಿಲೆ ಮುಂತಾಗಿ' ಕತೆಯಲ್ಲಿ ರಂಗಪ್ಪನ ಪ್ರತಿನಿತ್ಯದ ಕೊಲೆ ಹೃದಯಂಗಮವಾಗಿ ವರ್ಣಿತವಾಗಿದೆ. ಬಡತನದ ತುತ್ತ ತುದಿಯಲ್ಲಿ ಧಣಿಗಳ ಮಗಳ ಮದುವೆಯ ಬಗ್ಗೆ ವಿಚಾರಿಸಿಕೊಳ್ಳುವುದರ ಮೂಲಕ ರಂಗಪ್ಪ ಮಾನವತೆಯ ಅತ್ಯುನ್ನತ ಪ್ರತಿನಿಧಿಯೂ ಆಗಿಬಿಡುತ್ತಾನೆ."[೪೪]

'ಅಮಾಸ'ದಲ್ಲಿ ಮೇಲ್ವರ್ಗದಲ್ಲಿ ಉಂಟಾದ ವ್ಯತ್ಯಾಸ ಮತ್ತು ಅದು ನಿಚ್ಚಳವಾಗಿ ಸಂಘರ್ಷವನ್ನು ಎದುರಿಸಬೇಕಾಗಿ ಬಂದಿರುವ ನಿರ್ದಿಷ್ಟ ಸ್ಥಿತಿಯ ಚಿತ್ರವಿದೆ. ದಲಿತರ ಹುಲಿವೇಶದ ಕುಣಿತಕ್ಕೆ ಮಾರು ಹೋಗಿ ಅವರವರ ಸ್ವಾಭಿಮಾನಕ್ಕೆ ತಕ್ಕಂತೆ ಇನಾಮು ಕೊಟ್ಟು ಸಂತೋಷಪಡುವ ಭೂಮಾಲಿಕ ವರ್ಗ ಒಂದಲ್ಲ ಒಂದು ದನಿ ದಲಿತ ಕತೆಯ ಆಳದಲ್ಲಿ ನಿಕ್ಷಿಪ್ತವಾಗಿರುವ ಅವರ ಬದುಕಿನ ವಾಸ್ತವತೆಗಳ ಪ್ರಜ್ಞೆ ಪ್ರತಿಭಟನೆಯಾಗಿ ಸ್ಫೋಟಗೊಳ್ಳಬಹುದೆಂಬ ಧ್ವನಿ ಈ ಕತೆಯಲ್ಲಿ ಅಂತರ್ಗತವಾಗಿದೆ. ಮಹಾದೇವರ ಅತ್ಯಂತ ಯಶಸ್ವೀ ಕೃತಿ ಇದು.

'ಒಡಲಾಳ' ದೇವನೂರು ಮಹಾದೇವರ ಪ್ರತಿಭೆಯ ಪರಮಸೃಷ್ಟಿ. ಚಿನುಅ ಅಚಿಬೆಯ ಬರಹಗಳನ್ನು ನೆನಪಿಗೆ ತರುವ ಈ ಕತೆ ದಲಿತ ಕುಟುಂಬವೊಂದರ ಬಡತನ, ಮಾನವೀಯತೆ, ಆಸೆ ಆಕಾಂಕ್ಷೆಗಳ, ಕೌಟುಂಬಿಕ ಕಲಹಗಳ ಪುಟ್ಟ ವಿಶ್ವವನ್ನು ನಮ್ಮ ಮುಂದಿಡುತ್ತದೆ. ಮೇಲ್ನೋಟಕ್ಕೆ ಮೈನೋದಿಕ ಪ್ರಪಂಚವೆಂದು ಕಾಣುವ ಕತೆಯ ಆಳದಲ್ಲಿ ನಿರಂತರವಾದ ವಿಷಾದ ದಾಖಲಾಗಿದೆ. ಸಾಕವ್ವನ ಕೋಳಿಯ ಹುಡುಕಾಟ ಕೇವಲ ಜೀವನ ಪ್ರೀತಿಯಾಗದೆ ಆಧ್ಯಾತ್ಮಿಕ ಸಿದ್ಧಿಯ ಕೊನೆ ಹಂತದಂತೆ ಭಾಸವಾಗುತ್ತದೆ. ಶಿವೂನ ಮುಗ್ಧತೆ, ಪುಟ್ಟಗೌರಿಯ ಯೌವ್ವನ ಸಹಜ ಜೀವನೋತ್ಸಾಹ, ಸಾಕವ್ವನ ಸ್ವಾಭಿಮಾನ, ಪೋಲಿಸರ ಕ್ರೌರ್ಯ, ನಯ ವಂಚನೆಗಳು, ಇವ್ಯಾವೂ ಕೃತಿಯಲ್ಲಿ ವೈಭವೀಕರಣಕ್ಕೆ ಒಳಗಾಗಿಲ್ಲ. ದೇವನೂರು ಇಂಥ ಕಡೆ ಅತಿಯಾದ ಸಂಯಮವನ್ನು ಕಾಪಾಡಿಕೊಂಡಿದ್ದಾರೆ.

ಈ ನಿಟ್ಟಿನಲ್ಲಿ ಟಿ.ಪಿ.ಅಶೋಕರು ಹೇಳಿದ ಮಾತುಗಳು ಅರ್ಥವತ್ತಾಗಿವೆ: "ದೇವನೂರ ಪಾತ್ರಗಳು ಕೇವಲ 'ನೆರಳು'ಗಳಾಗದೆ ರಕ್ತಮಾಂಸಗಳಿಂದ ಕೂಡಿದ ಪೂರ್ಣ ಪಾತ್ರಗಳೇ ಆಗಿರುವುದರಿಂದ ಅವರ ದೈನಂದಿನ ಚಟುವಟಿಕೆಗಳು ಆ ಜನಾಂಗದ ಒಟ್ಟು ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಚಿತ್ರಗಳೇ ಆಗುತ್ತವೆ. ಈ ಚಿತ್ರಗಳನ್ನು ಕಟ್ಟಿಕೊಡುವಾಗ ಮಹಾದೇವರು ತೋರುವ ಸಂಯಮ, ಯಾವ ವಿವರಗಳನ್ನು ಎಲ್ಲಿ ಇಡಬೇಕೆಂಬ ಕಲಾತ್ಮಕ ನಿಖರತೆ, ಆ ಚಿತ್ರಗಳ ವಿಷಾದ ದನಿ, ಯಾವಾಗ ಸಿಡಿಯುವುದೋ ಹೇಳಲಾಗದ ಮೂಕ ಸಿಟ್ಟು ಗುಪ್ತವಾಗಿ ಮೊಳೆಯುತ್ತಿರುವ ಬಂಡಾಯ, ಇವೆಲ್ಲದರಲ್ಲೂ ವೈಯುಕ್ತಿಕ ಹಸ್ತಕ್ಷೇಪ ಮಾಡದೆ ತಿಳಿಹಾಸ್ಯ, ವಿನೋದಗಳಿಂದ ಕಾಯ್ದುಕೊಂಡಿರುವ ತಾಂತ್ರಿಕ ಅಂತರ ಇವುಗಳಿಂದಾಗಿ ಅವರ ಕತೆಗಳು ಕನ್ನಡ ಸಾಹಿತ್ಯಕ್ಕೆ ಹೊಸ ರಕ್ತ ತುಂಬುವ ಭರವಸೆ ಮೂಡಿಸಿವೆ. (೧೯೮೧-೮೨- ೮೩) ಸೃಜನ ಶೀಲ ಕ್ಷೇತ್ರದಲ್ಲಿ ದೇವನೂರ ಮಹಾದೇವ ದೊಡ್ಡ ಹೆಸರು."[೪೫]

"ಬೆಸಗರಹಳ್ಳಿ ರಾಮಣ್ಣನವರು ನವ್ಯಸಾಹಿತ್ಯದ ಉಚ್ಛ್ರಾಯದ ಕಾಲದಲ್ಲಿಯೇ ನವ್ಯಕತೆಗಳಿಗಿಂತ ಭಿನ್ನವಾದ ಕಥೆಗಳನ್ನು ಬರೆಯುತ್ತಿದ್ದರು. ೧೯೬೮ರಲ್ಲಿ ಪ್ರಕಟವಾದ ಇವರ 'ನೆಲದ ಒಡಲು' ಸಂಕಲನದಿಂದ

ದೇವನೂರ ಮಹಾದೇವರ 'ಒಡಲಾಳ' ಪ್ರೇರಣೆ ಪಡೆದಿದೆ ಎಂದು ಭಾವಿಸಲಾಗಿದೆ. ಬೆಸಗರ ಹಳ್ಳಿಯ 'ಕೆಂಪು ಹುಂಜ'ನೇ ಒಡಲಾಳದ ಸಾಕವ್ವನ ಹುಂಜವಾಗಿ ಪರಿವರ್ತನೆಗೊಂಡಿದೆ ಎಂದು ಭಾವಿಸಲಾಗಿದೆ. 'ಗರ್ಜನೆ', 'ಹರಕೆಯ ಹಣ', 'ಒಂದು ಹುಡುಗನಿಗೆ ಬಿದ್ದ ಕನಸು', ಇವರ ಪ್ರಕಟಿತ ಸಂಕಲನಗಳು.

ಗ್ರಾಮೀಣ ಪರಿಸರದ ಸಣ್ಣ ಕುಟೀರಗಳಲ್ಲಿ ಇವರ ಕಥೆಗಳು ಚಿಗುರೊಡೆಯುತ್ತವೆ. ಈ ಹಳ್ಳಿ ಬದುಕನ್ನು ನಾಶಮಾಡುವ ಊಳಿಗಮಾನ್ಯ ವ್ಯವಸ್ಥೆಯ ಬಗ್ಗೆ ಅವರಿಗೆ ಇನ್ನಿಲ್ಲದ ಆಕ್ರೋಶವಿದೆ. ಈ ಆಕ್ರೋಶ ಕಥೆಯಾಗುವ ಘಟ್ಟದಲ್ಲಿ ಅವರು ಮಾನವ ಸಂಬಂಧಗಳನ್ನು ಅವಿಭಕ್ತ ಕುಟುಂಬಗಳು ಚಿದ್ರವಾಗುವುದನ್ನು ಆವೇಶವಿಲ್ಲದೆ ಚಿತ್ರಿಸುತ್ತಾ ಹೋಗುತ್ತಾರೆ.

ಕರ್ನಾಟಕ ಒಕ್ಕಲಿಗ ಜನಾಂಗದ ಸತ್ವ, ನಿಸತ್ವಶಕ್ತಿ, ಪ್ರೇಮ, ದ್ವೇಷವನ್ನು ಇವರಂತೆ ನಿರಾಡಂಭವಾಗಿ ಚಿತ್ರಿಸಿದ ಕಥೆಗಾರ ಇನ್ನೊಬ್ಬನಿಲ್ಲ.

'ಸೋಲು', 'ಕಣಿವೆಯ ಅಂಚು', 'ಗರ್ಜನೆ', 'ಜೀತ', 'ಅವ್ವ', 'ಕಳೆ', 'ಕೆಂಪು ಹುಂಜ', 'ಒಂದು ಹುಡುಗನಿಗೆ ಬಿದ್ದ ಕನಸು', 'ಚಲುವನ ಪರಂಗಿ ಗಿಡಗಳು', 'ಗಾಂಧಿ', ಮೊದಲಾದುವು ಇವರ ಅತ್ಯುತ್ತಮ ಕಥೆಗಳು. 'ಪ್ರಜಾಪ್ರಭುತ್ವ' ಮತ್ತು 'ಮೂರು ಮಂಗಗಳು', ಕಥೆಯ ಪಾತ್ರಗಳು ''ಪಂಚತಂತ್ರ''ದ ಮಾದರಿಯಲ್ಲಿ ನಿಂತು ಗಾಂಧಿ ತತ್ವಗಳು ಭಗ್ನವಾದ ಸನ್ನಿವೇಶದ ವಿಷಣ್ಣತೆಯನ್ನು ಮೂರ್ತಗೊಳಿಸುತ್ತವೆ. ಮಾನವೀಯ ಸಂಬಂಧಗಳ ಕಲಾತ್ಮಕ ಶೋಧಕ ಎಂದು ಇವರನ್ನು ಸರಿಯಾಗಿಯೇ ಗುರುತಿಸಲಾಗಿದೆ.''[೬೬]

ಬೆಸಗರಹಳ್ಳಿ ರಾಮಣ್ಣನವರ ಕತೆಗಳನ್ನು ಒಳಹೊಕ್ಕು ನೋಡಿದಾಗ ಹಾಸ್ಯ, ಕ್ರೋಧ, ಚಿಂತನೆ, ವೈಮನಸ್ಸು, ಪ್ರಚೋದನೆ, ಸ್ವಾಭಿಮಾನ, ನಾಚಿಕೆ, ಪ್ರೀತಿ, ಪ್ರೇಮ, ಗ್ರಾಮೀಣ ಬದುಕಿನ ಅನುಭವಗಳು ಇವುಗಳನ್ನು ಅವರ ಬಹು ಅಮೂಲ್ಯ ಕತೆಗಳಾದ, ಕೆಂಪು ಹುಂಜ, ಕಳೆ, ಅವ್ವ, ಜೀತ, ಗರ್ಜನೆ, ಕಣಿವೆಯ ಅಂಚು, ಸೋಲು ಒಂದು ಹುಡುಗನಿಗೆ ಬಿದ್ದ ಕನಸು, ಗಾಂಧಿ ಕತೆಗಳಲ್ಲಿ ಕಾಣಬಹುದಾಗಿದೆ. ಹಾಗೆಯೇ ಪ್ರಜಾಪ್ರಭುತ್ವ ಮತ್ತು ಮೂರು ಮಂಗಗಳು ಈ ಕತೆಗಳಲ್ಲಿ ತತ್ವಾಧಾರಿತ ಮತ್ತು ಮಾನವೀಯ ಅಮಾನವೀಯ ಸಂಬಂಧಗಳನ್ನು ಹಾಗೂ ಪಂಚತಂತ್ರ ಕತೆಗಳಂತೆ ನೀತಿ ಬೋಧಕ ಕತೆಗಳು ತುಂಬಾ ಮಹತ್ವ ಉಳ್ಳದ್ದಾಗಿ ಇರುತ್ತವೆ. ಈ ವಿಷಯವನ್ನು ಅವರ ದಲಿತ ಬಂಡಾಯ, ರೈತ ಚಳುವಳಿಯ ಪ್ರಭಾವಗಳು ಇವರ ಕತೆಗಳಲ್ಲಿ ಕಂಡುಬರುವುದು ಗಮನಿಸಬೇಕಾದ ಅಂಶವಾಗಿದೆ.

ಕಾಳೇಗೌಡ ನಾಗವಾರರು 'ಬೆಟ್ಟ ಸಾಲು ಮಳೆ' ಮತ್ತು 'ಅಲೆಗಳು' ಸಂಕಲನಗಳಲ್ಲಿ ತುಂಬ ಭಿನ್ನವಾದ ಕಥೆಗಳನ್ನು ಬರೆದಿದ್ದಾರೆ. ಅವರ ಕಥೆಗಳಲ್ಲಿ ಪ್ರೀತಿತುಂಬಿದ ಮಾನವರ ಸಂಖ್ಯೆಯೇ ಅಧಿಕ. ಜಗತ್ತು ದ್ವೇಷವನ್ನು ಪ್ರಕಟಿಸುತ್ತಿರುವಾಗ ಕಾಳೇಗೌಡ ನಾಗವಾರರು 'ಬೆಟ್ಟ ಸಾಲು ಮಳೆ' ಮತ್ತು 'ಅಲೆಗಳು' ಸಂಕಲನಗಳಲ್ಲಿ ತುಂಬಿ ಭಿನ್ನವಾದ ಕಥೆಗಳನ್ನು ಬೆರೆದಿದ್ದಾರೆ. ಅವರ ಕಥೆಗಳಲ್ಲಿ ಪ್ರೀತಿ ತುಂಬಿದ ಮಾನವರ ಸಂಖ್ಯೆಯೇ ಅಧಿಕ ಜಗತ್ತು ದ್ವೇಷವನ್ನು ಪ್ರಕಟಿಸುತ್ತಿರುವಾಗ ಕಾಳೇಗೌಡರ ಕಥೆಗಳು ಪ್ರೀತಿಗಾಗಿ ಹಾತೊರೆಯುತ್ತವೆ. ಹೆಣ್ಣಿನ ಪ್ರೀತಿಯನ್ನು ಅವರು ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರವೆಂಬಂತೆ ಸೂಚಿಸುವುದೂ ಉಂಟು. ಕಾಳೇಗೌಡರದೇ ಒಂದು ಮಾತು ಇಂತಿದೆ. ನಿರ್ಭೀತಿಯ ಹಾದಿಯಲ್ಲಿ ಪ್ರೀತಿಯ

ಬೆಳಕು ಕಾಣಲು ಇರುವ ತೊಡಕುಗಳು ನಡುಕ ಹುಟ್ಟಿಸುತ್ತವೆ. ಆದರೂ ಆಸೆ ಮತ್ತು ಸತ್ಯದ ದಾರಿಯಲ್ಲಿ ಸಿಕ್ಕುವ ತೃಪ್ತಿ ಸದಾ ಪ್ರಿಯವಾಗಿರುತ್ತದೆ. ಬೂದಿ ರಾಶಿಯ ನಡುವಣ ಕಿಡಿಗಳನ್ನು ತಡಕಿದಂತೆ ಕಲಾಕೃತಿಯ ನೆಪದಲ್ಲಿ ನಾವು ಪರದಾಡುತ್ತೇವೆ.

ಕಾಳೇಗೌಡರ ಕಥೆಗಳು ಮೇಲಿನ ಮಾತಿಗೆ ಬರೆದ ಭಾಷ್ಯದಂತಿವೆ. 'ಮೀನುಗಳು', 'ಬೆಟ್ಟ ಸಾಲು ಮಳೆ', 'ಪರಸ್ಪರ', 'ಈ ಮಂಜಿನೊಳಗೆ', 'ಅಲೆಗಳು', 'ಕೂಡಿಕೆ', ಮೊದಲಾದುವು ಕಾಳೇಗೌಡರ ಕಲಾತ್ಮಕ ಕಥೆಗಳು. ಜಾತಿ ವರ್ಗಗಳನ್ನು ಮೀರಿದ ಪರಿಶುದ್ಧವಾದ ಪ್ರೀತಿಯ ಹುಡುಕಾಟದಲ್ಲಿ ಕಾಳೇಗೌಡರು ಉತ್ತಮ ಕಥೆಗಳನ್ನೇ ಬರೆದಿದ್ದಾರೆ.

ಚನ್ನಣ್ಣ ವಾಲಿಕಾರರ 'ಕಪ್ಪು ಕಥೆಗಳು' ಸಂಕಲನದಲ್ಲಿ ಮೇಲ್ಜಾತಿ ಮತ್ತು ಮೇಲ್ವರ್ಗಗಳ ಹಿಡಿತದಲ್ಲಿ ಕೆಳಜಾತಿ ಮತ್ತು ಕೆಳವರ್ಗದ ಜನರು ಅನುಭವಿಸುತ್ತಿರುವ ಅನ್ಯಾಯ, ಅತ್ಯಾಚಾರ, ದಬ್ಬಾಳಿಕೆ ಮತ್ತು ನಿಸ್ಸಹಾಯ ಕತೆಗಳ ಅಪ್ಪಟ ಚಿತ್ರವಿದೆ.

ಚೆನ್ನಣ್ಣ, ಬರಗೂರು ರಾಮಚಂದ್ರಪ್ಪನವರ 'ಕಪ್ಪು ನೆಲದ ಕೆಂಪು ಕಾಲು'ವಿನಲ್ಲಿ ಸರಳಗೊಳಿಸಿದ ಗ್ರಾಮೀಣ ವ್ಯವಸ್ಥೆಯ ನಿಷ್ಠುರ ದಾಖಲಾತಿ ಇದೆ. ಹಳ್ಳಿಗಳು ಜಾತಿ ರಾಜಕೀಯ, ಕೆಳಜಾತಿ ವರ್ಗಗಳು ಸಂಘರ್ಷವನ್ನು ಬರಗೂರರು ನೇರವಾಗಿ ಚಿತ್ರಿಸುತ್ತಾರೆ. ಕಾ.ತ.ಚಿಕ್ಕಣ್ಣನವರ 'ಒಡಲುರಿ' ಮತ್ತು 'ವಾಸನಾಮಯ ಬದುಕಿನ ಆಚೆ ಈಚೆ' ಸಂಕಲನದ ಎಲ್ಲಾ ಕಥೆಗಳಲ್ಲಿಯೂ ಗ್ರಾಮೀಣ ಪ್ರದೇಶದಲ್ಲಿ ನಡೆಯುವ ಶೋಷಣೆಯ ದಟ್ಟ ವಿವರವಿದೆ."[೪೭]

"ಕರೀಗೌಡ ಬೀಚನಹಳ್ಳಿಯವರ 'ಕರಿಮಣ್ಣಿನ ಗೊಂಬೆಗಳು' ಮತ್ತು 'ಸಂಧಾನ' ಸಂಕಲನಗಳಲ್ಲಿ ಹಳ್ಳಿಯ ಬದುಕೇ ಕೇಂದ್ರ ವಸ್ತು. ಗ್ರಾಮೀಣ ಬದುಕಿನ ಸಂದರ್ಭದಲ್ಲಿ ಆಗಾಗ ಕಾಣುವ ಮೌಢ್ಯ, ಶೋಷಣೆ ಮತ್ತು ಕ್ರೌರ್ಯವನ್ನು ಕರೀಗೌಡರು ಬಿಸಿ ಬಿಸಿಯಾಗಿ ದಾಖಲಿಸಿದ್ದಾರೆ.

ಆರ್.ವಿ.ಭಂಡಾರಿಯವರ ಕಥೆಗಳಲ್ಲಿ ಗ್ರಾಮೀಣ ಪರಿಸರದಲ್ಲಿ ಮುಗ್ಧ ಮಕ್ಕಳು ಜಾತಿ ಮತ್ತು ಆರ್ಥಿಕ ಕಾರಣಗಳಿಗಾಗಿ ಶೋಷಣೆಗೊಳಗಾಗುವ, ಆತ್ಮೀಯ ಚಿತ್ರಗಳಿರುತ್ತವೆ. ಜಾಣಗೆರೆ ವೆಂಕಟರಾಮಯ್ಯನವರ ಕಥೆಗಳಲ್ಲಿ ಅಮಾನುಷವಾದ ಗ್ರಾಮೀಣ ವ್ಯವಸ್ಥೆಯ ವಿರುದ್ಧ ತೀವ್ರವಾದ ಸಿಟ್ಟು ಕಂಡುಬರುತ್ತದೆ.

ಬಂಡಾಯ ದಲಿತ ಚಳುವಳಿಯೊಂದಿಗೆ ಅನೇಕ ಮುಸ್ಲಿಂ ಬರಹಗಾರರು ಕಥೆಗಳನ್ನು ಬರೆಯಲು ಆರಂಭಿಸಿದ್ದಾರೆ. ಅವರಲ್ಲಿ ಬೋಳುವಾರು ಮಹಮದ್ ಕುಂಞ ಪ್ರಮುಖರು. ಅವರ 'ಅತ್ತ ಇತ್ತಗಳು ಸುತ್ತಮುತ್ತ', 'ದೇವರುಗಳ ರಾಜ್ಯದಲ್ಲಿ' ಮತ್ತು 'ಅಂಕ' ಸಂಕಲನಗಳಲ್ಲಿ ಸಮಕಾಲೀನ ಕನ್ನಡ ಸಾಹಿತ್ಯದ ಶ್ರೇಷ್ಠಕಥೆಗಳಿವೆ. ಅವರ ಎಲ್ಲ ಕಥೆಗಳಿಗೂ ಸಂಪ್ರದಾಯ ಜಡವಾದ ಮುಸ್ಲಿಂ ಸಾಮಾಜಿಕ ವ್ಯವಸ್ಥೆಯೇ ಒಂದು ಆವರಣವನ್ನು ನಿರ್ಮಿಸುತ್ತದೆ. ಈ ಆವರಣದ ವಿರುದ್ಧ ಒಂದು ಬಂಡಾಯ ಧ್ವನಿಯನ್ನು ಬೋಳುವಾರರು ಎತ್ತುತ್ತಾರೆ ಎಂಬ ಕಾರಣಕ್ಕೆ ಮುಖರಾಗುತ್ತಾರೆ.

ಮಹಿಳೆಯರಲ್ಲಿ ವೀಣಾ ಎಲಬುರ್ಗಿ, ಆರ್. ಪೂರ್ಣಿಮಾ, ಬಿ.ಟಿ.ಲಲಿತಾ ನಾಯಕ, ಎಚ್.ಮಂಜುಳಾ, ಗಿರಿಜಮ್ಮ, ವೈದೇಹಿ, ಲೀಲಾ ಮಣ್ಣಾಲ, ಮೀನಾಕ್ಷಿ ಹೆಂಗವಳ್ಳಿ ಮೊದಲಾದವರು ಅತ್ಯುತ್ತಮ ಕಥೆಗಳನ್ನು ಬರೆಯುತ್ತಿದ್ದಾರೆ.

ಮೇಲಿನ ಎಲ್ಲಾ ಕಥೆಗಾರರ ಕಥೆಗಳಲ್ಲಿಯೂ ಸಾಹಿತ್ಯದ ಸಾಮಾಜಿಕ ಜವಾಬ್ದಾರಿಯ ಬಗೆಗೆ ವಿಶೇಷವಾದ ಆಸಕ್ತಿ ಪ್ರಕಟವಾಗಿದೆ. ಈ ಹಂತದಲ್ಲಿ ಬಹುಮಟ್ಟಿಗೆ ಒಂದೇ ಅನ್ನಬಹುದಾದ ವಿನ್ಯಾಸವೂ ಸಿದ್ಧಗೊಂಡಿದೆ. ಆ ವಿನ್ಯಾಸದ ರೂಪು ರೇಷೆಗಳು ಇಂತಿವೆ.

೧. ನಿರ್ದಿಷ್ಟ ಪ್ರದೇಶವೊಂದರಲ್ಲಿ ಕಂಡುಬರುವ ಶೋಷಿತರ ಸವಿವರವಾದ ಚಿತ್ರ - ಈ ಶೋಷಿತರಿಗೆ ವಿರುದ್ಧವಾಗಿರುವ ಶ್ರೀಮಂತರ ಚಿತ್ರ ಎರಡೂ ವರ್ಗಗಳಲ್ಲಿ ಪರಸ್ಪರ ವಿರೋಧ ಅನ್ನುವ ವಿಚಾರಗಳಿರುವುದು, ಲೇಖಕರ ಸ್ಪಷ್ಟವಾದ ಒಲವು ಶೋಷಿತ ವರ್ಗದ ಕಡೆಗೆ ಇರುವುದು.

೨. ಶೋಷಣೆಯ ವಿವಿಧ ವರ್ಗ ಮುಖಗಳ ಚಿತ್ರವಿರುತ್ತದೆ. ಅದರಲ್ಲಿ ಕೆಲವರಿಗಾದರೂ ಶೋಧನೆಯ ಅರಿವು ಮೂಡುತ್ತದೆ. ಹೀಗೆ ಅರಿವು ಮೂಡಿದವ ಕಥಾನಾಯಕನಾಗುತ್ತಾನೆ.

೩. ಶೋಷಿತರೆಲ್ಲಾ ಒಂದಾಗುತ್ತಲೇ, ಅವರನ್ನು ಬಗ್ಗು ಬಡಿಯಲು ಶೋಷಕರು ಹೊಸಬಗೆಯ ತಂತ್ರಗಳನ್ನು ರೂಪಿಸುತ್ತಾರೆ.

೪. ಶೋಷಿತರ ಸಾಮೂಹಿಕ ಹೋರಾಟ - ಇದು ಜಾತಿ ಇಲ್ಲವೇ ವರ್ಗ ಹೋರಾಟವಾಗಿರುತ್ತದೆ.

೫. ಶೋಷಕರ ಸಾವಿನ ಮೂಲಕ ಜನರಲ್ಲಿ ಕ್ರಾಂತಿಯ ಭಾವನೆಯನ್ನು ಬಿತ್ತಲಾಗುವುದು.

ಹೀಗೆ ಒಂದು ವಿಧದ ಏಕತಾನತೆಯೂ ಕಥೆಗಳಿಗೆ ಪ್ರಾಪ್ತವಾಗಿದೆ. ಭಿನ್ನ ಭಿನ್ನ ಪ್ರದೇಶಗಳು ಭಾಷಾ ಬಳಕೆಯಿಂದಾಗಿ ಈ ಏಕತಾನತೆ ಕೆಲಮಟ್ಟಿಗೆ ಮರೆಯಾಗಿದೆ.''[೪೮]

''ದಲಿತ ಚಳುವಳಿ ಅಸ್ಪೃಶ್ಯರ ಸಮಸ್ಯೆಗಳನ್ನು ಪರಿಹರಿಸಲು ಗಾಂಧಿ ಮಾರ್ಗ ಪ್ರತಿಪಾದಿಸಿದ ಮಾದರಿಯನ್ನು ವಿರೋಧಿಸಿ ಹುಟ್ಟಿದ ಮನಃಸ್ಥಿಮಿತ ಉತ್ಪನ್ನ ಗಾಂಧಿಮಾರ್ಗದ ತತ್ವ ಹಾಗೂ ಮಾದರಿಗಳೆರಡನ್ನು ದಲಿತ ಚಳುವಳಿ ವಿರೋಧಿಸಿತು. ಬದಲಾದ ಸಂದರ್ಭಗಳು ದಲಿತ ಚಳುವಳಿಯ ಮೂಲ, ಸ್ವರೂಪವನ್ನು ನಿರ್ಧರಿಸಿದ ಶಕ್ತಿಗಳನ್ನು ಮರು ಪರೀಕ್ಷೆಗೆ ಒಡ್ಡಲು ಒತ್ತಾಯಿಸುತ್ತವೆ. ಈ ಮರು ಪರೀಕ್ಷೆಯಲ್ಲಿ ಕೆಲವು ಕಹಿ ಸತ್ಯಗಳು ಅಡಗಿದ್ದರೂ ಅದನ್ನು ನಾವು ಸಹಿಸಿಕೊಳ್ಳಲೇಬೇಕು.''[೪೯]

ದಲಿತ ಬಂಡಾಯ ಚಳುವಳಿಗಳ ಬಗ್ಗೆ ಕೂಲಂಕಶವಾಗಿ ನೋಡಿದರೆ ಸ್ವಾತಂತ್ರ್ಯ ಪಡೆಯುವ ಮುಂಚೆಯೇ ಬ್ರಿಟಿಷರ ವಿರುದ್ಧ ಪ್ರತಿಭಟನೆಯ ಚಳುವಳಿ ಪ್ರಾರಂಭವಾಗಿರುವುದನ್ನು ನಾವು ಗಮನಿಸಬಹುದು. ಇದೇ ತತ್ವದ ಆಧಾರದ ಮೇಲೆ ಸ್ವಾತಂತ್ರ್ಯೋತ್ತರದ ನಂತರದ ದಿನಗಳು ಅಂಬೇಡ್ಕರ್‌ರ ಭದ್ರ ಅಡಿಪಾಯದೊಂದಿಗೆ ಪ್ರತಿಯೊಬ್ಬ ಕತೆಗಾರರಲ್ಲಿಯೂ ಸಣ್ಣ ಕತೆಗಳಲ್ಲಿನ ಬಂಡಾಯವನ್ನು ಚಳುವಳಿಗಳ ರೂಪದಲ್ಲಿ, ಸಂಘಟನೆಗಳ ರೂಪದಲ್ಲಿ ಚಿತ್ರಿಸಿರುವುದನ್ನು ನಾವು ಕಾಣಬಹುದು.

ಅಂಬೇಡ್ಕರರ ರಾಜಕೀಯ ೧೯೪೭ರವರೆಗೆ ದೇಶದಲ್ಲಿ ಪ್ರಭಾವಶಾಲಿಯಾಗಿದ್ದ ಗಾಂಧಿಯವರ ತಾತ್ವಿಕ ಹಾಗೂ ಸಾಂಸ್ಕೃತಿಕ ರಾಜಕಾರಣಕ್ಕಿಂತ ಭಿನ್ನವಾಗಿತ್ತು. ''ಗಾಂಧಿ ದೇಶದ ಕೇಂದ್ರ ಶಕ್ತಿಯಾಗಿ ಪರಿಣಮಿಸಿದ್ದರು. ಗಾಂಧಿ ಅಭಿಪ್ರಾಯವನ್ನು ವಿರೋಧಿಸುವವರು ಅನೇಕರಿದ್ದರು. ಅವರೆಲ್ಲರನ್ನು ತೀವ್ರಗಾಮಿಗಳೆಂದು ಪರಿಗಣಿಸಲಾಗುತ್ತಿತ್ತು. ಅದರಲ್ಲೂ ನಿರ್ದಿಷ್ಟವಾಗಿ ಹರಿಜನ ಪ್ರಶ್ನೆಯನ್ನು ಅವರು ನಿರ್ವಹಿಸಿದ ರೀತಿ ಗಂಭೀರ ವಿಶ್ಲೇಷಣೆಗೆ ಅರ್ಹವಾದದ್ದು ಗಾಂಧಿ ರೂಪಿಸಿದ ಹರಿಜನ ನಾಯಕತ್ವ ಗಾಂಧಿಯ ತದ್ರೂಪವಾಗಿರಲಿಲ್ಲ. ಈ ನಾಯಕರನ್ನು ರೂಪಿಸಿದ ರಾಜಕೀಯ ಮನೋವೈಜ್ಞಾನಿಕ ಅಂಶಗಳು ಒಂದು ಹೊಸ ಬಗೆಯ ರಾಷ್ಟ್ರೀಯ, ರಾಜಕೀಯ ಒತ್ತನ್ನು ತಂದುಕೊಟ್ಟವು. ಆದರೆ, ಸಾಮಾಜಿಕ ಸಾಂಸ್ಕೃತಿಕ ಪ್ರಶ್ನೆಗಳನ್ನು ಕುರಿತಂತೆ ಅಲ್ಲಿ ಮೌನವಿತ್ತು.''[೫೦]

''ಇತ್ತೀಚೆಗೆ ದಲಿತರ ಮೇಲೆ ನಡೆಯುತ್ತಿರುವ ಹಲ್ಲೆಗಳನ್ನು ಅಧ್ಯಯನ ಮಾಡಿದಾಗ ಎರಡು ವಿಧಾನಗಳನ್ನು ಸ್ಪಷ್ಟವಾಗಿ ಗುರುತಿಸಬಹುದು. ಮೊದಲನೆಯದು ಗ್ರಾಮೀಣ ಸಮಾಜದ ನ್ಯಾಯ ಕಲ್ಪನೆಗೆ ಸಂಬಂಧಪಟ್ಟಿದ್ದು, ಎರಡನೆಯದು ಸಾಂಪ್ರದಾಯಿಕ ಸಮಾಜ ನೀಡಲು ಒಪ್ಪದಿದ್ದ ಹೊಸ ಹಕ್ಕುಗಳನ್ನು ಪಡೆಯಲು ದಲಿತರು ನಡೆಸಿದ ಪ್ರಯತ್ನ ಹಾಗೂ ಅದರ ಪರಿಣಾಮಗಳು.

ದಲಿತ ಗುಂಪು ಅಥವಾ ವ್ಯಕ್ತಿಯ ನಡವಳಿಕೆ ಸಾಂಪ್ರದಾಯಿಕವಾಗಿ ಒಪ್ಪಿತವಾದ ನೈತಿಕತೆ, ಪ್ರೀತಿ, ಲೈಂಗಿಕತೆ ಹಾಗೂ ನಡವಳಿಕೆಗೆ ವಿರುದ್ಧವಾಗಿದ್ದಾಗ ಅಥವಾ ಅದನ್ನು ಪ್ರಶ್ನಿಸಿದಾಗ ಹಿಂದೂ ಸಮಾಜ ಅದನ್ನು ನೈತಿಕ ನಿಯಮಗಳ ಉಲ್ಲಂಘನೆ ಎಂದೇ ಪರಿಗಣಿಸಿ, ತೀವ್ರವಾದ ಶಿಕ್ಷೆಯನ್ನು ವಿಧಿಸುತ್ತದೆ.

ಹಿಂದೂ ಸಮಾಜದ ನ್ಯಾಯ ಪರಿಕಲ್ಪನೆಗಳು ಮೂಲತಃ ತೀವ್ರವಾದ ಶಿಕ್ಷೆಯನ್ನು ವಿಧಿಸುತ್ತದೆ. ಹಿಂದೂ ಸಮಾಜದ ನ್ಯಾಯ ಪರಿಕಲ್ಪನೆಗಳು ಮೂಲತಃ ಜಾತಿ ವ್ಯವಸ್ಥೆಯೊಂದಿಗೆ ತಳುಕು ಹಾಕಿಕೊಂಡಿವೆ. ನ್ಯಾಯದ ಸ್ವರೂಪ ಇಡೀ ಹಳ್ಳಿಯ ಕೇಂದ್ರಪ್ರಜ್ಞೆಯ ಮೇಲೆ ಅವಲಂಬಿತವಾಗಿರುತ್ತದೆ. ಇದನ್ನು ಮೇಲ್ಜಾತಿಯವರ ಪ್ರಶ್ನಾತೀತ ಆಳ್ವಿಕೆ ಎಂದೂ ಹೇಳಬಹುದು.

ಚಾರಿತ್ರಿಕ ಖಚಿತತೆಯಿಂದ ಹೇಳಬೇಕೆಂದರೆ ದಲಿತ ಸಾಹಿತ್ಯ, ಎಪ್ಪತ್ತರ ದಶಕದ ಮಧ್ಯಭಾಗದಲ್ಲಿ ದೇವನೂರು ಮಹಾದೇವರ ಕಥಾ ಸಾಹಿತ್ಯ ಹಾಗೂ ಸಿದ್ದಲಿಂಗಯ್ಯನವರ ಕಾವ್ಯದ ಮೂಲಕ ತನ್ನ ಪ್ರಭಾವಶಾಲಿ ಅಸ್ತಿತ್ವವನ್ನು ಮನದಟ್ಟು ಮಾಡಿಕೊಟ್ಟಿತು. ಕನ್ನಡ ಸಾಹಿತ್ಯ ಜಗತ್ತು ತಕ್ಷಣವೇ ಹೊಸ ಜಗತ್ತಿನ ಅನುಭವವನ್ನು ಹಾಗೂ ಅಪೂರ್ವ ಶೈಲಿಯನ್ನು ಗುರುತಿಸಿತು.

ಸಾಹಿತ್ಯ ಸಮಾಜಶಾಸ್ತ್ರೀಯ ದೃಷ್ಟಿಯಿಂದಲೂ ಈ ಜನಾಂಗಕ್ಕೆ ಮುಂಚೆ ಕೇವಲ ಕೆಲವೇ ದಲಿತ ಲೇಖಕರಿದ್ದರೂ ಅವರನ್ನು ದಲಿತರೆಂದು ಕರೆಯಲಾಗುವುದಿಲ್ಲ. ಏಕೆಂದರೆ ಈ ಕ್ಷುದ್ರ ಯುವಜನತೆಯೊಂದಿಗೆ ಸಮಾನವೆನ್ನಬಹುದಾದ ಅಂಶಗಳು ಅವರ ಸಂವೇದನೆಯಲ್ಲಿದ್ದದ್ದು ತುಂಬ ಕಡಿಮೆ.

ವಿಸ್ತಾರವಾದ ಹಿಂದೂ ಸಮಾಜ ದಲಿತ ಜಗತ್ತಿನ ವಿಶಾಲ ಒಳ ಆವರಣದಲ್ಲಿ ಪುನರ್ ಸೃಷ್ಟಿಯಾಗುತ್ತದೆ. ದಮನಕ್ಕೊಳಗಾದವರಿಗೆ ಕೂಡ ತಮ್ಮದೇ ಆದ ನಿಗೂಢ ಜಗತ್ತೊಂದಿದ್ದು ಅದು ಅವರ ಸಾಹಿತ್ಯಕ್ಕೆ ವರ್ಣರಂಜಿತ ನೆಲೆಯನ್ನು ಒದಗಿಸುತ್ತದೆ.

ಸಿದ್ದಲಿಂಗಯ್ಯ, ಮುಳ್ಳೂರು ನಾಗರಾಜ, ಮೊಗಳ್ಳಿ ಗಣೇಶ, ಅರವಿಂದ ಮಾಲಗತ್ತಿ, ಮ.ನ.ಜ. ಮುನಿವೆಂಕಟಪ್ಪ, ಗಂಗಾರಾಂ ಚಂಡಾಲ, ಚಿನ್ನಸ್ವಾಮಿ ಹಾಗೂ ಇಂದೂಧರ ಹೊನ್ನಾಪುರ ಈ ಸಾಮಾಜಿಕ ಕ್ರೋಧದ ಮಾದರಿಗೆ ಸೇರುತ್ತಾರೆ. ಆರಂಭದಲ್ಲಿ ಈ ಮಾದರಿಯ ಬರವಣಿಗೆಯ ಸ್ವರೂಪ ಹಾಗೂ ಶೈಲಿಯ ಬಳುಕನ್ನು ರೂಪಿಸಿದ್ದು ಸಿದ್ದಲಿಂಗಯ್ಯನವರ ಕಾವ್ಯ ಹಾಗೂ ಅದು ಈಗಲೂ ಶಕ್ತವಾಗಿ ಮುಂದುವರಿದಿದೆ.

ಕಥಾ ಸಾಹಿತಿಗಳಾದ ಮೊಗಳ್ಳಿ ಗಣೇಶ, ಅರವಿಂದ ಮಾಲಗತ್ತಿ ಹಾಗೂ ಮ.ನ.ಜ. ಈ ಪಂಥವನ್ನು ಅವರ ಅರ್ಥಪೂರ್ಣ ಒಳನೋಟಗಳಿಂದ ಶ್ರೀಮಂತಗೊಳಿಸಿದರು. ಹಾಗೂ ಸಿದ್ದಲಿಂಗಯ್ಯನವರಿಂದ ಆರಂಭವಾದ ಈ ಪ್ರಭಾವಶಾಲಿ ಮಾದರಿಗೆ ಹೊಸ ಪ್ರಭೆಯನ್ನು ತಂದುಕೊಟ್ಟರು.''[೫೧]

ಈ ಲೇಖಕರ ಅಭಿಪ್ರಾಯವನ್ನು ಸೂಕ್ಷ್ಮವಾಗಿ ಗಮನಿಸಿದಾಗ ಮೇಲ್ಕಂಡ ಅನೇಕ ಲೇಖಕರು ತಮ್ಮ ಕತೆಗಳಲ್ಲಿ ಪ್ರತಿಯೊಂದು ಸಂದರ್ಭದಲ್ಲಿಯೂ ದಲಿತರ ಬಗ್ಗೆ ಅವರ ಶೋಷಣೆಯ ಬಗ್ಗೆ ಮತ್ತು ಪ್ರತಿಭಟನೆಯ ಪ್ರೇರೇಪಣೆಗಳನ್ನು ತಮ್ಮ ಕತೆಗಳಲ್ಲಿ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ತೋರಿಸಿ ಕೊಟ್ಟಿರುವುದನ್ನು ಕಾಣುತ್ತೇವೆ.

ಇಂದು ವ್ಯಾಪಕವಾಗಿ ಬಳಕೆಗೊಳ್ಳುತ್ತಿರುವ 'ಹಿಂದುಳಿದ ವರ್ಗ' ಮತ್ತು 'ದಲಿತ' ಎಂಬ ಪಾರಿಭಾಷಿಕ ಶಬ್ದಗಳು ಸದ್ಯದ ಭಾರತದ ಎರಡು ಬೃಹತ್ ಜನ ಸಮುದಾಯಗಳನ್ನು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ನೆಲೆಯಲ್ಲಿ ವಿಭಜಿಸಿ ಗುರುತಿಸಿಕೊಡುವಲ್ಲಿ ನೆರವಾಗುವಂಥವು ಚಾರಿತ್ರಿಕ ಕಾಲಘಟ್ಟದ ವಿಷಮ ಪರಿಸ್ಥಿತಿಗಳ ಕಾರಣವಾಗಿ ಉಂಟಾದ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸ್ಥಿತ್ಯಂತರಗಳು ಈ ಬಗೆಯ ಸಂಕೀರ್ಣ ವ್ಯವಸ್ಥೆಗೆ ಅನುವು ಮಾಡಿಕೊಟ್ಟವು.

"ಹಿಂದುಳಿದ ವರ್ಗಗಳ ಹಾಗೂ ದಲಿತ ಚಳುವಳಿಗಳನ್ನು ಕುರಿತು ಚಾರಿತ್ರಿಕ ನೆಲೆಯಲ್ಲಿ ವಿವೇಚಿಸುವುದು ಅನಿವಾರ್ಯ. ಈ ಸಮಸ್ಯೆಯನ್ನು ಬಗೆಹರಿಸಲು ಪ್ರಯತ್ನಿಸಿದ ಗೌತಮ ಬುದ್ಧನ ನಂತರವೂ, ಅಂದರೆ ಸುಮಾರು ೧೫೦೦ ವರುಷಗಳ ತರುವಾಯವೂ ಈ ಸಮಸ್ಯೆ ಹಾಗೆಯೇ ಉಳಿದಿದೆಯೆಂಬುದು ಭಾರತದ ಪ್ರಸ್ತುತ ಸಾಮಾಜಿಕ ಪರಿಸ್ಥಿತಿಗೆ ಹಿಡಿದ ಕನ್ನಡಿಯಾಗಿದೆ. ಮೊದಲ ಸಾಮಾಜಿಕ ಕ್ರಾಂತಿ ಸಿಂಧೂ ನಾಗರಿಕತೆ ಅವಧಿಯಲ್ಲೆ ಹುಟ್ಟಿಕೊಂಡಿತೆಂಬುದು ದಸ್ಯು ಅಥವಾ ದಾಸರಂಥಾ ಹಿಂದುಳಿದ ಬುಡಕಟ್ಟು ಜನಾಂಗಗಳು ಜೀತಪದ್ಧತಿಯ ವ್ಯಾಪ್ತಿಗೊಳಪಟ್ಟು ಗುಲಾಮ ಸಮಾಜ ವ್ಯವಸ್ಥೆಯಲ್ಲಿ ನಲುಗಿ ಹೋದುದು ಪ್ರತಿಭಟನೆ ಮತ್ತು ರಕ್ತಪಾತದ ನಂತರ ನಾಶಗೊಂಡುದು ಚರಿತ್ರೆಯಲ್ಲಿ ದಾಖಲಾಗಿದೆ.

ಕ್ರಿ.ಶ. ೭ನೇ ಶತಮಾನದ ಆರಂಭದ ವೇಳೆಗಾಗಲೇ ಭಾರತದಲ್ಲಿ ಜಾತಿ ವ್ಯವಸ್ಥೆಯ ಸರ್ವ ಲಕ್ಷಣಗಳೂ ತೋರಿ ಬಂದದ್ದು ಶೂದ್ರ ಪಂಗಡಗಳು ಅಥವಾ ಹಿಂದುಳಿದ ಪಂಗಡಗಳು ಜಾತಿ ವ್ಯವಸ್ಥೆಯ ಅವಿಭಾಜ್ಯ ಅಂಗಗಳೆನಿಸಿದ್ದವು. ಜಾತಿ ವ್ಯವಸ್ಥೆಯ ಬಿಗಿತನ ಹೆಚ್ಚತೊಡಗಿದಂತೆ ಅಸ್ಪೃಶ್ಯರ ಸಂಖ್ಯೆಯೂ ಅಧಿಕಗೊಂಡಿದುದು ಗಮನಾರ್ಹ. ಇದರೊಂದಿಗೆ ಶೋಷಣೆ ಮತ್ತು ದೌರ್ಜನ್ಯಗಳೂ ಹೆಚ್ಚಾದವು.''[೫೨]

ಈ ಅಭಿಪ್ರಾಯಗಳನ್ನು ಕೂಲಂಕಶವಾಗಿ ನೋಡಿದಾಗ ಏಳನೆಯ ಶತಮಾನ ಪ್ರಾರಂಭವಾಗುವ ಸಂದರ್ಭದಲಿಯೇ ನಮ್ಮ ದೇಶದಲ್ಲಿ ಜಾತಿ ವ್ಯವಸ್ಥೆ, ಅಸ್ಪೃಶ್ಯತೆ, ಶೋಷಣೆ ಮುಂತಾದವುಗಳನ್ನು ಎಲ್ಲ

ಲೇಖಕ ಮಹನೀಯರುಗಳು ತಮ್ಮ ಲೇಖನಗಳಲ್ಲಿ ಮನೋಜ್ಞವಾಗಿ ಚಿಂತನೆ ನಡೆಸಿರುತ್ತಾರೆ. ಆದರೆ ಸ್ವಾತಂತ್ರ್ಯಾನಂತರ ಅಂಬೇಡ್ಕರ್‌ರವರು ತಮ್ಮ ಲೇಖನಗಳ ಮೂಲಕ ಈ ಎಲ್ಲ ಜನರಿಗೆ ಭದ್ರತೆಯನ್ನು ಹಾಕಿಕೊಟ್ಟರು.

"ಮಧ್ಯಕಾಲೀನ ಭಾರತದಲ್ಲಿ ಅರಬ್ಬರ ಮತ್ತು ಟರ್ಕರ ಪ್ರವೇಶವಾದ ಸಂದರ್ಭದಲ್ಲಿ ಜಾತಿ ಪದ್ಧತಿ ಒಡೆದು ಕಾಣುವಷ್ಟರ ಮಟ್ಟಿಗೆ ಇಲ್ಲಿ ಬೇರು ಬಿಟ್ಟಿದುದು ಮಾತ್ರವಲ್ಲದೆ ಅಸ್ಪೃಶ್ಯ ಜಾತಿಗಳಾಗಿ ಸಾಮಾನ್ಯ ಕೈಕಸುಬುದಾರ ಸಮುದಾಯಗಳು ಪರಿಗಣಿತವಾಗಿದ್ದವು.

ವಸಾಹತುಕಾಲೀನ ಭಾರತದಲ್ಲಿ ಜಾತಿ ವಿನಾಶದ ಅರಿವನ್ನು ವರ್ಗವಿನಾಶ ಮತ್ತು ಸ್ತ್ರೀವಿಮೋಚನೆಗಳ ನೆಲೆಯಲ್ಲಿ ಭಾರತೀಯ ಅಸ್ಪೃಶ್ಯ ಮತ್ತು ಇತರೆ ಹಿಂದುಳಿದ ವರ್ಗಗಳಲ್ಲಿ ಮೂಡಿಸುವ ಪರಿಣಾಮಕಾರಿ ಕೆಲಸಕ್ಕೆ ಕೈ ಹಾಕಿದವರೆಂದರೆ ಮಹಾತ್ಮ ಜ್ಯೋತಿ ಬಾಪುಲೆ ಮತ್ತು ಡಾ.ಬಿ.ಆರ್.ಅಂಬೇಡ್ಕರ್. ಭಾರತೀಯ ಅಸ್ಪೃಶ್ಯ ಮತ್ತು ಹಿಂದುಳಿದ ವರ್ಗಗಳನ್ನು ಅಬ್ರಾಹ್ಮಣವಾದಿ ಸಂಘರ್ಷಕ್ಕೆ ಯಶಸ್ವಿಯಾಗಿ ಸೆಳೆದವರಲ್ಲಿ ಈ ಈರ್ವರೇ ಪ್ರಮುಖರು.

"ವಿಚಾರವಂತರೂ ಅಭಿಪ್ರಾಯಪಡುವಂತೆ ದಲಿತರಿಗೆ ಶಿಕ್ಷಣ ದೊರೆತಾಗ ಬಿ.ಆರ್.ಅಂಬೇಡ್ಕರ್ ಕನಸಿನಂತೆ ರಾಷ್ಟ್ರದಲ್ಲಿ ಸಮಾನತೆ ಬರುತ್ತದೆ ಆವರೆಗೂ ಮೀಸಲಾತಿ ಮುಂದುವರೆಯುವುದು ಅವಶ್ಯ. ದಲಿತರು, ಶೋಷಿತರ ನೋವುಗಳಿಗೆ ಇತರೆ ವರ್ಗದವರು ಸ್ಪಂದಿಸುವ ವಾತಾವರಣ ನಿರ್ಮಾಣವಾಗಬೇಕಿದೆ. ಕಳೆದ ೫೩ ವರ್ಷಗಳಿಂದ ಮೀಸಲಾತಿ ವ್ಯವಸ್ಥೆ ಜಾರಿಯಲ್ಲಿದ್ದರೂ ದಲಿತರು ಗೌರವದಿಂದ ಬಾಳಲು ಸಾಧ್ಯವಾಗಿದೆಯೇ ಎಂಬುದರ ಬಗೆಗೆ ಸಮಾಜದ ಪ್ರತಿಯೊಬ್ಬರೂ ಆತ್ಮವಿಮರ್ಶೆ ಮಾಡಿಕೊಳ್ಳಬೇಕಿದೆ."[೫೩]

ದೇಶದ ಪ್ರಗತಿಯೆಂದರೆ ನಗರಗಳ ಪ್ರಗತಿ ಎಂದೋ ಅಥವಾ ಭಾರತೀಯರ ಪ್ರಗತಿ ಎಂದರೆ ನಗರವಾಸಿಗಳ ಪ್ರಗತಿ ಎಂದೋ ಭಾವಿಸಲಾಗಿರುವುದೋ ಭಾರತದ ಹಿನ್ನಡೆಗೆ ಮುಖ್ಯ ಕಾರಣವಾಗಿದೆ. ಶೇ ೭೩ಕ್ಕಿಂತ ಹೆಚ್ಚು ಜನರು ಭಾರತದ ಸಾವಿರಾರು ಗ್ರಾಮಗಳಲ್ಲಿ ವ್ಯವಸಾಯದಿಂದಲೇ ಬದುಕುತ್ತಿರುವ ಹೊತ್ತಿನಲ್ಲಿ ಭಾರತದ ಪ್ರಜಾಪ್ರಭುತ್ವಸರಕಾರ ಗ್ರಾಮೀಣ ಸ್ವರಾಜ್ಯಕ್ಕೆ ಹೆಚ್ಚು ಮಹತ್ವ ಕೊಡಬೇಕಿತ್ತು. ಆದರೆ ಸರ್ಕಾರ ಆ ರೀತಿಯಲ್ಲಿ ಮಹತ್ವ ಕೊಡದೇ ಇದ್ದುದರಿಂದ ರೈತರು ತಮ್ಮ ಸಂಕಟಗಳಿಂದ ಮುಕ್ತರಾಗಲು ತಮ್ಮನ್ನು ಸಂಘಟಿಸಿಕೊಳ್ಳಲು ಮುಂದಾದರು.

ಸಮಗ್ರವಾಗಿ ಭಾರತದ, ನಿರ್ದಿಷ್ಟವಾಗಿ ಕರ್ನಾಟಕದ ರೈತ ಚಳುವಳಿಗಳಿಗೆ ಈ ರೀತಿಯ ರೈತ ಸಂಘಗಳೇ ಸ್ಫೂರ್ತಿಯಾಯಿತು. ಬೇರೆ ಬೇರೆ ಅವಧಿಯಲ್ಲಿ ಬೇರೆ ಬೇರೆ ಸೈದ್ಧಾಂತಿಕ ಹಿನ್ನೆಲೆಯ ವಿವಿಧ ರೈತ ಸಂಘಟನೆಗಳು ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ಹೋರಾಟಗಳನ್ನು ನಡೆಸಿದ್ದರೂ ಅವುಗಳಿಗೆ ಒಂದು ರೀತಿಯ ಅಂತರ್ ಸಂಬಂಧಗಳು ಇದ್ದೇ ಇತ್ತು.

ಆರ್ಥಿಕ ಪ್ರಮುಖ ರಾಜಕೀಯವೆಂದೇ ರೈತ ಚಳುವಳಿಯಂಥ ಚಳುವಳಿಗಳನ್ನು ಪರಿಗಣಿಸಲಾಗಿದೆ. ಈ ಕಾರಣಗಳಿಂದ ಇಲ್ಲಿ ಜಾತಿ, ಭಾಷೆ, ಧರ್ಮ ಇತ್ಯಾದಿ ವಿಚಾರಗಳಿಂದ ಉದ್ಭವವಾಗುವ ಭಿನ್ನತೆಗಳು, ದ್ವೇಷ

ಸಾಧನೆಗಳು ಕಡಿಮೆ ಎಂದು ಅಭಿಪ್ರಾಯಪಡಲಾಗಿದೆ. ಶರದ್ ಜೋಶಿಯವರ ಮಹಾರಾಷ್ಟ್ರ ಶೇತ್ಕರಿ ಸಂಘಟನೆ ಮಹಾರಾಷ್ಟ್ರದ ಪ್ರಬಲವಾದ ರೈತ ಸಂಘಟನೆಯಾಗಿದೆ. ಆ ಸಂಘಟನೆಯ ಪ್ರಕಾರ "ಯಾರು ತನ್ನ ಭೂಮಿಯನ್ನು ಸ್ವತಃ ಉಳುತ್ತಾನೋ ಅವನೇ ರೈತ" ಆಗಿರುತ್ತಾನೆ. ಆದರೆ ಆ ಸಂಘಟನೆ ತನ್ನ ಅರ್ಥೈಸುವಿಕೆಯನ್ನು ಮುಂದುವರಿಸುತ್ತಾ "ಯಾರು ಕೃಷಿಯಿಂದಲೇ ಬದುಕುತ್ತಿದ್ದಾರೋ ಅವರೂ ರೈತರೇ" ಎಂದು ತನ್ನ ನಿಲುವನ್ನು ಸ್ಪಷ್ಟಪಡಿಸಲು ಪ್ರಯತ್ನಿಸಿದೆ.

ಮುಜಾಫರ್ ಅಸ್ಸಾದಿಯವರ ಶೇತ್ಕರಿ ಸಂಘಟನೆಯು 'ರೈತ' ಎನ್ನುವ ಪದವನ್ನು ಅರ್ಥೈಸುವಾಗ ದ್ವಂದ್ವಗಳನ್ನು ಉದ್ದೇಶಪೂರ್ವಕವಾಗಿಯೆ ಇಟ್ಟುಕೊಂಡಿದೆ ಎಂದು ವಿಶ್ಲೇಷಿಸುತ್ತಾರೆ.

ಈಗಾಗಲೇ ಕರ್ನಾಟಕದ ರೈತ ಚಳುವಳಿಯ ಮೇಲೆ ಗಮನಾರ್ಹವಾದ ಗ್ರಂಥಗಳು, ಲೇಖನಗಳು ಪ್ರಕಟವಾಗಿವೆ. ಪ್ರಕಟವಾದ ಗಮನಾರ್ಹವಾದ ಗ್ರಂಥಗಳು ಮುಖ್ಯವಾಗಿ ೧೯೭೦ ಮತ್ತು ೧೯೮೦ರ ದಶಕದ ನಂತರ ನಡೆದ ರೈತ ಚಳುವಳಿಗಳು ಸೈದ್ಧಾಂತಿಕತೆ ಹಾಗೂ ವಿವರಗಳನ್ನು ಒದಗಿಸುತ್ತದೆ. ವಿದ್ವಾಂಸರಾದ ಎಂ.ವಿ.ನಾಡಕರ್ಣಿಯವರು ೧೯೮೭ರಲ್ಲಿ ಪ್ರಕಟಿಸಿದ 'ಫಾರ್ಮರ್ಸ್' ಮೂಮೆಂಟ್ ಇನ್ ಇಂಡಿಯಾ, ಮುಜಾಫರ್ ಅಸ್ಸಾದಿಯವರು ೧೯೯೭ರಲ್ಲಿ ಪ್ರಕಟಿಸಿದ "ಪ್ರೆಸೆಂಟ್ ಮೂಮೆಂಟ್ ಇನ್ ಕರ್ನಾಟಕ (೧೯೮೦-೯೪) ಎನ್ನುವುದಾಗಿದೆ. ಈ ಹಿನ್ನೆಲೆಯಲ್ಲಿ ಜಿ.ರಾಜಶೇಖರ ಅವರು ೧೯೮೨ರಲ್ಲಿ 'ರುಜುವಾತು'ವಿನಲ್ಲಿ ಪ್ರಕಟಿಸಿದ ಲೇಖನ ಕೂಡ ರೈತ ಚಳುವಳಿಯನ್ನು ಅರ್ಥಮಾಡಿಕೊಳ್ಳಲು ಸಹಾಯವಾಗಿದೆ."[೫೪]

ಲಕ್ಷ್ಮಣ್ ತೆಲಗಾವಿಯವರು ಭಾರತ ದೇಶದಲ್ಲಿ ಹಾಗೂ ಅದರಲ್ಲೂ ಕರ್ನಾಟಕದಲ್ಲಿ ಶೇ.೮೦ರಷ್ಟಿರುವ ಗ್ರಾಮೀಣ ಪ್ರದೇಶಗಳಲ್ಲಿ ರೈತರು ತಮ್ಮ ಸಮಸ್ಯೆಗಳ ಬಗ್ಗೆ ದನಿ ಎತ್ತುವ ಪ್ರಮುಖ ಅಂಶಗಳನ್ನು ತಮ್ಮ ಲೇಖನದಲ್ಲಿ ತುಂಬಾ ಅರ್ಥವತ್ತಾಗಿ ವಿಶ್ಲೇಷಿಸಿರುವುದನ್ನು ಕಾಣಬಹುದಾಗಿದೆ.

ಹಾಗೆಯೇ ನಮ್ಮ ಸಣ್ಣಕತೆಗಳಲ್ಲಿ ದಲಿತ ಚಳುವಳಿ ಮತ್ತು ರೈತ ಚಳುವಳಿಗಳ ಪ್ರಭಾವವನ್ನು ನೋಡಬಹುದು. ಮೊದಲನೆಯದಾಗಿ ಬೆಸಗರಹಳ್ಳಿ ರಾಮಣ್ಣನವರ 'ಚಲುವನ ಪರಂಗಿ' ಗಿಡಗಳು ಕತೆಯನ್ನು ನೋಡಬಹುದು. ಈ ಕತೆಯು ಲೇಖಕರು ಹಳೇಬೀಡಿನಲ್ಲಿ ವೈದ್ಯನಾಗಿದ್ದಾಗ ರಷ್ಯದ ಮಹಾನ್ ಲೇಖಕರಲ್ಲಿ ಒಬ್ಬರಾದ 'Anteon Chekov'ರ ಮಾತೊಂದರಿಂದ ಪ್ರಭಾವಿತರಾಗಿ ತನ್ನ ಮನೆಯ ಸುತ್ತ ಇದ್ದ ಕಪ್ಪು ನೆಲದಲ್ಲಿ ನೆಟ್ಟು ಬೆಳೆಸಿದ ಇಪ್ಪತ್ತಾರು ಪರಂಗಿ ಸಸಿಗಳ ಹಿನ್ನೆಲೆಯಲ್ಲಿ ಮೂಡಿ ಬಂದದ್ದು ಎಂದು ಹೇಳಿದ್ದಾರೆ.

"ಸುಣ್ಣದ ಹಳ್ಳಿಯ ಮಾಧ್ಯಮಿಕ ಶಾಲೆ ಇತಿಹಾಸದಲ್ಲಿ ಬರೆದಿಡಬೇಕಾದಂಥ ಪ್ರಮುಖ ಘಟನೆ. ಇಲ್ಲಿ ಪೌಷ್ಠಿಕಾಂಶ ಯೋಜನೆಯ ದಿನಾಚರಣೆಯನ್ನು ಸದಾ ತಾಲ್ಲೂಕಿನ ಕೇಂದ್ರದಲ್ಲಿ ನಡೆಸುವುದರಿಂದ ನಿರೀಕ್ಷಿತ ಫಲ ದೊರೆಯುವುದಿಲ್ಲವೆಂದು, ಭಾರತದ ಜನಸಂಖ್ಯೆಯಲ್ಲಿ ಶೇಕಡ ೮೨ ಜನರು ಹಳ್ಳಿಗಳಲ್ಲಿ ವಾಸಿಸಿರುವುದರಿಂದ ಇವರಿಗಾಗಿಯೇ ರೂಪಿಸಿದ ಯೋಜನೆಯ ದಿನಾಚರಣೆ ಇಂತಹ ಕೆಲಸ ಸುಣ್ಣದ ಹಳ್ಳಿಯಂಥ ಹಳ್ಳಿಯಲ್ಲಿಯೇ ನಡೆಯಬೇಕೆಂದು ಬಿ.ಡಿ.ಓ ಸಾಹೇಬರು ತೀರ್ಮಾನಿಸಿದ್ದರು.

ಈ ಯೋಜನೆಯನ್ನು ಪ್ರಾರಂಭಿಸಿ ಮೂರು ವರ್ಷಗಳಾಗಿದ್ದರೂ ಶಾಲೆಯ ಸುತ್ತಮುತ್ತಲಿರುವ ಒಂದೂವರೆ ಎಕರೆ ಭೂಮಿಯಲ್ಲಿ ಒಂದು ಹಣ್ಣಿನ, ಒಂದು ಹೂವಿನ ಗಿಡ ಗಂಟೆ ಇಲ್ಲದಿದ್ದರೂ, ಯಥೇಚ್ಛವಾಗಿ ಮುಳ್ಳಿನ ಗಿಡಗಳು, ರೋಜಾರಗಿಡದ ಪೊದೆಗಳು ಬೆಳೆದು ನಿಂತಿದ್ದವು."[೫೫]

"ಇವೆಲ್ಲವನ್ನು ವಿದ್ಯಾರ್ಥಿಗಳಿಂದ ಕೀಳಿಸಿ, ಶಾಲೆಯ ಸುತ್ತಮುತ್ತಲಿನ ವಾತಾವರಣವನ್ನು ಶುಚಿಗೊಳಿಸುವುದರಲ್ಲಿ ಬಹಳ ಆಸಕ್ತಿಯನ್ನು ಉಪಾಧ್ಯಾಯರುಗಳಿಗಿಂತ ಶಾಲಾಭಿವೃದ್ಧಿ ಸಮಿತಿಯ ಅಧ್ಯಕ್ಷರಾದ ಗೋವಿಂದ ಸ್ವಾಮಿಯವರು ವಹಿಸಿದ್ದರು.

ಸುಣ್ಣದ ಹಳ್ಳಿಯಲ್ಲಿ ಜರುಗಲಿರುವ ಪೌಷ್ಟಿಕಾಂಶ ಯೋಜನೆಯನ್ನು ಕುರಿತ ಸಮಾರಂಭ ಇಡೀ ಹಳ್ಳಿಯ ಮತ್ತು ಅಕ್ಕಪಕ್ಕದ ಹಳ್ಳಿಗರ ಗಮನವನ್ನು ಸೆಳೆದು ಕುತೂಹಲವನ್ನು ಕೆರಳಿಸಿತ್ತು. ಆ ಸಮಾರಂಭಕ್ಕೆ ಶಾಲೆಯ ವಿದ್ಯಾರ್ಥಿಗಳು ಉತ್ಸುಕರಾಗಿ ಶಾಲೆಯ ಬಾಗಿಲುಗಳಲ್ಲಿ ಮಾವಿನತೋರಣ ಕಟ್ಟಿ ಆವರಣವನ್ನು ಗುಡಿಸಿ, ತೊಳೆದು ಇಲ್ಲಿಯೂ ಇನ್ನು ಮುಂದೆ ಮನುಷ್ಯ ವರ್ಗದ ಮುಂದಿನ ಪೀಳಿಗೆ ಕುಳಿತು ವಿದ್ಯೆಯನ್ನು ಕಲಿಯಬಹುದು ಎನ್ನುವ ಅಭಿಪ್ರಾಯವನ್ನು ಮೂಡಿಸಿದ್ದರು."[೫೬]

"ಭಿತ್ತಿಪತ್ರಗಳಲ್ಲಿ ಸೊಗಸಾಗಿ ಮುದ್ರಿಸಲಾದ ಪರಂಗಿಹಣ್ಣು, ಮೊಟ್ಟೆ, ಹಾಲು ಮತ್ತು ಇತರ ಪೌಷ್ಟಿಕ ಆಹಾರ ಪದಾರ್ಥಗಳನ್ನು ಹುಡುಗ ಹುಡುಗಿಯರು ನೋಡಿದಾಗ ಅವರ ಬಾಯಲ್ಲಿ ನೀರು ಕಿತ್ತುಕೊಂಡಿತು. ಈ ಗುಂಪಿಗೆ ಸ್ವಲ್ಪ ದೂರದಲ್ಲಿ ಹದಿಮೂರು ವರ್ಷ ವಯಸ್ಸಿನ ಎಣ್ಣೆಗೆಂಪು ಬಣ್ಣದ ಚೆನ್ನಾಗಿ ಬೆಳೆದ ಓರ್ವ ಹುಡುಗ, ಆಸೆಯ ಕಣ್ಣುಗಳಿಂದ; ಏನೋ ಇವತ್ತು ತುಂಬ ಮಹತ್ವದ ಕೆಲಸ ನಡೆಯಬಹುದು ಎಂದು ನಡೆಯುತ್ತಿರುವ ಸಿದ್ಧತೆಗಳನ್ನು ನೋಡುತ್ತಾ ನಿಂತಿದ್ದ.

ಇವನ ಹೆಸರು ಚೆಲುವ ಅಂತ. ಸುಣ್ಣದ ಹಳ್ಳಿಯವನು. ಇವರಪ್ಪನ ಹೆಸರು ಮೂಗೂರ; ಅವ್ವನ ಹೆಸರು ಕಲ್ಲಕ್ಕ; ಇವನ ಅಣ್ಣನ ಹೆಸರು ಸಣ್ಣ; ಅಕ್ಕನ ಹೆಸರು ಚಿಕ್ಕತಾಯಿ ಎಂದು. ಜಾತಿಯಲ್ಲಿ ಹರಿಜನ.

ಚಲುವ ಚೂಟಿಯಾದ ಹುಡುಗ. ಹಳ್ಳಿಗಾಡಿನ ಶಾಲೆಯಲ್ಲಿದ್ದರೂ ಕಲಿಯಬೇಕೆಂಬ ಉತ್ಕಟ ಆಸೆ ಅವನ ಹೃದಯದಲ್ಲಿ ತುಂಬಿದ್ದುದರಿಂದ ಅವನಿರುವ ಏಳನೇ ತರಗತಿಯನ್ನು ಮೀರಿಸಿ ಜ್ಞಾನ ಅವನಲ್ಲಿ ಬೆಳೆದಿತ್ತು. ಹೊಸ ವಿಷಯ ಕೇಳಿದಾಗ, ಕಂಡಾಗ, ವಿವರವಾಗಿ ತಿಳಿದುಕೊಳ್ಳಬೇಕೆಂಬ ಆದಮ್ಯ ಆಸೆ ಇವನ ಎಳೆಯ ಹೃದಯದಲ್ಲಿ ಮೂಡಿ ನಿಂತಿತ್ತು. ಈ ಆಸೆಯೇ ಚಲುವ ಪೌಷ್ಟಿಕಾಂಶದ ಭಿತ್ತಿ ಪತ್ರಗಳನ್ನು ಇಷ್ಟು ಕುತೂಹಲದಿಂದ ನೋಡುತ್ತಾ ನಿಂತುಕೊಳ್ಳಲು ಮಾತ್ರವಲ್ಲ ಇವುಗಳಲ್ಲಿರುವ ವಿಷಯಗಳೆಲ್ಲವನ್ನು ಓದಿ ಮನನ ಮಾಡಿಕೊಳ್ಳಲು ಮತ್ತು ತಿಳಿಸಿರುವ ವಿಷಯಗಳೆಲ್ಲ ಕಾರ್ಯರೂಪಕ್ಕೆ ಬಂದರೆ ಹೇಗಿರುತ್ತದೆ ಎಂಬುದನ್ನು ಕಲ್ಪಿಸಿಕೊಂಡು ಆನಂದಿಸಲು ಕಾರಣವಾಗಿತ್ತು."[೫೭]

"ನಮ್ಮ ಪವಿತ್ರವಾದ ನಾಡಿನ ನೆಲೆ ಬಂಜೆ ಅಲ್ಲ ಇಲ್ಲಿ ಹರಿಯುವ ನೀರು ವಿಷವಲ್ಲ ಎಂಬ ಸುಬ್ಬಣ್ಣನವರ ನುಡಿಗಳು ಚಲುವನ ಗುಂಡಿಗೆಯಲ್ಲಿ ನಾಟಿಕೊಂಡವು. ಪರಂಗಿ ಸಸಿಗಳನ್ನು, ತಮ್ಮ ಮನೆಯ ಸುತ್ತ ಪಾಳುಬಿದ್ದಿರುವ ಭೂಮಿಯಲ್ಲಿ ಮನೆಗೆ ಮೂವತ್ತು ನಲವತ್ತು ಮಾರು ದೂರದಲ್ಲಿ ಹರಿಯುತ್ತಿರುವ ವಿಶ್ವೇಶ್ವರಯ್ಯ ನಾಲೆಯ ನೀರನ್ನು ಉಪಯೋಗಿಸಿಕೊಂಡು ಬೆಳೆಯಬೇಕೆಂದು ಮನಸ್ಸು ಮಾಡಿ, ತನ್ನ ಅವ್ವ, ಅಕ್ಕ, ಅಣ್ಣ ಇವರೆಲ್ಲರನ್ನೂ ಒಪ್ಪಿಸಿದ.

ಮಾರನೆಯ ದಿನ ಬೆಳಗಾಗುವುದೇ ತಡ ಚಲುವ ತನ್ನ ಅಣ್ಣ ಸಣ್ಣನೊಡನೆ ಅಣ್ಣೂರ ತೋಟಗಾರಿಕೆ ಕ್ಷೇತ್ರದಲ್ಲಿ ಹಾಜರಾದ. ಸುಬ್ಬಣ್ಣನವರಿಂದ ಹದಿನಾರು ಪರಂಗಿ ಸಸಿಗಳನ್ನು ಪಡೆದು, ಗುಂಡಿಗಳನ್ನು ಹೇಗೆ

ತೆಗೆಯಬೇಕು? ಎನ್ನುವ ವಿವರಗಳನ್ನು ಪಡೆದು; ತೋಟಗಾರಿಕೆಯ ಬಗ್ಗೆ ಪುಸ್ತಕವನ್ನು ತೆಗೆದುಕೊಂಡು ಬಂದ. ಹೇಗೆ ಗಿಡ ನೆಡಬೇಕು ಎಷ್ಟು ನೀರನ್ನು ಎಂದೆಂದು ಹಾಕಬೇಕು ಎನ್ನುವ ವಿವರಗಳನ್ನು ಪಡೆದು ತೋಟಗಾರಿಕೆಯ ಬಗ್ಗೆ ಪುಸ್ತಕವನ್ನು ತೆಗೆದುಕೊಂಡು ಬಂದ.

ಪರಂಗಿ ಸಸಿಗಳು ಮತ್ತು ಪುಸ್ತಕ ಚೆಲುವನಿಗೆ ಬಹಳ ಸುಲಭವಾಗಿ ದೊರಕಿದವು. ಚಲುವನ ಅಪ್ಪ ಮೂಗೂರ ತನ್ನ ಮೂವರೂ ಮಕ್ಕಳೂ ಮನೆ ಸುತ್ತ ಗುಂಡಿಗಳನ್ನು ತೆಗೆಯಲು ಆರಂಭಿಸಿದಾಗ ಈ ಮೂವರೂ ಸೇರಿ ಎಲ್ಲಿ ಇರುವ ಗುಡಿಸಲನ್ನು ಕೆಡವಿಬಿಟ್ಟಾರೋ ಎಂದು ಗಾಬರಿಯಾದ."[೫೮]

"ಮೂಗೂರಿನ ಮನೆಯ ಸುತ್ತ ಗುಂಡಿಗಳಲ್ಲಿ ನಲಿಯುತ್ತ ನಿಂತ ಹದಿನಾರು ಪರಂಗಿ ಸಸಿಗಳನ್ನು ಮತ್ತು ಅವುಗಳ ಸುತ್ತ ಇದ್ದ ಬೇಲಿಯನ್ನು ಕಂಡು; ಇಡೀ ಸುಣ್ಣದ ಹಳ್ಳಿಯ ಜನಕ್ಕೆ ಒಂದು ಬಗೆಯ ಆಶ್ಚರ್ಯವೇ ಆಗಿಯೇ ಹೋಯಿತು. ಜನರ ಕುಹಕ ನುಡಿಗಳಿಗಾಗಲಿ, ಶಹಬಾಸ್‌ಗಿರಿಗಾಗಲಿ, ಗಿಡಗಳು ಉದ್ಭವಿಸಿ ಬೆಳೆದು, ಫಲ ಕೊಡುವುದಿಲ್ಲಾ; ಸತತ ಪರಿಶ್ರಮದಿಂದ ಮಾತ್ರ ಗಿಡಗಳನ್ನು ಬೆಳೆಯಲು ಸಾಧ್ಯ ಎಂಬುದನ್ನು ಆಗಾಗ್ಗೆ ಕೈತೋಟಕ್ಕೆ ಭೇಟಿಕೊಟ್ಟಾಗ ಸಲಹೆ ಕೊಡುತ್ತಿದ್ದ."[೫೯]

"ಎರಡೂವರೆ ತಿಂಗಳುಗಳು ಕಳೆದವು. ಸಸಿಗಳು ಸೊಗಸಾದ ಗಿಡಗಳಾಗಿ ನಿಂತವು. ಚಲುವನಿಗೆ ನಸು ಹಳದಿ ಬಣ್ಣದ ತುದಿಯಲ್ಲಿ ಚೂಪಾಗಿರುವ, ಕಿರುಬೆರಳು ಗಾತ್ರದ ಮೊಗ್ಗುಗಳು ಅರಳಿ ನಿಂತಿವೆ, ಕಬ್ಬಿನ ಹಾಲು ಕುಡಿದಷ್ಟು ಖುಷಿ ಆಯಿತು. ಕಣ್ಣುಗಳನ್ನು ಹಿಗ್ಗಲಿಸಿ, ಹಿಗ್ಗಲಿಸಿ ನೋಡಿದ. ತಾಯಿ ಮಗ ಇಬ್ಬರೂ ಗಿಡಗಳು ಚೆನ್ನಾಗಿ ಬಂದಿರುವುದನ್ನು ಕಂಡು ಖುಷಿಪಟ್ಟರು.

ಮೂಗೂರಿನಂಥ ಮೂವತ್ತು ಬಡ ರೈತರು ಗೋವಿಂದಸ್ವಾಮಿಗೆ ಸೇರಿದ ಇಪ್ಪತ್ತಾರು ಎಕರೆ ಗದ್ದೆಯನ್ನು ಗುತ್ತಿಗೆ ಮಾಡುತ್ತಿದ್ದರು. ಸರ್ಕಾರ ಶಾಲೆಗೆ ಕೊಟ್ಟ ಪಂಪುಸೆಟ್ಟನ್ನು ತನ್ನ ತೋಟದ ಬಾವಿಗೆ ಅಳವಡಿಸಿಕೊಂಡ ಗೋವಿಂದಸ್ವಾಮಿ ಕಾಲುವೆ ಕೆಳಗಿನ ಭೂಮಿಯನ್ನು ಹೇಗೆ ಗುತ್ತಿಗೆಗೆ ಕೊಟ್ಟ ಎಂದು ಕೆಲವರಿಗೆ ಆಶ್ಚರ್ಯವಾಗಬಹುದು. ಫಲವತ್ತಾದ ಮೂವತ್ತಎರಡು ಎಕರೆ ಭೂಮಿಯಲ್ಲಿ ಗೋವಿಂದಸ್ವಾಮಿಯೇ ವ್ಯವಸಾಯ ಮಾಡಿಸಿ ಈ ಇಪ್ಪತ್ತಾರು ಎಕರೆ ಮೊದಲಿನಿಂದಲೂ ಕಲ್ಲುಬಿದ್ದು ಹೋಗಿದ್ದುದರಿಂದ ಮತ್ತು ಸರಿಯಾಗಿ ಬೆಳೆ ಬರುತ್ತಿಲ್ಲವಾದುದರಿಂದ ಬಡ ಗೇಣಿದಾರರಿಗೆ ನೀಡಿದ್ದರೆ ಹೊರತು ಇನ್ನಾವ ಕಾರಣದಿಂದಲೂ ಅಲ್ಲ. ಇದು ಸುಮಾರು ವರ್ಷಗಳಿಂದಲೂ ನಡೆದುಕೊಂಡು ಬಂದಿತ್ತು. ಭೂಸುಧಾರಣೆಯ ಶಾಸನದ ಪ್ರಕಾರ ಇವರೆಲ್ಲ ಸರ್ಕಾರಕ್ಕೆ ತಾವು ಇಂಥವರ ಭೂಮಿಯನ್ನು 'ಗೇಣಿ' ಮಾಡುತ್ತಿರುವುದಾಗಿ ಘೋಷಣೆ ಮಾಡಿಕೊಳ್ಳಲು ಹಕ್ಕಿದ್ದರೂ ಯಾರೂ ಇದನ್ನು ಮಾಡುವ ಗೋಜಿಗೆ ಹೋಗಲಿಲ್ಲ. ಕಾರಣ ಗೋವಿಂದ ಸ್ವಾಮಿಯೇ "ಒಂದು ಊರಿನಲ್ಲಿರುವ ನಾವು ಭೂ ಪಂಚಾಯಿತಿಗಳ ಮೆಟ್ಟಿಲು ಹತ್ತಿ ಗುದ್ದಾಡುವುದು ಬೇಡ, ನಾವೇ ಕುಳಿತುಕೊಂಡು ತೀರ್ಮಾನ ಮಾಡಿಕೊಳ್ಳುವ, ಉಳುವವನಿಗೆ ಭೂಮಿ ಎಂದು ಕಾನೂನು ಮಾಡಿರುವುದರಿಂದ ಹಾಗೂ ಸರ್ಕಾರ ಬಡವರ ಪರ ಇರುವಾಗ ನಮ್ಮಂಥವರ 'ಆಟ' ನಡೆಯೋದಿಲ್ಲ" ಎಂದು ಎಲ್ಲರಿಗೂ ಸಿಹಿ ಮಾತುಗಳಿಂದ ಹಕ್ಕು ಚಲಾಯಿಸಿದಂತೆ ಲಗಾಮು ಹಾಕಿದ್ದರು."[೬೦]

"ತಾವು ಹುಟ್ಟಿದುದೇ ದುಡಿಯುವುದಕ್ಕೆಂದು ಅಚಲವಾಗಿ ನಂಬಿರುವ ಬಡವರು, ವೈಜ್ಞಾನಿಕ ಸಲಹೆಗಳನ್ನು ಪಡೆದು ಮೊದಲಿಗಿಂತಲೂ ನಾಲ್ಕು ಪಟ್ಟು ಕಷ್ಟಪಟ್ಟು ದುಡಿದುದರಿಂದ, ಸುತ್ತಮುತ್ತಲ ಜಮೀನಿನವರ ಕಣ್ಣು ಕುಕ್ಕುವಂತೆ ಭತ್ತದ ಬೆಳೆ ತಲೆ ಎತ್ತಿತು.

ಸೊಗಸಾದ ಸುಗ್ಗಿಯನ್ನು ನಿರೀಕ್ಷೆ ಮಾಡಿಕೊಂಡು ತಮ್ಮ ಜೀವಮಾನದಲ್ಲಿ ಪ್ರಪ್ರಥಮ ಗುತ್ತಿಗೆಯನ್ನು ನೀಡಿ ಉಂಡು ಮಿಗುವಷ್ಟು ಭತ್ತ ಬರುವುದನ್ನು ನೆನೆದು ಖುಷಿಯಲ್ಲಿದ್ದ ಮೂಗೂರ ಮತ್ತು ಗೇಣಿದಾರರಿಗೆ, ಅವರು ನಂಬಲಾರದಂಥ ಘಟನೆ ಕಾದಿತ್ತು.

ಗೋವಿಂದಸ್ವಾಮಿ ಠೀವಿಯಿಂದ ಧಿಮಾಕು ಮಾಡುತ್ತ ಛತ್ರಿ ಹಿಡಿದು ನಿಂತಿದ್ದಾನೆ. ಪಟ್ಟಶಿಷ್ಯ ಗಣೇಶ ಬಹಳ ಚುರುಕಿನಿಂದ ಓಡಾಡುತ್ತ ನೂರಾರು ಜನರಿಂದ ಭತ್ತ ಕಟಾವು ಮಾಡಿಸುತ್ತಿದ್ದಾನೆ. ಮೂಗೂರಿನ ಮುಂದಾಳುತನದಲ್ಲಿ ಗೇಣಿದಾರರೆಲ್ಲ ಗೋವಿಂದಸ್ವಾಮಿಯನ್ನು ಪ್ರಶ್ನಿಸಿದರು.

ಅದಕ್ಕೆ ಗೋವಿಂದಸ್ವಾಮಿ "ಜಮೀನು ನಿಮ್ಮಪ್ಪಂದ ಏನು ದಾಖಲೆ ಮಡಗಿದ್ದೀ? ತಗೀಯಪ್ಪ, ನಿಮ್ಮ ತಾತನ, ನಿಮ್ಮವ್ವನ ಹೆಸರಲಿ ಎಷ್ಟೆಷ್ಟು ಜಮೀನಿದೆ? ಜಮೀನುದಾರ್ ಮೂಗೂರಯ್ಯನೋರೆ ಸ್ವಲ್ಪ ದಾಖಲೆ ಬಿಚ್ಚಿ ಸ್ವಾಮಿ" ಎಂದು ಅಣಕಿಸುತ್ತ ಗಣೇಶ ಮೂಗೂರನ ಮನಸ್ಸನ್ನು ಚುಚ್ಚಿದ.

ಮೂಗೂರ ಮತ್ತು ಅವನ ಬೆಂಬಲಿಗರೆಲ್ಲ ಸಭೆ ಸೇರಿ, ಭೂನ್ಯಾಯ ಮಂಡಳಿಯಲ್ಲಿ ತಮಗೆ ಅನ್ಯಾಯವಾಗಿರುವುದಾಗಿ ಬಡಗೇಣಿದಾರರ ಹಿತಾಸಕ್ತಿಯನ್ನು ಕಾಯಲು ಸರ್ಕಾರ ನೇಮಿಸಿರುವ ವಕೀಲರನ್ನು ಬೆಂಗಳೂರಿನಲ್ಲಿ ಕಂಡು ಎಲ್ಲವನ್ನೂ ಅವರಿಗೆ ವಿವರಿಸಿ ಭೂನ್ಯಾಯ ಮಂಡಳಿಯ ತೀರ್ಪಿನ ವಿರುದ್ಧ ಹೈಕೋರ್ಟಿಗೆ ಅಪೀಲು ಹಾಕಿಸಬೇಕೆಂದು ತೀರ್ಮಾನಿಸಿದರು."[೬೧]

"ಬೆಸಗರಹಳ್ಳಿ ರಾಮಣ್ಣನವರು ಜೀತ, ಕಳೆ, ಅಭಿಮಾನ, ಕೆಂಪು ಹುಂಜ, ಗರ್ಜನೆ, ಹರಕೆಯ ಹಣ, ಗಾಂಧಿ ಸಂತಾನ, ಕಕರನ ಯುಗಾದಿ, ಗಾಂಧಿ, ಸಂತೆಯ ಒಳಗೊಂದು ಮನೆಯ ಮಾಡಿ ಈ ಕತೆಗಳಲ್ಲಿ ದಲಿತ ಜೀವನದ ಸಾಕಷ್ಟು ವಿವರಗಳು ಸಿಗುತ್ತವೆ. ಗ್ರಾಮಾಂತರ ಪ್ರದೇಶಗಳಲ್ಲಿ ದಲಿತರ ಬದುಕು ಪರಿವರ್ತನೆಗೆ ಒಳಗಾಗಿರುವುದನ್ನು ಈ ಕತೆಗಳು ದಾಖಲಿಸುತ್ತವೆ.

ಹೊಸಹೊಸ ಕಾನೂನುಗಳು ಹೇಗೆ ಬಡವರ ಬಾಳನ್ನು ಬೆಳಗಲು ಹೊರಟಿವೆ ಅವುಗಳನ್ನು ಯಾವ ರೀತಿ ಸಮಾಜದ ದುಷ್ಟ ಶಕ್ತಿಗಳು ಊಳಿಗಮಾನ್ಯ ಪದ್ಧತಿಯ ಜಮೀನ್ದಾರಿ ವ್ಯವಸ್ಥೆಯ ಸ್ವಾರ್ಥಿಗಳು ದುರುಪಯೋಗ ಪಡಿಸುತ್ತಿವೆ ಎಂಬುದನ್ನು ಮನ ಕರಗುವಂತೆ ಡಾ.ಬೆಸಗರಹಳ್ಳಿ ರಾಮಣ್ಣನವರು ಚಿತ್ರಿಸಿದ್ದಾರೆ.

ರಾಮಣ್ಣನವರ ಮನಸ್ಸು ಮೂಲತಃ ಬಂಡಾಯ ಪ್ರವೃತ್ತಿಯ ಮನಸ್ಸು."[೬೨] ಇವರ ಕತೆಗಳು ಬಂಡಾಯ ಸಾಹಿತ್ಯ ಸಮ್ಮೇಳನ ಸಂಘಟನೆಗೆ ಮೊದಲೇ ಪ್ರಕಾಶಿತವಾಗಿದ್ದುವು ಎನ್ನುವುದು ಗಮನೀಯ.

"ಹರಕೆಯ ಹಣ ಒಂದು ಉತ್ತಮ ಕತೆ. ಮೇಲು ಕೀಳಿನ ಸಮಸ್ಯೆಯನ್ನು ಸಾಂದ್ರವಾಗಿ ಹಿಡಿಯುತ್ತದೆ. ತಲೆ ತಲಾಂತರದಿಂದ ಕಾಲಕಸವಾಗಿ ಬದುಕುತ್ತಿದ್ದ ಜನ ತಮ್ಮನ್ನು ತಾವೇ ಅಸರ್ಟ ಮಾಡಿಕೊಳ್ಳುವ ಬಗೆ ಚೇತೋಹಾರಿಯಾಗಿದೆ. ಕೆಳವರ್ಗದಲ್ಲಿ ಬಹುಮಂದಿ ಹೇಳಿದ ಹಾಗೆ ಕೇಳಿಕೊಂಡಿರುವ ಮನಸ್ಸುಳ್ಳವರಾದರೂ

ಅಲ್ಪಸ್ವಲ್ಪ ವಿದ್ಯಾಭ್ಯಾಸದಿಂದ ಆಧುನಿಕ ವಿಚಾರಗಳಿಂದ ಎಚ್ಚೆತ್ತ ಬೆರಳೆಣಿಕೆಯ ವ್ಯಕ್ತಿಗಳನ್ನು ರಾಮಣ್ಣ ಜೀವಂತವಾಗಿ ಮೂಡಿಸಿದ್ದಾರೆ. ಅವರ ಸ್ವಾಭಿಮಾನ, ಕೆಚ್ಚು, ಹಟ, ರೋಷ, ಶಕ್ತಿ ಮುಂತಾದ ಗುಣಗಳು ಅವರ ಕತ್ತಲ ಬಾಳಿನ ಹಂದರದಲ್ಲಿ ಇಣುಕುವ ಕಿರಣಗಳಾಗಿವೆ. ಈ ಕತೆಯ ಸುಮಾನಿ ಅಂತಹ ಒಂದು ಪಾತ್ರ. ಅವನು ತನ್ನ ಜನಾಂಗದ ಹಕ್ಕುಗಳಿಗಾಗಿ ಹೋರಾಡಲು ಮುಂದಾದರೆ, ಅವನ ಜನರೇ ಅವನಿಗೆ ಬೆಂಬಲ ನೀಡದ ಸಂಗತಿ ಮಾರ್ಮಿಕವಾಗಿದೆ. ಅವರನ್ನು ಪ್ರತಿನಿಧಿಸುವ ಎಂ.ಎಲ್.ಎ. ಕೂಡ ಸತ್ಯದ ಪರವಾಗಿರುವುದಕ್ಕೆ ಬದಲು ಮೇಲುವರ್ಗದವರ ಜೊತೆ ಸೇರಿಕೊಳ್ಳುವುದು, ಪೋಲೀಸ್ ಇಲಾಖೆಯ ಸೋಗಲಾಡಿತನಗಳೆಲ್ಲಾ ಕತೆಯಲ್ಲಿ ಅನಾವರಣಗೊಳ್ಳುತ್ತವೆ. ಜಾತಿ ವ್ಯವಸ್ಥೆಯ ಕೊಳಕುಗಳು ಜನ ಬಾಯಿ ಬಿಟ್ಟರೆ ಸಾಕು ಗಬ್ಬು ನಾರುತ್ತವೆ.

ಸಮಸ್ಯೆಯ ಕಗ್ಗಂಟನ್ನು ಬಿಡಿಸುವುದಕ್ಕೆ ಬದಲಾಗಿ ಅದನ್ನು ಇನ್ನೂ ಸಂಕೀರ್ಣಗೊಳಿಸುವ ಜೀವನ ಗತಿ ಅದಮ್ಯವಾದುದು. ಇವೆಲ್ಲದರ ಮಧ್ಯೆಯೂ ತಾನು ಗುಟ್ಟಾಗಿ ಪ್ರೀತಿಸುವ ಹೆಣ್ಣನ್ನು ತನ್ನ ಆಳು ಮಗನಿಗೆ ಮದುವೆ ಮಾಡಿಕೊಂಡು ತಾನೇ ಅನುಭವಿಸಬೇಕೆಂದು ಕುದಿಯುತ್ತಿದ್ದ ಪಟೇಲನನ್ನು ಸುಮಾನಿ ಸೋಲಿಸುವ ರೀತಿ ಬಂಡೆದ್ದ ದಲಿತರ ಕೌಶಲಕ್ಕೆ ಸಾಕ್ಷಿಯಾಗಿದೆ.

ಈ ಎಲ್ಲಾ ಕತೆಗಳಲ್ಲಿ ದಲಿತರನ್ನು ಹೊಡೆಯುವ, ಕೊಂದು ಹಾಕುವ ಅವರ ಹೆಣ್ಣು ಮಕ್ಕಳನ್ನು ಭೋಗಿಸುವ ಅವರನ್ನು ಜೀತದಾಳುಗಳನ್ನಾಗಿ ಸುಲಿಗೆ ಮಾಡುವವರೆಲ್ಲ ಜಮೀನುದಾರರು."[೬೩]

ಹರಕೆಯ ಹಣ ಕತೆಯಲ್ಲಿ ಭೂಮಾಲೀಕ ಜೀತಗಾರ ಮತ್ತು ಜಾತಿ ಜಾತಿಗಳಲ್ಲಿ ಮೇಲು ಕೀಳು ಎಂಬ ಭಾವನೆ ಕಾಣಬಹುದಾಗಿದೆ. ರೈತ ಚಳುವಳಿ ಪ್ರಾರಂಭವಾಗುವುದಕ್ಕೆ ಮುಂಚಿನ ದಿನಗಳಲ್ಲಿ ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಜನರು ಹೆಚ್ಚಾಗಿ ಜಮೀನುದಾರರ ಹೊಲಗಳಲ್ಲಿ ಜೀತಕ್ಕಿರುವುದು ಕಂಡುಬರುತ್ತದೆ. ಸ್ವಾತಂತ್ರ್ಯಾ ನಂತರದಲ್ಲಿ ರೈತರೆಲ್ಲಾ ಪ್ರತಿಭಟನೆಗೆ ಮುಂದಾದರು. ಆಗ ಅವರಿಗೆ ಸಮಾನತೆ ಮತ್ತು ಹೊಲದಲ್ಲಿ ಕೆಲಸ ಮಾಡಿ ತಾವು ಮಾಡಿದ ಕಷ್ಟಕ್ಕೆ ತಕ್ಕ ಸಂಪಾದನೆಯನ್ನು ಕಾಣಬಹುದಾಗಿದೆ.

"ಅರ್ಥಾತ್ ಗೌಡರು ಮತ್ತು ಪಟೇಲರು. ಕಥೆಗಾರ ರಾಮಣ್ಣ ಮಾನವೀಯ ದೃಷ್ಟಿಯಿಂದ ಕಲೆಯ ನೆಲೆಯಲ್ಲಿ ಆ ಕ್ರೌರ್ಯವನ್ನೆಲ್ಲ ಬಹಿರಂಗಪಡಿಸಿದ್ದಾರೆ. ಕುವೆಂಪು ಮತ್ತು ಬಸವರಾಜ ಕಟ್ಟಿಮನಿ ಅವರ ತರುವಾಯ ತನ್ನ ಜನಾಂಗವನ್ನು ದಿಟ್ಟವಾಗಿ ಬೆತ್ತಲು ಮಾಡಿದ ಲೇಖಕ ರಾಮಣ್ಣ, ಜೊತೆಗೆ ಈ ಕತೆಗಳಲ್ಲಿ ದಲಿತವರ್ಗ ತನ್ನನ್ನು ತಾನೇ ಕಂಡುಕೊಳ್ಳಲು ನಡೆಸುವ ಮಹಾನ್ ಸಂಘರ್ಷದ ಸ್ವರ್ಣ ಕಿರಣಗಳಿವೆ. ಪರಿವರ್ತನೆಯನ್ನು ರಾಮಣ್ಣನವರಷ್ಟು ಕಲಾತ್ಮಕವಾಗಿ ಹಿಡಿಯುವ ಕತೆಗಾರರನ್ನು ಕನ್ನಡ ಕಾಣಬೇಕಾಗಿದೆ. ಅವರ ಪಾತ್ರಗಳು ಸಿದ್ಧಾಂತದ ನಿರ್ಜೀವ ಬೊಂಬೆಗಳಾಗಿರದೆ ರಾಗ ದ್ವೇಷಗಳು ಜೀವಂತ ಪ್ರತಿಮೆಗಳಾಗಿವೆ. ಅವರ ಕಥೆಗಳು ಸಾಮಾನ್ಯವಾಗಿ ಘಟನಾ ಪ್ರಧಾನವಾಗಿವೆ. ಕೇವಲ ಮಾನಸಿಕ ತೆವಲುಗಳ ಬಲಾಬಲ ಗೊತ್ತಾಗುವುದು ಕ್ರಿಯೆಗಳಲ್ಲಿ ಅವರಲ್ಲಿ ಸ್ಮೃತಿ ಪ್ರವಾಹ ಮನಸ್ಸಿನ ವಿಶ್ಲೇಷಣೆ, ಹೃದಯದ ತುಡಿತಗಳು ಹದವಾಗಿ ಬರುತ್ತವೆ. ರಾಮಣ್ಣ ಯಾವುದೇ ಚಳುವಳಿಯಲ್ಲಿ ಸೇರಿರದಿದ್ದರೂ ತಮ್ಮ ಉತ್ತಮ ಕತೆಗಳ ರಚನೆಯಿಂದ ಬಂಡಾಯ ಸಾಹಿತ್ಯದ ಮುಂಚೂಣಿ ಕತೆಗಾರರಾಗಿದ್ದಾರೆ."[೬೪]

೧೯೭೪ರಲ್ಲಿ ಕೊಡಿಯಾಲ ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ಕಥೆಗಾರರಿಗೆ ಆದ ನಿಜ ಘಟನೆ 'ಗಾಂಧಿ' ಕಥೆಯ ವಸ್ತು. ಈ ಕಥೆಯನ್ನು ಮೆಚ್ಚಿ ಕೆ.ನರಸಿಂಹಮೂರ್ತಿ, ಡಿ.ಆರ್.ನಾಗರಾಜ್, ಚಂದ್ರಶೇಖರ ಪಾಟೀಲ, ಗಿರಡ್ಡಿ ಗೋವಿಂದರಾಜ್ ಅವರು ಚರ್ಚಿಸಿದ್ದಾರೆ.

"'ಗಾಂಧಿ' ಒಂದು ದುರಂತಮಯವಾದ ಕಥೆ. ಹಳ್ಳಿ ಜನ, ಜನನಾಯಕನನ್ನು ಗಾಢವಾಗಿ ಪ್ರೀತಿಸುವುದುಂಟು. ಗಾಂಧಿ ಪಾತ್ರದ ಆ ಹುಡುಗ ಈ ದೇಶದಲ್ಲಿ ಹುಟ್ಟಲೇ ಇಲ್ಲ ಅಂಥ ನಿಕೃಷ್ಟವಾಗಿ ನೋಡುವ ಜನರ ದೃಷ್ಟಿ ತಪ್ಪಬೇಕೆಂಬುದು ಲೇಖಕರ ನಿಲುವಾಗಿದೆ. ಭಾವನಾತ್ಮಕವಾಗಿ, ತನ್ಮಯವಾಗಿ, ಕಥೆ ಬರೆಯಲು ಆರಂಭಿಸಿದ ಈ ಕಥೆಗಾರರು ಬೌದ್ಧಿಕವಾಗಿ, ವೈಚಾರಿಕವಾಗಿ, ಸಂಯಮಶೀಲರಾಗಿ ಬೆಳೆದದ್ದಕ್ಕೆ ಗಾಂಧಿ ಕಥೆ ಸ್ಪಷ್ಟ ನಿದರ್ಶನವಾಗಿದೆ. ವ್ಯಕ್ತಿಕೇಂದ್ರಿತ ಆಶಯವನ್ನು ನಿರಾಕರಿಸಿ, ಕಥಾನಕ ದೃಷ್ಟಿಯನ್ನು ತಮ್ಮ ಪ್ರಮುಖ ಅಭಿವ್ಯಕ್ತಿ ಮಾರ್ಗವನ್ನಾಗಿ ಮಾಡಿಕೊಂಡ ಈ ಕಥೆಗಾರರು ಆ ಮಾರ್ಗದಲ್ಲಿಯೇ ಅದ್ವಿತೀಯವಾದ ಸೃಷ್ಟಿಗೆ ಕಾರಣರಾಗಿದ್ದಾರೆ. ಆದರೆ ೮೦ರ ದಶಕದಲ್ಲಿ ಬರೆದ ಕಥೆಗಳಲ್ಲಿ ಕಥೆಗಾರನೇ ಒಂದು ಪಾತ್ರವಾಗಿ, ವ್ಯಕ್ತಿ ಕೇಂದ್ರಿತ ಪ್ರಜ್ಞೆಯಾಗಿ, ಸಾಮಾಜಿಕ ಕೇಡನ್ನು ದಾಖಲು ಮಾಡುತ್ತಾ, ಅದಕ್ಕೆ ಕಾರಣವಾದ ಪರಿಹಾರಗಳನ್ನು ಅದೇ ಸಮಾಜದಲ್ಲಿ, ರಾಜಕಾರಣದಲ್ಲಿ, ಹುಡುಕುತ್ತಿರುವುದು ಕಂಡುಬರುತ್ತದೆ."[೬೫]

ಮಹಾತ್ಮ ಗಾಂಧಿಯ ಹೆಸರು ಹೊಂದಿದ ಹಳ್ಳಿಯ ರೋಗಗ್ರಸ್ತನಾದ ಬಡ ಹುಡುಗ, ಆ ಹೆಸರಿನಿಂದಾಗಿಯೇ ವ್ಯಂಗ್ಯದ ವಸ್ತುವಾಗುವುದು ಕಥೆಯ ಮುಖ್ಯ ಧಾಟಿಯಾಗಿದೆ. ಹುಡುಗನ ಸಾವಿಗೆ ಬಡತನ, ಅಜ್ಞಾನ ಇವುಗಳಷ್ಟೇ ಕಾರಣವಲ್ಲ ಡಾಕ್ಟರ್ ಅಧಿಕಾರ ಶಾಹಿಯ ನಿರ್ಲಕ್ಷತೆಯೂ ಕಾರಣ ಎಂಬುದನ್ನು ಈ ಕಥೆ ಹೇಳುತ್ತದೆ.

ಹುಡುಗ ತನ್ನ ಸಾವಿನ ಬಗ್ಗೆ ತಳೆಯುವ ಧೀರ ಧೋರಣೆ ಅವನ ಆಶೆ ಬಡತನದಿಂದ ಫಲಿಸದೆ ಹೋಗುವುದು. ಆಸ್ಪತ್ರೆಯಲ್ಲಿ ಎಲ್ಲರೂ ಅವನ ಹೆಸರನ್ನು ವ್ಯಂಗ್ಯವಾಗಿ ನೋಡುವುದು ಮುಂತಾದ ವಿವರಗಳು ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತವೆ. ಕಥೆಯ ಉದ್ದಕ್ಕೂ ಗಾಂಧೀಜಿಯ ಆದರ್ಶಗಳು ಮೌಲ್ಯಗಳು ತೀವ್ರ ವಿಡಂಬನೆಗೆ ಗುರಿಯಾಗಿವೆ.

ರಾಮಣ್ಣನವರ ಸೃಜನಶೀಲತೆ ಗತಿಶೀಲವಾದದ್ದು. ಇದನ್ನು ಅವರು ಕಥೆಯಿಂದ ಕಥೆಗೆ ಬೆಳೆದಿರುವ ಅವರ ಗಮನಾರ್ಹವಾದ ಕಥೆಗಳಲ್ಲಿ ಕಾಣಬಹುದು. ೮೦ರ ದಶಕದಲ್ಲಿ ಬರೆದಿರುವ ಅವರ ಕಥೆಗಳಲ್ಲಿ ತಮ್ಮ ಜೀವನದ ಅನುಭವಕ್ಕೂ, ಪರಿಸರಕ್ಕೂ, ಪಾತ್ರಗಳಿಗೂ, ಇರುವ ಗಾಢ ಸಂಬಂಧವನ್ನು ಶೋಧಿಸಲು ಪ್ರವೃತ್ತವಾಗಿರುವ ಅವರ ಪ್ರಜ್ಞೆಯೊಂದನ್ನು ಸ್ಪಷ್ಟವಾಗಿ ಗುರುತಿಸಬಹುದು. ಜನರ ಬದುಕನ್ನು ಹತ್ತಿರದಿಂದಲೇ ನೋಡಿ ಬರೆಯುವ ಹಂಬಲವುಳ್ಳ ಕಥೆಗಾರರು ಇವರು.

ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಹೊಸ ಬದಲಾವಣೆಯನ್ನು ಬಯಸುವ, ಹೊಸ ಜೀವನ ದೃಷ್ಟಿಯನ್ನು ಬಯಸುವ ಇವರ ಕಥೆಗಳು ಕನ್ನಡ ಸಾಹಿತ್ಯಕ್ಕೆ ಅಮೋಘ ಕಾಣಿಕೆಗಳು. ಸ್ವಾತಂತ್ರ್ಯೋತ್ತರ ಭಾರತದ ಗ್ರಾಮೀಣ ಬದುಕಿನ ಹತಾಶೆಯ ಸ್ಥಿತಿಯನ್ನು ಅಧಿಕೃತವಾಗಿ ಚಿತ್ರಿಸುವಲ್ಲಿ ಮತ್ತು ಮಾನವೀಯ ಮೌಲ್ಯಗಳನ್ನು

ನೆಲೆಗೊಳಿಸುವಲ್ಲಿ ರಾಮಣ್ಣನವರ ಕಥೆಗಳು ಸೃಷ್ಟಿಶೀಲವಾಗಿವೆ. ಹಳ್ಳಿಯ ಒಕ್ಕಲು ಮಕ್ಕಳ ಮಣ್ಣಿನ ವಾಸನೆಯ, ಭಾಷೆಯ ನುಡಿಗಟ್ಟನ್ನು, ಗ್ರಾಮೀಣ ಜನರ ಬದುಕಿನ ನೋವು, ನಲಿವಿನ, ನಂಬಿಕೆಗಳ ಸಾಧ್ಯತೆಗಳನ್ನು ಈ ಕಥೆಗಾರರು ತಮ್ಮ ಕಥೆಗಳಲ್ಲಿ ಅನನ್ಯ ರೀತಿಯಲ್ಲಿ ದುಡಿಸಿಕೊಂಡಿದ್ದಾರೆ."[೬೬]

ಬೆಸಗರಹಳ್ಳಿ ರಾಮಣ್ಣನವರು ಬಹಳಷ್ಟು ಕತೆಗಳನ್ನು ಬರೆದಿದ್ದಾರೆ. ಇವರ ಕತೆಗಳಲ್ಲಿ ಈ ಅಧ್ಯಾಯಕ್ಕೆ ಸಂಬಂಧಪಟ್ಟಂತೆ ಗಾಂಧಿ ಕತೆಯನ್ನು ರಚಿಸಿರುವ ರಾಮಣ್ಣನವರ ಕಳಕಳಿ ಎಲ್ಲಾ ದಿಕ್ಕುಗಳನ್ನು ಮೀರಿ ನಿಂತಿರುವುದನ್ನು ಕಾಣಬಹುದು. ರಾಮಣ್ಣನವರ ಕತೆಗಳಲ್ಲಿ ಬಡತನ, ಗ್ರಾಮೀಣ ಬದುಕು, ಮೌಢ್ಯತೆ, ಅಧಿಕಾರಶಾಹಿಯ ಬೇಜವಾಬ್ದಾರಿತನಗಳನ್ನು ಕಾಣಬಹುದಾಗಿದೆ. ಇವರ ಕತೆಗಳಲ್ಲಿ ಸಾಹಿತ್ಯಕ, ವೈಚಾರಿಕ, ಕೌಟುಂಬಿಕ, ಧಾರ್ಮಿಕ, ಸಾಂಸ್ಕೃತಿಕ, ಜಾನಪದ, ರಾಜಕೀಯ, ನಾಟಕೀಯ, ದಲಿತ ಬಂಡಾಯ, ವಿಮರ್ಶಾತ್ಮಕ ಎಲ್ಲಾ ಬಗೆಯ ಸೃಜನಶೀಲ ಸಾಹಿತ್ಯ ರಚನೆಯನ್ನು ಕಾಣಬಹುದು.

"'ಗರ್ಜನೆ' ಕತೆಯ ಮರಿನಂಜ, ಗಂಡ ಸತ್ತವಳಿಗೆ ಪಟೇಲರಿಂದ ಹುಟ್ಟಿದವನು. ನಿಂಗಣ್ಣನ ಮಗಳು ಪಾರ್ವತಿಯನ್ನು ಮದುವೆಯಾಗಬೇಕೆಂಬ ಕೆಚ್ಚಿನಲ್ಲಿ, ಆತನ ಗಡಸು ವ್ಯಕ್ತಿತ್ವ ಸೆಟೆದು ನಿಲ್ಲುತ್ತದೆ. ತನ್ನ ಹುಟ್ಟಿನ ಬಗೆಗೆ ಅಣಕ ಮಾಡುವವರನ್ನು ಪ್ರತಿಭಟಿಸುತ್ತಲೇ ಅದನ್ನು ಪಟೇಲರೊಡನೆ ಗುರುತಿಸಿಕೊಳ್ಳುವ ಸೂಕ್ಷ್ಮತೆಯನ್ನು ತೋರುತ್ತಾನೆ.

'ಗಾಂಧಿ' ಸಂತಾನದ ಮೆಣಸ ಈ ನಾಡು ಕಾಣುವ ಅಪರೂಪದ ಶ್ರೀಸಾಮಾನ್ಯ ಪ್ರತಿಭೆಗಳಲ್ಲಿ ಒಬ್ಬ. ಅವನು ವ್ಯವಸ್ಥಿತವಾಗಿ ತನ್ನ ಸುತ್ತ ಬೇಲಿ ಕಟ್ಟಿಕೊಂಡಿರುವ ಪ್ರತಿಷ್ಠಿತರ ಟೊಳ್ಳುವಾದವನ್ನು ಪ್ರಶ್ನಿಸುತ್ತಾನೆ. ಜೊತೆಗೆ ಮೇಲು ಜಾತಿಯು ಹುಟ್ಟು ಹಾಕಿರುವ ಪೌರಾಣಿಕ ನಂಬಿಕೆಗಳನ್ನು ಕೂಡ ತಿರಸ್ಕರಿಸುತ್ತಾನೆ. ಒಂದು ದೇಶದ ಶೋಷಕ ವಲಯದ ಆಶಯಗಳನ್ನು ಮೆಣಸ ಉದ್ದೀಪಿಸಿ ತಿರಸ್ಕರಿಸುವುದು ಶೋಷಿತ (ವಲಯ) ಜಗತ್ತಿಗೆ ಅವನ ಅನಿವಾರ್ಯತೆಯನ್ನು ಅರಿವಾಗಿಸುತ್ತದೆ. ಈ ಕತೆಯಲ್ಲಿ ಹೊಲೆಯನಿಗೆ ಅರಿವು ಬಂದುದರ ವಿರುದ್ಧ ಎಲ್ಲ ಮೇಲುಜಾತಿಗಳು ಒಂದುಗೂಡುತ್ತವೆ ಎಂಬುದನ್ನು ರಾಮಣ್ಣ ಬಹಳ ಸೂಕ್ಷ್ಮವಾಗಿ ಹಿಡಿದು ಕೊಟ್ಟಿದ್ದಾರೆ."[೬೭]

ಗರ್ಜನೆ ಕತೆಯಲ್ಲಿ ಬರುವ ಮರಿನಂಜನ ಹುಟ್ಟು ವಿಚಿತ್ರವಾಗಿದ್ದರೂ ಅವನು ಮತ್ತು ಅವನ ಜೀವನ ಮಾತ್ರ ಸಚಿತ್ರವಾಗಿಯೇ ಮುಂದುವರಿಯುತ್ತಿದೆ. ಅವನು ಹುಟ್ಟನ್ನು ಪ್ರತಿ ಸಂದರ್ಭದಲ್ಲಿಯೂ ಅಣಕಿಸುತ್ತಿರುವ ಸಮಾಜಕ್ಕೆ ಪ್ರಶ್ನೆಯಾಗಿ ಉತ್ತರವೂ ಸಿಗದೆ ಬದುಕುತ್ತಿರುವುದನ್ನು ಕಾಣುತ್ತೇವೆ. ಗ್ರಾಮದ ಜನತೆಯು ಮರಿನಂಜನ ಬಗ್ಗೆ ಮತ್ತು ಅವನ ಹುಟ್ಟಿನ ಬಗ್ಗೆ ತಿಳಿದುಕೊಳ್ಳಬೇಕೆಂಬ ಕುತೂಹಲವಿದ್ದರೂ ಗೌಡರ ಪರೋಕ್ಷ ರಕ್ಷಣೆಯಿಂದ ಅಸಹಾಯಕರಾಗಿರುತ್ತಾರೆ. ಇವರ ಅಸಹಾಯಕತೆಯನ್ನು ಪ್ರದರ್ಶಿಸಲು ಮರಿನಂಜನನ್ನು ಅಣಕಿಸುವುದರಲ್ಲಿ ತೃಪ್ತಿ ಪಟ್ಟುಕೊಳ್ಳುವರು. ಈ ಅವಮಾನಗಳನ್ನು ಸಹಿಸಿಕೊಳ್ಳಲೂ ಆಗದೆ ಪ್ರತಿಭಟಿಸಲೂ ಆಗದೆ ನಿಸ್ಸಹಾಯಕನಾಗಿರುವ ಮರಿನಂಜನ ಬಗ್ಗೆ ಕನಿಕರವೆನಿಸುತ್ತದೆ. ಈ ಎಲ್ಲಾ ವಿಷಯಗಳನ್ನು ಕಣ್ಣಿಗೆ ಕಟ್ಟುವಂತೆ ಸೃಷ್ಟಿಸಿರುವ ಕತೆಗಾರರ ಪ್ರೌಢಿಮೆ ಮೆಚ್ಚತಕ್ಕದ್ದು. ಇವರದೇ ಇನ್ನೊಂದು

ಕತೆಯಾದ ಗಾಂಧಿ ಸಂತಾನದಲ್ಲಿ ಬರುವ ಮೆಣಸನ ಪಾತ್ರ ಈ ನಾಡಿನಲ್ಲಿ ಕಂಡುಬರುವ ಅಸಮಾನ್ಯ ಪ್ರತಿಭಾಶಾಲಿಗಳಲ್ಲಿ ಒಬ್ಬ. ತನ್ನ ಗ್ರಾಮದಲ್ಲಿ ವ್ಯವಸ್ಥಿತವಾಗಿ ಬೇಲಿ ನಿರ್ಮಿಸಿಕೊಂಡಿರುವ ಪ್ರತಿಷ್ಠಿತರ ವಾದಗಳನ್ನು ಪ್ರಶ್ನೆ ಮಾಡುವ ಖ್ಯಾತಿ ಉಳ್ಳವನು. ಅಲ್ಲದೆ ಮುಂದುವರಿದ ಜಾತಿಯವರು ಹಾಕಿಕೊಂಡಿರುವ ಕಟ್ಟುಕಟ್ಟಳೆಗಳ ನಂಬಿಕೆಗಳನ್ನು ತಿರಸ್ಕರಿಸುವ ಧೈರ್ಯ ಹೊಂದಿರುತ್ತಾನೆ. ಶೋಷಿತ ವರ್ಗಗಳ ವಿರುದ್ಧ ದನಿ ಎತ್ತುತ್ತಾನೆ. ಇದು ಎಲ್ಲಾ ವರ್ಗದ ಜನತೆಯನ್ನು ಎಚ್ಚರಿಸುತ್ತದೆ. ಇದರಲ್ಲಿ ಬಹು ಮುಖ್ಯವಾಗಿ ಪರಿಶಿಷ್ಟ ವ್ಯಕ್ತಿಯೊಬ್ಬನಿಗೆ ಈ ರೀತಿಯ ಅರಿವು ಬಂದುದನ್ನು ಗಮನಿಸಿ ಎಲ್ಲಾ ಮೇಲ್ಜಾತಿಯವರು ಒಂದುಗೂಡುವುದನ್ನು ರಾಮಣ್ಣನವರು ಮನೋಜ್ಞವಾಗಿ ಚಿತ್ರಿಸಿರುವುದನ್ನು ನಾವಿಲ್ಲಿ ಕಾಣಬಹುದು.

"ಕಕರನ ಯುಗಾದಿ' ರಾಮಣ್ಣನವರ ಉತ್ತಮ ಕಥೆಗಳ ಸಾಲಿಗೆ ಸೇರಿಕೊಳ್ಳುತ್ತದೆ. 'ಕಕರ' ದಲಿತ ಲೋಕದ ನಿಷ್ಠಾವಂತ ವ್ಯಕ್ತಿ. ಇದೊಂದು ದುರಂತಮಯ ಕಥೆ. ದಲಿತ ವರ್ಗದ ನೋವು, ಮೇಲ್ವರ್ಗದ ಶೋಷಣೆಯೇ ಕಥಾವಸ್ತು. ದಲಿತವರ್ಗ (ಶ್ರಮಿಕವರ್ಗ) ಮಳೆಗಾಗಿ, ಬೆಳೆಗಾಗಿ, ಹೊಟ್ಟೆಗಾಗಿ, ಪರದಾಟದಲ್ಲಿ ತೊಡಗಿದ್ದರೆ, ಶೋಷಿಸುವ ವರ್ಗ ಇದಾವುದರ ಪರದಾಟವಿಲ್ಲದೆ ದಲಿತರ ಬೆವರನ್ನು ಅನುಭವಿಸುವ ಹಕ್ಕುದಾರರಾಗಿ ಸಂತೃಪ್ತಿಯ ಜೀವನ ನಡೆಸುವುದು ಇಲ್ಲಿ ಕಂಡು ಬರುತ್ತದೆ.

ಹಬ್ಬವನ್ನು ಸಂಭ್ರಮದಿಂದ ಆಚರಿಸುವಾಗ ಕಕರನ ಮನೆಯಲ್ಲಿ ಯಾವುದೇ ಹೊಸತನವಿರದಿದ್ದಾಗ ತನ್ನ ಮಕ್ಕಳಿಗಾಗಿ ಸಾಲ ಮಾಡಿಯಾದರೂ ಹಬ್ಬ ಆಚರಿಸಲು ಮುಂದಾಗುತ್ತಾನೆ.

ಕಥೆಗಾರರಾಗಿರುವ ದಲಿತ ವರ್ಗದ ಕಾಳಜಿ ಈ ಮಾತುಗಳ ಮೂಲಕ ಧ್ವನಿತವಾಗುತ್ತದೆ. ಪುಟ್ಟೇಗೌಡನ ಮಗಳ ಮದುವೆಯಲ್ಲಿ ಊಟಕ್ಕಾಗಿ "ನಿಮ್ಮವರೆಲ್ಲಾ ಕಾಯುತ್ತಾ ಇದ್ದಾರೆ" ಎಂದು ಜೋಯಿಸರು ಕಕರನಿಗೆ ಹೇಳಿದಾಗ ಕಕರ ತನ್ನ ಸಮೂಹವನ್ನೆ ಪ್ರತಿನಿಧಿಸುವಂತೆ "ಹಾಳು ಹೊಟ್ಟೆ ಕೆಟ್ಟದ್ದು" ಜೊತೆಗೆ ಮಳೆ ಹೋಗಿ ಬೆಟ್ಟ ಸೇರಿಕೊಂಡಿದೆ. ಅವರದೇನು ತಪ್ಪು? ಎಂದುಕೊಂಡು ಮಾತಿನ ಗತಿಯನ್ನು ಬದಲಿಸಲು ಕೇಳಿದ "ಸ್ವಾಮಿ ಈ ಯುಗಾದಿಗಾದ್ರೂ ಮಳೆ ಆದಾತ್ರಾ?"

"ಮಳೆ ಮನೆ ಮಾರೊತ್ತು ಹೋಯ್ತು. ಹಾಲು ಗೂಡಿಗೆ ನಾಲ್ಕು ಹೆಜ್ಜೆ ಮಾಡು ಹೋಗೋ ಅಂದ್ರೆ, ಒಳ್ಳೆ ಐನಾತಿ ಊಟ."

"ಅದಿರಲಿ ಸ್ವಾಮಿ, ಮಳೆ ವಿಷ್ಯ ಮಾತಾಡಿ ದನಕರುಗೋಳು, ಹಕ್ಕಿ ಪಕ್ಷಿಗಳಿಗೆಲ್ಲ ಬೋ ಕಷ್ಟ ಆಗೋಯ್ತು, ಧರೆಯೇ ಉರಿತಾ ಅದೆ!"

ಜೋಯಿಸರಿಗೆ ಕಕರನಿಂದ ಒಂದು ಕೆಲಸ ಆಗಬೇಕಾಗಿತ್ತು. ಅದಕ್ಕಾಗಿ ಕಕರನಿಗೆ ಭವಿಷ್ಯವನ್ನು ನುಡಿದು "ಈ ಯುಗಾದಿಗೆ ನಿನ್ನ ಕಷ್ಟ ಎಲ್ಲಾ ಕಳೀತೂ, ನಿನಗೆ ಮುಂದೆ ಬಹಳ ಒಳ್ಳೆಯದಾಗುತ್ತದೆ. ಇದನ್ನು ಕಕರ ಒಪ್ಪದಿದ್ದಾಗ ಜೋಯಿಸರು ಒಪ್ಪಿಕೊಳ್ಳುವ ಹಾಗೆ ನಯ -ನಾಜೂಕಿನಿಂದ ಮನಸ್ಸನ್ನು ಪರಿವರ್ತಿಸುತ್ತಾರೆ."[೬೮]

"ಕಟ್ಟೆಗೆ ಹೊರೆ ತಂದು ಹಾಕಿದ 'ಕಕರ' ಜೋಯಿಸರ ಬಳಿ ಹಬ್ಬಕ್ಕೆಂದು ೨೫ರೂ. ಕೇಳುತ್ತಾನೆ. ಅದಕ್ಕೆ ಅವರು 'ನಾಳೆ ನೋಡೋಣ ಬಾ' ಎನ್ನುತ್ತಾರೆ. ನಾಳೆಯನ್ನು ಬೇಗ ತರಿಸಿಕೊಳ್ಳುವಂತೆ ಕಕರ ಮನೆಯ ಕಡೆ

ಹೆಜ್ಜೆ ಹಾಕಿದ. ಸಂತೆಯ ಮಾರ್ಗವಾಗಿ ನಡೆಯುತ್ತಿದ್ದ ಕಕರನನ್ನು ಕುಳ್ಳಯ್ಯ ವ್ಯಂಗ್ಯದಿಂದ ಕರೆಯುತ್ತಾ, "ನಾಳಾಕೆ ಹಬ್ಬ ಜೋರೋ ಅನ್ನು" ಅದಕ್ಕೆ ಕಕರ "ಏನು ಜೋರೋ ನಿನ್ನ ಎಕ್ಕಡ."

"ನಿಂಗೇನು ಕಡ್ಮೇಲ? ಗೌಡ್ರ ಮಗನಿಗೆ ಹೇಳಿ ಕಳಿಸಿದರೆ ಖಂಡುಗಗಟ್ಟಲೆ ಅಕ್ಕಿ, ರಾಗಿ ಬಂದು ಮನೇಲಿ ಬೀಳ್ತದಪ್ಪ. ಈ ಮಾತುಗಳಿಂದ ಕಕರನಿಗೆ ಭೂಮಿಯೇ ನಡುಗಿದಂತಾಯ್ತು. ಅಲ್ಲಿಯೇ ಇದ್ದ ಚಿಕ್ಕ ತಾಯಿಂದ, ನಾಗಿಯು ಹೊಟ್ಟೆ ನೋವಿನಿಂದ ನರಳುವ ವಿಷಯ ತಿಳಿದು ಇನ್ನು ಜಜ್ಜಿ ಹೋದನು.

ಇಲ್ಲಿ ಮೇಲ್ವರ್ಗ ತನ್ನ ಸುಖಕ್ಕೆ ಅಮಾಯಕ ಸ್ತ್ರೀಯನ್ನು ಬಲಿಯಾಗಿಸುವ, ಇಂಥ ಶೋಷಣೆಯನ್ನು ಅನುಭವಿಸಿ, ಬದುಕಿನಲ್ಲಿ ತೊಳಲಾಡುವ ಮುಗ್ಧ ಜನರ ಚಿಂತಾಜನಕ ಸನ್ನಿವೇಶ ಚಿತ್ರಿತವಾಗಿದೆ. ಅವಮಾನ, ಹಸಿವು, ನಿದ್ರಾಭಂಗಗಳನ್ನು ಸಹಿಸಿಕೊಂಡು ಹಬ್ಬಕ್ಕೆಂದು ಕೇಳಿದ ಸಾಲವನ್ನು ಮಗಳ ಹೆರಿಗೆಯ ಔಷಧಿಗಾಗಿ ಖರ್ಚು ಮಾಡಲು ನಿರ್ಧರಿಸಿ ಕಕರ ಪುರೋಹಿತರ ಮನೆಗೆ ಹೋದ.

ಪುರೋಹಿತರ ಮನೆಯಲ್ಲಿ ಬಂಜೆತನದಿಂದ ಬಳಲುವ ಸ್ತ್ರೀಯನ್ನು ಕಠೋರ ಮಾತುಗಳಿಂದ ಹಬ್ಬದ ದಿನವೂ ಬೈಯುತ್ತಿದ್ದಾಗ, ಅವಳು ಮನೆಯಲ್ಲಿಯ ಬಾವಿಗೆ ಹಾರಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಪುರೋಹಿತರ ಮಾತಿನಂತೆ ಕಕರ ವಿಧಿಯಿಲ್ಲದೆ ತಾನು ಯಾವ ಮನೆಯ ಹೊಸ್ತಿಲನ್ನು ದಾಟಬಾರದಿತ್ತೋ ಅದನ್ನು ದಾಟಿಯೇ ತನ್ನೆಲ್ಲಾ ನೋವನ್ನು ಮರೆತು ಪುರೋಹಿತರ ಹೆಂಡತಿಯನ್ನು ಉಳಿಸಲು ಬಾವಿಗೆ (ಹಾರಿ) ದುಮುಕಿಬಿಟ್ಟ. ಪ್ರಾಣ ಉಳಿಸಲು ಪ್ರಾಮಾಣಿಕ ಪ್ರಯತ್ನ ನಡೆಸಿ ಕೊನೆಗೆ ತಾನೇ ಬಲಿಯಾದ. ಇಲ್ಲಿ ಕಕರ ಧೀಮಂತನೂ, ನಿಷ್ಕನೂ ಆಗಿ ನಿಲ್ಲುವುದು. ಅವನ ನಿಸ್ವಾರ್ಥ ಸೇವೆಗೆ ಬೆಲೆ ಸಿಗುವುದಿಲ್ಲ. ಬದಲಾಗಿ ಅವನ ಸಂಸಾರ ಅನಾಥವಾಗುತ್ತದೆ. ಕಕರನ ಮನೆಯ ಜನರನ್ನು ಅನೇಕ ಕಷ್ಟಗಳಿಗೆ ಗುರಿಪಡಿಸಿದರೆ, ಪುರೋಹಿತರ ಮನೆಯಲ್ಲಿ ಅದಕ್ಕಾಗಿ ಪರದಾಡುವುದು ಈ ಕಾರಣದಿಂದಲೇ ತನ್ನನ್ನು ತಾನು ಬಲಿಕೊಟ್ಟು ಕೊಳ್ಳುವ ಪುರೋಹಿತರ ಹೆಂಡತಿ ಮತ್ತು ಕಕರನ ಸ್ಥಿತಿ ಒಂದೇಯಾಗಿ ತೋರುತ್ತದೆ."[೬೯]

ಬೆಸಗರಹಳ್ಳಿ ರಾಮಣ್ಣನವರ ಈ ಮೇಲಿನ ಕತೆಯಲ್ಲಿ ದಲಿತನಾದ ಕಕರನು ತನ್ನ ಜೀವನ ಸಾಗಿಸಲು ಪಡಬಾರದ ಕಷ್ಟಗಳನ್ನು ಪಡುತ್ತಾನೆ. ಅವನು ತನ್ನ ಸ್ವಂತ ಕೃಷಿ ಮಾಡಲು ಹಣಕಾಸಿನ ತೊಂದರೆ ಮತ್ತು ಮಳೆ ಬಾರದೇ ಇರುವುದರಿಂದ ಮನೆಯಲ್ಲಿ ಎಲ್ಲರಿಗೂ ಊಟಕ್ಕೂ ಗತಿ ಇಲ್ಲದ ಪರಿಸ್ಥಿತಿ ಉಂಟಾಗುತ್ತದೆ. ಕೊನೆಗೆ ಹೊಟ್ಟೆಪಾಡಿಗಾಗಿ ಸೌದೆ ತಂದು ಹಾಕುವುದರ ಜೊತೆಗೆ ಅವರಿವರು ಹೇಳಿದ ಕೆಲಸಗಳನ್ನು ಮಾಡಿ ಬರುವ ಕೂಲಿ ಹಣದಿಂದ ಜೀವನ ಸಾಗಿಸುತ್ತಿದ್ದು ಅದರಿಂದಲೂ ಬಂದ ಹಣ ಅವನ ಸಂಸಾರ ಸಾಗಿಸಲು ಸಾಧ್ಯವಾಗುತ್ತಿರಲಿಲ್ಲ. ಅನೈತಿಕವಾಗಿ ಗರ್ಭಿಣಿಯಾದ ಮಗಳ ವಿಪತ್ತು ಒಂದು ಕಡೆ, ಯಾವಾಗಲೂ ಕಾಯಿಲೆ ಯಿಂದ ಕೂಡಿರುವ ಹೆಂಡತಿಯ ಶುಶ್ರೂಷೆಗೆ ಹಣಕಾಸಿನ ಅಡ್ಡಿ. ಇವೆಲ್ಲಕ್ಕಿಂತ ಅತಿ ಮುಖ್ಯವಾಗಿ ಉಗಾದಿ ಹಬ್ಬ ಬಂದಿರುತ್ತದೆ. ಈ ಉಗಾದಿ ಹಬ್ಬ ಮಾಡದೆ ಬೇರೆ ದಾರಿಯಿಲ್ಲ. ಇದಕ್ಕೆ ಹಣ ಹೊಂದಿಸುವುದು ತುಂಬಾ ಕಷ್ಟವಾಗಿ ಕಂಡು ಆಗ ಜೋಯಿಸರ ಬಳಿ ಹಣ ಕೇಳಿ ಬರಲು ಮುಂದಾಗುತ್ತಾನೆ. ಜೋಯಿಸರು ಇವನ ಸ್ಥಿತಿಯನ್ನು ಉಪಯೋಗಿಸಿಕೊಂಡು ತಮ್ಮ ಕೆಲಸ ಮಾಡಿಸಿಕೊಳ್ಳುತ್ತಾರೆ. ಜೋಯಿಸರ ಬಳಿ ನೇರವಾಗಿ

ಹಣ ಕೇಳುವ ಬದಲು ಮಳೆ, ಬೆಳೆಯ ಬಗ್ಗೆ ವಿಚಾರಿಸುತ್ತಾನೆ. ಅವನ ಉದ್ದೇಶ ಜೋಯಿಸರ ಬಳಿ ಹಣ ಕೇಳುವುದಾಗಿರುತ್ತದೆ. ಇದೇ ಸಂದರ್ಭವನ್ನು ಜೋಯಿಸರು ಉಪಯೋಗಿಸಿಕೊಂಡು ಅವನಿಂದ ಅನೇಕ ಕೆಲಸಗಳನ್ನು ಮಾಡಿಸಿಕೊಳ್ಳುತ್ತಾರೆ. ಅದಾದ ನಂತರ ತನಗೆ ಹಣ ಬೇಕೆಂದು ಜೋಯಿಸರನ್ನು ಕೇಳುತ್ತಾನೆ. ತನ್ನೆಲ್ಲಾ ಕೆಲಸ ಮಾಡಿಸಿಕೊಂಡರೂ ಸಹ ಜೋಯಿಸರು ತಕ್ಷಣ ಹಣ ಕೊಡುವುದಿಲ್ಲ.. ಆಗ ಅವನು ಖಿನ್ನನಾಗುತ್ತಾನೆ. ಇದಾದ ಸ್ವಲ್ಪ ಹೊತ್ತಿನಲ್ಲೇ ಜೋಯಿಸರ ಹೆಂಡತಿ ಬಾವಿಗೆ ಹಾರುತ್ತಾಳೆ. ಕಕರ ಜೋಯಿಸರ ಮಾತಿಗೆ ಬೆಲೆ ಕೊಟ್ಟು ಆ ಸಂದರ್ಭದಲ್ಲಿ ತಾನು ಯಾವುದೇ ಯೋಚನೆ ಮಾಡದೆ ಅವಳನ್ನು ಕಾಪಾಡಲು ಮುಂದಾದ ಸಂದರ್ಭದಲ್ಲಿ ತನ್ನ ಜೀವವನ್ನೇ ಕಳೆದುಕೊಳ್ಳುತ್ತಾನೆ. ಕಕರ ನೀರಿಗೆ ಧುಮುಕುವ ಮುಂಚೆ ತನ್ನ ಸಂಸಾರದ ಬಗ್ಗೆ ಯಾವುದೇ ಕಲ್ಪನೆಯನ್ನು ಮಾಡಿಕೊಂಡಿರುವುದಿಲ್ಲ. ತಾನು ಸಾಯುತ್ತೇನೆ ಎಂಬ ಕಲ್ಪನೆಯೂ ಅವನಿಗೆ ಇರುವುದಿಲ್ಲ. ಒಟ್ಟಾರೆ ಕಕರನ ನಿಸ್ವಾರ್ಥ ಸೇವೆಯನ್ನು ನಾವಿಲ್ಲಿ ನೋಡುತ್ತೇವೆ.

ಇಲ್ಲಿ ನಾವು ಗಮನಿಸಲೇಬೇಕಾದ ಮುಖ್ಯ ಅಂಶಗಳೆಂದರೆ ಕಕರನ ಅಸ್ಪೃಶ್ಯತೆ, ಬಡತನ, ನೋವು, ಮಗಳಿಗಾದ ಅನ್ಯಾಯ, ಜೋಯಿಸರು ತೋರಿದ ಅನಾಧರ, ಗ್ರಾಮಸ್ಥರ ಕುಹಕ ನುಡಿಗಳು ಇವನ್ನೆಲ್ಲ ಪರಿಶೀಲಿಸಿ ನೋಡಿದ ನಂತರದ ಯುವಕರು ಮತ್ತು ಲೇಖಕರು ತಮ್ಮ ಬರಹಗಳಲ್ಲಿ ದಲಿತರ ಬಗ್ಗೆ, ದಲಿತರಿಗೆ ಆದ ನೋವು ಹಿಂಸೆಗಳನ್ನು ತಮ್ಮ ಮುಂದಿನ ಬರಹಗಳಲ್ಲಿ ಪ್ರತಿಭಟಿಸುವ ಮೂಲಕ ಬಂಡಾಯ ಏಳುವ ಹಾಗೂ ಚಳುವಳಿಗೆ ಹತ್ತಿಕ್ಕುವ ಪ್ರಮುಖ ಅಂಶಗಳನ್ನು ಕಾಣಬಹುದು.

ದೇವನೂರು ಮಹಾದೇವರು ಕಥಾಲೋಕಕ್ಕೆ ಪ್ರವೇಶ ಮಾಡಿದಾಗ ಅವರಿಗೆ ಕೇವಲ ೨೦ ವರ್ಷ. ೧೯೭೩ರಲ್ಲಿ ಅವರ ಕಥಾ ಸಂಕಲನವಾದ ದ್ಯಾವನೂರು ಹೊರ ಬಂದಿತು. ಇಲ್ಲಿನ ಕಥೆಗಳು ಮತ್ತು ಕಾದಂಬರಿಗಳಾದ ಒಡಲಾಳ ಹಾಗೂ ಕುಸುಮಬಾಲೆಗಳಲ್ಲಿ ಅವರ ಹುಟ್ಟೂರು ದೇವನೂರು ಮತ್ತು ಸುತ್ತಮುತ್ತಲಿನ ಗ್ರಾಮೀಣ ಜನಜೀವನವನ್ನು ಗಂಭೀರವಾಗಿ ಚಿತ್ರಿಸಲಾಗಿದೆ.

ದೇವನೂರು ಬಳಸುವ ಭಾಷೆ ವ್ಯವಸ್ಥೆಯ ಹಿಡಿತಕ್ಕೆ ಸಿಗದ ಶ್ರಮಿಕವರ್ಗದಿಂದ ಸೃಷ್ಟಿಯಾದ ಆಕರವಾಗಿದೆ. ಬದುಕಿನಲ್ಲಿರುವ ಪ್ರೀತಿ, ನಂಬಿಕೆ, ಸಾವು, ಸಂಬಂಧ ಹಾಗೂ ವ್ಯಕ್ತಿಯ ಸಂಘರ್ಷ, ಪರಕೀಯ ಪ್ರಜ್ಞೆ, ಅನಾಥಪ್ರಜ್ಞೆ, ನಿಸ್ಸಹಾಯಕತೆ ಮುಂತಾದವುಗಳನ್ನು ಮಹಾದೇವರ ಕಥೆಗಳು ನಿರೂಪಿಸುತ್ತವೆ.

'ಮಾರಿ ಕೊಂಡವರು' ಕತೆಯಲ್ಲಿ ದಲಿತ ವರ್ಗದ ಬೀರ ಮತ್ತು ಲಕ್ಷ್ಮಿ ಗೌಡರ ಮೂಲಕ ಮಗ ಕಿಟ್ಟಪ್ಪನ ಊಳಿಗದಲ್ಲಿದ್ದಾರೆ. ಅದು ಅವರ ಶ್ರಮಕ್ಕೆ ಸಂಬಂಧಿಸಿದ ವಿಷಯವಾಗುತ್ತದೆ. ಆದರೆ ಅದು ಹೆಣ್ಣನ್ನು ವಶಪಡಿಸಿಕೊಳ್ಳುವುದಕ್ಕೂ ಮುಂದುವರಿಯುತ್ತದೆ. ಇದನ್ನು ಹೆಣ್ಣಿನ ಸಂರಕ್ಷಕನಾಗಿರುವ ಗಂಡ ಪರೋಕ್ಷವಾಗಿ ವಿರೋಧಿಸುತ್ತಾನೆ. ಕಿಟ್ಟಪ್ಪನ ಮೇಲೆ ಜೀತದಾಳಾಗಿರುವ ಬೀರನಿಂದ ನೇರ ಪ್ರತಿಭಟನೆ ಸಾಧ್ಯವಿಲ್ಲದಿರುವುದರಿಂದ ಅವನ ಗೈರು ಹಾಜರಿಯಲ್ಲಿ ಹೆಂಡತಿಗೆ ಸ್ಪಷ್ಟ ಎಚ್ಚರಿಕೆ ಕೊಡುತ್ತಾನೆ. ಆದರೆ ಇದನ್ನು ತನ್ನ ತನವನ್ನು ಕಂಡುಕೊಳ್ಳಲಾಗದ ಸ್ಥಿತಿಯಲ್ಲಿದ್ದ ಬೀರ ಕುಡಿತದ ಮತ್ತಿನಲ್ಲಿ ತನಗರಿಯದಂತೆ ಮಾತಾಡುತ್ತಾನೆ. ಮತ್ತೆ ಅರಿವು ಸ್ಪಷ್ಟವಾಗುತ್ತಿದ್ದಂತೆ ತಾನು ಹಾಗೆ ನಡೆದುಕೊಂಡೇ ಇಲ್ಲ ಎಂಬಂತೆ ವರ್ತಿಸುತ್ತಾನೆ.

ಹೆಂಡತಿಯ ಯೋಗಕ್ಷೇಮದ ಗುತ್ತಿಗೆ ತೆಗೆದುಕೊಂಡಿರುವ ಈತ ಕಿಟ್ಟಪ್ಪನನ್ನು ವಿರೋಧಿಸಿಯೋ ಅಥವಾ ಮೌನವಾಗಿಯೊ ಆ ತಾಣ ಬಿಟ್ಟು ಬೇರೆ ಕಡೆಗೆ ಹೋಗಬಹುದಾಗಿತ್ತು. ಕಿಟ್ಟಪ್ಪನಿಂದ ಬಾಡು ಸ್ವೀಕರಿಸಿದ ಬೀರನಿಗೆ ಬಾಡು ಮತ್ತು ಕುಡಿತದ ಮೋಹವಿರುವಂತೆ ಕಾಣುತ್ತದೆ. ಇದರಿಂದ ಆತ ಕಿಟ್ಟಪ್ಪನ ಎದುರು ಪ್ರೀತಿ ಪಾತ್ರನಂತೆ ಇದ್ದು ಪರೋಕ್ಷದಲ್ಲಿ ಅಸಹನೆ ವ್ಯಕ್ತಪಡಿಸುತ್ತಾನೆ. ಅಪ್ರಜ್ಞಾ ಸ್ತರದಲ್ಲಿ ಹೆಂಡತಿ ತನಗೆ ಮಾತ್ರ ಸೇರಿದವಳು ಎಂಬ ಅರಿವಿನ ಹಿನ್ನೆಲೆಯಲ್ಲಿ ಕಿಟ್ಟಪ್ಪನ ರೀತಿಯನ್ನು ವಿರೋಧಿಸುತ್ತಾನೆ. ಅದು ತನಗೆ ಮೋಸ ಮಾಡುತ್ತಿರುವ ಇಬ್ಬರನ್ನು ಕೊಲೆ ಮಾಡಬೇಕೆನ್ನುವ ಪರಾಕಾಷ್ಠೆಗೆ ತಲುಪುತ್ತದೆ. ಆದರೆ ಬೀರ ಬೆಳಕು ಹರಿಯುತ್ತಿದ್ದಂತೆ ಬಂದ ಕಿಟ್ಟಪ್ಪನನ್ನು ಅಷ್ಟರಲ್ಲಿ ಅವನ ಕುಡಿದ ಮತ್ತು ಇಳಿದಿರುತ್ತದೆ. ನಗುವುದರ ಮೂಲಕ ಸ್ವಾಗತಿಸುತ್ತಾನೆ. ಪಟೇಲರ ಮನೆಯ ನೆಂಟನೊಬ್ಬ ಲಕ್ಷ್ಮಿಯನ್ನು ಕೆಣಕಿದ್ದಕ್ಕೆ ತೀವ್ರವಾಗಿ ಪ್ರತಿಭಟಿಸುವ ಬೀರ, ಇಲ್ಲಿ ನಿಷ್ಕ್ರಿಯನಾಗಿದ್ದಾನೆ. ಬಹುಶಃ ಕುಡಿತ ಅವನಿಗೆ ಎಲ್ಲಕ್ಕೂ ಮೀರಿದ ಆಮಿಷವಾಗಿರಬೇಕು.

ಇದೇ ಸಂದರ್ಭದಲ್ಲಿ ಸಾಂಸ್ಕೃತಿಕವಾಗಿ ಗಮನಿಸುವುದಾದರೆ ಕೆಲವು ಸೂಕ್ಷ್ಮ ಸಂಗತಿಗಳು ಕಾಣಿಸಿಕೊಳ್ಳುತ್ತವೆ.

ಬೀರ ಮತ್ತು ಕಿಟ್ಟಪ್ಪ ಪುರುಷ ಪ್ರಧಾನ ವ್ಯವಸ್ಥೆಯ ಶಿಶುಗಳು. ಹೆಣ್ಣನ್ನು ತಮ್ಮ ಹಿಡಿತದಲ್ಲಿಟ್ಟು ಕೊಳ್ಳಬೇಕೆನ್ನುವ ಮತ್ತು ತಮಗಾಗಿ ಆಕೆಯ ಅಸ್ತಿತ್ವ ಎನ್ನುವ ಸ್ವಕೇಂದ್ರಿತ ಪ್ರತೀಕಗಳು. ವ್ಯವಸ್ಥೆ ಹೆಣ್ಣನ್ನು ಸಂಬಂಧಪಟ್ಟ ಗಂಡಿನ ಆಳ್ವಿಕೆಗೆ ಒಳಪಡಿಸುತ್ತದೆ. ಮತ್ತು ಮೇಲುವರ್ಗದ ಗಂಡು ಸಂಬಂಧ ಪಡದ ಕೆಳವರ್ಗದ ಹೆಣ್ಣನ್ನು ಬಯಸುವುದಕ್ಕೂ ವ್ಯವಸ್ಥೆಯು ಒಪ್ಪಿಗೆ ಸೂಚಿಸುತ್ತದೆ. ಇದರಿಂದಾಗಿ ಕೌಟುಂಬಿಕ ಬಂಧನವೊಂದನ್ನು ಬಿಟ್ಟರೆ ಬೀರ ಮತ್ತು ಕಿಟ್ಟಪ್ಪ ಲಕ್ಷ್ಮಿಯ ದೃಷ್ಟಿಯಲ್ಲಿ ಒಂದೇ ಆಗುತ್ತಾರೆ. ಆಕೆಯನ್ನು ಅವರಿಬ್ಬರೂ ಕೇವಲ ಹೆಣ್ಣಾಗಿ, ಭೋಗದ ವಸ್ತುವಾಗಿ ಗ್ರಹಿಸುತ್ತಾರೆ. ಆದರೆ ಲಕ್ಷ್ಮಿಗೆ ಗಂಡನಿಗಿಂತ ಕಿಟ್ಟಪ್ಪ ಇಷ್ಟವಾಗುತ್ತಿರುವ ಹಾಗೆ ಕಾಣುತ್ತದೆ. ಪಟೇಲರ ಹಟ್ಟಿಗೆ ಬಂದ ನೆಂಟ ತನ್ನನ್ನು ಕೆಣಕಿದ ಎಂದು ಗಂಡನಿಗೆ ಹೇಳುವ ಆಕೆ, ಕಿಟ್ಟಪ್ಪನ ಸಂಬಂಧವನ್ನು ಗುಟ್ಟಾಗಿಡುತ್ತಾಳೆ. ಇದಕ್ಕೆ ಎರಡು ಕಾರಣಗಳಿವೆ. ಆತನ ಬೆದರಿಕೆ ಮತ್ತು ಹೆಣ್ಣಿಗೆ ಆತ ಇಷ್ಟವಾಗುವುದು ಲಕ್ಷ್ಮಿಗೆ ಎರಡನೆಯದು ಅನ್ವಯವಾಗುತ್ತದೆ.

ಕಿಟ್ಟಪ್ಪ ಕೊಟ್ಟ ರಗ್ಗನ್ನು ಗಂಡನಿಂದ ಕಿತ್ತುಕೊಂಡು ತಾನು ಹೊದ್ದುಕೊಳ್ಳುವುದು ಕೂಡ ಆತನ ಪರವಾದ ಅವಳ ಭಾವನೆಯನ್ನು ವ್ಯಕ್ತಪಡಿಸುತ್ತದೆ. ಪರಸ್ಪರರ ಯೋಗಕ್ಷೇಮದಲ್ಲಿ ಇಬ್ಬರೂ ಕಳಕಳಿ ತೋರುವುದು ಅವರು ಅವಲಂಬನೆಯಾಗಿರುವ ಅನಿವಾರ್ಯತೆಗೆ ಮಾತ್ರ. ಇದರಿಂದಾಗಿ ಕತೆ ಈ ಇಬ್ಬರು ಕಿರಾತರ ಕೈಗೆ ಸಿಲುಕಿರುವ ಲಕ್ಷ್ಮಿಯ ದುರಂತವನ್ನು ಕೇಂದ್ರವಾಗಿಸಿದೆ. ಆಕೆಯ ವಿಚಾರದಲ್ಲಿ ಇಬ್ಬರೂ ಪ್ರತ್ಯೇಕವಾಗಿ ತಮ್ಮ ತಮ್ಮ ಹಿತಾಸಕ್ತಿಯನ್ನು ಮುಂದೊಡ್ಡುತ್ತಾರೆ. ಆದ್ದರಿಂದ ಇಬ್ಬರೂ ಅವಳಿಗೆ ಸಮಾನವಾಗುತ್ತಾರೆ. ಗಂಡನಿಗಿಂತ ಸ್ವಲ್ಪ ಶಿಷ್ಟನಾಗಿರುವ ಕಿಟ್ಟಪ್ಪನನ್ನು ಇಷ್ಟಪಡುತ್ತಾಳೆ. ಹಾಗೂ ಸಂಪ್ರದಾಯದ ಬೆಂಬಲ ಗಂಡನ ಮೂಲಕ ಅಭಿವ್ಯಕ್ತವಾಗುವುದರಿಂದ, ಅವನ ಕ್ಷೇಮದ ಬಗೆಗೆ ಕಾತರ ತೋರುತ್ತಾಳೆ."[೭೦]

ದೇವನೂರರ ಮಾರಿಕೊಂಡವರು ಕತೆಯಲ್ಲಿ ಬರುವ ದಲಿತ ವರ್ಗದ ಬೀರ ಲಕ್ಷ್ಮಿ ಮತ್ತು ಕಿಟ್ಟಪ್ಪನ ಪಾತ್ರಗಳ ಬಗ್ಗೆ ವಿಚಾರ ಮಾಡಿ ನೋಡಿದಾಗ ಕಿಟ್ಟಪ್ಪ ಮೇಲು ವರ್ಗದವನಾಗಿದ್ದು, ಬೀರ ಅವರ ಮನೆಯ

ಜೀತದಾಳಾಗಿರುತ್ತಾನೆ. ಈ ಸಂದರ್ಭದಲ್ಲಿ ಬೀರನ ಹೆಂಡತಿ ಲಕ್ಷ್ಮಿಯ ಮೇಲಿನ ಮೋಹ ಕಿಟ್ಟಪ್ಪನ ಕಣ್ಣಿಗೆ ಎಲ್ಲ ಕಟ್ಟುಪಾಡುಗಳನ್ನು ಮೀರಿ ಲಕ್ಷ್ಮಿಯನ್ನು ಅನುಭವಿಸಲು ಮುಂದಾಗುತ್ತಾನೆ. ಲಕ್ಷ್ಮಿಯನ್ನು ಪಡೆಯುಲು ಕಿಟ್ಟಪ್ಪನು ಬೀರನ ಅಸಹಾಯಕತೆಯನ್ನು ದುರುಪಯೋಗಪಡಿಸಿಕೊಳ್ಳುತ್ತಾನೆ. ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಬೀರನಿಗೆ ಸಹಾಯ ಮಾಡುವ ನೆಪದಲ್ಲಿ ಅವಳನ್ನು ಇವನ ಬಲೆಗೆ ಹಾಕಿಕೊಳ್ಳುತ್ತಾನೆ. ಈ ವಿಷಯವನ್ನು ಪ್ರಸ್ತಾಪಿಸುವ ಮೂಲ ಉದ್ದೇಶವೇನೆಂದರೆ ಲಕ್ಷ್ಮಿ ಕೆಳಜಾತಿಯವಳಾದರೂ ಸಹ ತನ್ನ ಗಂಡನ ದಣಿಯ ಆಸೆ ಆಮಿಶಗಳಿಗೆ ಬಲಿಯಾಗುತ್ತಾಳೆ. ಇಲ್ಲಿ ಮುಖ್ಯವಾಗಿ ನಾವು ಗಮನಿಸುವುದು ಬೀರನ ಅಸಹಾಯಕತೆ. ಬೀರನಿಂದ ದೊರೆಯದೆ ಇರಬಹುದಾದ ಸುಖ ಸಂತೋಷ ಕಿಟ್ಟಪ್ಪನಲ್ಲಿ ಲಕ್ಷ್ಮಿ ಕಾಣುತ್ತಾಳೆ. ತನ್ನ ಹೆಂಡತಿಯಲ್ಲಿ ಆಗುವ ಈ ಪರಿವರ್ತನೆ ಹಾಗೂ ನಡವಳಿಕೆಗಳನ್ನು ಬೀರನು ತಿಳಿದಿದ್ದರೂ ಸಹ ಪ್ರತಿಭಟಿಸಲಾರದ ಅಸಹಾಯಕ ಸ್ಥಿತಿಯನ್ನು ನಾವಿಲ್ಲಿ ಕಾಣಬಹುದು. ಇದೇ ಬೀರನು ತನ್ನ ಹೆಂಡತಿಯನ್ನು ಬೇರೆ ಯಾರೋ ಒಬ್ಬರು ಕೆಣಕಿದಾಗ ಬೀರನ ಪ್ರತಿಭಟನೆ ವ್ಯಕ್ತವಾಗುತ್ತದೆ. ಆದರೆ ತನ್ನ ಹೆಂಡತಿ ತನ್ನ ಕಣ್ಣೆದುರಿಗೆ ತನ್ನ ದಣಿಯ ಮಗನೊಂದಿಗೆ ನಡೆಸುತ್ತಿರುವ ಅನೈತಿಕ ಚಟುವಟಿಕೆಗಳನ್ನು ಪ್ರತಿಭಟಿಸಲಾರದಷ್ಟು ಅಸಹಾಯಕನಾಗಿದ್ದಾನೆ. ಅಂದರೆ ಇದೆಲ್ಲದಕ್ಕೂ ಜೀತ ಪದ್ಧತಿಯು ಮೂಲ ಕಾರಣ ಮತ್ತು ದಲಿತ ವರ್ಗದ ಕೆಳಜಾತಿಯವರ ಅಸಹಾಯಕತೆ. ಇದರೊಂದಿಗೆ ಈ ಕತೆ ಮಾರಿಕೊಂಡರು ಎನ್ನುವ ಶೀರ್ಷಿಕೆ ತುಂಬಾ ಸಮಂಜಸವಾಗಿರುವುದನ್ನು ಕಾಣಬಹುದು.

ಒಟ್ಟಾರೆ ಲೇಖಕರು ದಲಿತ ಮತ್ತು ಶೋಷಣೆಯ ಬಗ್ಗೆ ಮುಂದಿನ ಬರಹಗಾರರಿಗೆ, ಹಿಂದುಳಿದ ಜನಾಂಗಕ್ಕೆ ಪರೋಕ್ಷವಾಗಿ ಪ್ರತಿಭಟಿಸಬೇಕೆಂದು ಪ್ರೇರೇಪಿಸುತ್ತದೆ.

ಇವರ ಬರೆಹದ ಬಗ್ಗೆ ಪಿ.ಚಂದ್ರಿಕಾ ಅವರು ಹೇಳುವ ಹಾಗೆ "ಮಹಾದೇವರ ಬಹುಪಾಲು ಬರಹಗಳು ಹೊರಗಿನ ಅಂಶಗಳ ಆಕರ್ಷಣೆಗೆ ಒಳಗಾಗುವ ಈ ವಿಷಯಗಳನ್ನು ಹೇಳುತ್ತವೆ. ಅದು ದೇಸೀಯತೆಯನ್ನು ಮೀರಿದ ರಾಜಕೀಯ ಶಕ್ತಿಯಿರಬಹುದು. ಸಾಮಾಜಿಕ ಸ್ಥಿತಿಗತಿಗಳಿರಬಹುದು, ಅಥವಾ ಪಟ್ಟಣದ ಕಡೆಗಿನ ಆಕರ್ಷಣೆಯಿರಬಹುದು. ಇದೆಲ್ಲದರ ನಡುವೆ ಅನಾವಶ್ಯವಾಗಿ ಸಿಕ್ಕು ಮಾಡಿಕೊಳ್ಳುವ ಮುಗ್ಧ ಜನತೆಯ ಪರವಾಗಿ ದೇವನೂರರು ನಿಲ್ಲುತ್ತಾರೆ. ಮಹಾದೇವರು ಒಟ್ಟು ಸಾಹಿತ್ಯವನ್ನು ಕಣ್ಣ ಮುಂದಿರಿಸಿಕೊಂಡರೆ ಅದಕ್ಕೆ ಸಮಾನಾಗಿ ಬರೆಯಬಲ್ಲ ಇನ್ನೊಬ್ಬ ಕನ್ನಡದ ಲೇಖಕನನ್ನು ಹೆಸರಿಸುವುದು ಕಷ್ಟದ ಕೆಲಸ. ಕನ್ನಡದ ಪ್ರಯೋಗಶೀಲತೆಯ ದೃಷ್ಟಿಯಿಂದ ಮಳ್ಳೂರು ನಾಗರಾಜ, ಅರವಿಂದ ಮಾಲಗತ್ತಿ, ಚೆನ್ನಣ್ಣ ವಾಲೀಕಾರ, ದಲಿತ ಜಗತ್ತಿನ ಅನಾವರಣಕ್ಕೆ ಹೊರಟರೂ ಮಹಾದೇವರಂತೆ ಅಂತರವನ್ನು ಕಾಯ್ದುಕೊಂಡು ನೋಡುವುದಿಲ್ಲ.

ಇಡೀ ವಿಶ್ವಸಾಹಿತ್ಯವನ್ನು ನೋಡಿದಾಗ ಚಿನುವಾ ಅಚಿಬೆ, ಗೂಗಿ, ಓಲೆಸೋಯಂಕಾರಂಥ ಲೇಖಕರು ಗಮನ ಸೆಳೆಯುತ್ತಾರೆ. ಇಂದು ಮೂರನೇ ವಿಶ್ವದ ರಾಷ್ಟ್ರಗಳಲ್ಲಿ ವಸಾಹತುಶಾಹಿಯ ಕ್ರೂರತೆಯು ತನ್ನ ಕಬಂಧ ಬಾಹುವನ್ನು ಚಾಚುತ್ತಿರುವುದರಿಂದ ಸ್ಥಳೀಯತೆ ಎನ್ನುವುದೇ ಮಾಯಾವಾಗುತ್ತಿದೆ. ಈ ದುರಂತವನ್ನು ಸರಳೀಕರಣ, ಏಕ ಸಂಸ್ಕೃತಿಯ ಹರಡುವಿಕೆಯ ಕೇಂದ್ರವಾಗಿಟ್ಟುಕೊಂಡು ತಮ್ಮ ಪ್ರತಿಭಟನೆಯನ್ನು ಸೂಚಿಸುವ ಕೃತಿಗಳನ್ನು ಕಪ್ಪು ಸಾಹಿತ್ಯದಲ್ಲಿ ನೋಡಬಹುದು. ಆದರೆ ಭಾರತೀಯ ಸಂದರ್ಭ ಇದೆಲ್ಲಕ್ಕಿಂತ ಭಿನ್ನ. ಇಲ್ಲಿ

ಕೇವಲ ವಸಾಹತು ಮಾತ್ರವಲ್ಲ, ಜಮೀನುದಾರಿಕೆಯ ದಬ್ಬಾಳಿಕೆ, ಧಾರ್ಮಿಕ, ಸಾಮಾಜಿಕ ಅವಮಾನವನ್ನು ಈ ಹೊತ್ತಿಗೂ ಅನುಭವಿಸುತ್ತಿರುವ ಜನಾಂಗವೊಂದು ಇದೆ ಎನ್ನುವುದು ಭಾರತದಂತಹ ರಾಷ್ಟ್ರವೊಂದರ ಸಂಕೀರ್ಣ ಸಮಸ್ಯೆಯತ್ತ ಕೈ ತೋರಿಸುತ್ತದೆ. ಅಚಿಬೆ, ಗೂಗಿ ಅಂತಹವರಿಗೆ ತಮ್ಮ ಜನರ ಎದುರೇ ನಿಲ್ಲಬೇಕಾದ, ತನ್ನ ಜನರಿಂದಲೇ ಅವಮಾನವನ್ನು ಸಹಿಸಬೇಕಾದ ಅನಿವಾರ್ಯತೆ ಇರಲಿಲ್ಲ. ಅವರ ನೋವು ಸಂಕಟಗಳು ಪರಕೀಯ ಸಂಸ್ಕೃತಿಯ ದೌರ್ಜನ್ಯಕ್ಕೆ ಒಳಗಾದ ಸ್ಥಳೀಯನೊಬ್ಬನ ತಹತಹಿಕೆ.

ಕಾರಂತ ಮತ್ತು ದೇವನೂರರು ಇಬ್ಬರೂ ಮಹತ್ವದ ಲೇಖಕರೇ. ಇವರಿಬ್ಬರೂ ಹೇಳ ಹೊರಡುವುದು ನಮ್ಮ ಸಮಾಜದ ಓರೆಕೋರೆಗಳನ್ನು ಪ್ಯೂರಿಟಿ ಇಂಪ್ಯೂರಿಟಿಯ ವಿಷಯವಾಗಿ ಇಬ್ಬರು ಲೇಖಕರ ಆಲೋಚನೆಗಳೂ ಭಿನ್ನ ಮತ್ತು ಎಷ್ಟೋ ವೇಳೆ ಕಾರಂತರು ವಿಷಯ ಸಂಗ್ರಹಣೆಯಿಂದ ದೊರೆತ ಮಾಹಿತಿಯನ್ನು ರಿ-ಪ್ರೊಡ್ಯೂಸ್ ಮಾಡುವವರಾಗಿ ಬಿಡುತ್ತಾರೆ.

ಇದು ಆರೋಪವೆಂದು ಭಾವಿಸಿ ಹೇಳುತ್ತಿಲ್ಲ. ಆದರೆ ದೇವನೂರರಿಗೆ ಅಂತಹ ವಾತಾವರಣವೇ ತೆರೆದುಕೊಟ್ಟ ಅನುಭವ ಲೋಕವಿದೆ. ಆದ್ದರಿಂದಲೇ ಕೃತಿಯ ಆಕೃತಿ ಎರಡರಲ್ಲೂ ಅವರು ದಲಿತ ಸಮೂಹ ಆಶೋತ್ತರಗಳನ್ನು ತುಂಬಿರುತ್ತಾರೆ.

ದೇವನೂರರು ಬರೆಯುತ್ತಿರುವ ಈ ಹೊತ್ತಿನ ಪರಿಸ್ಥಿತಿ ಕಾರಂತರ ಕಾಲದ ಪರಿಸ್ಥಿತಿಗಿಂತ ತೀರ ಭಿನ್ನವಾಗಿದೆ. ಆ ಹೊತ್ತಿನ ಆಕ್ರಮಣಕಾರಿ ಮತಾಂತರಗಳಾಗಲಿ, ಊಳಿಗಮಾನ್ಯತೆಯ ದಟ್ಟತೆಯಾಗಲೀ, ಜಾತಿಪದ್ಧತಿಯ ತೀವ್ರತೆಯಾಗಲಿ ಈ ಹೊತ್ತಿಗಿಲ್ಲ. ಆದರೆ ಭಾರತೀಯರು ನಂಬಿಕೊಂಡು ಬಂದಿರುವ ಮೇಲುಕೀಳು ಭಾವನೆಗಳು ಮನದ ಆಳದಲ್ಲಿ ಹಾಗೆ ಉಳಿದಿವೆ. ತುಂಬಾ ಉದಾರಿ ಎಂದು ತೋರಿಸಿಕೊಳ್ಳುವವರೂ ಎಲ್ಲೋ ಒಂದು ಹಂತದಲ್ಲಿ ಜಾತೀಯುತೆಯ ಭಾವನೆಯನ್ನು ಜೀವಂತವಾಗಿ ಉಳಿಸಿಕೊಳ್ಳಲು ಬಯಸುತ್ತಾರೆ."[೭೧]

ಈ ವಿಚಾರಗಳು ಸ್ವಾತಂತ್ರ್ಯೋತ್ತರ ಕನ್ನಡ ಕಥಾಸಾಹಿತ್ಯದಲ್ಲಿ ಅಗತ್ಯ ಗಮನಿಸಲೇಬೇಕಾದಂಥವಾಗಿವೆ. ಪಿ.ಚಂದ್ರಿಕಾರವರ ಅಭಿಪ್ರಾಯದಂತೆ ದಲಿತ ಸಾಹಿತ್ಯವನ್ನು ರಚಿಸಿರುವ ಅನೇಕ ಕತೆಗಾರರಿಗಿಂತ ದೇವನೂರ ಮಹಾದೇವರು ದಲಿತರ ಬಗ್ಗೆ ತಮ್ಮ ಕತೆಗಳಲ್ಲಿ ವಿಭಿನ್ನವಾಗಿ ಕ್ರಾಂತಿಕಾರಿಯಾಗಿ, ಮನನಾಟುವಂತೆ ರಚಿಸಿರುವುದನ್ನು ಕಾಣಬಹುದು. ದೇವನೂರರು ಮತ್ತು ಅದಕ್ಕಿಂತ ಹಿಂದಿನವರು ರಚಿಸಿರುವ ದಲಿತ ಸಾಹಿತ್ಯದಿಂದ ಅನೇಕ ಬದಲಾವಣೆಯನ್ನು ಸಮಾಜದಲ್ಲಿ ಕಾಣಬಹುದು. ಆದರೆ ಇತ್ತೀಚಿನ ದಿನಗಳಲ್ಲಿ ಹಿಂದಿನ ತೀವ್ರತೆ ಮಾಯವಾಗಿ ಆಗಿನ ಮತಾಂತರಗಳಾಗಲಿ, ಊಳಿಗಮಾನ್ಯತೆಯ ದಟ್ಟತೆಯಾಗಲಿ, ಜಾತಿ ಪದ್ಧತಿಯ ತೀವ್ರತೆಯಾಗಲಿ, ಮೇಲು ಕೀಳುಗಳೆಂಬ ಭಾವನೆ ಮಾಯವಾಗಿದ್ದು ಸಮಾನತೆಯನ್ನು ಕಾಣಬಹುದು. ಇತ್ತೀಚಿನ ದಿನಗಳಲ್ಲಿ ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಅನೇಕ ಬದಲಾವಣೆಗಳಾಗಿವೆ.

ಶ್ರೀಕೃಷ್ಣ ಆಲನಹಳ್ಳಿಯವರ ಕವಿತೆ, ಕಥೆಗಳು ಯುವಕರಿಗೆ ಕನಸುಗಳನ್ನು ಮೂಡಿಸುವಷ್ಟು ದಂಗು ಹಿಡಿಸಿವೆ. ಅವರ ಕಾದಂಬರಿಗಳು ಸಾಮಾನ್ಯ ಓದುಗನಿಂದ, ಗಂಭೀರ ಓದುಗ ಮತ್ತು ವಿಮರ್ಶಕರವರೆಗೆ, ಎಲ್ಲರಲ್ಲೂ ಚಿಂತನೆಗೆ ಗುರಿಮಾಡಿದ್ದವು. ಈ ಕಾರಣದಿಂದ ಅವರು ಖ್ಯಾತರೂ ಜನಪ್ರಿಯರೂ ಆಗಿದ್ದಾರೆ.

ಇವರು ತಮ್ಮ ಬಾಲ್ಯವನ್ನು ಚಿಕ್ಕಹಳ್ಳಿಯಿಂದ ಆಲನಹಳ್ಳಿಯಲ್ಲಿ ಕಳೆದರು. ಸೂಕ್ಷ್ಮಬುದ್ಧಿಯ ಚುರುಕು ಸ್ವಭಾವದ ಮುಗ್ಧ ಕೃಷ್ಣ ಹಳ್ಳಿಯ ಜತೆ ಬಿಡಿಸಲಾಗದ ಒಡನಾಡಿಯಾಗಿದ್ದರು. ಹಳ್ಳಿಯ ಬದುಕಿನ ಜತೆ ಗಾಢ ಸಂಬಂಧವನ್ನು ಹೊಂದಿದ್ದ ಕಾರಣ ಅಲ್ಲಿಯ ಪ್ರೀತಿ, ಕ್ರೌರ್ಯವನ್ನು ಅನುಭವಿಸಿದ್ದರು. ಇದರ ಸೊಗಡನ್ನು ಅವರ ಸಾಹಿತ್ಯದಲ್ಲಿ ತುಂಬಿಕೊಳ್ಳಲು ಕಾರಣವಾಗಿದೆ. ಕಾಲೇಜು ವಿದ್ಯಾರ್ಥಿಯಾಗಿದ್ದಾಗಲೇ ಕವಿತೆಗಳನ್ನು ಬರೆದು 'ಮಣ್ಣಿನ ಹಾಡು' ಎಂಬ ಕವನ ಸಂಕಲನ ಪ್ರಕಟಿಸಿದರು. ಗೋಪಾಲಕೃಷ್ಣ ಅಡಿಗರ ಮೆಚ್ಚುಗೆ ಮಾತುಗಳು ಮುನ್ನುಡಿಯೊಂದಿಗೆ ಅದು ಹೊರ ಬಂದಿತು. ಸಾಹಿತ್ಯಾಸಕ್ತರ ಗಮನ ಸೆಳೆಯಿತು. ಈ ಸಂಕಲನಕ್ಕೆ ಅವರಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಬಂದಿತು. ಅದು ನವ್ಯದ ಕಾಲ, ಕೃಷ್ಣರು ನವ್ಯ ಸಾಹಿತಿಗಳ ಜತೆಗಿದ್ದರೂ ನವ್ಯರಂತೆ ಬರೆಯಲಿಲ್ಲ. ಅವರ 'ಕಾಡು' ಕಾದಂಬರಿ ಮತ್ತು ಕಥೆಗಳು ನವ್ಯದ ಗುಣಾತ್ಮಕ ಅಂಶಗಳನ್ನು ಪಡೆದು ಕಲಾತ್ಮಕತೆಯೊಂದಿಗೆ ಸೃಷ್ಟಿಯಾಗಿವೆ.

ಹಳ್ಳಿಯ ದಟ್ಟವಾದ ಅನುಭವವನ್ನು ದಕ್ಕಿಸಿಕೊಂಡು ಇವರು ಪ್ರತಿಮೆ ಸಂಕೇತ ಮತ್ತು ವಿವರಗಳು, ನುಡಿಗಟ್ಟುಗಳು ಅಲ್ಲಿಂದಲೇ ಸೃಷ್ಟಿಯಾಗ ತೊಡಗಿದವು. ನವ್ಯದ ಪ್ರಭಾವವೂ ಯೌವ್ವನಕ್ಕೆ ತಕ್ಕ ಉತ್ಸಾಹವೂ ಕಾರಣವಾಗಿ ಅವರ ಮೊದಲ ಕಥೆ, ಕವಿತೆಗಳಲ್ಲಿ ಕಾಮವೇ ವಸ್ತುವಾಯಿತು. ನಂತರ ದಿನಕಳೆದಂತೆ ಅವರ ಅಪಾರ ಅನುಭವದ ತುಡಿತಕ್ಕೆ ಕವಿತೆ, ಕಥೆಯ ರೂಪ ಸಾಲದಾಯಿತು. ಅತ್ತ ಹಳ್ಳಿ ಹಾಗೂ ಕಳ್ಳುಬಳ್ಳಿಯ ಸಂಬಂಧಗಳು, ಇತ್ತ ನಗರದ ವ್ಯಾಮೋಹ, ಇವುಗಳ ನಡುವೆ ಭೂತ, ವರ್ತಮಾನಗಳಲ್ಲಿ ತೊಳಲಾಡಿದ ತಪ್ತಸ್ಥಿತಿಯ ಅನುಭವಗಳು ಅವರ ಕಥೆಗಳಲ್ಲಿ ಮೊದಮೊದಲು ಮೂಡಿಬಂದವು. ಆದರೆ ಕೃಷ್ಣರ ಮೂಲ ಅನುಭವದ ಬೇರುಗಳು ಬಾಲ್ಯವನ್ನು ಕಳೆದ ಹಳ್ಳಿಯಲ್ಲಿತ್ತು.

" 'ತಪ್ತ' ಇದು ಇವರ ಮೊದಲನೆಯ ಕಥಾ ಸಂಕಲನ. ಇದರಲ್ಲಿ ಬಾಲ್ಯ ಮತ್ತು ಯೌವ್ವನಕ್ಕೆ ಸಂಬಂಧಿಸಿದ ಅನುಭವಗಳನ್ನು ಹಳ್ಳಿ ಮತ್ತು ನಗರ ಪರಿಸರದಲ್ಲಿ ನಿರೂಪಿಸಲಾಗಿದೆ.

'ಆಗಂತುಕ' ಕತೆಯಲ್ಲಿ ಕಿಟ್ಟಿಯೆಂಬ ಹುಡುಗನ ಮೂಲಕ ಕಥೆ ಬಿಚ್ಚಿಕೊಳ್ಳುತ್ತದೆ. 'ಯಾರೋ ಬರ್ತಾರೆ' ಎಂದು ಕಿಟ್ಟಿಗೆ ಅನ್ನಿಸುವುದು ಅಸಹಜವೆಂದು ಅನ್ನಿಸಿದರೂ ಬೆಳಿಗ್ಗೆ ಕೂಗುವ ಕಾಗೆಯಿಂದ ನಂಬಿಕೆ ಇರುವಂತೆ 'ಯಾರೊ ಬರ್ತಾರೆ' ಎಂಬುದು ನಿಜ ಅನ್ನಿಸುತ್ತದೆ. ಆ ಮುಗ್ಧ ಕಿಟ್ಟಿಯ ನಂಬಿಕೆ ನಿಜವಾದರೂ ಅದು ಭೀಕರವಾಗುತ್ತದೆ. ಸಾವು ಬಂದು ಅಜ್ಜಯ್ಯನಿಗೆ ಆವರಿಸಿಕೊಳ್ಳುತ್ತದೆ.

'ತಪ್ತ' ಕಥೆಯಲ್ಲಿ ನಾಯಕನಿಗೆ ಅಕ್ಕನ ಮಗಳು ಗೌರಿಯನ್ನು ಮದುವೆಯಾಗಲು ಒತ್ತಾಯಿಸುತ್ತಾರೆ. ಆದರೆ ಅವನು ಪ್ರಭಾಳನ್ನು ಪ್ರೀತಿಸುತ್ತಿದ್ದಾನೆ. ಆಕೆಯೇ ತನಗೆ ಸರಿಯಾದ ಸಂಗಾತಿಯೆಂದು ನಂಬಿ ಕೊಂಡಿದ್ದಾನೆ. ಆಯ್ಕೆಯ ಸಂದಿಗ್ಧತೆಯಿಂದ ಬಳಲುತ್ತಿದ್ದಾನೆ. ಕಥೆಯ ಪರಿಣಾಮದಲ್ಲಿ ಹಳ್ಳಿಯ ಗೌರಿಯು ನಿಜ ಅನ್ನಿಸಿದಷ್ಟು ಪ್ರಭಾ ನಿಜ ಅನ್ನಿಸುವುದಿಲ್ಲಾ. ಯಾಕೆಂದರೆ ನಾಯಕನ ಬೇರುಗಳು ಹಳ್ಳಿಯಲ್ಲಿ ಮತ್ತು ಕಳ್ಳು-ಬಳ್ಳಿಯಲ್ಲಿ ಇರುವುದರಿಂದ ಅವನ ತೊಳಲಾಟ ಸಹಜವಾಗುವುದಿಲ್ಲ. ಗೌರಿಯನ್ನು ಗ್ರಹಿಸುವ ದೃಷ್ಟಿಯಲ್ಲಿ ಪ್ರಭಾಳನ್ನು ಗ್ರಹಿಸುವ ದೃಷ್ಟಿಯಲ್ಲಿ ವ್ಯತ್ಯಾಸವಿದೆ."[೭೨]

ಶ್ರೀಕೃಷ್ಣ ಆಲನಹಳ್ಳಿಯವರ ಸಾಹಿತ್ಯವನ್ನು ನಾವು ಈಗಾಗಲೇ ಅನೇಕ ರೀತಿಗಳಿಂದ ಅನೇಕ ವಿಮರ್ಶಕರು ವಿಮರ್ಶಿಸಿದ್ದಾರೆ. ಹಾಗೂ ಅವರ ಕೃತಿಗಳನ್ನು ತುಲನಾತ್ಮಕವಾಗಿ ನೋಡಿ ಮೆಚ್ಚಿದ ವಿಮರ್ಶಕರು ತುಂಬಾ ವಿರಳವೆನಿಸುತ್ತದೆ. ಕೃಷ್ಣರ ವ್ಯಕ್ತಿತ್ವವನ್ನು ಕಂಡವರು ಅವರ ವ್ಯಕ್ತಿತ್ವವನ್ನು ವಿವಿಧ ರೀತಿಯಾಗಿ ತಿಳಿದುಕೊಂಡು ಸಾಹಿತ್ಯದ ವಿವಿಧ ಘಟ್ಟಗಳಲ್ಲಿ ಗುರುತಿಸಿ ವಿಮರ್ಶಿಸಲು ಪ್ರಯತ್ನಿಸಿರುವುದನ್ನು ಕಾಣಬಹುದು. ಪ್ರಾರಂಭದಲ್ಲಿ ಶ್ರೀಕೃಷ್ಣ ಆಲನಹಳ್ಳಿಯವರನ್ನು ನವ್ಯ ಕತೆಗಾರರ ಸಾಲಿಗೆ ಎಳೆದು ತಂದು ನಿಲ್ಲಿಸಿದ ಅಡಿಗ, ಅನಂತಮೂರ್ತಿ ಮುಂತಾದವರು ಪ್ರಶಂಸೆಯ ಮಾತುಗಳನ್ನು ಆಡಿದ್ದಾರೆ. ಮತ್ತೆ ಇದೇ ಸಾಹಿತಿಯನ್ನು ವಿವಿಧ ದೃಷ್ಟಿಯಿಂದ ಕಾಮುಕ ದೃಷ್ಟಿ, ಹೆಣ್ಣುಗಳನ್ನು ಭೋಗದ ವಸ್ತುಗಳಾಗಿ ತನ್ನ ಸಾಹಿತ್ಯದಲ್ಲಿ ಸೃಷ್ಟಿಸಿದ ಸಾಹಿತಿಯೆಂದು ಟೀಕಿಸಿದ್ದಾರೆ. ಮತ್ತೆ ಕೆಲವರು ಮತ್ತೆ ಯಾವುದೋ ದೃಷ್ಟಿಯಿಂದ ನೋಡಿದರೂ ಸಹ ಇವರನ್ನು ಮತ್ತು ಇವರ ಕೃತಿಗಳನ್ನು ಓದಿ ಅರ್ಥ ಮಾಡಿಕೊಂಡು ಹಂಸ ಕ್ಷೀರ ನ್ಯಾಯದಂತೆ ವಿಮರ್ಶೆ ಮಾಡಿದ ಅನೇಕ ವಿಮರ್ಶಕರು ಕೃಷ್ಣರ ಸಾಹಿತ್ಯವನ್ನು ಯಾವುದೇ ಸಂಶಯಾನುಮಾನಗಳಿಗೆ ಆಸ್ಪದವಿಲ್ಲದೆ ನೋಡಲು ಪ್ರಯತ್ನಿಸಿದರು ಎಂಬ ವಿಷಯವನ್ನು ನಾವು ಈಗಾಗಲೇ ಗ್ರಹಿಸಿದ್ದೇವೆ. ಆದ್ದರಿಂದ ಶ್ರೀಕೃಷ್ಣ ಆಲನಹಳ್ಳಿ ಯವರ ಬಗ್ಗೆ ಟೀಕೆ, ಟಿಪ್ಪಣಿಗಳಿಲ್ಲದೆ ಸಾರ್ವಕಾಲಿಕ, ಉತ್ತಮ ಕತೆಗಾರರಲ್ಲಿ ಒಬ್ಬರು ಎಂಬುದನ್ನು ಒಪ್ಪಿಕೊಳ್ಳಲೇಬೇಕಾಗುತ್ತದೆ.

"ಶ್ರೀಕೃಷ್ಣ ಆಲನಹಳ್ಳಿಯವರು ಸಾಹಿತ್ಯಲೋಕಕ್ಕೆ ಕಾಲಿಟ್ಟು ನವೋದಯರ ಸಂಭ್ರಮವನ್ನೂ ನವ್ಯರ ಉತ್ಸಾಹವನ್ನು ಹಾಗೂ ಬಂಡಾಯ ದಲಿತರ ಆವೇಶವನ್ನು ಬೆರಗಿನಿಂದಲೂ ತಮಾಷೆಯಿಂದಲೂ ನೋಡಿದವರು. ಎಷ್ಟೇ ಒಲವಿದ್ದರೂ ಕುವೆಂಪು, ಕಾರಂತ, ರಾವ್‌ಬಹದ್ದೂರ್ ಅವರನ್ನು ಅನುಸರಿಸಲಿಲ್ಲ. ಬೆನ್ನಿಗೆ ಇದ್ದ ಅನಂತಮೂರ್ತಿ, ಲಂಕೇಶ್, ಕಾರ್ನಾಡ್, ಚಿತ್ತಾಲರನ್ನೂ ಅನುಸರಿಸಲಿಲ್ಲ. ಕೃಷ್ಣರ ಕಾಲವೆಂದರೆ ನವ್ಯರ ಏರುತ್ಸಾಹದ ಕಾಲ. ನವ್ಯದ ಐಡಿಯಾಲಜಿಗಳು, ಪರಿಭಾಷೆ, ನುಡಿಗಟ್ಟುಗಳು ಮತ್ತು ತಂತ್ರಗಳು ಯಾರನ್ನೂ ತಮ್ಮೆಡೆ ಸೆಳೆದುಕೊಳ್ಳುವ ಶಕ್ತಿ ಪಡೆದಿದ್ದವು. ಅಂಥ ಸಂದರ್ಭದಲ್ಲಿ ಕೃಷ್ಣರು ಅದರಿಂದ ಒಂದು ಡಿಸ್ಟೆನ್ಸ್ ಕಾಯ್ದುಕೊಂಡದ್ದು ಅವರ ಸಾಧನೆಯೆಂದೇ ಹೇಳಬೇಕಾಗುತ್ತದೆ. ಏಕೆಂದರೆ ಯಾವುದೇ ಸೃಜನಶೀಲ ಬರಹಗಾರನು ತನ್ನ ಸಮಕಾಲೀನ ಸಂದರ್ಭದ ಯಾವುದೇ ಪಂಥ, ವಾದ ಮತ್ತು ಸಾಹಿತ್ಯಕ ಚಳುವಳಿಗಳೊಡನೆ ಗುರುತಿಸಿಕೊಳ್ಳುವ ಅನಿವಾರ್ಯತೆಯಿದ್ದರೂ ಅಂಥ ಒಟ್ಟಾರೆ ಸಾಂಸ್ಕೃತಿಕ ಸಂದರ್ಭದ ಲಾಭ ಪಡೆದೂ, ಅಂಥದ್ದರ ಒಳಗೇ ಇರುವ ಮಿತಿಯನ್ನು ಮೀರಿ ಬೆಳೆಯುವ ಸವಾಲನ್ನು ಸ್ವೀಕರಿಸಿ ಎದುರಿಸಬೇಕಾಗುತ್ತದೆ. ಇದು ಕೃಷ್ಣರಿಗೆ ಸಾಧ್ಯವಾಗಿದೆ. ಆದ್ದರಿಂದಲೇ ಅವರು ಪಾಂಡಿತ್ಯ ಬೌದ್ಧಿಕತೆಯಿಂದ ದೂರ ಸರಿದಿದ್ದು. ತಮ್ಮ ಸಹಜ ಪ್ರತಿಭೆಗೆ ದಕ್ಕಿದ್ದನ್ನು ಬರೆದು ಕನ್ನಡ ಸಾಹಿತ್ಯದಲ್ಲಿ ತಮ್ಮದೇ ಆದ ಒಂದು ಪ್ರತ್ಯೇಕ ಸ್ಥಾನವನ್ನು ಸ್ಥಾಪಿಸಿಕೊಂಡು ನಿಂತಿದ್ದು ಅವರ ಸಾಧನೆಯಾಗಿದೆ. ತಾನು ಹುಟ್ಟಿ ಬೆಳೆದ ಹಳ್ಳಿಯ ಪರಿಸರ ಅಲ್ಲಿಯ ಕಳ್ಳು ಬಳ್ಳಿಯ ಸಂಬಂಧಗಳು, ಅನೇಕ ಬಗೆಯ ಮಾನವ ಮುಖಗಳು ಅವರ ಸಾಹಿತ್ಯಾಭಿವ್ಯಕ್ತಿಗೆ ಸಾಮಗ್ರಿಯಾದವು. ಮನುಷ್ಯ ಮತ್ತು ಸಮಾಜ ಪರಿವರ್ತನೆಗೊಳ್ಳುವ ಹಂತಗಳನ್ನು ಕೃಷ್ಣರ ಸಾಹಿತ್ಯ ವ್ಯಕ್ತಪಡಿಸುತ್ತದೆ.

ಕೆ.ವಿ.ತಿರುಮಲೇಶ ಅವರು ಹೇಳುವಂತೆ "ಬದಲಾವಣೆಯ ಅನಿವಾರ್ಯತೆಯನ್ನು ಒಪ್ಪಿಕೊಂಡೇ ಅವರಿಂದ ಬುಡ ಮೇಲಾಗುವ ಜನಾಂಗ ಸಂಸ್ಕೃತಿಯನ್ನು ಚಿತ್ರಿಸುವುದೂ ಬಹಳ ಮುಖ್ಯವಾಗಿತ್ತು. ಹಾಗೂ

ಇಂಥ ಚಿತ್ರಣವೇ ಅದರ ರಕ್ಷಣೆ ಎಂದೂ ಕೂಡ ಅವನಿಗೆ ಅನಿಸಿರಬಹುದು. ಒಂದು ರೀತಿಯಲ್ಲಿ ಇದು ಕೃಷ್ಣರ ನವ್ಯದ ವೈಚಾರಿಕತೆಗೆ ನೀಡಿದ ಪ್ರತಿಕ್ರಿಯೆಯೆಂತಲೂ ಹೇಳಬಹುದು. ಬದುಕಿನಲ್ಲಿ ಅನು ಮಾನದಿಂದ ನೋಡುತ್ತಿದ್ದವರಿಗೆ ಆತ ಬದುಕಿನ ವಿಜೃಂಭಣೆಯ ಉತ್ತರವನ್ನು ಕೊಟ್ಟಹಾಗಿದೆ."[೭೩]

ಕಾಳೇಗೌಡ ನಾಗವಾರರ ಮೀನುಗಳು ಕತೆಯಲ್ಲಿ ನೀರಿನೊಳಗಿದ್ದ ಮೀನುಗಳು ಹೊರಗೆ ಬರಲು ಸಾಧ್ಯ ವಾಗದಂತಹ ಮೀನುಗಳ ಸ್ಥಿತಿಯನ್ನು ಹಾಗೂ ಸಣ್ಣ ಮೀನುಗಳನ್ನು ತಿಂದು ದೊಡ್ಡ ಮೀನು ಬದುಕುತ್ತದೆಂದು ಹೊನ್ನ ಮತ್ತು ಹೊಂಬ ಇವರೊಡನೆ ಚರ್ಚೆ ನಡೆಯುವ ಬಾಲ್ಯದ ಆಸೆ ಆಕಾಂಕ್ಷೆಯನ್ನು ಕಾಣಬಹುದಾಗಿದೆ. ಈ ಕತೆಯಲ್ಲಿ ಮುಂದುವರೆದು ಅರೆಬೆತ್ತಲೆಯಾಗಿದ್ದ ಗಿರಿಜಳನ್ನು ತನ್ನ ಮಾಲೀಕನ ಮಗಳು ಎಂಬ ಭಾವನೆಯಿಂದ ಹೊಂಬನ ಮನಸ್ಸಿನ ಮೇಲೆ ಇತರ ಯಾವುದೇ ಮೋಹಕ ವಿಚಾರಗಳು ಸುಳಿಯದೆ ಇರುವುದನ್ನು ಗಮನಿಸಬಹುದು. ಇಂತಹ ಒಂದು ಹುಡುಗನ ಪರಿಸ್ಥಿತಿಯನ್ನು ಕಂಡು ಪ್ರೌಢಾವಸ್ಥೆಗೆ ಬಂದಿರುವ ಹುಡುಗಿ ಗಿರಿಜ ನಾಚಿಕೆಯಿಂದ ಬಂದು ಅವನನ್ನು ಮಾತನಾಡಿಸಿದಾಗಲೂ ಅವನ ಭಾವನೆ ಸಡಿಲಗೊಳ್ಳಲಿಲ್ಲ. ಹೊಲೆಯ ಹುಡುಗನಿಗೆ ಈ ಸಂದರ್ಭವನ್ನು ನಿಭಾಯಿಸುವುದು ತುಂಬಾ ಕಷ್ಟವಾಗುತ್ತದೆ. ಇದೇ ರೀತಿ ಈ ಹುಡುಗ ಗೌಡರ ಹುಡುಗರೊಡನೆ ಒಂದೇ ಕೊಳದಲ್ಲಿ ಈಜಾಡುವುದಕ್ಕೂ ಸಹ ಹಿಂಜರಿಯುತ್ತಾನೆ. ಇನ್ನೊಂದು ಸಂದರ್ಭದಲ್ಲಿ ಗೌಡರ ಹೊನ್ನನ ಅಣ್ಣ ಹೊಂಬನಿಗೆ ಎಳನೀರನ್ನು ಕೊಚ್ಚಿಕೊಡುವುದಕ್ಕೆ ತಿರಸ್ಕರಿಸುವುದನ್ನು ಕಾಣಬಹುದು. ಕೊನೆಯದಾಗಿ ನಾವು ಗಮನಿಸಬೇಕಾದ ಅಂಶವೇನೆಂದರೆ ಜೀತಪದ್ಧತಿಯಲ್ಲಿ ಸಿಲುಕಿ ಅವರೆಷ್ಟು ಭಯಾನಕ ವಾತಾವರಣದಲ್ಲಿದ್ದಾರೆ ಮತ್ತು ಅಸಹಾಯಕ ಸ್ಥಿತಿಯಲ್ಲಿ ಇರುವುದನ್ನು ಹಾಗೂ ದಲಿತರ ಬದುಕು ಹೀನಾಯ ಸ್ಥಿತಿಯಲ್ಲಿ ಇರುವುದನ್ನು ನಾವಿಲ್ಲಿ ಕಾಣಬಹುದು. ಈ ಕತೆಯನ್ನು ಓದಿದ, ಕೇಳಿದ, ತಿಳಿದುಕೊಂಡ ದಲಿತ ಜನಾಂಗಕ್ಕೆ ಪ್ರೋತ್ಸಾಹವಿಲ್ಲದೆಯೇ ತನ್ನಿಂದ ತಾನಾಗಿಯೇ ಈ ಪದ್ಧತಿಯನ್ನು ಪ್ರತಿಭಟಿಸಬೇಕೆಂಬ ಹುಮ್ಮಸ್ಸು ಹುಟ್ಟುವುದನ್ನು ಸಹಜವಾಗಿ ಕಾಣಬಹುದು. ಹೀಗೆ ದಲಿತ ಬಂಡಾಯ ಚಳುವಳಿಯ ಪ್ರಭಾವವನ್ನು ಇಲ್ಲಿ ಹೆಚ್ಚಾಗಿ ಕಾಣಬಹುದು.

"ಈ ದಿಗಿಲೇ ಸಹಜತೆಯನ್ನು ಕಿತ್ತುಕೊಂಡಿದೆ. ಎಳನೀರು ಕೊಚ್ಚಿ ಕೊಡುತ್ತಿರುವ ಹೊನ್ನನ ಅಣ್ಣ ಹೊಲೆಯ ಹುಡುಗನ ಎಳನೀರು ಬುರುಡೆ ಒಡೆದು ಕೊಡಲು ತಿರಸ್ಕರಿಸುತ್ತಾನೆ. ಬೆಳೆಯುವ ಮಕ್ಕಳಿಗೆ ಇದು ಎಷ್ಟು ಆಘಾತಕಾರಿ ಎಂದು ಭಯವಾಗುತ್ತದೆ. ನಾಗವಾರ ಅವರು ವ್ಯವಸ್ಥೆಯ ಸೂಕ್ಷ್ಮಗಳನ್ನು ಪರಿಚಯ ಮಾಡಿಸಿಕೊಡುತ್ತಲೇ, ಅದರ ಹಲ್ಲುಗಳು ಮೊನಚಾಗಿರುವುದನ್ನು ತೋರಿಸುತ್ತಾರೆ. ಭಯದ ನೆರಳಿನಲ್ಲಿ ಈ ಮಕ್ಕಳು ಬೆಳೆಯುತ್ತಿದ್ದಾರೆ. ಭಯವೇ ಸ್ಥಾಯಿಯಾಗಬಹುದಾದ ಭವಿಷ್ಯ ಇವರದಾಗಬಹುದೆ ಎಂಬ ಆತಂಕ ಕಾಡುತ್ತದೆ. ಹೊನ್ನನ ಅಕ್ಕ ಗಿರಿಜಳ ಅಣ್ಣನೊಡನೆ ಸಂಬಂಧ ಬೆಳೆಸಿರುವುದು ಅವರ ಪರಸ್ಪರ ದೈಹಿಕ ಬಯಕೆಗಿಂತ ವ್ಯವಸ್ಥೆಯು ಸೃಷ್ಟಿಸಿರುವ ಅಸಹಾಯಕತನದ ಕುರುಹು ಅನ್ನಿಸುತ್ತದೆ."[೭೪]

ಸಾಂಸ್ಕೃತಿಕ ವ್ಯವಸ್ಥೆಗೆ ಸಂಬಂಧಪಟ್ಟಂತೆ ಜಾನಪದ ಪ್ರಭಾವ ಮೇಲೆ ಕಾಣಿಸಿರುವ ಉದಾಹರಣೆಗಳನ್ನು ಕತೆಗಳ ಮೂಲಕ ವಿವರಿಸುವ ಪ್ರಯತ್ನ ಮಾಡಲಾಗಿದೆ. ನಮ್ಮ ಗ್ರಾಮ ಸಮಾಜದ ಮೂಲ ಸೊಗಡು ಇರುವುದು ಜನಪದದಲ್ಲಿಯೇ. ಜನಪದ ಕತೆಗಳು ಒಬ್ಬರಿಂದ ಒಬ್ಬರಿಗೆ ಹರಡಿ ಹೊಸ ಸಮಾಜವನ್ನು

ಸೃಷ್ಟಿಸುವ ಪ್ರಯತ್ನ ಮಾಡುತ್ತವೆ. ಅದರೊಳಗೆ ಅಡಗಿರುವ ಹೊಸ ಹೊಸ ಅಂಶಗಳು ಬೆಳಕಿಗೆ ಬಂದು ಗ್ರಾಮೀಣ ಸಂಸ್ಕೃತಿಯನ್ನು ಉಳಿಸುವ ಪ್ರಯತ್ನ ಮಾಡುತ್ತವೆ.

ಜಾನಪದದ ಅತ್ಯಂತ ಉತ್ಕೃಷ್ಟವಾದ ಭಾಗವೇ ಜನಪದ ಸಾಹಿತ್ಯ, ಕತೆ, ಗೀತೆ, ಕಾವ್ಯ, ನಾಟಕ ಎಂಬ ವೈವಿಧ್ಯಗಳಿಂದ ಕೂಡಿ ಇನ್ನೂ ಹೆಚ್ಚು ಪ್ರಕಾರಗಳಲ್ಲಿ ಲಭ್ಯವಾಗುವ ಜನಪದ ಸಾಹಿತ್ಯ ಬಹುಶಃ ಶಿಷ್ಟ ಸಾಹಿತ್ಯ ಅತ್ಯಂತ ಪ್ರಾಚೀನವೆನಿಸುವ ಜನಪದ ಸಾಹಿತ್ಯದ ಪ್ರಕಾರಗಳನ್ನು ಅವಲಂಬಿಸಿಯೇ ಬೆಳವಣಿಗೆಯನ್ನು ಸಾಧಿಸಿಕೊಂಡಿದೆ ಎನ್ನಬಹುದು.

ಜನಪದ ಕಥೆಗಳ ಇತರ ಪ್ರಕಾರಗಳ ಅಧ್ಯಯನ ಈ ರೀತಿ ಅನೇಕ ಮುಖಗಳಲ್ಲಿ ನಡೆದಿದೆ. ಕಂಠಸ್ಥ ಸಂಪ್ರದಾಯದ ಕಥೆ ಇತಿಹಾಸಕ್ಕಿಂತ ಪ್ರಾಚೀನವಾದುದು. ಅದಕ್ಕೆ ಕಾಲ ದೇಶಗಳ ಮಿತಿಯಿಲ್ಲ ಎಂದು ಹೇಳಬಹುದು. ಆಧುನಿಕ ಕನ್ನಡ ಸಾಹಿತ್ಯದಲ್ಲಿಯೂ ಜನಪದ ಸಾಹಿತ್ಯದ ಪ್ರಭಾವಕ್ಕೆ ಒಳಗಾದ ಅನೇಕ ಗಣ್ಯ ಕವಿಗಳಿದ್ದಾರೆ. ಬೇಂದ್ರೆ, ಮಾಸ್ತಿ, ನರಸಿಂಹಸ್ವಾಮಿ, ಕಂಬಾರ ಮೊದಲಾದವರ ಕವಿತೆಗಳ ಮೇಲೆ ಜನಪದ ಗೀತೆ ವಸ್ತು ವಿನ್ಯಾಸ ಶೈಲಿಗಳನ್ನು ಗಮನಿಸಬಹುದಾಗಿದೆ.

ನಮ್ಮ ಕತೆಗಾರರುಗಳಾದ ತೇಜಸ್ವಿ, ಬೆಸಗರಹಳ್ಳಿ ರಾಮಣ್ಣ, ಕುಸುಮ, ಶ್ರೀಕೃಷ್ಣ ಆಲನಹಳ್ಳಿ ಇವರುಗಳ ಕಥೆಗಳನ್ನು ತೆಗೆದುಕೊಂಡು ಇವರ ಕಥೆಗಳ ವಿವರಣೆಯೊಂದಿಗೆ ಜನಪದ ಪ್ರಭಾವವನ್ನು ಗುರುತಿಸಲಾಗಿದೆ.

ಬಿ.ಎಂ.ಶ್ರೀಯವರ 'ಇಂಗ್ಲಿಷ್ ಗೀತೆಗಳು' ಕೃತಿಯಿಂದ ಆರಂಭವಾಗಿ ಪ್ರಗತಿಶೀಲದವರೆಗಿನ ಕಾಲಾವಧಿಯ ಸಾಹಿತ್ಯವನ್ನು ನವೋದಯ ಸಾಹಿತ್ಯವನ್ನು ನವೋದಯ ಎಂಬ ಹೆಸರಿನಿಂದ ಗುರುತಿಸಲಾಗಿದೆ. ಹೊಸಬಗೆಯ, ಕಾವ್ಯ, ಕತೆ, ಕಾದಂಬರಿ, ಪ್ರಬಂಧ, ನಾಟಕ, ವಿಮರ್ಶೆ ಮುಂತಾದುವುಗಳಿಗೆ ವೈವಿಧ್ಯತೆಯನ್ನು ನೀಡಿದ್ದು ನವೋದಯ ಸಾಹಿತ್ಯ. ಇದರಲ್ಲಿ ನವೋದಯದ ಕಥೆಗಾರರ ಕಥೆಗಳನ್ನು ಆಧಾರವಾಗಿಟ್ಟುಕೊಂಡು ಈ ಕತೆಗಳ ಮೇಲೆ ನವೋದಯದ ಕತೆಗಳ ಸಂದರ್ಭವನ್ನು ಗುರುತಿಸಲಾಗಿದೆ.

ಎಪ್ಪತ್ತರ ದಶಕದ ವೇಳೆಗೆ ನವ್ಯಪಂಥ ಕ್ಷೀಣ ದೆಸೆಗಿಳಿಯಿತಾದರೂ ಕೆಲವು ಮಂದಿ ನವ್ಯ ಲೇಖಕರು ತಮ್ಮ ಬರವಣಿಗೆಯನ್ನು ಮುಂದುವರೆಸುತ್ತಾ, ನವ್ಯದ ಆಳ ವಿಸ್ತಾರವನ್ನು ಹಿಗ್ಗಿಸುತ್ತಾ, ಹೊಸ ಮಗ್ಗುಲು ಗಳತ್ತ ಹೊರಳಿಕೊಳ್ಳುತ್ತಿರುವುದನ್ನು ಈ ದಶಕದಲ್ಲಿ ಕಾಣಬಹುದು. ಇದರಲ್ಲಿ ಕರೀಗೌಡ ಬೀಚನಹಳ್ಳಿ, ಬೆಸಗರಹಳ್ಳಿ ರಾಮಣ್ಣ, ಕಾಳೇಗೌಡ ನಾಗವಾರ, ಅವರ ಪ್ರಭಾವವನ್ನು ಕಥೆಗಳ ಮೂಲಕ ಗುರುತಿಸುವ ಪ್ರಯತ್ನ ಮಾಡಿದ್ದೇನೆ. ಹಾಗೆಯೇ ಸಾಂಸ್ಕೃತಿಕವಾಗಿ ಮತ್ತು ಶೈಕ್ಷಣಿಕವಾಗಿ ಅಕ್ಷರದ ಮೂಲಕ ಅಭಿವ್ಯಕ್ತಿಸಲು ತೊಡಗಿದ ಅವಮಾನಿತ ಅಕ್ಷರಸ್ಥ ಸಮುದಾಯವೊಂದು ತಮ್ಮ ಅಭಿವ್ಯಕ್ತಿಯ ಮಾಧ್ಯಮವನ್ನು ತಮ್ಮ ಕೇರಿಯ, ಪ್ರದೇಶದ ಭಾಷೆಯನ್ನು ಉಪಯೋಗಿಸಿಕೊಂಡು ತಮ್ಮ ಸಹಜ ಅನುಭವಗಳ ಮೂಲಕ ಅವಮಾನ ದೌರ್ಜನ್ಯಗಳನ್ನು ಸ್ಪಷ್ಟವಾಗಿ ದಾಖಲಿಸತೊಡಗಿದ ಕೂಡಲೇ ಒಂದು ಜನಾಂಗೀಯ ಸಾಹಿತ್ಯ ಸಿದ್ಧವಾಯಿತು. ಇದನ್ನು 'ದಲಿತ' ಸಾಹಿತ್ಯ ಎನ್ನುತ್ತೇವೆ. ಇದರಲ್ಲಿಯೂ ಸಹ ಕತೆಗಾರರ ಕತೆಗಳನ್ನು ಸಂದರ್ಭದೊಂದಿಗೆ ವಿವರಿಸುವ ಪ್ರಯತ್ನ ಮಾಡಲಾಗಿದೆ. ಒಂದು ಗ್ರಾಮ ಜೀವನವನ್ನು ನೋಡಬೇಕಾದರೆ ಸಾಹಿತ್ಯದ ಅಂಶಗಳು ನಮಗೆ ಸಹಾಯ ಮಾಡುತ್ತವೆ ಎಂದು ಹೇಳಬಹುದು.

ಅಡಿ ಟಿಪ್ಪಣಿಗಳು

೧. ಜಿ.ಶಂ.ಪರಮಶಿವಯ್ಯ, ಜನಪದ ಸಾಹಿತ್ಯ ಕೆಲವು ವಿಚಾರಗಳು, ೧೯೯೮, ಪುಟ ೪೪, ೪೫

೨. ಕಾಳೇಗೌಡ ನಾಗವಾರ, ಜನಪದ ಸಾಹಿತ್ಯ, ೧೯೯೬, ಪುಟ ೧೭೭, ೧೭೮

೩. ಅದೇ, ಪುಟ ೨೬

೪. ಅದೇ, ಪುಟ ೭೬

೫. ಅದೇ, ಪುಟ ೧೧೨

೬. ರಾಜಪ್ಪ ದಳವಾಯಿ, ಕನ್ನಡ ಸಾಹಿತ್ಯ ಕೋಶ, ೧೯೯೬, ಪುಟ ೮೦

೭. ಜೀ.ಶಂ.ಪರಮಶಿವಯ್ಯ, ಜನಪದ ಸಾಹಿತ್ಯ, ಜಾನಪದ ಕೆಲವು ವಿಚಾರಗಳು, ೧೯೯೮, ಪುಟ ೪೯

೮. ಅದೇ, ಪುಟ ೪೪

೯. ಕಾಳೇಗೌಡ ನಾಗಾವಾರ, ಜನಪದ ಸಾಹಿತ್ಯ, ೧೯೯೬, ಪುಟ ೧೭೫

೧೦. ಕೆ.ಪಿ. ಪೂರ್ಣಚಂದ್ರ ತೇಜಸ್ವಿ, ಅಬಚೂರಿನ ಪೋಸ್ಟಾಫೀಸು, ೧೯೯೯, ಪುಟ ೬೭

೧೧. ಎಚ್.ಎಂ.ಮಹೇಶ್ವರಯ್ಯ, ಪೂರ್ಣಚಂದ್ರ ತೇಜಸ್ವಿ, ೨೦೦೨, ಪುಟ ೨೬

೧೨. ಅದೇ, ಪುಟ ೨೬

೧೩. ಕೆ.ಪಿ. ಪೂರ್ಣಚಂದ್ರ ತೇಜಸ್ವಿ, ಅಬಚೂರಿನ ಪೋಸ್ಟಾಫೀಸು, ೧೯೯೯, ಪುಟ ೨೪

೧೪. ಅದೇ, ಪುಟ ೧೭೩

೧೫. ಅದೇ, ಪುಟ ೨೪೬

೧೬. ಅದೇ, ಪುಟ ೨೪೭

೧೭. ಯು.ಆರ್. ಅನಂತಮೂರ್ತಿ, ಯು.ಆರ್. ಅನಂತಮೂರ್ತಿ ಕಥಾ ವಾಚಿಕೆ, ೨೦೦೨, ಪುಟ ೩೮

೧೮. ಕುಸುಮ, ಪ್ರಕೃತಿ, ೧೯೯೯, ಪುಟ ೪೯

೧೯. ಅದೇ, ಪುಟ ೫೦

೨೦. ಶ್ರೀಕೃಷ್ಣ ಆಲನಹಳ್ಳಿ, ಸಮಗ್ರಕತೆಗಳು, ೨೦೦೦, ಪುಟ ೧೫೨

೨೧. ಕರೀಗೌಡ ಬೀಚನಹಳ್ಳಿ, ಹೊತ್ತಿನ ಕಣ್ಣಿನ ಮಿಂಚು, ೧೯೯೬, ಪುಟ ೨೩೬

೨೨. ಎಲ್.ಎಸ್.ಶೇಷಗಿರಿರಾವ್, ಹೊಸಗನ್ನಡ ಸಾಹಿತ್ಯ ಚರಿತ್ರೆ, ೧೯೯೯, ಪುಟ ೨೫

೨೩. ರಾಜಪ್ಪ ದಳವಾಯಿ, ಕನ್ನಡ ಸಾಹಿತ್ಯ ಕೋಶ, ೧೯೯೮, ಪುಟ ೭೫

೨೪. ಅದೇ, ಪುಟ ೭೯

೨೫. ಮೋಹನ ಕುಂಟಾರ್, ಕನ್ನಡ ಸಣ್ಣ ಕತೆಗಳು ಒಂದು ಅಧ್ಯಯನ, ಪುಟ ೫೧

೨೬. ಅದೇ, ಪುಟ ೧೧೨

೨೭. ಅದೇ, ಪುಟ ೧೮೧

೨೮. ಅದೇ, ಪುಟ ೩೦೩

೨೯. ಕರೀಗೌಡ ಬೀಚನಹಳ್ಳಿ, ಹೊತ್ತಿನ ಕಣ್ಣಿನ ಮಿಂಚು, ೧೯೯೬, ಪುಟ ೨೫೦

೩೦. ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೬, ಪುಟ ೪೮

೩೧. ಕಾಳೇಗೌಡ ನಾಗವಾರ, ನಾಗವಾರರ ಕಥೆಗಳು, ೧೯೯೮, ಪುಟ ೧೨

೩೨. ಅದೇ, ಪುಟ ಲೇಖಕರ ಅನಿಸಿಕೆ

೩೩. ಕರೀಗೌಡ ಬೀಚನಹಳ್ಳಿ, ವ್ಯಷ್ಟಿ ಮತ್ತು ಸಮಷ್ಟಿ, ೧೯೯೧, ಪುಟ ೪೫

೩೪. ಅದೇ, ಪುಟ ೪೬

೩೫. ಅದೇ, ಪುಟ ೪೭

೩೬. ಅದೇ, ಪುಟ ೩೦೪

೩೭. ಅದೇ, ಪುಟ ೩೦೫

೩೮. ರಾಜಪ್ಪ ದಳವಾಯಿ, ಕನ್ನಡ ಸಾಹಿತ್ಯಕೋಶ, ೧೯೯೬, ಪುಟ ೮೦

೩೯. ಅದೇ, ಪುಟ ೮೧

೪೦. ಪುರುಷೋತ್ತಮ ಬಿಳಿಮಲೆ, ಬಂಡಾಯ ದಲಿತ ಸಾಹಿತ್ಯ, ೧೯೯೯, ಪುಟ ೧೪

೪೧. ಅದೇ, ಪುಟ ೨೯

೪೨. ಅದೇ, ಪುಟ ೬೫

೪೩. ಅದೇ, ಪುಟ ೬೬

೪೪. ಅದೇ, ಪುಟ ೬೭

೪೫. ಅದೇ, ಪುಟ ೬೮

೪೬. ಅದೇ, ಪುಟ ೬೯

೪೭. ಅದೇ, ಪುಟ ೭೦

೪೮. ಅದೇ, ಪುಟ ೭೫

೪೯. ಆಶಾದೇವಿ ಎಂ.ಎಸ್. (ಅನು) ಉರಿ ಚಮ್ಮಾಳಿಗೆ ದಲಿತ ಚಳುವಳಿಯ ಅಧ್ಯಯನ, ಡಿ.ಆರ್. ನಾಗರಾಜ ಅವರ 'ದಿ ಫ್ಲೇಮಿಂಗ್ ಫೀಟ್' ಕೃತಿಯ ಅನುವಾದ, ೨೦೦೨, ಪುಟ ೩

೫೦. ಅದೇ, ಪುಟ ೪

೫೧. ಅದೇ, ಪುಟ ೬೩

೫೨. ಲಕ್ಷ್ಮಣ್ ತೆಲಗಾವಿ, "ಹಿಂದುಳಿದ ವರ್ಗಗಳು ಮತ್ತು ದಲಿತ ಚಳುವಳಿಗಳು" ೧೯೯೯, ಪುಟ ೧೨

೫೩. ಅದೇ, ಪುಟ ೧೩

೫೪. ಅದೇ, ಪುಟ ೧೭೦

೫೫. ಬೆಸಗರ ಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೬, ಪುಟ ೩೩೧

೫೬. ಅದೇ, ಪುಟ ೩೩೨

೫೭. ಅದೇ, ಪುಟ ೩೩೫

೫೮. ಅದೇ, ಪುಟ ೩೪೧

೫೯. ಅದೇ, ಪುಟ ೩೪೨

೬೦. ಅದೇ, ಪುಟ ೩೪೪

೬೧. ಅದೇ, ಪುಟ ೩೬೧

೬೨. ಅದೇ, ಪುಟ ೨೧

೬೩. ಅದೇ, ಪುಟ ೨೨

೬೪. ಅದೇ, ಪುಟ ೨೩

೬೫. ಕರೀಗೌಡ ಬೀಚನಹಳ್ಳಿ, ವ್ಯಷ್ಟಿ ಮತ್ತು ಸಮಷ್ಟಿ, ೧೯೯೧, ಪುಟ ೧೯೪

೬೬. ಅದೇ, ಪುಟ ೧೯೭

೬೭. ಅದೇ, ಪುಟ ೧೯೮

೬೮. ಸ.ಚಿ. ರಮೇಶ, ಬೆಸಗರಹಳ್ಳಿ ರಾಮಣ್ಣ, ೧೯೯೫, ಪುಟ ೧೫

೬೯. ಅದೇ, ಪುಟ ೧೭

೭೦. ಎನ್.ಕೆ.ಕೋದಂಡರಾಮ, ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ, ೧೯೯೬, ಪುಟ ೫೫೯

೭೧. ಪಿ.ಚಂದ್ರಿಕಾ (ಸಂ) ಯಾರ ಜಪ್ತಿಗೂ ಸಿಗದ ನವಿಲುಗಳು, ೧೯೯೯, ಪುಟ ೧೬೯

೭೨. ಅಮರೇಶ ನುಗಡೋಣಿ, ಶ್ರೀಕೃಷ್ಣ ಆಲನಹಳ್ಳಿ, ೧೯೯೫, ಪುಟ ೯

೭೩. ಅದೇ, ಪುಟ ೪೦

೭೪. ಅದೇ, ಪುಟ ೩೯೫

# ಅಧ್ಯಾಯ ೫

# ಸ್ತ್ರೀಪರಿಭಾವನೆ

# ಅಧ್ಯಾಯ ೫

# ಸ್ತ್ರೀ ಪರಿಭಾವನೆ

ನಾವು ಅನೇಕ ಶತಮಾನಗಳಿಂದ ಮಾನವ ಸಮಾಜದಲ್ಲಿ ಒಂದು ರೀತಿಯ ಶ್ರಮ ವಿಭಜನೆಯನ್ನು ಕಾಣಬಹುದು. ಪುರುಷನು ಬೇಟೆಯಾಡುವುದು, ಮೀನು ಹಿಡಿಯುವುದು, ಉಳುವುದು ಮುಂತಾದ ದೈಹಿಕ ಶ್ರಮ ಪ್ರಧಾನವಾದ ದುಡಿಮೆಯಲ್ಲಿ ತೊಡಗಿದನು. ಸ್ತ್ರೀಯು ತನ್ನ ಸಹಜವಾದ ಕೋಮಲತೆ, ಸಹನೆ, ಹಾಗೂ ಗರ್ಭಧಾರಣೆ ಮಾಡುವಿಕೆ, ಮಕ್ಕಳ ಪಾಲನೆ, ಪೋಷಣೆ, ಆಹಾರ ಸಿದ್ಧಪಡಿಸುವುದು ಮತ್ತಿತರ ಗೃಹಕೃತ್ಯಗಳಲ್ಲಿ ತೊಡಗಿದಳು. ಕ್ರಮೇಣ ಇದು ಅವಳ ದುಡಿಮೆಯ ಕ್ಷೇತ್ರವನ್ನು ಸೀಮಿತಗೊಳಿಸಿರುವುದು ಕಂಡುಬರುತ್ತದೆ. ಅವಳನ್ನು ಒಂದು ರೀತಿಯ ಗುಲಾಮಳನ್ನಾಗಿ ನಡೆಸಿಕೊಳ್ಳುತ್ತಿರುವುದನ್ನು ಇಂದಿಗೂ ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಕಾಣಬಹುದು.

ಕೈಗಾರಿಕಾ ಕ್ರಾಂತಿಯ ನಂತರ ಈ ಪರಿಸ್ಥಿತಿಯಲ್ಲಿ ಅಲ್ಪಸ್ವಲ್ಪ ಬದಲಾವಣೆಯುಂಟಾಗಿದ್ದರೂ ಬಹುಸಂಖ್ಯೆಯಲ್ಲಿ ಸ್ತ್ರೀಯರು ಇನ್ನೂ ಅಂಧಕಾರದಲ್ಲೇ ಇರುವುದನ್ನು ಕಾಣಬಹುದು. ಸ್ವಾತಂತ್ರ್ಯಾನಂತರದ ಭಾರತದಲ್ಲಿ ಸ್ತ್ರೀ ಉದ್ಯೋಗಿಗಳ ಬಗ್ಗೆ ಹೆಚ್ಚಿನ ಗಮನ ಹರಿಸಲಾಗಿದೆ. ಹೆಣ್ಣು ಮತ್ತು ಗಂಡು ಎಲ್ಲ ರಂಗಗಳಲ್ಲಿಯೂ ಸಮಾನತೆಯನ್ನು ಬಯಸಿ ಉದ್ಯೋಗಗಳಲ್ಲಿ ತೊಡಗಿದ್ದಾರೆ. ವ್ಯವಸಾಯ ರಂಗದಲ್ಲಿ ಸ್ತ್ರೀಯರಿಂದ ನಾಜೂಕಿನ ಕೆಲಸಗಳು ನಿರ್ವಹಿಸಲ್ಪಡುತ್ತಿವೆ. ಗೃಹ ಕೃತ್ಯಗಳು ಮುಖ್ಯವಾಗಿ ಅಡಿಗೆ ಮಾಡುವುದು, ಬಟ್ಟೆ ಒಗೆಯುವುದು, ಮಕ್ಕಳ ಪಾಲನೆ ಪೋಷಣೆಯಲ್ಲಿ ತೊಡಗುತ್ತಿದ್ದಾಳೆ. ಮತ್ತು ಗಂಡಸರ ದುಡಿಮೆಗೆ ಪೂರಕವಾಗುವಂತಹ ರಂಗಗಳಲ್ಲಿ ದುಡಿಯುವುದು. ಉದಾ: ವ್ಯವಸಾಯ ಗೃಹ ಕೈಗಾರಿಕೆಗಳು, ದೈಹಿಕ ದುಡಿಮೆಯೇ ಮುಖ್ಯವಾಗಿರುವ ಗಣಿ, ರಸ್ತೆ ನಿರ್ಮಾಣ ಮುಂತಾದ ಕೆಲಸಗಳಲ್ಲಿ ತೊಡಗುತ್ತಿದ್ದಾರೆ ನಮ್ಮ ಗ್ರಾಮೀಣ ಸ್ತ್ರೀಯರು.

ನಮ್ಮ "ಭಾರತದ ಸ್ತ್ರೀಯ ಸ್ಥಾನಮಾನಗಳನ್ನು ಅಧ್ಯಯನ ಮಾಡಿದರೆ, ನಾವು ಅವಳ ಸಾಮಾಜಿಕ ಸ್ಥಾನಮಾನಗಳಲ್ಲಿ ಕಾಲಕಾಲಕ್ಕೆ ಉಂಟಾದ ವ್ಯತ್ಯಾಸಗಳನ್ನು ಕಾಣಬಹುದು. ವೇದಗಳ ಕಾಲದಲ್ಲಿ ಸ್ತ್ರೀಯರಿಗೆ ಹೆಚ್ಚಿನ ಗೌರವ ಸಿಕ್ಕುತ್ತಿತ್ತು. ಶ್ರುತಿ, ಸ್ಮೃತಿಗಳು ಸ್ತ್ರೀಯರ ಔನತ್ಯವನ್ನು, ಸಮಾನತ್ವವನ್ನೂ ಎತ್ತಿ ಹಿಡಿದಿದ್ದವು. ಪುರುಷನಿಗೆ ಇದ್ದ ಎಲ್ಲ ಹಕ್ಕುಬಾಧ್ಯತೆಗಳು ಸ್ತ್ರೀಗೂ ಇದ್ದವು. ಸ್ತ್ರೀಯು ಪುರುಷನ ಸ್ನೇಹಿತೆ ಮತ್ತು

ಸಹೋದ್ಯೋಗಿಯಾಗಿರುತ್ತಿದ್ದಳೇ ಹೊರತು ಅವನಿಗಿಂತ ಕೆಳಮಟ್ಟದಲ್ಲಿರಲಿಲ್ಲ. ಅವಳಿಗಿದ್ದ ಹಕ್ಕಿನಿಂದಾಗಿ ತನ್ನ ತಂದೆ ಮತ್ತು ಪತಿಯ ಆಸ್ತಿಗೆ ಹಕ್ಕುದಾರಳಾಗಿರುತ್ತಿದ್ದಳು.

ವಿದ್ಯೆಯಲ್ಲಿ ಸ್ತ್ರೀಯು ಪುರುಷನ ಸಮಾನಳಾಗಿರುತ್ತಿದ್ದಳು. ರಾಜಕೀಯ ಮತ್ತು ಸಾಮಾಜಿಕ ಸಮಸ್ಯೆಗಳ ಬಗ್ಗೆ ಧೈರ್ಯದಿಂದ ಚರ್ಚಿಸುತ್ತಿದ್ದಳು. ವೇದಗಳ ಕಾಲದ ಸ್ತ್ರೀಯರು ಸುಸಂಸ್ಕೃತರೂ, ಜ್ಞಾನವಂತರೂ ಆಗಿರುತ್ತಿದ್ದರು. ಗುರುಕುಲಗಳಿಗೆ ಅವರನ್ನು ಸೇರಿಸಲಾಗುತ್ತಿತ್ತು. ಅವರನ್ನು ಬ್ರಹ್ಮಚಾರಿಣಿಯರೆಂದೇ ಗುರುತಿಸಲಾಗುತ್ತಿತ್ತು. ಯಜ್ಞ ಕಾರ್ಯಗಳಲ್ಲಿ ಸ್ತ್ರೀಯು ಸಹಭಾಜನಳಾಗಿ ಇರುತ್ತಿದ್ದಳು. ಗಾರ್ಗಿ, ಮೈತ್ರೇಯಿ, ಲೋಪಾಮುದ್ರೆ ಮುಂತಾದ ಋಷಿ ಪತ್ನಿಯರು ಕುಲಪತಿಗಳಾಗಿ ಕಾರ್ಯವನ್ನು ನಿರ್ವಹಿಸುತ್ತಿದ್ದರು. ಪತಿಯ ಸೇವೆ, ಅತಿಥಿ, ಅಭ್ಯಾಗತರ ಸತ್ಕಾರ, ಪಶುಪ್ರಾಣಿಗಳ ಪಾಲನೆ, ಪೋಷಣೆಯನ್ನು ಅಂದಿನ ಸ್ತ್ರೀಯರು ನಿರ್ವಹಿಸುತ್ತಿದ್ದರು. ಪತಿಯು ಊಟ ಮಾಡಿದ ನಂತರ ಊಟ ಮಾಡುವ ಪದ್ಧತಿಯನ್ನು ಇಂದಿಗೂ ಸಹ ಹಿಂದೂ ಸ್ತ್ರೀಯರಲ್ಲಿ ಕಾಣಬಹುದು."[೧]

ವೇದೋತ್ತರ ಕಾಲದಿಂದ ನಾವು ಗಮನಿಸಿ ನೋಡಿದಾಗ ಮಾನವ ಸಮಾಜದಲ್ಲಿ ಪ್ರತಿಯೊಂದು ಹಂತ ದಲ್ಲಿಯೂ ಮಹಿಳೆ ಮತ್ತು ಪುರುಷರ ಶ್ರಮವನ್ನು ಈ ರೀತಿಯಾಗಿ ವಿಭಾಗಿಸಿರುವುದನ್ನು ಕಾಣಬಹುದು. ಪ್ರತಿಯೊಂದು ಸಂದರ್ಭದಲ್ಲಿಯೂ ಮಹಿಳೆ ಹೆಚ್ಚಾಗಿ ಮನೆಯ ಕೃತ್ಯಗಳಲ್ಲಿಯೇ ಇರುವುದನ್ನು ನಾವು ಹೆಚ್ಚಾಗಿ ಕಾಣಬಹುದು. ಪುರುಷರು ಉದರ ಪೋಷಣೆಗೆ ಮತ್ತು ಸಂಸಾರ ನಿರ್ವಹಣೆಗೆ ಮನೆಯಿಂದ ಹೊರಗೆ ದುಡಿಯುವುದರಲ್ಲಿ ತೊಡಗಿರುತ್ತಾರೆ. ನೈಸರ್ಗಿಕ ಸೃಷ್ಟಿಯ ಮೂಲದಿಂದ ಸ್ತ್ರೀಯು ತನ್ನ ಸಹಜವಾದ ಕೋಮಲತೆ, ಮಕ್ಕಳನ್ನು ಹೆರುವುದು, ಅವುಗಳನ್ನು ಪೋಷಿಸುವುದು, ಅಡಿಗೆ ಮಾಡುವುದು, ಪುರುಷರ ಮತ್ತು ಮಕ್ಕಳ ಆರೈಕೆಯಲ್ಲಿ ತೊಡಗಿಸಿಕೊಂಡಿರುತ್ತಾಳೆ. ಇದನ್ನು ಪರಿಶೀಲಿಸಿದಾಗ ಪುರುಷನಿಗಿಂತ ಹೆಚ್ಚು ವೇಳೆ ಕೆಲಸದಲ್ಲೇ ತೊಡಗಿರುತ್ತಾಳೆ. ಉದಾ. ಪುರುಷ ಹೊರಗೆ ಎಂಟು ಗಂಟೆಗಳ ಕಾಲ ದುಡಿದರೆ ಮಹಿಳೆ ಮನೆಯಲ್ಲಿ ಹನ್ನೆರಡು ಗಂಟೆಗಳು ಹೆಚ್ಚು ದುಡಿಯುವುದನ್ನು ನಾವು ಕಾಣಬಹುದು. ಈ ಪರಿಕ್ರಮ ಬರುಬರುತ್ತಾ ಅನೇಕ ಬದಲಾವಣೆಗಳಲ್ಲಿ ರೂಪುಗೊಂಡಿತು. ಮಾನವೀಯತೆ, ಕರುಣೆ, ಸೇವಾ ಮನೋಭಾವ, ಅಂತಃಕರಣ ಇವುಗಳನ್ನು ಪುರುಷನಿಗಿಂತ ಮಹಿಳೆಯಲ್ಲಿ ಅಗಾಧವಾಗಿ ಕಾಣಬಹುದು. ಸ್ವಾತಂತ್ರ್ಯ ಪೂರ್ವದಲ್ಲಿ ಹೆಂಗಸರನ್ನು ಗುಲಾಮರನ್ನಾಗಿ ಕಾಣುವುದನ್ನು ಕಾಣಬಹುದು. ಸ್ವಾತಂತ್ರ್ಯಪೂರ್ವದಲ್ಲಿ ಮಹಿಳೆಯ ಪಾತ್ರ ತುಂಬಾ ಅಗತ್ಯವಾಗಿದ್ದರೂ ಸಹ ಗ್ರಾಮೀಣ ಪ್ರದೇಶಗಳಲ್ಲಿ ತುಂಬಾ ಅಸಮಾನತೆಯನ್ನು ಕಾಣಬಹುದಾಗಿತ್ತು. ಸ್ವಾತಂತ್ರ್ಯ ನಂತರ ನಮ್ಮದೇ ಆದ ಆಡಳಿತ ಪ್ರಾರಂಭವಾದ ನಂತರ ಮಹಿಳೆಯರಿಗೆ ವಿಶಿಷ್ಟವಾದ ಸ್ಥಾನ ಪ್ರಾರಂಭಿಸಿರುವುದನ್ನು ಗಮನಿಸಬಹುದು. ಉದಾ. ವಿದ್ಯಾಭ್ಯಾಸ, ಉದ್ಯೋಗ, ಕೈಗಾರಿಕೆಗಳು, ವ್ಯವಸಾಯ ರಂಗಗಳಲ್ಲಿ ಅದರಲ್ಲೂ ಮಹಿಳೆಯರು ಗ್ರಾಮೀಣ ಪ್ರದೇಶಗಳಲ್ಲಿ ಹೊಲಗಳಿಗೆ ಹೋಗಿ ಉಳುವುದು, ಕಳೆ ಕೀಳುವುದು, ಪೈರು ಹಾಕುವುದು, ಪಶು ಸಂಗೋಪನೆ, ಪಟ್ಟಣ ಪ್ರದೇಶಗಳಲ್ಲಿ ನೂಲುವುದು, ನೇಯ್ಗೆ ಕೆಲಸ, ವಿದ್ಯಾಭ್ಯಾಸದ ಪರಿಣಾಮದಿಂದ ಅದಕ್ಕೆ ಸಂಬಂಧಿಸಿದಂತೆ ಕಾರ್ಖಾನೆಗಳಲ್ಲಿ ಕೆಲಸ ಮಾಡುವುದು, ಸರ್ಕಾರಿ ಕಛೇರಿಗಳಲ್ಲಿ ಕೆಲಸ ಮಾಡುವುದು, ವ್ಯಾಪಾರ ಮಾಡುವುದು, ಗಣಿಗಳಲ್ಲಿ

ಸ್ಪರ್ಧಿಸುವುದು, ಸಭೆ ಸಮಾರಂಭದಲ್ಲಿ ಭಾಗವಹಿಸುವುದು ಸಂಗೀತ, ನಾಟಕ, ಚಲನಚಿತ್ರ ರಂಗಗಳಲ್ಲಿ ವಿಶಿಷ್ಟ ಸ್ಥಾನಮಾನಗಳನ್ನು ನಮ್ಮ ಮಹಿಳೆಯರು ಗಿಟ್ಟಿಸಿದ್ದಾರೆ. ತಮ್ಮ ಹಕ್ಕುಗಳನ್ನು ಹುಟ್ಟುಹಾಕುವುದು, ಮಹಿಳಾ ಸಂಘಟನೆಗಳಲ್ಲಿ ಭಾಗವಹಿಸುವುದು ಅನೇಕ ಸಂಘ ಸಂಸ್ಥೆಗಳನ್ನು ಹುಟ್ಟು ಹಾಕುವುದನ್ನು ಕಾಣಬಹುದು. ನಮ್ಮ ಮಹಿಳೆಯರು ಎಲ್ಲ ರಂಗಗಳಲ್ಲಿ ಈಗ ಮುಂದೆ ಬರುತ್ತಿದ್ದಾರೆ. ಮಹಿಳೆಯರು ಎಲ್ಲಕ್ಕಿಂತ ಮುಖ್ಯವಾಗಿ ಗಂಡನ ದುಡಿಮೆಗೆ ಅಗತ್ಯ ಅನುಸರಣೆ ಇರುವುದನ್ನು ಕಾಣಬಹುದು.

"೧೯೨೦ರಿಂದ ಇಂದಿನವರೆಗೂ ಹೊಸಗನ್ನಡ ಸಾಹಿತ್ಯ ತನ್ನ ಯುಗಧರ್ಮಕ್ಕೆ ತಕ್ಕಂತೆ ಸಾಹಿತ್ಯಕ, ಸಾಮಾಜಿಕ ಬದಲಾವಣೆಗಳಿಗೆ ಸ್ಪಂದಿಸುತ್ತಾ ಹಂತ ಹಂತವಾಗಿ ಬೆಳೆದಿದೆ. ಏಳು ದಶಕದ ಸುದೀರ್ಘ ಸಾಹಿತ್ಯ ಪರಂಪರೆಯನ್ನು ಹೊಂದಿದೆ. ಹೊಸಗನ್ನಡ ಸಾಹಿತ್ಯ ಚರಿತ್ರೆಯ ಕುರಿತು ಅನೇಕ ಕೃತಿಗಳು ಪ್ರಕಟಗೊಂಡಿದೆ. ಹೊಸಗನ್ನಡ ಸಾಹಿತ್ಯದ ವೈಶಿಷ್ಟ್ಯ, ಅದರ ವೈವಿಧ್ಯಮಯ ವಸ್ತು ಮತ್ತು ಅಭಿವ್ಯಕ್ತಿಯಲ್ಲಿ ಅಡಗಿರುವುದನ್ನು ಗುರುತಿಸಿದ್ದಾರೆ. ಇದರ ಜೊತೆಯಲ್ಲಿ ಮಹಿಳಾ ಸಾಹಿತ್ಯದ ರೂಪುರೇಷೆಗಳು ಹಾಗೂ ಇತಿಮಿತಿಗಳನ್ನು ಚರ್ಚಿಸಿದ್ದಾರೆ. ಇನ್ನೂ ಕೆಲವರು ಶತಮಾನದಿಂದಲೂ ಮಹಿಳೆ ಅಸ್ಪೃಶ್ಯಳಾಗಿ, ಎರಡನೇ ದರ್ಜೆಯ ಪ್ರಜೆಯಾಗಿ, ಪುರುಷ ಪ್ರಧಾನ ಸಮಾಜದ ಸಂಸ್ಕೃತಿಯ ಸಂಕೋಲೆಯೊಳಗೆ ಬಂಧಿತಳಾಗಿದ್ದಳು. ಆದರೆ ಬಸವಯುಗದಲ್ಲಿ ಮಾತ್ರ ಮೈಚಳಿ ಬಿಟ್ಟು ಮಾತಾಡಿದ್ದು, ಆನಂತರ ಗಾಂಧಿಯುಗದಿಂದ ಇಂದಿನವರೆಗೂ, ಅಭಿವ್ಯಕ್ತಿ ಸ್ವಾತಂತ್ರ್ಯ ಪಡೆದು ತಮ್ಮ ಅನೇಕ ಮಿತಿಗಳ ನಡುವೆಯೂ ಸಾಹಿತ್ಯ ರಚನೆಗೆ ತೊಡಗಿದ್ದು ಗಮನಾರ್ಹವಾಗಿದೆ.

ಇಂದಿಗೂ ಮಹಿಳಾ ಸಾಹಿತ್ಯಕ್ಕೆ ಪುರುಷ ದೃಷ್ಟಿಯ ವಿಮರ್ಶೆಯ ಕೃಪೆಯಾಗಲಿ ಅಥವಾ ಸ್ತ್ರೀವಾದಿ ವಿಮರ್ಶಾ ದೃಷ್ಟಿಯ ರಿಯಾಯಿತಿಯಾಗಲಿ ಬೇಕಾಗಿಲ್ಲ. ಇಂದು ಮಹಿಳಾ ಸಾಹಿತ್ಯವನ್ನು ವಸ್ತು ನಿಷ್ಠವಾಗಿ ವಿಮರ್ಶಿಸಬೇಕಾಗಿದೆ. ಮಹಿಳಾ ಸಾಹಿತ್ಯದ ಒಲವು ನಿಲುವುಗಳನ್ನು ಅವಳು ಬದುಕಿದ ಸಾಮಾಜಿಕ ಪರಿಸರ ಮತ್ತು ಎದುರಿಸಿದ ಪರಿಸ್ಥಿತಿಗಳ ಹಿನ್ನೆಲೆಯಲ್ಲಿ ಮೌಲ್ಯಮಾಪನ ಮಾಡಬೇಕಾಗಿದೆ."[೨]

ಈಗಾಗಲೇ ಗಮನಿಸಿರುವಂತೆ ಹಾಗೂ ಜಿ.ಎಸ್.ಅಮೂರರು ಅಭಿಪ್ರಾಯ ಪಟ್ಟಿರುವಂತೆ ಈ ವಿಷಯವನ್ನು ಕೂಲಂಕಶವಾಗಿ ಪರಿಶೀಲಿಸಿ ನೋಡಿದಾಗ ಸ್ವಾತಂತ್ರ್ಯ ಪೂರ್ವದಲ್ಲಿಯೂ ಸಹ ಮಹಿಳೆಯರಿಂದ ಕ್ರಾಂತಿಕಾರಕ ಸಾಹಿತ್ಯ, ಸಂಗೀತ ಇತರೆ ರಂಗಗಳಲ್ಲಿ ಪ್ರವೇಶಿಸಿರುವುದನ್ನು ಕಾಣಬಹುದು. ಆದರೂ ಹೆಣ್ಣುಮಕ್ಕಳಿಗೆ ಸಮಾಜ ಪೂರ್ಣ ಸ್ವಾತಂತ್ರ್ಯವನ್ನು ನೀಡದೆ ಬಂಧಿಗಳನ್ನಾಗಿ, ಅಸ್ಪೃಶ್ಯರನ್ನಾಗಿ ದ್ವಿತೀಯ ದರ್ಜೆಯ ಸ್ಥಾನ ನೀಡಿರುವುದನ್ನು ನಾವು ಕಾಣಬಹುದು. ಸ್ವಲ್ಪ ಮೈಚಳಿ ಬಿಟ್ಟು ಹೊರಗೆ ಬರಲು ಪ್ರಯತ್ನ ಮಾಡಿದ್ದು ಆನಂತರದಲ್ಲಿ ಸ್ವಾತಂತ್ರ್ಯ ನಂತರದ ದಿನಗಳಲ್ಲಿಯೇ ಎಂಬುದು ಗಮನಿಸುವ ಮುಖ್ಯ ವಿಚಾರ.

"ಕನ್ನಡದಲ್ಲಿ ಸಾಹಿತ್ಯಕವಾಗಿ ಮಹಿಳೆಯ ಸಾಧನೆ ಕಡಿಮೆ ಅನಿಸಿದರೂ, ಇರುವಷ್ಟೇ ಗಮನಿಸುವಂಥಾಗಿದೆ. ಹನ್ನೆರಡನೆಯ ಶತಮಾನದ ಅಕ್ಕಮಹಾದೇವಿ ತನ್ನ ಐಹಿಕ ಬದುಕಿನ ನಿವಾರಣೆಯ ಸಂದರ್ಭದಲ್ಲಿ ಇಂದಿಗೂ ಪ್ರಸ್ತುತವಾಗುತ್ತಾಳೆ. ಅದ್ದೂರಿಯಾಗಿ ಬದುಕಬಹುದಾಗಿದ್ದ ಸ್ಥಿತಿಯನ್ನು, ಹೆಣ್ಣಿಗೆ ಅಸ್ಪೃಶ್ಯವಾಗಿದ್ದ ಅನಂತತೆಯನ್ನು ಅರಸಿ ಹೊರಟು ಬಿಡುತ್ತಾಳೆ. ಆದರೆ ಆ ಅನಂತತೆಯ ಆಶಯ ಗಂಡಾದ ಚೆನ್ನಮಲ್ಲಿಕಾರ್ಜುನನಲ್ಲಿ ಕೇಂದ್ರೀಕೃತವಾಗುತ್ತದೆ ಎಂಬ ಆರೋಪವನ್ನು ಆಕೆ ಎದುರಿಸಿರುತ್ತಾಳೆ. ಆಕೆಯ

ಸಮಕಾಲೀನರಾದ ಕೆಳವರ್ಗದ ಶರಣೆಯರ ಸಾಧನೆಯೂ ಕಡಿಮೆಯಲ್ಲ. ಹಾಗೆ ಹೇಳುವುದಾದರೆ ಅಕ್ಕನ ರೀತಿಗಿಂತ ಇವರ ಐಹಿಕ ಬದುಕಿನ ರೀತಿಯು ಹೆಚ್ಚು ಸಂಘರ್ಷಾತ್ಮಕವಾಗಿರುವಂತೆ ತೋರುತ್ತದೆ. ಸಂಚಿ ಹೊನ್ನಮ್ಮನ ಸಾಂಪ್ರದಾಯಿಕ ಬರಹ ಹೇಗೆ ನೆಲೆಗಳನ್ನು ಶೋಧಿಸಲು ಪ್ರಯತ್ನಿಸುತ್ತದೆ ಎಂಬುದು ಗಮನಾರ್ಹ. ಆಧುನಿಕ ಸಾಹಿತ್ಯದಲ್ಲಿ ಹೆಣ್ಣು ಎಲ್ಲ ಸಂದರ್ಭಕ್ಕೂ ಭಿನ್ನವಾಗಿ ಮುಂದುವರಿಯುತ್ತಿರುವ ಸೂಚನೆಗಳು ಕಾಣುತ್ತಿವೆ. ಅಷ್ಟೇ ಅಲ್ಲ ಅವು ಆರೋಗ್ಯಕಾರಿಯಾಗಿಯೂ ಇವೆ. ಇದರಿಂದಾಗಿ ಸಾಮಾಜಿಕ ಸಂದರ್ಭದ ಗತಿಶೀಲತೆಯು ಹೆಚ್ಚು ಮಾನವೀಯಗೊಳ್ಳುವುದು ಸಾಧ್ಯವಾಗುತ್ತಿದೆ.''[೩]

ಸ್ತ್ರೀಯು ತನ್ನ ಪ್ರತಿಭೆಯನ್ನು ಶತಶತಮಾನಗಳ ಹಿಂದಿನಿಂದಲೂ ಪ್ರದರ್ಶಿಸಿರುವುದನ್ನು ನಾವು ಕಾಣಬಹುದು. ಉದಾ. ಅಕ್ಕಮಹಾದೇವಿ ಹಾಗೂ ವಚನ ಸಾಹಿತ್ಯದಲ್ಲಿ ಬರುವ ಸಾಮಾನ್ಯ ಮಹಿಳೆಯರು, ಇವುಗಳನ್ನು ಗಮನಿಸಿದರೆ ಸಮಾಜ ಎಷ್ಟೇ ಕಟ್ಟುಪಾಡುಗಳನ್ನು ವಹಿಸಿದ್ದರೂ ಸಹ ಸಮಾಜಕ್ಕೆ ಕೊಡುಗೆಯನ್ನು ನೀಡಿರುವುದನ್ನು ಕಾಣಬಹುದು. ಪ್ರತಿಭಟನೆಯೊಂದಿಗೆ ತಮ್ಮ ಸ್ವಂತ ಅಭಿವ್ಯಕ್ತಿಯ ಮೂಲಕ ಉತ್ತಮ ಸ್ಥಾನ ಪಡೆದುಕೊಂಡಿರುವುದು ಕಂಡುಬರುತ್ತದೆ.

"ಯಾವುದೇ ಒಂದು ದೇಶದ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಅಳೆಯಬೇಕಾದರೆ ಆ ದೇಶದಲ್ಲಿ ಸ್ತ್ರೀಯು ಹೊಂದಿರುವ ಸ್ಥಾನಮಾನದಲ್ಲಿ ಅಡಗಿದೆ. ಸ್ತ್ರೀಯರಿಗೆ ಉತ್ತಮ ಸ್ಥಾನಮಾನವನ್ನು ಕೊಡದ ಸಮಾಜ ಎಂದಿಗೂ ಪ್ರಗತಿ ಸಾಧಿಸಲಾರದು. ನಮ್ಮ ದೇಶದ ಸ್ತ್ರೀಯರ ಸ್ಥಾನಮಾನ ಉನ್ನತ ಸ್ಥಿತಿಯಲ್ಲಿದ್ದಾಗ ಮಾತ್ರ ನಮ್ಮ ದೇಶವು ಪ್ರಗತಿ ಪಥದಲ್ಲಿ ಸಾಗಬಹುದು ಎಂಬ ವಿಚಾರ ಗಮನಾರ್ಹ. ೧೯೧೭ರ ಅನಂತರ ಯು.ಎಸ್.ಎಸ್.ಆರ್. ೨ನೆಯ ಮಹಾಯುದ್ಧಾ ನಂತರದ ಜಪಾನ್ ಮತ್ತು ೧೯೬೦ರ ನಂತರದಲ್ಲಿ ಅಮೇರಿಕ ಸ್ತ್ರೀಯರ ಸಮಾವೇಶ ಮಾಡಿಕೊಂಡುದರಿಂದಲೇ ಅಭಿವೃದ್ಧಿಯನ್ನು ಸಾಧಿಸಿದವು.

"ಸಂಸ್ಕೃತಿ ಎನ್ನುವುದು ಮಾನವ ಸಮಾಜವನ್ನು ಸುತ್ತುವರೆದಿರುವಂಥ ಒಂದು ವ್ಯವಸ್ಥೆ. ಯಾವುದೇ ಸಮಾಜದಲ್ಲಿ ಸಾಂಪ್ರದಾಯಿಕವಾಗಿ ಬಂದ ಪದ್ಧತಿಗಳ ಜೀವನ ಮೌಲ್ಯಗಳ ಮತ್ತು ಆದರ್ಶಗಳ ಸಂಗ್ರಹವನ್ನು ಸಂಸ್ಕೃತಿ ಎನ್ನುತ್ತಾರೆ ಹಲವು ಸಮಾಜಶಾಸ್ತ್ರಜ್ಞರು. ಆದರೆ ಸಂಸ್ಕೃತಿಯಲ್ಲಿ ಕೇವಲ ಮೌಲ್ಯಗಳು ಅಥವಾ ಭಾವನೆಗಳು ಮಾತ್ರ ಸೇರ್ಪಡೆಯಾಗಿರದೆ, ಬೌದ್ಧಿಕ ಸಾಧನೆಗಳು, ಜೀವನ ಶೈಲಿ, ರೀತಿರಿವಾಜುಗಳು, ಆಚರಣೆ - ನಂಬಿಕೆಗಳು, ಪಾತ್ರ-ಹಂಚಿಕೆ, ನೀತಿ-ನಿಯಮಗಳು ಮುಂತಾದ ಅಂಶಗಳೂ ಸೇರಿವೆ.

ಒಟ್ಟಿನಲ್ಲಿ ಸಂಸ್ಕೃತಿ ಎನ್ನುವುದು ಭೌತಿಕ ಮತ್ತು ಅಭೌತಿಕವಾದ ಅಂಶಗಳನ್ನೊಳಗೊಂಡಂಥ, ಸಮಾಜದಿಂದ ಅಸ್ತಿತ್ವಕ್ಕೆ ಬಂದಂಥ ಒಂದು ವ್ಯವಸ್ಥೆ. ಆದರೆ ಸಂಸ್ಕೃತಿ ಮತ್ತು ಸಮಾಜದ ನಡುವಣ ಸಂಬಂಧದ ಸ್ವರೂಪ ಏಕಮುಖವಾದುದಲ್ಲ. ಸಂಸ್ಕೃತಿ ಸಮಾಜದ ರೀತಿನೀತಿಗಳನ್ನು ಜನಜೀವನವನ್ನು ಪ್ರಭಾವಿಸುತ್ತದೆ. ಸಮಾಜವೂ ಸಂಸ್ಕೃತಿಯಲ್ಲಿ ಬದಲಾವಣೆಗಳನ್ನು ತರುತ್ತದೆ.''[೪]

ಮಹಿಳೆ ಯಾವುದೇ ಒಂದು ದೇಶದ, ರಾಜ್ಯದ, ಗ್ರಾಮದ, ನಗರದ ಅಭಿವೃದ್ಧಿ ಮತ್ತು ಶ್ರೀಮಂತಿಕೆಯನ್ನು ಪಡೆಯಬೇಕಾದರೆ ಅಲ್ಲಿನ ಸ್ತ್ರೀಯರಿಗೆ ನೀಡಿರುವ ಸ್ಥಾನಮಾನಗಳನ್ನು ಗಮನಿಸಬೇಕಾಗುತ್ತದೆ. ಪ್ರತಿಯೊಂದು

ಹಂತದಲ್ಲಿಯೂ ಮಹಿಳೆಯರಿಗೆ ಒತ್ತುಕೊಟ್ಟು ಸಮಭಾಗಿಗಳಾಗಿ ಕಾರ್ಯ ನಿರ್ವಹಿಸಿದಾಗ ಮಾತ್ರ ಉತ್ತಮ ಅಭಿವೃದ್ಧಿಯನ್ನು ಕಾಣಬಹುದೆಂಬುದನ್ನು ಮಹಿಳಾ ಲೇಖಕಿ ಇಲ್ಲಿ ಚಿತ್ರಿಸಿರುವುದು ಕಂಡುಬರುತ್ತದೆ.

ಲಿಂಗ ಮತ್ತು ಲಿಂಗ ವ್ಯವಸ್ಥೆ ಎಂಬ ಪರಿಕಲ್ಪನೆಗಳಿಗೆ ವ್ಯತ್ಯಾಸಗಳನ್ನು ಗುರುತಿಸುವುದೇ ಸಂಸ್ಕೃತಿ ಎನ್ನುವ ಪದವನ್ನು ಬಳಸಿಕೊಳ್ಳುವುದರ ಮೂಲಕ. 'ಲಿಂಗ' ಎನ್ನುವುದು ಸ್ತ್ರೀ- ಪುರುಷರ ನಡುವಣ ಜೈವಿಕ ವ್ಯತ್ಯಾಸಗಳನ್ನು ತಿಳಿಸುವಂಥ ಒಂದು ಪರಿಕಲ್ಪನೆಯಾದರೆ, ಲಿಂಗ ವ್ಯವಸ್ಥೆ ಎನ್ನುವುದು ಸಂಸ್ಕೃತಿಯಿಂದ ನಿರ್ಮಿತವಾದಂಥ ಒಂದು ಸಾಮಾಜಿಕ ಸೃಷ್ಟಿ. ಸ್ತ್ರೀ ಪುರುಷರ ನಡುವಣ ಜೈವಿಕ ವ್ಯತ್ಯಾಸಗಳು ಒಂದು ವಾಸ್ತವ. ಭಿನ್ನ ಜೈವಿಕತೆಯ ಕಾರಣದಿಂದಾಗಿ ಸ್ತ್ರೀ ಪುರುಷರು ಮಾಡಬಹುದಾದ ಅಥವಾ ಮಾಡಬಾರದ ಕಾರ್ಯಗಳಲ್ಲೂ ವ್ಯತ್ಯಾಸಗಳಿರಬೇಕೆನ್ನುವುದು ಸಂಸ್ಕೃತಿ ನಿರ್ಮಾಣ ಮಾಡಿ, ಪೋಷಿಸಿಕೊಂಡು ಬಂದಿರುವಂಥ ಒಂದು ಮಿಥ್ಯೆ. ಸ್ತ್ರೀಯನ್ನು ದುರ್ಬಲೆ ಎನ್ನುವುದು, ಹಲವು ಜವಾಬ್ದಾರಿಗಳು ಆಕೆಗೆ ಮೀಸಲು ಎಂಬ ಮೌಲ್ಯವನ್ನು ಬಿತ್ತಿ, ಪುರುಷರು ಆ ಕೆಲಸಗಳಿಂದ ದೂರವಿರುವಂತೆ ಮಾಡಿರುವುದು, ಸ್ತ್ರೀಯರು ಜೀವನ ನಡೆಸಲು ನಾನಾ ಅಡ್ಡಿಗಳನ್ನು ಒಡ್ಡುವುದು ಇವೆಲ್ಲವೂ ಸಂಸ್ಕೃತಿಯ ಸೃಷ್ಟಿಯೇ ಸರಿ.

ಸ್ತ್ರೀಯು ನಿರ್ವಹಿಸುವ ಜೈವಿಕ ಪಾತ್ರಗಳು ಆಕೆಯ ದೇಹ ರಚನೆಯ ಕಾರಣದಿಂದಾಗಿ ಎಂಬುದು ನಿಜ. ಗರ್ಭಧಾರಣೆ, ಶಿಶುವಿಗೆ ಜನನ ನೀಡುವುದು ಹಾಗೂ ಶಿಶುವಿಗೆ ಹಾಲನ್ನುಣಿಸುವುದು ಈ ಮೂರೂ ಸ್ತ್ರೀಯರು ನಿರ್ವಹಿಸುವ ಜೈವಿಕ ಪಾತ್ರಗಳು ಎನ್ನುವುದೇನೋ ಸರಿ. ಆದರೆ ಸಮಾಜದ ಮತ್ತ್ಯಾವುದೇ ಚಟುವಟಿಕೆಯಲ್ಲಿ ಸ್ತ್ರೀಯರು ಪಾಲ್ಗೊಳ್ಳಬಾರದು ಎಂಬುದಕ್ಕೆ ಯಾವ ಆಧಾರವೂ ಇಲ್ಲ. ಭಿನ್ನ ಜೈವಿಕತೆ, ಭಿನ್ನಪಾತ್ರ ಹಂಚಿಕೆಯ ಕಾರಣವಾಗಿ, ಅದೇ ಪ್ರವೃತ್ತಿ ಇಂದಿಗೂ ಮುಂದುವರೆದುಕೊಂಡು ಬಂದಿರುವುದಕ್ಕೆ ಸಾಂಸ್ಕೃತಿಕ ವ್ಯವಸ್ಥೆಯೇ ಕಾರಣ ಎಂದೇನೂ ಪ್ರತ್ಯೇಕವಾಗಿ ಹೇಳಬೇಕಿಲ್ಲ. ಸ್ತ್ರೀಯು ತನ್ನ ಜೀವನದಲ್ಲಿ ಹಲವಾರು ಸಂದರ್ಭಗಳಲ್ಲಿ, ಎಂದರೆ ಋತುಮತಿಯಾದಾಗ ಅಥವಾ ಶಿಶುವಿಗೆ ಜನನ ನೀಡಿದಾಗ ಅವಳನ್ನು ತಾತ್ಕಾಲಿಕವಾಗಿ ಸಕ್ರಿಯ ಸಾಮಾಜಿಕ ಜೀವನದಿಂದ ದೂರವಿಡುವಂಥ, ಒಂದು ವ್ಯವಸ್ಥೆ ಸೃಷ್ಟಿಯಾಗಿ, ಅದನ್ನೇ ಮುಂದಿಟ್ಟುಕೊಂಡು ಅವಳ ಬದುಕಿನಲ್ಲಿ ವಿವಾಹ, ತಾಯ್ತನ, ಮಕ್ಕಳ ಲಾಲನೆ ಪಾಲನೆ, ಇವುಗಳೇ ಮುಖ್ಯವಾದ ಜವಾಬ್ದಾರಿಗಳು ಎನ್ನುವ ಒಂದು ಮಿಥ್ಯೆಯನ್ನು ಸಂಸ್ಕೃತಿ ನಿರ್ಮಿಸಿದೆ.

ಪ್ರತಿಯೊಂದು ಸಮಾಜದಲ್ಲೂ ವ್ಯಕ್ತಿಯ ಲಿಂಗ ಹಾಗೂ ವಯಸ್ಸಿನ ಆಧಾರಗಳ ಮೇಲೆ ಪಾತ್ರ ಹಂಚಿಕೆಯನ್ನು ಮಾಡುವಂಥ ವ್ಯವಸ್ಥೆ ಜಾರಿಯಲ್ಲಿದೆ.

ನಮ್ಮ "ಸಮಾಜದ ಎಲ್ಲ ಸಂಸ್ಥೆಗಳಲ್ಲೂ ಒಂದಲ್ಲ ಒಂದು ಬಗೆಯಲ್ಲಿ ಲಿಂಗ ತಾರತಮ್ಯ ಸಾಂಸ್ಕೃತಿಕ ವ್ಯವಸ್ಥೆಯ ಮೂಲಕ ಬೇರೂರುತ್ತವೆ. ಕುಟುಂಬದಲ್ಲಿ ಗಂಡುಮಗುವಿಗೆ ನೀಡುವ ಅತಿ ಪ್ರಾಶಸ್ತ್ಯ, ಹೆಣ್ಣು - ಗಂಡು ಮಕ್ಕಳಿಗೆ ಸಂಪನ್ಮೂಲಗಳ ಹಂಚಿಕೆಯಲ್ಲಿ ಕಂಡುಬರುವ ತಾರತಮ್ಯ, ಸ್ತ್ರೀ ಸದಸ್ಯರ ಮೇಲೆ ನಡೆಯುವ ಕೌಟುಂಬಿಕ ದೌರ್ಜನ್ಯದ ವಿವಿಧ ಮುಖಗಳು-ಇವೆಲ್ಲಾ ಲಿಂಗ ವ್ಯವಸ್ಥೆಯ ಪೂರ್ವ ಗ್ರಹಗಳನ್ನು ಎಳೆದು ವಯಸ್ಸಿನಿಂದಲೇ ರೂಢಿಸಿಕೊಳ್ಳುವಲ್ಲಿ ವ್ಯಕ್ತಿಗಳಿಗೆ ತರಬೇತಿಯನ್ನು ನೀಡುತ್ತವೆ.

ಶಿಕ್ಷಣ, ಲಿಂಗ ಭೇದವನ್ನು ತೊಡೆದು ಹಾಕಲು ಅತ್ಯಂತ ಉಪಯುಕ್ತವಾದ ಸಾಧನ ಎನ್ನುವುದು ನಿಜವಾದರೂ, ಈ ಶಿಕ್ಷಣ ವ್ಯವಸ್ಥೆಯಲ್ಲಿಯೇ ಲಿಂಗ ತಾರತಮ್ಯ ಹಾಸು ಹೊಕ್ಕಾಗಿದೆ. ಶಿಕ್ಷಣ ಸಂಸ್ಥೆಗಳಲ್ಲಿ ವಿದ್ಯಾರ್ಥಿ-ವಿದ್ಯಾರ್ಥಿನಿಯರ ನಡವಳಿಕೆ, ಶಿಕ್ಷಕರು ಲಿಂಗಸಂಬಂಧಿ ವಿಚಾರಗಳ ಬಗ್ಗೆ ತಳೆಯುವ ನಿಲುವುಗಳು, ಹೆಣ್ಣು ಗಂಡು ಮಕ್ಕಳಿಗೆ ದೊರೆಯುವ ವಿಭಿನ್ನ ಅವಕಾಶಗಳು, ಅವರ ಮೇಲೆ ಹೇರುವ ವಿಭಿನ್ನ ನಿಬಂಧನೆಗಳು, ಆಧುನಿಕತೆಯ ಮೌಲ್ಯಗಳನ್ನು ಬಿತ್ತುವ ಶಿಕ್ಷಣದಂಥ, ಒಂದು ವ್ಯವಸ್ಥೆ ಕೂಡ ಸಾಂಪ್ರದಾಯಿಕ ಸಾಂಸ್ಕೃತಿಕ ಸಂದರ್ಭಗಳ ಹಿಡಿತದಿಂದ ಹೊರಬಂದಿಲ್ಲ ಎನ್ನುವುದಕ್ಕೆ ಸಾಕ್ಷಿಯಾಗಿದೆ.

ಯಾವುದೇ ಸಮಾಜದಲ್ಲಿ ಲಿಂಗವ್ಯವಸ್ಥೆಯ ನ್ಯಾಯವನ್ನು ಪ್ರತಿಪಾದಿಸಬೇಕಾಗಿರುವುದು, ಆ ಸಮಾಜ ಸೃಷ್ಟಿಸುವಂಥ ನ್ಯಾಯ ಪಾಲನಾ ವ್ಯವಸ್ಥೆ. ಭಾರತೀಯ ಸಮಾಜದಲ್ಲಿ ಸಂವಿಧಾನ ಲಿಂಗತಾರತಮ್ಯವನ್ನು ನಿಷೇಧಿಸಿ, ಎಲ್ಲ ಪ್ರಜೆಗಳಿಗೂ ಸಮಾನ ಅವಕಾಶಗಳನ್ನು ನೀಡಿದ್ದರೂ ಇಂದಿಗೂ ಲಿಂಗತಾರತಮ್ಯ ಎಲ್ಲ ಸಂಸ್ಥೆಗಳಲ್ಲೂ ಅಸ್ತಿತ್ವದಲ್ಲಿರುವುದು ಕಂಡುಬರುತ್ತದೆ.

ಈ ಸಮಾಜದಲ್ಲಿ ಕಂಡುಬರುವ ಒಂದು ಅಹಿತಕಾರಿ ಪ್ರವೃತ್ತಿ ಎಂದರೆ, ಪ್ರಗತಿ ವಿರೋಧಿ ಸಾಂಸ್ಕೃತಿಕ ಮೌಲ್ಯಗಳಿಗೆ ಇರುವಷ್ಟು ಸ್ಥಿರತೆ, ಪ್ರಗತಿಪರ ಮೌಲ್ಯಗಳಿಗೆ ಇರುವುದಿಲ್ಲ ಎಂಬುದು. ನಮ್ಮನ್ನು ಸುತ್ತುವರಿದಿರುವ ಸಂಸ್ಕೃತಿಯಲ್ಲಿ ಎಲ್ಲೆಡೆ ಹಾಸು ಹೊಕ್ಕಾಗಿರುವ ಲಿಂಗ ಪೂರ್ವಗ್ರಹಗಳು ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ವರ್ಗಾವಣೆಯಾಗಿ, ಬಹುಜನರು ಈ ಪೂರ್ವಗ್ರಹಗಳನ್ನು ಆಂತರಿಸಿಕೊಂಡಿರುವುದು ಮಹಿಳಾಪರ ಹೋರಾಟಗಳಿಗೆ ಒಂದು ಬೃಹತ್ ಸವಾಲಾಗಿದೆ.

ಸಂಸ್ಕೃತಿ ಮತ್ತು ಸಮಾಜ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಒಂದನ್ನೊಂದು ಸೃಷ್ಟಿಸಿ, ಪೋಷಿಸಿ, ಪುಷ್ಟೀಕರಿಸುವ ವ್ಯವಸ್ಥೆಗಳು ಇವೆರಡು. ಸಂಸ್ಕೃತಿ ರಕ್ಷಣೆಯ ಆಶ್ರಯದಲ್ಲಿ ನಡೆಯುತ್ತಿರುವ ಸಂಪ್ರದಾಯದ ಧಾಳಿಗೆ ಪ್ರಬಲ ಪ್ರತಿಭಟನೆ ವ್ಯಕ್ತವಾದಾಗ ಮಾತ್ರ ಸಾಮಾಜಿಕ ಬದಲಾವಣೆಯ ಹೋರಾಟಕ್ಕೆ ಅರ್ಥ ಬರುವುದು."[೫]

ಲೇಖಕರು ಸ್ತ್ರೀಯರ ಬಗ್ಗೆ ಶಿಕ್ಷಣ ಲಿಂಗಬೇಧ, ಸಾಂಸ್ಕೃತಿಕ ಸಮಾಜದಲ್ಲಿ ತಾರತಮ್ಯ ನಡವಳಿಕೆ ಇವುಗಳ ಬಗ್ಗೆ ಅರ್ಥಪೂರ್ಣವಾಗಿ ಚಿತ್ರಿಸಿರುವುದನ್ನು ಕಾಣಬಹುದು. ಈ ಲಿಂಗಬೇಧ ವಿಚಾರಕ್ಕೆ ಬಂದಾಗ ಸಮಾಜವಾಗಲಿ, ಸಂಘ ಸಂಸ್ಥೆಗಳಾಗಲಿ ತಾರತಮ್ಯ ಮಾಡುವುದಕ್ಕೆ ಮುಂಚೆಯೇ ನೈಸರ್ಗಿಕವಾಗಿ ಬಂದಿರುವ ಸ್ತ್ರೀಯ ಭಾವನೆಗಳು ತನ್ನಷ್ಟಕ್ಕೆ ತಾನೇ ಈ ವ್ಯವಸ್ಥೆಯಲ್ಲಿ ಪಾಲ್ಗೊಳ್ಳಲು ಅವಕಾಶ ಮಾಡಿಕೊಡುತ್ತವೆ. ಇದೇ ಲೇಖಕರು ಸಂಸ್ಕೃತಿ ಮತ್ತು ಸಮಾಜ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ ಒಂದನ್ನೊಂದು ಸೃಷ್ಟಿಸಿ ಪೋಷಿಸಿ ಬೆಳೆಸುವ ವ್ಯವಸ್ಥೆಗಳಾಗಿವೆ ಎಂದು ಹೇಳಿದ್ದಾರೆ. ಸಂಸ್ಕೃತಿಯ ರಕ್ಷಣೆಯ ಆಶ್ರಯದಲ್ಲಿ ನಡೆಯುತ್ತಿರುವ ಸಂಪ್ರದಾಯದ ದಾಳಿಗೆ ಪ್ರಭಲ ಪ್ರತಿರೋಧ ಉಂಟಾದಾಗ ಮಾತ್ರ ಸಾಮಾಜಿಕ ಬದಲಾವಣೆಯ ಹೋರಾಟಕ್ಕೆ ಅರ್ಥ ಬರುತ್ತದೆ ಎಂಬ ವಿಷಯವು ತುಂಬಾ ಸಮಯೋಚಿತ ಹಾಗೂ ಎಲ್ಲರೂ ಒಪ್ಪಲೇ ಬೇಕಾದ ಅಂಶಗಳನ್ನು ನಾವು ಕಾಣುತ್ತೇವೆ.

ನಮ್ಮ ದೇಶದಲ್ಲಿ "ಬ್ರಿಟಿಷರ ಆಳ್ವಿಕೆಗೆ ಮುಂಚಿನ ಭಾರತದಲ್ಲಿ ಜಾತಿ, ಧರ್ಮಗಳು ಆಳವಾಗಿ ಬೇರೂರಿರುವ ಶ್ರೇಣೀಕೃತ ಸಮಾಜದಲ್ಲಿ ಒಡೆಯ ಗುಲಾಮ, ಗಂಡು ಹೆಣ್ಣುಗಳ ನಡುವಿನ ಪ್ರಶ್ನಾತೀತ ನಿಷ್ಠೆ ಮುಂತಾದ ಪಾಳೇಗಾರಿ ಮೌಲ್ಯಗಳಿಂದಾಗಿ ಆಂತರಿಕ ಘರ್ಷಣೆಗಳಿಲ್ಲದಿದ್ದರೂ, ಕೆಳಹಂತದ, ಜನಸಾಮಾನ್ಯರ ಬದುಕು ಸಂಕಷ್ಟದಿಂದ ಕೂಡಿತ್ತು. ಅರ್ಥವಿಲ್ಲದ ಕಂದಾಚಾರ ಮತ್ತು ಸಾಮಾಜಿಕ ಅನಿಷ್ಟಗಳು ತುಂಬಿ ತುಳುಕಿ ಜನರಲ್ಲಿ ಆಲಸ್ಯ, ಕೀಳರಿಮೆ ನೆಲೆಸಿತ್ತು. ಕರ್ಮ ಸಿದ್ಧಾಂತದಲ್ಲಿ ನಂಬಿಕೆಯಿಟ್ಟುಕೊಂಡ, ಜಾತಿಗಳ ನಡುವಿನ ಅಸಮಾನತೆಯನ್ನು ಸಾಮಾಜಿಕ ಅನ್ಯಾಯವೆಂದು ತಿಳಿಯುವ ಬದಲು ಅದನ್ನು ಸಮಾಜದ ನಿಯಮದಂತೆ ಭಾವಿಸಿದ್ದ ಭಾರತೀಯ ಸಮಾಜ ಜಡವಾಗಿತ್ತು.

ಪುರುಷನ ಆಧಿಪತ್ಯದ ನೆರಳಿನಲ್ಲಿ ನಾಲ್ಕು ಗೋಡೆಯೊಳಗೆ ಬಂಧಿಯಾಗಿದ್ದ ಹೆಣ್ಣು ಬಸಿರು, ಬಾಣಂತನ, ವೈಧವ್ಯ ಹಾಗೂ ಗಾಣದೆತ್ತಿನ ಚಾಕರಿಯ ತಿರುಗಣೆಯಲ್ಲಿ ಜೀವನದ ಅರ್ಥ ಕಾಣುತ್ತಿದ್ದಳು. ಬ್ರಿಟಿಷರಿಂದ ಪ್ರಾರಂಭವಾದ ಉದ್ಯಮೀಕರಣ ಮತ್ತು ಇಂಗ್ಲಿಷ್ ಶಿಕ್ಷಣವು ಇಂತಹ ಜಡ ಸಮಾಜದಲ್ಲಿ ಜಡತ್ವವನ್ನು ಕೊಡವಿಕೊಂಡು ಕ್ರಿಯಾತ್ಮಕವಾಗಿ ಸ್ಪಂದಿಸುವ ಅವಕಾಶ ಕೆಲವರಿಗಾದರೂ ತೆರೆಯಿತು.

"ಬ್ರಿಟಿಷ್ ವಸಾಹತುಶಾಹಿಯ ಪ್ರಭಾವದಿಂದ ಮಹಿಳೆ ಭಾರತದಲ್ಲಿ ಆಧುನಿಕ ಚಿಂತನೆಯ ಪ್ರಮುಖ ಆಸಕ್ತಿಯಾದಳು. ಮಹಿಳೆಯರ ಸ್ಥಿತಿ ಮತ್ತು ಸ್ಥಾನಮಾನವನ್ನು ಬ್ರಿಟಿಷ್ ಮತ್ತು ಭಾರತದ ಸಮಾಜ ಸುಧಾರಕರು ಹಾಗೂ ರಾಜಕಾರಣಿಗಳು ಈ ದೇಶದ ಆಧುನಿಕತೆ ಮತ್ತು ಸಾಂಪ್ರದಾಯಿಕತೆಯನ್ನು ಅಳೆಯುವ ಮಾನದಂಡಗಳಾಗಿ ಕಂಡರು. ಆಧುನಿಕತೆ, ಸುಧಾರಣೆ, ಪುನರುತ್ಥಾನ, ರಾಷ್ಟ್ರೀಯತಾವಾದ ಮುಂತಾದ ವಿವಿಧ ಚಿಂತನೆ, ಸಿದ್ಧಾಂತಗಳಡಿಯಲ್ಲಿ ಭಾರತೀಯ ಹೆಣ್ಣು ಚರ್ಚೆಯ ವಿಷಯವಾದಳು."[೬]

ಬ್ರಿಟಿಷರ ಕಾಲದಿಂದ ಇಂದಿನವರೆಗೂ ಮಹಿಳೆಯು ಪ್ರತಿಯೊಂದು ವಿಚಾರದಲ್ಲಿಯೂ ಚರ್ಚೆಯ ವಿಷಯವಾಗಿರುವುದನ್ನು ನಾವು ಇಲ್ಲಿ ಕಾಣಬಹುದು. ಉದಾ. ಮಹಿಳೆಯರ ವ್ಯಕ್ತಿತ್ವವನ್ನು ಚಿತ್ರಿಸುವುದು, ಮಹಿಳೆಯರ ಬಗ್ಗೆ ಲೇಖನಗಳನ್ನು ಬರೆಯುವುದು, ಮಹಿಳಾ ಲೇಖಕಿಯರಿಗೆ ಪ್ರೋತ್ಸಾಹ ನೀಡುವುದು, ಕೆಲವು ಮಹಿಳೆಯರ ಆದರ್ಶಗಳನ್ನು ಅನುಸರಿಸುವುದು ಮುಂತಾದವುಗಳನ್ನು ನಾವು ಕಾಣಬಹುದು. ಐತಿಹಾಸಿಕ ಮಹಿಳೆಯರನ್ನು ಉದಾಹರಣೆಯನ್ನಾಗಿಸಿಕೊಂಡು ಹಲವು ಲೇಖನಗಳನ್ನು ಬರೆಯುವುದು ಸಾಹಿತ್ಯದಲ್ಲಿ ಕೂಡ ಇದನ್ನೆಲ್ಲ ಗಮನಿಸಿದಾಗ ಲಿಂಗತಾರತಮ್ಯದ ವಿಷಯವೇ ಸುಳಿಯದೇ ಇರುವುದು ಕಂಡುಬರುತ್ತದೆ.

ಇಲ್ಲಿ ಲೇಖಕರು ಹೆಣ್ಣಿನ ವ್ಯಕ್ತಿತ್ವದ ಬಗ್ಗೆ ತಮ್ಮ ಅಭಿಪ್ರಾಯವನ್ನು ಹೇಳಿರುತ್ತಾರೆ. ಇದನ್ನು ಪರಿಶೀಲಿಸಿ ನೋಡಿದಾಗ ಹೆಣ್ಣು ತನ್ನ ವ್ಯಕ್ತಿತ್ವವನ್ನು ತಾಯಿಯಾಗಿ, ಮಗಳಾಗಿ, ಗುರುವಾಗಿ, ಸಂತಳಾಗಿ, ಅತ್ತೆಯಾಗಿ, ತಂಗಿಯಾಗಿ, ಸಹೋದರಿಯಾಗಿ, ಗೆಳತಿಯಾಗಿ, ಉದ್ಯೋಗಸ್ಥೆಯಾಗಿ, ಅಧಿಕಾರಸ್ಥೆಯಾಗಿ, ರಾಜಕಾರಣಿಯಾಗಿ, ನಟಳಾಗಿ, ಶಿಕ್ಷಕಿಯಾಗಿ ತನ್ನ ವ್ಯಕ್ತಿತ್ವವನ್ನು ಆಯಾ ಸಂದರ್ಭಕ್ಕೆ ಅನುಗುಣವಾಗಿ ಹೊಂದಿಸಿಕೊಂಡು ಗುರುತಿಸಿಕೊಳ್ಳಬೇಕಾಗುತ್ತದೆ. ಪುರುಷನ ದೃಷ್ಟಿಕೋನದಿಂದಲೇ ತನ್ನ ವ್ಯಕ್ತಿತ್ವವನ್ನು ಅಳೆದುಕೊಳ್ಳುವ ಅಪಾಯಕಾರಿ ಅಭಿಪ್ರಾಯವನ್ನು ತಳೆಯಬಾರದು ಎಂಬ ವಿಷಯವನ್ನು ಇಲ್ಲಿ ಗಮನಿಸಬಹುದು.

ನಮ್ಮ ಈ ಶತಮಾನದ ಕೊನೆಯಲ್ಲಿ ಭಾರತೀಯ ಮಹಿಳೆ, ಎಲ್ಲ ಕ್ಷೇತ್ರಗಳಲ್ಲಿ ಗಂಡಸರಿಗೆ ಸರಿಸಮಾನ ಶಿಕ್ಷಣ ಪಡೆದು ವಿವಿಧ ರಂಗಗಳಲ್ಲಿ ಮುಂದುವರಿಯುತ್ತಿರುವುದು ನಿಜವಾದರೂ ಅಖಂಡ ದೇಶದ ಪ್ರಗತಿಯನ್ನು ಗಮನಿಸಿದರೆ ಈ ಪ್ರಗತಿಪರ ಮಹಿಳೆಯರ ಸಂಖ್ಯೆ ಅತ್ಯಲ್ಪವೆಂದೇ ಹೇಳಬೇಕು. ಶಿಕ್ಷಣದೊಂದಿಗೆ ಶ್ರಮ ಗೌರವದ ಕಲ್ಪನೆ ಸೇರ್ಪಡೆಯಾಗದೇ ದೈಹಿಕ ಶ್ರಮದಿಂದ ಜೀವಿಸುವ ವರ್ಗದ ಪುರುಷರಂತೆ, ಸ್ತ್ರೀಯರೂ ಅಕ್ಷರಾಭ್ಯಾಸ ದೊರೆತೊಡನೆ, ಕೌಟುಂಬಿಕ ವೃತ್ತಿಗಳನ್ನು ಕಾಣಬಹುದು.

ನಮ್ಮ "ಎಲ್ಲಾ ವರ್ಗಗಳಲ್ಲಿ ಸ್ತ್ರೀಯರು ಒಂದಲ್ಲ ಒಂದು ರೀತಿಯಲ್ಲಿ ಶೋಷಣೆಯಿಂದ ನರಳುತ್ತಿದ್ದಾರೆ. ಹೆಣ್ಣು ಸ್ವಾತಂತ್ರ್ಯವನ್ನು ಬಯಸುವಳೆಂಬುದು ಹಲವರಿಗೆ ಸ್ವೇಚ್ಛೆ ಲಂಪಟತನ ಎಂದು ಅರ್ಥವಾಗಿದೆ. ಆದರೆ ಇದು ತಪ್ಪು ತಿಳುವಳಿಕೆ. ಸ್ವಾತಂತ್ರ್ಯವೆಂದರೆ ಸ್ವೇಚ್ಛೆಯಲ್ಲ, ನಿರ್ಭೀತಿಯಿಂದ ತಮ್ಮ ಅಸ್ತಿತ್ವವನ್ನು ರೂಪಿಸಿಕೊಂಡು ಮಾನವೀಯ ನೆಲೆಗಳಲ್ಲಿ ಬದುಕುವುದೇ ಆಗಿದೆ. ಈ ರೀತಿಯಾದ ತಪ್ಪುಗ್ರಹಿಕೆಯಿಂದ ಪುರುಷರು ಹುಬ್ಬುಗಂಟಿಕ್ಕಿದರೆ ಸ್ತ್ರೀಯರೇ ಗುಮಾನಿಯಿಂದ ನೋಡುವಂತಾಗುವುದು. ಆದುದರಿಂದ ಮೊದಲು ಸ್ವಾತಂತ್ರ್ಯ, ವಿಮೋಚನೆ ಮತ್ತು ಸ್ವೇಚ್ಛೆಯ ಅರ್ಥವನ್ನು ಪುರುಷ ಮತ್ತು ಸ್ತ್ರೀಯರು ತಿಳಿದುಕೊಂಡರೆ ಈ ಗೊಂದಲಗಳು ಇರುವುದಿಲ್ಲ. ಆಕೆ ಪ್ರತಿಭಟಿಸಿದ್ದು ನಿರಂತರವಾಗಿ ನಡೆದ ಅನ್ಯಾಯ, ದಬ್ಬಾಳಿಕೆಯ ವಿರುದ್ಧವೇ ಹೊರತು ಲಂಪಟತನವನ್ನು ಕೇಳಲಿಲ್ಲ.

ಆಕೆಗೂ ಒಂದು ಸ್ವತಂತ್ರ ಅಸ್ತಿತ್ವವಿದೆ. ಅದನ್ನು ರೂಪಿಸಿಕೊಳ್ಳಲು ಹಕ್ಕೂ ಇದೆ ಎಂಬುದು ಸ್ತ್ರೀವಾದದ ಒಂದು ಆಶಯ. ಮಹಿಳೆಯರು ತಮ್ಮಲ್ಲಿದ್ದ ಕೀಳರಿಮೆಯನ್ನು ತೊರೆದು, ಮನೆಯಿಂದ ಹೊರಬಂದು ಪ್ರತ್ಯೇಕ 'ಐಡೆಂಟಿಟಿ'ಯನ್ನು ಗಳಿಸುವುದರತ್ತ ಒಲವು ತೋರಬೇಕು. ಯಾರ ಮಗಳು? ಯಾರ ಹೆಂಡತಿ? ಯಾರ ಸೊಸೆ? ಎಂಬುದಕ್ಕಿಂತ ತನ್ನ ಅಸ್ತಿತ್ವದಿಂದಲೇ ಗುರುತಿಸಲ್ಪಡಬೇಕು. ಇದು ಪುರುಷ ಕೇಂದ್ರೀಕೃತದಡಿಯಲ್ಲಿ ಅಷ್ಟು ಸುಲಭದ ಮಾತೇನೂ ಅಲ್ಲ. ಅಂತೆಯೇ ಅನಿವಾರ್ಯವಾಗಿ ಸ್ತ್ರೀವಾದಿಗಳು ಚಳುವಳಿಗೆ ಇಳಿಯಲೇ ಬೇಕಾಯಿತು. ಇಲ್ಲಿ ಗಂಡು ಮನಸ್ಸುಗಳು ಕೂಡ ಬದಲಾಗುವುದು ಅವಶ್ಯವಿದೆ. ಹೆಣ್ಣನ್ನು ಗುಲಾಮಳೆಂದು, ಭೋಗದ ವಸ್ತುವೆಂದು ತಿಳಿಯದೆ ಸಂಗಾತಿಯೆಂದು ತಿಳಿಯಬೇಕು. ತಮ್ಮ ಎಲ್ಲಾ ಅಹಂ ಬಿಟ್ಟು "ವಚನಕಾರರಂತೆ" ವಿಶಾಲ, ವೈಚಾರಿಕ ದೃಷ್ಟಿಯನ್ನು ಬೆಳೆಸಿಕೊಳ್ಳಬೇಕು. ಅಂದಾಗ ಮಾತ್ರ ಸ್ತ್ರೀ ವಿಮೋಚನೆಗೆ ಹೊಸ ಅರ್ಥ ಬರುತ್ತದೆ. ಪುರುಷನ ದೃಷ್ಟಿಕೋನದಿಂದಲೇ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವ ಅಪಾಯಕಾರಿ ನಿಲುವನ್ನು ತಾಳಬಾರದು."[೭]

ಇನ್ನೂ ಹೆಚ್ಚಿನ ವಿವರಗಳನ್ನು ಮುಂದಿನ ಉಪ ಅಧ್ಯಾಯಗಳಲ್ಲಿ ಚರ್ಚಿಸುವ ಪ್ರಯತ್ನ ಮಾಡಿದ್ದೇನೆ.

## ೫. ೧. ಸ್ವಾತಂತ್ರ್ಯಾನಂತರದ ಭಾರತೀಯ ಸ್ತ್ರೀಯರ ಸ್ಥಿತಿಗತಿಗಳು

"ರಾಮಾಯಣದ ಮತ್ತು ಮಹಾಭಾರತ ಕಾಲದಲ್ಲಿ ಸ್ತ್ರೀಯ ಸ್ಥಾನಮಾನಗಳ ಬಗೆಗೆ ನಿರ್ದಿಷ್ಟವಾದ ನಿಲುವನ್ನು ತಾಳಲಾಯಿತು. ಧರ್ಮಶಾಸ್ತ್ರಗಳು ಅವಳ ಸ್ಥಾನಮಾನಗಳ ಬಗೆಗೆ ವ್ಯವಸ್ಥೆಯುಂಟು ಮಾಡಲು ಪ್ರಯತ್ನಿಸಿದವು. ದ್ರೌಪದಿ ಮತ್ತು ಸೀತಾ ಸ್ವಯಂವರಗಳನ್ನು ಪರಿಶೀಲಿಸಿದರೆ, ಸ್ತ್ರೀಗೆ ದೊರತಿದ್ದ ಸ್ವಾತಂತ್ರ್ಯಗಳ

ಪೂರ್ಣ ಚಿತ್ರಣ ದೊರೆಯುತ್ತದೆ. ಸೀತೆಯು ರಾಮನಲ್ಲಿ, ದ್ರೌಪದಿಯು ಪಾಂಡವರಲ್ಲಿ ಕ್ಷಾತ್ರವನ್ನು, ಶೌರ್ಯವನ್ನು ತುಂಬಲು ಕಾರಣರಾದರು. ಸೀತೆ ಮತ್ತು ದ್ರೌಪದಿಯರು ಇಂದಿಗೂ ಹಿಂದೂ ಸ್ತ್ರೀಯರಿಗೆ ಆದರ್ಶರಾಗಿದ್ದಾರೆ. ಕಾಲಕ್ರಮದಲ್ಲಿ ಸ್ತ್ರೀಗೆ ವೇದಗಳ ಯುಗದಲ್ಲಿ ಇದ್ದಷ್ಟು ಪುರಸ್ಕಾರ ಸಿಕ್ಕುತ್ತಿರಲಿಲ್ಲ. ಮಕ್ಕಳನ್ನು ಪಡೆಯುವ ಸ್ತ್ರೀಯನ್ನು ತುಚ್ಛವಾಗಿ ಕಾಣಲಾಯಿತು. ಜ್ಞಾನದ ಏಕಮೂಲವಾಗಿದ್ದ ವೇದಗಳು ಪುರುಷರ ಅಧೀನವಾದುದರಿಂದ, ಗೃಹ ಕೃತ್ಯಗಳನ್ನು ನೋಡಿಕೊಳ್ಳುವ ಹೊಣೆ ಸ್ತ್ರೀಯರದಾಯಿತು. ದಿನ ಕಳೆದಂತೆ ಸ್ತ್ರೀ-ಪುರುಷರ ಸ್ಥಾನಮಾನಗಳ ಅಂತರ ಹೆಚ್ಚಾಯಿತು. ಇದರ ಪರಿಣಾಮ ಪುರುಷರ ಜೊತೆ ಸ್ತ್ರೀಯ ಸಮಾನತೆ ಕ್ಷೀಣಿಸಲು ಪ್ರಾರಂಭವಾಗ ತೊಡಗಿತು. ಸ್ತ್ರೀಯು ವೇದಗಳನ್ನು ಪಾರಾಯಣ ಮಾಡಲು ಮತ್ತು ಯಜ್ಞಯಾಗಾದಿಗಳಲ್ಲಿ ಭಾಗವಹಿಸಲು ಅನರ್ಹಳೆಂದು ಗೌತಮನು ಘೋಷಿಸಿದನು. ಸ್ತ್ರೀಯರನ್ನು ಆಸ್ತಿಯ ಒಂದು ಭಾಗವೆಂದು ಪರಿಗಣಿಸಿದ್ದರಿಂದ ಅವರಿಗೆ ಆಸ್ತಿಯ ಮತ್ತು ದತ್ತು ಸ್ವೀಕಾರದ ಹಕ್ಕು ಇಲ್ಲದಾಯಿತು."[೮]

ಸ್ವಾತಂತ್ರ್ಯಪೂರ್ವದಲ್ಲಿ ಮತ್ತು ನಂತರ ಸ್ತ್ರೀಯರ ಬಗ್ಗೆ ಅನೇಕ ಲೇಖಕರು ಸ್ತ್ರೀಯರ ಸ್ಥಾನಮಾನಗಳನ್ನು ಸ್ತ್ರೀಯರ ಬಗ್ಗೆ ಕೆಲವು ಅನೇಕ ರೀತಿಯಾದ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಸ್ತ್ರೀ ಆಸೆಯ ಪ್ರತೀಕ, ಮಾಯೆ, ನರಕಕ್ಕೆ ದಾರಿ ಎಂದು ಹೇಳುತ್ತಾರೆ. ಆದರೆ ವಿಚಾರಮಾಡಿ ನೋಡಿದಾಗ ಇವುಗಳಿಗೆ ಅರ್ಥವಿಲ್ಲ. ಸೃಷ್ಟಿಯ ನಿಯಮದಂತೆ ಸ್ತ್ರೀ ಪುರುಷರಲ್ಲಿ ಆಸೆ ಆಕಾಂಕ್ಷೆ ಸ್ವಾಭಾವಿಕ ಎಂಬುದನ್ನು ನಾವು ಮನಗಾಣಬಹುದಾಗಿದೆ . ಇದನ್ನು ಉತ್ಪ್ರೇಕ್ಷೆ ಮಾಡುವಂತಿಲ್ಲ ಎಂಬುದು ನನ್ನ ಭಾವನೆ.

ಉಪನಿಷತ್‌ಗಳು ಸ್ತ್ರೀಯ ಸ್ಥಾನಮಾನಗಳನ್ನು ಉತ್ತಮಗೊಳಿಸಲು ಪ್ರಯತ್ನಿಸಿದವು. 'ಮಾತೃದೇವೋಭವ' ಎಂದು ತಾಯಿಯನ್ನು ದೈವ ಸ್ಥಾನಕ್ಕೇರಿಸಲಾಗಿತ್ತು. ಇಂದಿಗೂ ಈ ಭಾವನೆ ಭಾರತೀಯರಲ್ಲಿ ಉಳಿದು ಬಂದಿದೆ. "ತರ್ಪಣ" ಕೊಡುವಾಗ ತಾಯಿಯ ಕಡೆಯ ಮೂರು ಜನರಿಗೆ ಕೊಡಲಾಗುತ್ತಿತ್ತು.

"ಮಧ್ಯ ಯುಗದಲ್ಲಿ ಅವನತಿಯ ಹಾದಿಯಲ್ಲಿ ನಡೆದಿದ್ದ ಸ್ತ್ರೀಯರ ಸ್ಥಾನಮಾನಗಳು ಮುಸ್ಲಿಮರ ಆಳ್ವಿಕೆಯಲ್ಲಿ ಇನ್ನಷ್ಟು ಅಧೋಗತಿಗಿಳಿದವು. ಯುದ್ಧದಲ್ಲಿ ಪರಾಜಯ ಹೊಂದಿದ ಹಿಂದೂ ರಾಜರ, ಪ್ರಜೆಗಳ ಮೇಲೆ ಮತಾಂಧರಾದ ಮುಸಲ್ಮಾನರು ಕ್ರೂರವಾದ ದಬ್ಬಾಳಿಕೆ ನಡೆಸಿದರು. ಹಿಂದೂ ಸ್ತ್ರೀಯರ ಪಾವಿತ್ರ್ಯತೆಯನ್ನು ರಕ್ಷಿಸಲು ಹೊಸಹೊಸ ಕಟ್ಟಳೆಗಳು ರಚಿತವಾದವು. ಇದರ ಫಲವಾಗಿ ಬಾಲ್ಯ ವಿವಾಹ ಮತ್ತು ಸಹಗಮನ ಪದ್ಧತಿಗಳು ಬೆಳೆದು ಬಂದವು. ಬಾಬರ್‌ನ ಮರಣಾನಂತರ ಅಕ್ಬರನ ಆಳ್ವಿಕೆಯಲ್ಲಿ ಸ್ತ್ರೀಯರ ಸ್ಥಾನಮಾನಗಳು ಅಲ್ಪಸ್ವಲ್ಪ ಸುಧಾರಿಸಿದವು. ಅಕ್ಬರ್ ತನ್ನ ಸಾಮ್ರಾಜ್ಯದ ವಿಸ್ತರಣೆಗೆ ವಿವಾಹವನ್ನು ಬಳಸಿಕೊಂಡನು. ಹಿಂದೂ ದೇಶದ ತುಂಬಾ ಹರಡಿದ್ದ ರಾಜಮನೆತನಗಳಲ್ಲಿ ಸ್ತ್ರೀಯರನ್ನು ಒಂದಲ್ಲಾ ಒಂದು ವಿಧವಾಗಿ ಪುರಸ್ಕರಿಸಲಾಗುತ್ತಿತ್ತು. ಇಷ್ಟೆಲ್ಲಾ ಆದರೂ ಸಾಮಾನ್ಯ ಹಿಂದೂ ಸ್ತ್ರೀ ಜೀವನದಲ್ಲಿ ಹೆಚ್ಚೇನೂ ಬದಲಾವಣೆ ಆಗಲಿಲ್ಲ."[೯]

ಈ ಅಭಿಪ್ರಾಯ ಗಂಭೀರವಾದುದು. ಕಾಲ, ದೇಶ ಮತ್ತು ಸಂದರ್ಭಗಳು ಮನುಷ್ಯ ಬದುಕನ್ನು ನಿರ್ಬಂಧಿಸುತ್ತವೆ ಎಂಬುದು ಈ ಮೂಲಕ ಸ್ಪಷ್ಟವಾಗುತ್ತದೆ. ಸ್ವಾತಂತ್ರ್ಯಪೂರ್ವದಲ್ಲಿ ಮುಸಲ್ಮಾನರ ನಡವಳಿಕೆ ಹಿಂದೂ ಸ್ತ್ರೀಯರ ಬಗ್ಗೆ ಅನಾದರಣೀಯವಾಗಿ ಕಂಡಿರುವುದನ್ನು ತಿಳಿದುಕೊಂಡಿದ್ದೇವೆ. ಹಿಂದೆ ಅನೇಕ

ಬಾಲ್ಯವಿವಾಹ, ಸಹಗಮನ ಪದ್ಧತಿ ಇದ್ದವೆಂಬುದು ತಿಳಿದುಕೊಂಡಿದ್ದೇವೆ. ಆದರೆ ಸ್ವಾತಂತ್ರ್ಯಾನಂತರ ಸ್ತ್ರೀಯರ ಬಗ್ಗೆ ಇದ್ದ ಮನೋಭಾವ ಸಂಘಟನೆಗಳಿಂದ ಜನರ ತಿಳುವಳಿಕೆಗಳಿಂದ ಆಮೂಲಾಗ್ರವಾಗಿ ಬದಲಾಗಿದೆ. ಹಿಂದಿನ ಯಾವುದೇ ದುಷ್ಟ ಪದ್ಧತಿಗಳು ಕಂಡುಬರುವುದಿಲ್ಲ.

"ಬ್ರಿಟೀಷರ ಆಳ್ವಿಕೆಯಲ್ಲಿ ಭಾರತದ ಆಡಳಿತದಲ್ಲಿ ಅನೇಕ ಆಡಳಿತ ಮಾರ್ಪಾಡುಗಳನ್ನು ಕಾಣಬಹುದು. ನೈಸರ್ಗಿಕವಾಗಿ ಭಾರತವು ಒಂದು ಸಾಮ್ರಾಜ್ಯದಡಿಯಲ್ಲಿ ಒಂದೇ ಆಡಳಿತವನ್ನು ಹೊಂದಿದುದು ಇದೇ ಮೊದಲ ಬಾರಿಯಾಗಿತ್ತು. ದೇಶೀಯ ರಾಜರುಗಳಿಗೆ ಕೆಲವು ವಿಧವಾದ ಸ್ವಾತಂತ್ರ್ಯಗಳಿದ್ದರೂ ಬ್ರಿಟನ್ನಿನ ರಾಜತ್ವ ಭಾರತದ ಉದ್ದಗಲಕ್ಕೂ ತನ್ನದೇ ಆದ ಕಾನೂನನ್ನು ರಚಿಸಿತ್ತು. ಉತ್ತರಾಧಿಕಾರ, ಪಿತ್ರಾರ್ಜಿತ, ಆಸ್ತಿಯ ಮೇಲಿನ ಹಕ್ಕು, ವಿವಾಹ ಪದ್ಧತಿ ಮತ್ತು ಧಾರ್ಮಿಕ ಸಂಸ್ಥೆಗಳು ಆಡಳಿತ ಇವುಗಳ ಬಗೆಗೆ ಬ್ರಿಟಿಷರು ಹಲವು ನಿಯಮಗಳನ್ನು ಘೋಷಿಸಿದರು. ಇವುಗಳೆಲ್ಲದಕ್ಕೂ, ವಿಶೇಷವಾದ ಸಂಗತಿ ಎಂದರೆ, ಇಂಗ್ಲೀಷ್ ಶಿಕ್ಷಣವನ್ನು ಜಾರಿಗೆ ತಂದರು. ಪ್ರಾರಂಭದಲ್ಲಿ ಬ್ರಿಟಿಷರು ತಮ್ಮ ಆಳಿತವನ್ನು ಸುಗಮಗೊಳಿಸಿಕೊಳ್ಳಲು ಇಂಗ್ಲೀಷ್ ಶಿಕ್ಷಣವನ್ನು ಜಾರಿಗೆ ತಂದರೂ, ಅದರ ಮಹತ್ವದ ಅರಿವಾದದ್ದು ರಾಜರಾಮ ಮೋಹನ್‌ರಾಯ್ ಅವರಿಂದಲೇ.

ಬ್ರಿಟಿಷ್ ಶಿಕ್ಷಣದಿಂದ ಕೇವಲ ಆಡಳಿತ ಮತ್ತು ರಾಜಕೀಯ ಜೀವನ ಮಾತ್ರವಲ್ಲದೆ ಸಾಮಾಜಿಕ ಜೀವನವೂ ಬದಲಾಗುವುದೆಂದೂ ರಾಜಾರಾಮ್ ಮೋಹನ್‌ರಾಯ್ ಬಲವಾಗಿ ನಂಬಿದ್ದರು. ನ್ಯಾಯ, ವಿಜ್ಞಾನ, ತಂತ್ರಜ್ಞಾನ, ಮುಂತಾದ ಕ್ಲಿಷ್ಟ ವಿಷಯಗಳು ಇಂಗ್ಲೀಷ್ ಭಾಷೆಯಲ್ಲಿ ಅಪಾರವಾಗಿ ಸಿದ್ಧಗೊಂಡಿದ್ದವು. ಸಾಮಾಜಿಕ ಅಸಮತೆಯನ್ನು ಹೋಗಲಾಡಿಸಲು ಇಂಗ್ಲೀಷ್ ಕಲಿಯುವುದು ಅನಿವಾರ್ಯವಾಯಿತು. ಇದು ಭಾರತೀಯರ ಜನಜೀವನದಲ್ಲಿ ಹೊಸ ಮೈಲಿಗಲ್ಲಾಯಿತು ಎಂದು ಹೇಳಬಹುದು.

ರಾಜಾ ರಾಮಮೋಹನರಾಯ್ ತಮ್ಮ ಜೀವನದುದ್ದಕ್ಕೂ ಸಾಮಾಜಿಕ ಅಸಮತೆಯನ್ನು ನೀಗಿಸಲು ಪ್ರಯತ್ನಪಡುತ್ತಿದ್ದ ಮಹಾನ್‌ವ್ಯಕ್ತಿ. ಸತಿಸಹಗಮನ ಪದ್ಧತಿಯನ್ನು ನಿಷೇಧಿಸಲು ಅವರು ಹೂಡಿದ ಆಂದೋಲನದಿಂದ ಬ್ರಿಟಿಷ್ ಸರಕಾರ ಲಾರ್ಡ್ ವಿಲಿಯಂ ಬೆಂಟಿಂಕ್‌ನ ಕಾಲದಲ್ಲಿ ಅದನ್ನು ನಿಷೇಧಿಸುವ ಒಂದು ಶಾಸನವನ್ನು ಜಾರಿಗೆ ತಂದಿತು.

ಈಶ್ವರಚಂದ್ರ ವಿದ್ಯಾಸಾಗರ್ ಎಂಬ ಮಹನೀಯರು ಭಾರತೀಯ ಸ್ತ್ರೀಯ ಸ್ಥಾನಮಾನಗಳನ್ನು ಉತ್ತಮ ಮಟ್ಟಕ್ಕೇರಿಸಲು ಪ್ರಯತ್ನಿಸಿದ ಮತ್ತೊಬ್ಬ ವ್ಯಕ್ತಿ. ೧೮೪೯ರಲ್ಲಿ ಅವರು ವಿದ್ಯಾರ್ಥಿನಿಯರಿಗಾಗಿಯೇ, ಕಲ್ಕತ್ತದಲ್ಲಿ ಒಂದು ಶಾಲೆಯನ್ನು ತೆರೆದರು. ಅದೇ ವರ್ಷದಲ್ಲಿ ಬೊಂಬಾಯಿ, ಅಹಮದಾಬಾದ್ ಮುಂತಾದ ಕಡೆಗಳಲ್ಲಿ ವಿದ್ಯಾರ್ಥಿನಿಯರಿಗಾಗಿ ಶಾಲೆಗಳನ್ನು ತೆರೆಯಲಾಯಿತು. ೧೮೮೨ರಲ್ಲಿ ಇಬ್ಬರು ಮಹಿಳೆಯರು ವಿಶ್ವವಿದ್ಯಾನಿಲಯ ಪದವಿ ಪಡೆದರು. ೧೯ನೇ ಶತಮಾನದ ಕೊನೆಯ ಹೊತ್ತಿಗೆ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣಕ್ಕೆ ಹುಡುಗಿಯರು ಸಾಮಾನ್ಯವಾಗಿ ಹೋಗುತ್ತಿದ್ದರು. ರಾಷ್ಟ್ರೀಯ ನೇತಾರರಾಗಿ ಗಾಂಧೀಜಿ ದೇಶದ ರಾಜಕಾರಣವನ್ನು ಪ್ರವೇಶಿಸಿದ ನಂತರ ಸ್ತ್ರೀಯರ ಸಮಗ್ರ ಪರಿಸ್ಥಿತಿಯನ್ನು ಪುನಃ ಪರಿಶೀಲಿಸಿ ಅದನ್ನು ಉತ್ತಮ ಪಡಿಸಲು ಬಹಳಷ್ಟು ಶ್ರಮ ವಹಿಸಿದರು."[೧೦]

ಅಂದರೆ ಸ್ತ್ರೀ ಬದುಕಿನ ಸುಧಾರಣೆಗೆ ಭಾರತೀಯರಲ್ಲಿಯೇ ಒಂದು ಜಾಗೃತಿ ಮೂಡಿತ್ತು. ಬ್ರಿಟಿಷರ ಕಾಲದಲ್ಲಿಯೂ ಸಹ ಭಾರತದ ರಾಜಾರಾಮ್ ಮೋಹನ್‌ರಾಯ್ ಹಾಗೂ ಈಶ್ವರಚಂದ್ರ ವಿದ್ಯಾಸಾಗರರಂತಹ ಮಹಾನ್ ವ್ಯಕ್ತಿಗಳು ಸ್ತ್ರೀಯರ ಬಗ್ಗೆ ಸ್ತ್ರೀಸ್ವಾತಂತ್ರ್ಯ, ಶಿಕ್ಷಣ, ಹಕ್ಕುಗಳು ಇವುಗಳ ಬಗ್ಗೆ ಅಸಮಾನತೆಯನ್ನು ಸರಿಪಡಿಸಲು ಪ್ರಯತ್ನಿಸಿರುವ ಅನೇಕ ಉದಾಹರಣೆಗಳು ನಮಗೆ ಸಿಗುತ್ತವೆ. ಹದಿನೆಂಟನೆಯ ಶತಮಾನದ ಕೊನೆಯಲ್ಲಿ ಮಹಿಳಾ ವಿದ್ಯಾರ್ಥಿನಿಯರ ಶಿಕ್ಷಣಕ್ಕಾಗಿ ಕಲ್ಕತ್ತ, ಬೊಂಬಾಯಿ, ಅಹಮದಾಬಾದ್‌ಗಳಂತಹ ದೊಡ್ಡ ನಗರಗಳಲ್ಲಿ ಶಾಲೆಗಳನ್ನು ತೆರೆದು ಮಹಿಳೆಯರ ಬಗ್ಗೆ ಕಾಳಜಿಯನ್ನು ತೋರಿಸಿರುವುದು ಕಂಡುಬರುತ್ತದೆ.

"೧೯೪೭ರಲ್ಲಿ ಬ್ರಿಟಿಷರ ಆಡಳಿತದಿಂದ ಸ್ವಾತಂತ್ರ್ಯ ಪಡೆದರೂ ಭಾರತ ಇಬ್ಭಾಗಗೊಂಡು ಹಿಂದೂಸ್ಥಾನ ಮತ್ತು ಪಾಕಿಸ್ಥಾನಗಳಾಗಿ ಒಡೆಯಿತು.

೧೯೭೮ರಲ್ಲಿ ಹಿಂದೂ ವಿವಾಹ ಕಾಯ್ದೆಯೂ ಪುನಃ ತಿದ್ದುಪಡಿ ಮಾಡಲ್ಪಟ್ಟಿತು. ಶಾಸನ ಸಭೆಗಳು ದೊರಕಿಸಿದ ಪುರಸ್ಕಾರಕ್ಕಿಂತ ಹೆಚ್ಚಾಗಿ, ಕೈಗಾರಿಕೆ, ಸಾಮಾಜಿಕ ವ್ಯವಸ್ಥೆ, ಸಂಪರ್ಕ ಸಾಧನಗಳೂ, ರಾಜಕೀಯ ಪ್ರಜ್ಞೆ ಇವುಗಳಿಂದಲೂ ಸ್ತ್ರೀಯರು ಹೊರಬಂದು ಪುರುಷರ ಸಂಗಡ, ಸಮಾನರಾಗಿ ದುಡಿಯುವುದಲ್ಲದೆ ಅವರ ನಡೆನುಡಿಗಳನ್ನೆ ಅನುಸರಿಸುತ್ತಿದ್ದಾರೆ. ವಿದ್ಯೆಯಲ್ಲಿ ಉಡುಪಿನಲ್ಲಿ, ಉದ್ಯಮದಲ್ಲಿ ರೀತಿನೀತಿ ಇವುಗಳಲ್ಲಿ ಗಂಡು, ಹೆಣ್ಣು ಎಂಬ ಭೇದವಿಲ್ಲದೆ ಸ್ತ್ರೀ ಪುರುಷರು ಸಮಜೀವನವನ್ನು ನಡೆಸುತ್ತಿದ್ದಾರೆ. ಸೇವಾ ದೃಷ್ಟಿಯಿಂದಲೂ, ಧರ್ಮ ದೃಷ್ಟಿಯಿಂದಲೂ, ಮಾಡುತ್ತಿದ್ದ ನಿಷ್ಕಾಮಕ್ರಿಯೆಗಳು ಇಂದು ಹಣಗಳಿಕೆಯ ದೃಷ್ಟಿಯಿಂದ ನಡೆಯುತ್ತಿವೆ.

ಯಾರ ಸೇವೆಯನ್ನೇ ಆಗಲಿ ಕೊಂಡುಕೊಳ್ಳಬಹುದಾದಷ್ಟು ಮಟ್ಟಿಗೆ ಸಮಾಜ ಬದಲಾವಣೆ ಹೊಂದಿದೆ. ಮಾನವ ಸೇವೆ ಇಂದು ವ್ಯಾಪಾರ ವಸ್ತುವಾಗಿದೆ. ದಣಿ ಮತ್ತು ಸೇವಕನ ಸಂಬಂಧ ಕಾನೂನುಗಳಿಂದ ನಿರ್ಧರಿಸಲ್ಪಟ್ಟಿದೆ. ತಾಯಂದಿರಿಗೆ ಸಹಾಯ, ಕೆಲಸಗಾರರ ಖಾಯಿಲೆ ಅಥವಾ ಆರೋಗ್ಯ ಸಂಬಂಧವಾದ ವಿಮೆ, ವೃದ್ಧಾಪ್ಯವೇತನ, ಆಕಸ್ಮಿಕಗಳ ಬಗ್ಗೆ ಪರಿಹಾರ ಮುಂತಾದವು ಕೂಡ ಸರಕಾರದ ಆಜ್ಞೆಗಳಿಂದ ವ್ಯವಸ್ಥೆಗೊಂಡಿವೆ. ವ್ಯಕ್ತಿಗೆ ತನ್ನ ಜೀವನವನ್ನು ತಾನೇ ರೂಪಿಸಿಕೊಳ್ಳುವ ಸ್ವಾತಂತ್ರ್ಯ ದೊರಕಿದೆ. ವಿಜ್ಞಾನ ಮತ್ತು ಧರ್ಮದ ಬಗ್ಗೆ ಹೊಸ ದೃಷ್ಟಿಕೋನ ಮೂಡಿದೆ. ಸ್ತ್ರೀಯರ ಬಗ್ಗೆ ಅನುಸರಿಸಲಾಗುತ್ತಿದ್ದ ಹಲವು ಕಠೋರ ಆಚರಣೆಗಳು ಇವರಿಂದ ಮಾಯವಾಗಿವೆ. ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವಕ್ಕೆ ಸ್ತ್ರೀ ಪುರುಷರಿಬ್ಬರೂ ಒಳಗಾಗಿದ್ದಾರೆ. ನಡೆ ನುಡಿ, ಅಭಿರುಚಿ, ಸಂಪ್ರದಾಯ ಇವುಗಳಿಗೆ ಸಂಬಂಧಿಸಿದಂತೆ, ನಾವು ಹೊಸ ಸಮಾಜವನ್ನೆ ಕಾಣುತ್ತಿದ್ದೇವೆ.

ಪುರುಷನೊಡನೆ, ಸಮಾನವಾಗಿ ಹಾಗೂ ಒಟ್ಟಿಗೆ ದುಡಿಯುವ ಅವಕಾಶಗಳಿರುವುದರಿಂದ ಕೀಳುವರ್ಗದ ಬಡ ಸ್ತ್ರೀಯರೂ ಸಹ ಆತ್ಮಗೌರವ, ಧೈರ್ಯ ಹಾಗೂ ಸಾಹಸ ಪ್ರವೃತ್ತಿಯನ್ನು ಹೊಂದಲು ಸಾಧ್ಯವಾಗಿದೆ. ಸಮಾಜದ ಸಕಲ ಕ್ಷೇತ್ರಗಳಲ್ಲೂ ಭಾಗವಹಿಸುವಷ್ಟರ ಮಟ್ಟಿಗೆ ಸ್ತ್ರೀ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಂಡಿದ್ದಾಳೆ. ೨೦ನೇ ಶತಮಾನವು ಸ್ತ್ರೀಗೆ ಸಮಾನ ವಿದ್ಯಾಭ್ಯಾಸ, ಸಮಾನ ದುಡಿಮೆಗೆ ಅವಕಾಶ, ಸಾಕಷ್ಟು ವಿರಾಮ,

ಸ್ವಾತಂತ್ರ್ಯ ಮತ್ತು ಬಾಳಿನಲ್ಲಿ ಸ್ವಚ್ಛಂದತೆ, ಕ್ರಿಯಾತ್ಮಕ ಚಟುವಟಿಕೆಗಳು ಮೊದಲಾದವುಗಳನ್ನು ತಂದುಕೊಟ್ಟಿದೆ. ಇಂದು ಸ್ತ್ರೀಯರು ಸಮಾಜಕ್ಕೆ ಅಮೂಲ್ಯವಾದ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ವಿಜ್ಞಾನ, ಸಂಶೋದನೆ, ಉದ್ಯಮ, ವೈದ್ಯಕೀಯ ಶಿಕ್ಷಣ ಮೊದಲಾದ ಕ್ಷೇತ್ರಗಳಲ್ಲಿ ಅವರು ಪುರುಷರಂತೆಯೇ ಪುರುಷರೊಂದಿಗೆ ಸರಿಸಮಾನವಾಗಿ ದುಡಿಯುತ್ತಿದ್ದಾರೆ.”[೧೧]

ಸ್ವಾತಂತ್ರ್ಯಾ ನಂತರ ನಮ್ಮ ದೇಶದಲ್ಲಿ ಸರ್ಕಾರ ಸ್ತ್ರೀಯರ ಸ್ಥಿತಿಗತಿಗಳ ಬಗ್ಗೆ ಅನೇಕ ಕಾನೂನುಗಳನ್ನು ಸ್ತ್ರೀಯರ ಪರವಾಗಿ ಜಾರಿ ಮಾಡಿತು. ಇವುಗಳಲ್ಲಿ ಮುಖ್ಯವಾಗಿ ವಿವಾಹ ಕಾಯಿದೆ, ವರದಕ್ಷಿಣೆ ಕಾಯಿದೆ, ಆರ್ಥಿಕ, ಶಿಕ್ಷಣ, ಉದ್ಯೋಗ ಮೀಸಲಾತಿ, ಕೈಗಾರಿಕೆ ಪ್ರತಿಯೊಂದರಲ್ಲಿಯೂ ಸ್ತ್ರೀ ಮತ್ತು ಪುರುಷರಿಗೆ ಸರಿಸಮಾನವಾಗಿ ಕಾನೂನುಗಳನ್ನು ರಚಿಸಿ ಉತ್ತಮ ರೀತಿಯಲ್ಲಿ ಮಹಿಳೆಯರಿಗೆ ಉಪಯೋಗವಾಗುವಂತೆ ಸಂಘ ಸಂಸ್ಥೆಗಳ ಚಳುವಳಿಗಳೊಂದಿಗೆ ಸ್ತ್ರೀಯರ ಶೋಷಣೆ ಮತ್ತು ತಾರತಮ್ಯವನ್ನು ಹೋಗಲಾಡಿಸಲು ಸಾಕಷ್ಟು ಶ್ರಮಿಸಿರುವುದನ್ನು ಮನಗಾಣುತ್ತೇವೆ. ಈ ವಿಚಾರದಲ್ಲಿ ಸ್ತ್ರೀಯರು ಇಂದು ಶಿಕ್ಷಣ ಮತ್ತಿತರ ಎಲ್ಲಾ ಹಕ್ಕುಗಳ ಬಗ್ಗೆ ಎಲ್ಲಾ ವಿಭಾಗಗಳಲ್ಲಿಯೂ ಮುಂದುವರಿದು ಇದರ ಪ್ರಯೋಜನಗಳನ್ನು ಪಡೆಯುತ್ತಿರುವುದು ನಮ್ಮ ಕಣ್ಣೆದುರಿಗೆ ಕಂಡುಬರುತ್ತದೆ.

“ಅನೇಕ ಶತಮಾನಗಳಿಂದ ಮಾನವ ಸಮಾಜದಲ್ಲಿ ಒಂದು ರೀತಿಯ ಶ್ರಮ ವಿಭಜನೆಯನ್ನು ಕಾಣಬಹುದು. ಪುರುಷನು ಬೇಟೆಯಾಡುವುದು, ಮೀನು ಹಿಡಿಯುವುದು, ಉಳುವುದು ಮುಂತಾದ ದೈಹಿಕಶ್ರಮ ಪ್ರಧಾನವಾದ ದುಡಿಮೆಯಲ್ಲಿ ತೊಡಗಿದನು. ಸ್ತ್ರೀಯು ತನ್ನ ಸಹಜವಾದ ಕೋಮಲತೆ, ಸಹನೆ ಹಾಗೂ ಗರ್ಭಧಾರಣೆ ಮಾಡುವಿಕೆ, ಮಕ್ಕಳ ಪಾಲನೆ, ಪೋಷಣೆ, ಆಹಾರ ಸಿದ್ಧಪಡಿಸುವುದು ಮತ್ತಿತರ ಗೃಹಕೃತ್ಯಗಳಲ್ಲಿ ತೊಡಗಿದಳು. ಇದು ಅವಳ ದುಡಿಮೆಯ ಕ್ಷೇತ್ರವನ್ನು ಸೀಮಿತಗೊಳಿಸಿದ ಬಹುಮುಖ್ಯ ಅಂಶವೆನ್ನಬಹುದು. ಅವಳನ್ನು ಒಂದು ರೀತಿಯ ಗುಲಾಮ ಗಿರಿಯಲ್ಲಿ ನೂಕಿದ ಈ ಅಂಶವನ್ನು ಇಂದಿಗೂ ನಮ್ಮ ಗ್ರಾಮೀಣ ಸಮಾಜದಲ್ಲಿ ಹೆಚ್ಚಿನ ಬದಲಾವಣೆಗೆ ಒಳಪಟ್ಟಿಲ್ಲ. ಕೈಗಾರಿಕಾ ಕ್ರಾಂತಿಯ ನಂತರ ಈ ಪರಿಸ್ಥಿತಿಯಲ್ಲಿ ಅಲ್ಪಸ್ವಲ್ಪ ಬದಲಾವಣೆಯುಂಟಾಗಿದ್ದರೂ ಬಹುಸಂಖ್ಯೆಯಲ್ಲಿ ಸ್ತ್ರೀಯರು ಇನ್ನೂ ಅಂಧಕಾರದಲ್ಲಿ ಇರುವುದನ್ನು ಕಾಣಬಹುದು. ಸ್ವಾತಂತ್ರ್ಯಾನಂತರ ಭಾರತದಲ್ಲಿ ಸ್ತ್ರೀ ಉದ್ಯೋಗಿಗಳ ಬಗ್ಗೆ ಹೆಚ್ಚಿನ ಗಮನ ಹರಿಸಬೇಕಾಗಿದೆ. ಹೆಣ್ಣು ಮತ್ತು ಗಂಡು ಎಲ್ಲ ರಂಗಗಳಲ್ಲಿಯೂ ಸಮಾನತೆಯನ್ನು ಬಯಸಿ ಉದ್ಯೋಗಗಳಲ್ಲಿ ತೊಡಗಿದ್ದಾರೆ.”[೧೨]

ವ್ಯವಸಾಯ ರಂಗದಲ್ಲಿ ಸ್ತ್ರೀಯರಿಂದ ನಾಜೂಕಿನ ಕೆಲಸಗಳು ನಿರ್ವಹಿಸಲ್ಪಡುತ್ತಿವೆ. ಗೃಹಕೃತ್ಯಗಳು ಮುಖ್ಯವಾಗಿ ಅಡಿಗೆ ಮಾಡುವುದು, ಬಟ್ಟೆ ಒಗೆಯುವುದು, ಮಕ್ಕಳ ಪಾಲನೆ ಪೋಷಣೆಯಲ್ಲಿ ತೊಡಗುವುದು ಮತ್ತು ಗಂಡಸರ ದುಡಿಮೆಗೆ ಪೂರಕವಾಗುವಂತಹ ರಂಗಗಳಲ್ಲಿ ದುಡಿಯುವುದು, ಉದಾ : ವ್ಯವಸಾಯ, ಗೃಹಕೈಗಾರಿಕೆಗಳು, ದೈಹಿಕ ದುಡಿಮೆಯೇ ಮುಖ್ಯವಾಗಿರುವ ಮತ್ತು ಕುಶಲತೆ ಇಲ್ಲದ ಕೆಲಸಗಳು ಉದಾ: ರಸ್ತೆ ನಿರ್ಮಾಣ, ಪ್ಲಾಂಟೇಷನ್, ಗಣಿಗಳು ಮುಂತಾದ ಕೆಲಸಗಳು ಮತ್ತು ನಾಲ್ಕನೆಯದಾಗಿ, ವೈದ್ಯಕೀಯ, ಆಡಳಿತ, ಮಿಲಿಟರಿ, ಕಾನೂನು ಮುಂತಾದ ಕ್ಷೇತ್ರಗಳಲ್ಲಿ ಮಹಿಳೆಯರು ದುಡಿಯುವುದನ್ನು ಕಾಣಬಹುದು.

"೧೯೪೭ರ ನಂತರ ಪ್ರಾಥಮಿಕ ಮತ್ತು ಮಾಧ್ಯಮಿಕ ಉತ್ಪಾದನಾ ವ್ಯವಸ್ಥೆಗಳಲ್ಲಿ ಸ್ತ್ರೀಯರು ದುಡಿಯುವ ಪ್ರಮಾಣ ಅಧಿಕಗೊಂಡಿದೆ. ಸುಮಾರು ೨೫೦ ದಶಲಕ್ಷ ಸ್ತ್ರೀ ಕೆಲಸಗಾರರಲ್ಲಿ ೭೫ ದಶಲಕ್ಷಗಳಿಗೂ ಹೆಚ್ಚು ಸ್ತ್ರೀಯರು ದಿನಗೂಲಿ ಆಧಾರದ ಮೇಲೆ ದುಡಿಯುತ್ತಿದ್ದಾರೆ. ಇವರಲ್ಲಿಯೂ ಸುಮಾರು ಅರ್ಧದಷ್ಟು ಸ್ತ್ರೀಯರು ವ್ಯವಸಾಯ ರಂಗದಲ್ಲಿಯೂ ಮತ್ತು ಕಾಲುಭಾಗದಷ್ಟು ಸ್ತ್ರೀಯರು ಗೃಹಕೃತ್ಯದಲ್ಲಿಯೂ ಸೇವೆ ಸಲ್ಲಿಸುತ್ತಿದ್ದಾರೆ.

೧೯೬೦ರ ನಂತರ ವಿದ್ಯಾವಂತ ಸ್ತ್ರೀಯರ ಪ್ರಮಾಣ ಗಮನಾರ್ಹವಾಗಿ ಏರಿದೆ. ಆದರೂ ಅಧ್ಯಾಪಕ ವೃತ್ತಿ, ಆಡಳಿತ ಮತ್ತು ತಾಂತ್ರಿಕ ವೃತ್ತಿಯಲ್ಲಿ ಸ್ತ್ರೀಯರ ಪ್ರಮಾಣ ಕಡಿಮೆ ಎಂದೇ ಹೇಳಬೇಕು. ಆದರೆ ಹತ್ತಿ, ಗೋಡಂಬಿ, ಸೆಣಬು ಮತ್ತಿತರ ಕಾರ್ಖಾನೆಗಳಲ್ಲಿ ಹಾಗೂ ಪ್ಲಾಂಟೇಷನ್‌ಗಳಲ್ಲಿ ಕೆಲಸ ಮಾಡುವ ಮಹಿಳೆಯರ ಪ್ರಮಾಣ ಅಧಿಕವಾಗಿರುವುದನ್ನು ಕಾಣಬಹುದು.

ನಮ್ಮ ಗ್ರಾಮಾಂತರ ಪ್ರದೇಶಗಳಲ್ಲಿ ಶೇ. ೩೧ರಷ್ಟು ಹೆಂಗಸರು ವ್ಯವಸಾಯ ವೃತ್ತಿಯನ್ನು ಮತ್ತು ಶೇ. ೫೦ರಷ್ಟು ಸ್ತ್ರೀಯರು ವ್ಯವಸಾಯ ಕೂಲಿಕಾರರಾಗಿಯೂ ದುಡಿಯುತ್ತಿದ್ದಾರೆ. ಈ ಪ್ರಮಾಣದ ಭಾಗವಹಿಸುವಿಕೆಯಿಂದ ದೇಶದ ಒಟ್ಟಾರೆ ಆರ್ಥಿಕ ಪರಿಸ್ಥಿತಿ ಉತ್ತಮಗೊಳ್ಳಬಹುದೇ ಹೊರತು ಸ್ತ್ರೀಯರ ಸ್ಥಾನಮಾನಗಳು ಉತ್ತಮಗೊಳ್ಳುತ್ತವೆ ಎಂದು ಹೇಳಲು ಸಾಧ್ಯವಿಲ್ಲ.

ನಮ್ಮ ಭಾರತೀಯ ಗ್ರಾಮೀಣ ಸಮಾಜದಲ್ಲಿ ಸ್ತ್ರೀಯು ಪರಂಪರಾನುಗತವಾಗಿ ಬಂದ ಮೂಢನಂಬಿಕೆ ಹಾಗೂ ಅಂಧಶ್ರದ್ಧೆಗಳಿಂದ ಬಂಧಿಸಲ್ಪಟ್ಟಿದ್ದಾಳೆ. ಸ್ತ್ರೀಯನ್ನು ನಮ್ಮ ಸಮಾಜ ಹಿಂದಿನಿಂದಲೂ ಪುರುಷನ ಸರಿಸಮಾನ ಕಂಡಿಲ್ಲ. ಕೌಮಾರ್ಯದಲ್ಲಿ ತಂದೆಯೂ, ಯೌವ್ವನದಲ್ಲಿ ಪತಿಯೂ, ವೃದ್ಧಾಪ್ಯದಲ್ಲಿ ಮಗನೂ ಸ್ತ್ರೀಯನ್ನು ರಕ್ಷಿಸಬೇಕೆಂದು ಹೇಳಿದ ಮನುವಿನ ಮಾತುಗಳನ್ನು ಶತಶತಮಾನಗಳಿಂದ ಪಾಲಿಸುತ್ತಾ ಬಂದಿದ್ದೇವೆ."[೧೩]

"ಭಾರತೀಯ ಹೆಣ್ಣು ಮಗಳಿಗೆ ಪ್ರೇಮ ಮತ್ತು ಯುವಕರೊಡನೆ ಮಾತುಕತೆಯಾಡುವುದು ನಿಷೇಧಿಸಲ್ಪಟ್ಟಿದೆ. ತಂದೆ ತಾಯಿಗಳು ಒಪ್ಪಿದ ವರನನ್ನು ವಿವಾಹವಾಗಿ ಅವನ ಜೊತೆ ಸಂಸಾರ ಮಾಡುತ್ತಾ ಅವನ ಮನೆಯನ್ನೆ ಜಗತ್ತೆಂದು ತಿಳಿದು ಬಾಹ್ಯ ಜಗತ್ತಿನ ಸಂಪರ್ಕವನ್ನು ಹೊಂದಿರದ ಲಕ್ಷಾಂತರ ಮಹಿಳೆಯರು ಇನ್ನೂ ಹೊಸ ಬೆಳಕನ್ನು ಕಾಣಬೇಕಾಗಿದೆ.

ಭಾರತದಲ್ಲಿ ಜಾರಿಗೆ ಬಂದ ಪ್ರಜಾಪ್ರಭುತ್ವದ ಆಡಳಿತ ಪದ್ಧತಿಯು ಸ್ತ್ರೀಯರಿಗೆ ಕಾನೂನು ರೀತಿಯ ಸಮಾನ ಅವಕಾಶಗಳನ್ನು ಕಲ್ಪಿಸಿದ್ದರೂ ವಾಸ್ತವಿಕ ಜೀವನದಲ್ಲಿ ಈ ಅಸಮಾನತೆ ಇನ್ನೂ ದೊರಕಿಲ್ಲವೆಂದೇ ಹೇಳಬೇಕು. ಉತ್ತಮ ಶಿಕ್ಷಣಾವಕಾಶ, ಉತ್ತಮ ಆರೋಗ್ಯ ಇವುಗಳಿಂದ ವಂಚಿತಳಾದ ಗ್ರಾಮೀಣ ಸ್ತ್ರೀಯರ ಮೌಢ್ಯದ ದುರ್ಲಾಭವನ್ನು ಭಾರತೀಯ ಸಮಾಜ ಪಡೆಯುತ್ತಿದೆ. ವಿದ್ಯೆಯಿಂದ ವಂಚಿತಳಾದ ಹದಿನೈದು ವಯಸ್ಸಿನ ಹುಡುಗಿಯೊಬ್ಬಳು, ವಿವಾಹಿತಳಾಗಿ ಅತ್ತೆ ಮನೆಯನ್ನು ಪ್ರವೇಶಿಸಲು ಮುಖ್ಯ ಕಾರಣವೆಂದರೆ, ಮತ್ತೊಂದು ಉಚಿತ ದುಡಿಮೆಯ ಆಳು ದೊರಕುತ್ತಾಳೆಂಬುದೇ ಆಗಿದೆ.

ಬಹುತೇಕವಾಗಿ ಪುರುಷ ಪ್ರಧಾನ ಕುಟುಂಬ ಪದ್ಧತಿಯನ್ನು ಹೊಂದಿರುವ ಭಾರತದ ಗ್ರಾಮೀಣ ಸಮಾಜದಲ್ಲಿ ಸ್ತ್ರೀಗೆ ಯಾವ ಸ್ವಂತ ಆಸ್ತಿಪಾಸ್ತಿಯೂ ಇಲ್ಲದಿರುವುದು ಅವಳ ದುಃಸ್ಥಿತಿಗೆ ಮತ್ತೊಂದು ಕಾರಣವೆಂದೂ ಹೇಳಬಹುದು. ಇದರಿಂದ ಅವಳ ಅನ್ಯಾಶ್ರಯತೆ ಹೆಚ್ಚಾಗಿದೆ. ಇತ್ತೀಚೆಗೆ ಜಾರಿಯಲ್ಲಿ ಬಂದ ಕೆಲವು ಕಾನೂನುಗಳ ಸಹಾಯದಿಂದ ಸ್ತ್ರೀಯರ ದುಡಿಮೆ ಮತ್ತು ಆಸ್ತಿ ಇವುಗಳಿಗೆ ನಿರ್ದಿಷ್ಟ ಸ್ವರೂಪ ದೊರೆತಿದೆ.

೧೯೫೫ರ ಹಿಂದೂ ವಿವಾಹ ಮತ್ತು ಆಸ್ತಿ ಕಾನೂನು ಮೊದಲಾದವುಗಳಿಂದ ಗ್ರಾಮೀಣ ಮಹಿಳೆಯರ ಸ್ಥಿತಿಗತಿಗಳನ್ನು ಸುಧಾರಿಸುವಲ್ಲಿ ಸರ್ಕಾರ ಮಾಡಿದ ಪ್ರಥಮ ಪ್ರಯತ್ನವೆನ್ನಬಹುದು. ೧೯೬೬ರಲ್ಲಿ ನಿಯುಕ್ತವಾದ ರಾಷ್ಟ್ರೀಯ ಕಾರ್ಮಿಕರ ಆಯೋಗವು ಸ್ತ್ರೀಯರ ವೇತನದ ರೀತಿ ನೀತಿಗಳ ಬಗ್ಗೆ ಸ್ಪಷ್ಟ ನಿಲುವನ್ನು ವ್ಯಕ್ತಪಡಿಸಿತು. ಪುರುಷರಿಗೆ ಸಮಾನವಾಗಿ ಅನೇಕ ರಂಗಗಳಲ್ಲಿ ದುಡಿಯುವ ಸ್ತ್ರೀಯರಿಗೆ ಸಮಾನವಾದ ವೇತನ ಲಭಿಸಬೇಕೆಂದು ಈ ಆಯೋಗ ಶಿಫಾರಸು ಮಾಡಿತು. ಸ್ತ್ರೀ ಸ್ವಾತಂತ್ರ ಪ್ರತಿಪಾದನೆ ಮಾಡುವ ಈ ದಿನಗಳಲ್ಲಿ ಇದೊಂದು ಸ್ವಾಗತಾರ್ಹ ಬೆಳವಣಿಗೆ. ಡಾಕ್ಟರ್, ಲೆಕ್ಚರರ್, ಆಡಳಿತಾಧಿಕಾರಿ, ನರ್ಸ್ ಮುಂತಾದ ಸರ್ಕಾರಿ ಕೆಲಸಗಳಲ್ಲಿ ಸ್ತ್ರೀಯರಿಗೆ ಸಮಾನವೇತನ ದೊರೆಯುತ್ತಿದೆ. ಆದರೆ ಬೀಡಿ ತಯಾರಿಕೆ, ಟೀ, ಕಾಫಿ, ತೋಟಗಳು ಮತ್ತು ಸಂಸ್ಕರಣ ಕೇಂದ್ರಗಳು, ವ್ಯವಸಾಯ ರಂಗದಲ್ಲಿ ಕಳೆ ಕೀಳುವುದು, ನಾಟಿ ಹಾಕುವುದು, ಶುದ್ಧಗೊಳಿಸುವುದು, ಮೀನು ಹಿಡಿಯುವುದು ಮುಂತಾದ ಉದ್ಯೋಗಗಳಲ್ಲಿ ಅತೀ ಕಡಿಮೆ ವೇತನಕ್ಕೆ ಸ್ತ್ರೀಯರು ದುಡಿಯುತ್ತಿದ್ದಾರೆ."[೧೪]

ಈಗಾಗಲೇ ಚರ್ಚಿಸಿರುವಂತೆ ಸ್ತ್ರೀಯರ ವಿಚಾರದಲ್ಲಿ ಅಸಮಾನತೆಯನ್ನು ಹೋಗಲಾಡಿಸಿ ಸರಿಸಮಾನತೆಯನ್ನು ಕಂಡಿದ್ದೇವೆ. ಈ ವಿಷಯ ಸರ್ಕಾರಕ್ಕೆ ಸಂಬಂಧಪಟ್ಟ ಎಲ್ಲ ಕ್ಷೇತ್ರಗಳಿಗೂ ಅನ್ವಯವಾಗುತ್ತದೆ. ಆದರೆ ಖಾಸಗಿ ದುಡಿಮೆಗಳಲ್ಲಿ ಅಸಮಾನತೆ ಈಗಲೂ ಮುಂದುವರೆಯುತ್ತಿರುವುದನ್ನು ಕಾಣಬಹುದಾಗಿದೆ.

"ಗ್ರಾಮೀಣ ಮಹಿಳೆಯರಲ್ಲಿ ಸಂಘಟನೆಯ ಅಭಾವ ಮತ್ತೊಂದು ದೌರ್ಬಲ್ಯವಾಗಿದೆ. ಮುಂಜಾವಿನಿಂದ ಸಂಜೆಯವರೆಗೆ ದುಡಿಯುವ ಈ ಮಹಿಳೆಯರನ್ನು ಸಂಘಟಿಸುವುದು ಒಂದು ರೀತಿಯ ಸವಾಲಾಗಿದೆ. ಕಾಫೀ, ಟೀ, ರಬ್ಬರ್ ಪ್ಲಾಂಟೇಶನ್‌ಗಳಲ್ಲಿ ಕೆಲಸ ಮಾಡುವ ಲಕ್ಷಾಂತರ ಮಹಿಳೆಯರಲ್ಲಿ ಯಾವ ರೀತಿಯ ಕಾರ್ಮಿಕ ಸಂಘಟನೆಗಳು ಇಲ್ಲ. ಕಲ್ಲು ಕುಟ್ಟುವ, ಮನೆಗೆಲಸ ಮಾಡುವ, ವ್ಯವಸಾಯ ಕಾರ್ಯಗಳಲ್ಲಿ ತೊಡಗಿದ ಮಹಿಳೆಯರ ಪಾಡನ್ನು ಗಮನಿಸುವವರಿಲ್ಲ. ಹೆಚ್ಚಿನ ಮಹಿಳೆಯರು ಅನಕ್ಷರಸ್ಥರೂ, ಅವಿದ್ಯಾವಂತರೂ ಆಗಿದ್ದಾರೆ. ಅವರಿಗೆ ದುಡಿಮೆಯ ನಿಯಮಗಳಾಗಲಿ, ದುಡಿಯುವ ದರಗಳಾಗಲಿ ತಿಳಿದಿಲ್ಲ. ಮೂಢನಂಬಿಕೆ ದಾಸ್ಯ ಮನೋಭಾವ, ಇವುಗಳಿಂದ ನರಳುತ್ತಿರುವ ಗ್ರಾಮೀಣ ಮಹಿಳೆಯರನ್ನು ಎಚ್ಚರಿಸುವುದು ಸುಲಭ ಸಾಧ್ಯವೇನಲ್ಲ. ಬಡತನದ ಮಹಾ ಸಂಕಟದಲ್ಲಿ ಸಿಲುಕಿರುವ ಇವರನ್ನು ಮೇಲೆತ್ತುವುದು ಕಷ್ಟಸಾಧ್ಯವಾದ ಕಾರ್ಯವಾಗಿದೆ.

ಶೇಕಡ ೩೦ರಷ್ಟು ಗ್ರಾಮೀಣ ಮಹಿಳೆಯರು ದುಡಿಮೆಯಲ್ಲಿ ತೊಡಗಲು ಅವರು ಅನುಭವಿಸುತ್ತಿರುವ ಅಸೀಮ ಬಡತನವೇ ಆಗಿದೆ. ಮಕ್ಕಳು, ವಿಧವೆಯರು, ಮುಂತಾದವರು ಉದ್ಯೋಗ ಕೈಗೊಳ್ಳಲು ಅವರ ಕುಟುಂಬದ ಆರ್ಥಿಕ ಪರಿಸ್ಥಿತಿಯೇ ಕಾರಣವಾಗಿರುತ್ತದೆ. ಪರಿಸ್ಥಿತಿಯ ದುರ್ಲಾಭವನ್ನು ಪಡೆದು ಈ ಮಹಿಳೆಯರನ್ನು ದುಡಿಸಿಕೊಳ್ಳಲಾಗುತ್ತಿದೆ.

ಕ್ರಮೇಣ ಈ ಪರಿಸ್ಥಿತಿಯನ್ನು ಸುಧಾರಿಸುವ ಪ್ರಯತ್ನಗಳು ನಡೆಯುತ್ತಿವೆ. ಮಹಿಳೆಯನ್ನು ಹೆಚ್ಚು ಸುಶಿಕ್ಷಿತರನ್ನಾಗಿಸುವ ಜವಾಬ್ದಾರಿಯನ್ನು "ಸಾಮಾಜಿಕ ಶಿಕ್ಷಣ" ಸಂಸ್ಥೆಗಳು ನಿರ್ವಹಿಸುತ್ತಿವೆ. ರಾತ್ರಿ ತರಗತಿಗಳಲ್ಲಿ ಮಹಿಳೆಯರಿಗೆ ಅಕ್ಷರ ಕಲಿಸಿ ಹೆಚ್ಚು ಜಾಗ್ರತರನ್ನಾಗಿಸುತ್ತಿವೆ. ಕುಟುಂಬ ಯೋಜನೆ, ಪ್ರಜಾಪ್ರಭುತ್ವ, ಇವುಗಳು ಗ್ರಾಮೀಣ ಮಹಿಳೆಯರಿಗೆ ತಲುಪುವಂತೆ ಮಾಡಿ ಅವರ ಸುಪ್ತ ಶಕ್ತಿಯ ಬಗ್ಗೆ ಅರಿವು ಮೂಡಿಸುವ ಪ್ರಯತ್ನ ನಡೆದಿದೆ. ಕೇವಲ ಗಂಡನಿಗೆ ದಾಸಿಯಾಗಿ, ಮಕ್ಕಳಿಗೆ ತಾಯಿಯಾಗುವುದು ಮಾತ್ರವಲ್ಲದೆ, ಜವಾಬ್ದಾರಿಯುತ, ಪ್ರಜೆಯಾಗಿಯೂ ವರ್ತಿಸಬೇಕೆಂಬ ಅರಿವನ್ನುಂಟು ಮಾಡಿ ಕೊಡಲಾಗುತ್ತಿದೆ."[೧೫]

ಸ್ತ್ರೀಯರ ಸ್ಥಿತಿಗತಿಗಳ ಬಗ್ಗೆ ವಿಚಾರ ಮಾಡಿ ನೋಡಿದಾಗ ಗ್ರಾಮೀಣ ಮತ್ತು ನಗರ ಪ್ರದೇಶಗಳೆಂದು ಎರಡು ಭಾಗಗಳನ್ನಾಗಿ ವಿಭಾಗಿಸಬಹುದು. ಗ್ರಾಮೀಣ ಪ್ರದೇಶದಲ್ಲಿ ಸ್ತ್ರೀಯರ ಸ್ಥಿತಿಗತಿ ಸಮಾನತೆ ನಗರದ ಸ್ತ್ರೀಯರ ಸಮಾನತೆಗಿಂತ ತುಂಬಾ ವಿಭಿನ್ನವಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಉಳ್ಳವರು ಮತ್ತು ನಿರ್ಗತಿಕರು ಎಂಬ ತಾರತಮ್ಯ ಈಗಲೂ ಮುಂದುವರಿಯುತ್ತಿದೆ. ಆದರೆ ಪಟ್ಟಣ ಪ್ರದೇಶದಲ್ಲಿ ಈ ವ್ಯತ್ಯಾಸಗಳು ಕಡಿಮೆ ಎಂಬುದನ್ನು ನಾವು ಮನಗಾಣಬಹುದು.

ಇನ್ನು ಸಾಹಿತ್ಯದಲ್ಲಿ ಸಣ್ಣ ಕತೆಯ ಕ್ಷೇತ್ರವನ್ನು ತೆಗೆದುಕೊಂಡರೆ ಹೆಚ್ಚಾಗಿ ಸ್ತ್ರೀ ಪರವಾದ ಸಣ್ಣ ಕತೆಗಳನ್ನು ಬರೆದಿದ್ದಾರೆ. ಇವರು ಸ್ವಾತಂತ್ರ್ಯಾನಂತರದ ನಮ್ಮ ಗ್ರಾಮೀಣ ಭಾರತದಲ್ಲಿ ಸ್ತ್ರೀಯರ ಸ್ಥಿತಿಗತಿಗಳು ಹೇಗಿದ್ದವು ಎಂಬುದನ್ನು ತಮ್ಮ ಕಥೆಗಳಲ್ಲಿ ವ್ಯಕ್ತಪಡಿಸಿದ್ದಾರೆ.

ಜಗತ್ತಿನ ಎಲ್ಲಾ ಸಂಸ್ಕೃತಿಗಳಿಗಿಂತಲೂ ಅತ್ಯುತ್ತಮ ಸಂಸ್ಕೃತಿ ಎನಿಸಿಕೊಂಡಿರುವ ಭಾರತೀಯ ಸಂಸ್ಕೃತಿಯನ್ನು ಗುರುತಿಸುವುದು ಆರ್ಯ ಸಂಸ್ಕೃತಿಯಿಂದ. ಈ ಆರ್ಯಸಂಸ್ಕೃತಿಯ ತೊಟ್ಟಿಲುಗಳು ಗ್ರಾಮಗಳು, ಅವರು ಮೊದಲು ನಿರ್ಮಿಸಿದ್ದು ಗ್ರಾಮಗಳನ್ನೇ ಹೊರತು ನಗರಗಳನ್ನಲ್ಲ. ಹಾಗಾಗಿ ಈ ಸಂಸ್ಕೃತಿಯ ಭವ್ಯತೆಗೆ ಗ್ರಾಮೀಣ ಸ್ತ್ರೀಯರ ಕೊಡುಗೆ ಅಪಾರವಾದುದು.

ನಮ್ಮ ಗ್ರಾಮೀಣ ಸ್ತ್ರೀಯರ ಸಾಮಾಜಿಕ ಜೀವನದ ಕೇಂದ್ರಬಿಂದು ಎಂದರೆ ಅವಳ ಕುಟುಂಬವಾಗಿದ್ದು ಪ್ರತಿಯೊಂದು ಕುಟುಂಬದಲ್ಲಿಯೂ ಹಿರಿಯ ಪುರುಷನು ಹಾಕಿದ ನಿಯಮಗಳನ್ನು ಪಾಲಿಸುವುದಷ್ಟೇ ಸ್ತ್ರೀಯರ ಕರ್ತವ್ಯವಾಗಿರುತ್ತದೆ. ಯಾವುದೇ ರೀತಿಯ ಫಲಾಪೇಕ್ಷೆಯಿಲ್ಲದೆ ತನ್ನ ಕುಟುಂಬದ ಒಳಿತಿಗಾಗಿ ಇವಳು ಹಗಲು ಇರುಳು ದುಡಿಯುವುದನ್ನು ಕಾಣುತ್ತೇವೆ

"ಕುಟುಂಬದ ಎಲ್ಲಾ ಸದಸ್ಯರು ಮಲಗಿದ ನಂತರ ಮಲಗುವ ಈ ಸ್ತ್ರೀಯು ಎಲ್ಲರೂ ಏಳುವ ಮೊದಲೇ ಎದ್ದು ತನ್ನ ನಿತ್ಯದ ಕೆಲಸ ಕಾರ್ಯಗಳನ್ನು ಪ್ರಾರಂಭಿಸುತ್ತಾಳೆ. ಅವಳ ಪ್ರತಿನಿತ್ಯದ ಕೆಲಸ ಕಾರ್ಯಗಳು

ಒಂದೆರಡಲ್ಲ, ಐದಾರಲ್ಲ, ಮುಖತೊಳೆದು ಗೃಹಕೃತ್ಯಗಳಲ್ಲಿ ಒಮ್ಮೆ ಕಾಲಿಟ್ಟರೆ ಸಾಕು ಆ ಕೆಲಸಗಳು ಮುಗಿಯುವುದು ಮತ್ತೆ ಅವಳು ಮಲಗುವಾಗಲೇ ಗೃಹಕೃತ್ಯಗಳಲ್ಲಿ ಅವಳ ಮೊದಲ ಕೆಲಸವೆಂದರೆ ಮನೆಯ ಬಾಗಿಲಿಗೆ ನೀರು ಹಾಕಿ ಸಾರಿಸಿ, ರಂಗೋಲಿಯನ್ನು ಹಾಕುವುದು. ನಂತರ ಮನೆಯ ಪಕ್ಕದ ಕೊಟ್ಟಿಗೆಯಲ್ಲಿ ಕಟ್ಟಿದ ದನ, ಹಸು, ಕರುಗಳಿಗೆ ಮೇವನ್ನು ಹಾಕಿ ಕೊಟ್ಟಿಗೆಯನ್ನು ಸ್ವಚ್ಛಗೊಳಿಸಿ, ಹಾಲು ಹಿಂಡಿ ಮನೆಯೊಳಗೆ ಬರುತ್ತಾಳೆ. ಪಾತ್ರೆ ತೊಳೆಯುವುದು, ಬಟ್ಟೆ ಒಗೆಯುವುದು ಇವೆಲ್ಲಾ ಆದ ನಂತರ, ಅಡಿಗೆಗೆ ಕೈಹಾಕುತ್ತಾಳೆ. ಸಾಮಾನ್ಯವಾಗಿ ಹಳ್ಳಿಗಳಲ್ಲಿ ತಿಂಡಿಯನ್ನು ಮಾಡಿ ತಿನ್ನುವ ರೂಢಿಯಿಲ್ಲ. ಹಾಗಾಗಿ ಬೆಳಿಗ್ಗೆ ಅವಳ ಅಡಿಗೆ ಮನೆಯ ಕೆಲಸವೆಂದರೆ ಕಾಫಿ ಮಾಡುವುದಷ್ಟೆ. ಊಟದ ಅಡಿಗೆ ಮುಗಿಸಿ ಕುಟುಂಬದ ಸದಸ್ಯರಿಗೆ ಉಣಬಡಿಸಿ ತಾನು ಊಟ ಮುಗಿಸುವ ಇವಳು ಅರೆಗಳಿಗೆ ವಿಶ್ರಾಂತಿಯನ್ನು ಪಡೆಯದೆ ಅಕ್ಕಿ ಆರಿಸುವುದೂ, ಬೇಳೆ ಹದ ಮಾಡುವುದೂ, ರಾಗಿಮಾಡುವುದು, ಮನೆ ಸ್ವಚ್ಛಗೊಳಿಸುವುದೂ ಹೀಗೆ ಯಾವುದಾದರೊಂದು ಕೆಲಸದಲ್ಲಿ ಅವಳನ್ನು ತೊಡಗಿಸಿಕೊಂಡಿರುತ್ತಾಳೆ.

"ಗ್ರಾಮೀಣ ಮಹಿಳೆಯರು ಅತ್ಯಂತ ಸರಳವಾದ ಉಡುಪನ್ನು ಧರಿಸುವರು. ಅವರು ಉಡುಪಿನ ಬಗ್ಗೆ ಹೆಚ್ಚು ಮಹತ್ವವನ್ನು ಕೊಡುವುದೇ ಇಲ್ಲ. ವಾರದ ನಾಲ್ಕೈದು ದಿನವೂ ಒಂದೇ ಉಡುಪಿನಲ್ಲಿರುವರು. ಸ್ನಾನ ಮಾಡಿದ ದಿನವೇ ಅವರು ಉಡುಪನ್ನು ಬದಲಾಯಿಸುವುದು. ನಗರದ ಮಹಿಳೆಯರಂತೆ ರಾತ್ರಿಯುಡುಗೆ ದಿನದ ಉಡುಗೆಯಂತೆ ಅವರು ಉಡುಪನ್ನು ಬದಲಾಯಿಸುವುದಿಸಲ್ಲ. ಸದಾ ಕಾಲದಲ್ಲೂ ಅವರ ಉಡುಗೆ ಒಂದೇಯಾಗಿರುತ್ತದೆ. ಹಬ್ಬ ಹರಿದಿನಗಳಲ್ಲಿ ಅಥವಾ ನೆಂಟರು ಆಗಮಿಸಿದಾಗ ಅಥವಾ ಪರ ಊರಿಗೆ ಹೋಗುವಾಗ ಮಾತ್ರ ಅವರು ಉಡುಪಿನ ಬಗ್ಗೆ ಹೆಚ್ಚು ಗಮನ ಕೊಟ್ಟು, ಅಲಂಕರಿಸಿಕೊಂಡು ಹೋಗುವರು. ಪ್ರತಿನಿತ್ಯ ಮನೆಯಲ್ಲಿ ಇರುವಾಗ ನಾಗರಿಕತೆಯ ಸಂಪರ್ಕವಿಟ್ಟುಕೊಂಡಿದ್ದರೂ, ಬಾಹ್ಯ ಅಲಂಕಾರಕ್ಕಾಗಿ ಅಲಂಕಾರಿಕ ವಸ್ತುಗಳನ್ನು ಬಳಸುವುದೇ ಇಲ್ಲ. ಮುಖ ತೊಳೆದು ಹಣೆಗೆ ಕುಂಕುಮ ಇಟ್ಟುಕೊಂಡರೆ ಮುಗಿಯಿತು ಅವರ ಅಲಂಕಾರ.

ಮದುವೆಯಾಗದ ಹೆಣ್ಣು ಮಕ್ಕಳು ಅಥವಾ ಇತ್ತೀಚೆಗೆ ಮದುವೆಯಾಗಿ ಬಂದ ಸೊಸೆಯರು ಶಿಕ್ಷಣ, ನಗರೀಕರಣ, ಸಮೂಹ ಮಾಧ್ಯಮವಾದ ಟಿ.ವಿ.ಯ ಪ್ರಭಾವದಿಂದಾಗಿ ಮನೆಯಲ್ಲಿಯೇ ಇದ್ದರೂ ತಮ್ಮ ಉಡುಪು ಮತ್ತು ಅಲಂಕಾರದ ಬಗ್ಗೆ ಹೆಚ್ಚು ಗಮನಕೊಡುತ್ತಾರೆ.

"ಕೃಷಿ ಭೂಮಿ ಇಲ್ಲದೆ ಭೂಕಾರ್ಮಿಕರಾಗಿ ದುಡಿಯುವ ಬಡ ಮಹಿಳೆಯರು ಎಲ್ಲ ಕ್ಷೇತ್ರಗಳಲ್ಲಿ ಪುರುಷನಿಗೆ ಸಮವಾಗಿ ನಡೆದುಕೊಳ್ಳುತ್ತಾರೆ." ಇವರು ತಮ್ಮ ಉದರ ಪೋಷಣೆಗೆ ಪುರುಷರ ಜೊತೆಗೂಡಿ ಕೆಲಸ ಮಾಡುತ್ತಾರೆ.

"ಮನುಷ್ಯ ಜೀವನದ ಪ್ರಧಾನ ಅಂಗವಾಗಿರುವ ವಿವಾಹವು ಗ್ರಾಮೀಣ ಮಹಿಳೆಯರಿಗೆ ಒಂದು ಪವಿತ್ರ ಬಂಧನವಾಗಿದೆ. ಇವರು ವಿವಾಹಕ್ಕೆ ಧಾರ್ಮಿಕ ಆಯಾಮಗಳನ್ನು ಮೀರಿ ತಮ್ಮ ಜೀವನದ ಅವಿಭಾಜ್ಯ ಅಂಗವನ್ನಾಗಿ ಮಾಡಿಕೊಂಡಿದ್ದಾರೆ. ಗ್ರಾಮೀಣ ಸಮಾಜದಲ್ಲಿ ವಿವಾಹವೆಂಬುದು ಮಹಿಳೆಯರ ಸ್ಥಾನ ಮಾನದ ನಿರ್ಣಾಯಕ ಘಟನೆಯಾಗಿರುತ್ತದೆ. ಮದುವೆಯಾಗಿ ತಾಯಿಯಾದ ಮೇಲೆ ಸಮಾಜದ ಜವಾಬ್ದಾರಿಯುತ ವ್ಯಕ್ತಿಯೆಂದು ಅವಳು ಪರಿಗಣಿಸಲ್ಪಡುತ್ತಾಳೆ."[೧೬]

ಸ್ವಾತಂತ್ರ್ಯೋತ್ತರದ ಸ್ತ್ರೀಯರ ಸ್ಥಿತಿಗತಿಗಳ ಮತ್ತು ಇವರ ಉಡಿಗೆ ತೊಡಿಗೆ ಆಚಾರ ವಿಚಾರಗಳ ಬಗ್ಗೆ ಒಂದೆರಡು ಮಾತುಗಳನ್ನು ಹೇಳಬಹುದಾದರೆ ಗ್ರಾಮೀಣ ಪ್ರದೇಶಗಳಲ್ಲಿ ಮೂಢನಂಬಿಕೆಗಳನ್ನು ಹೊರತುಪಡಿಸಿ, ವೇಷಭೂಷಣ, ಅಲಂಕಾರಗಳಿಗೆ ಹೆಚ್ಚು ಪ್ರಾಮುಖ್ಯತೆ ಕೊಡದೇ ಇರುವುದು ಇಂದಿಗೂ ಕಂಡುಬರುತ್ತದೆ. ಈ ಭಾಗದಲ್ಲಿ ವಿದ್ಯಾವಂತರಾದ ಯುವತಿಯರು, ಮಹಿಳೆಯರು ಅಲಂಕಾರದ ಬಗ್ಗೆ ಹೆಚ್ಚಿನ ಆಸಕ್ತಿವಹಿಸುವುದು ಕಂಡುಬರುತ್ತದೆ. ಉಳಿದವರುವಾರಕ್ಕೊಂದು ಸಲ, ಮನೆಗೆ ಯಾರಾದರೂ ಬರುವಾಗ, ವಿಶೇಷ ಹಬ್ಬ ಹರಿದಿನಗಳಲ್ಲಿ, ಜಾತ್ರೆಯ ಸಂದರ್ಭ, ಪರ ಊರಿಗೆ ಹೋಗಬೇಕಾದ ಸಂದರ್ಭದಲ್ಲಿ, ವಿವಾಹ ಸಂದರ್ಭದಲ್ಲಿ ಇಂತಹ ವಿಚಾರಗಳಿಗೆ ತಮ್ಮ ವಿಶೇಷ ಆಸಕ್ತಿ ವಹಿಸುವುದು ಕಂಡುಬರುತ್ತದೆ. ಆದರೆ ಪಟ್ಟಣ ಪ್ರದೇಶಗಳಲ್ಲಿ ಪ್ರತಿನಿತ್ಯ ಎಲ್ಲಾ ಮಹಿಳೆಯರೂ ತಮ್ಮ ವೇಷಭೂಷಣಗಳು,ಆಚಾರ ವಿಚಾರಗಳಿಗೆ ತುಂಬಾ ಮುತುವರ್ಜಿ ವಹಿಸುವುದನ್ನು ಕಾಣುತ್ತೇವೆ. ಈ ಎಲ್ಲಾ ಅಶಗಳನ್ನು ಗಮನಿಸಿದಾಗ ಸ್ತ್ರೀಯರ ಸ್ಥಿತಿ ಗತಿಗಳು ಬದಲಾವಣೆಯಾಗಿರುವುದನ್ನು ಕಾಣಬಹುದು.

"ಇತ್ತೀಚಿನ ದಿನಗಳಲ್ಲಿ ಗ್ರಾಮೀಣ ಮಹಿಳೆಯನ್ನು ಶೋಷಣೆಯಿಂದ ಮುಕ್ತಗೊಳಿಸಿ ಅವಳಲ್ಲಿ ಅಡಕವಾಗಿರುವ ಉನ್ನತ ಸಾಮರ್ಥ್ಯವನ್ನು ಹೊರತಂದು ಅವಳನ್ನು ಸಬಲೆಯನ್ನಾಗಿ ಮಾಡಿ ಸಮಾಜದಲ್ಲಿ, ಕುಟುಂಬದಲ್ಲಿ, ಸಂಸ್ಥೆಗಳು, ಶೈಕ್ಷಣಿಕ, ಆರ್ಥಿಕ, ರಾಜಕೀಯ, ಸಾಮಾಜಿಕ, ಕ್ಷೇತ್ರಗಳಲ್ಲಿ ಅವಿರತವಾಗಿ ದುಡಿಸಿಕೊಳ್ಳುತ್ತವೆ. ಇವುಗಳ ಮುಖ್ಯ ಉದ್ದೇಶ ಪುರುಷನ ಕಪಿಮುಷ್ಠಿಯಿಂದ ಅವಳನ್ನು ಬಿಡಿಸಿ ಅವಳ ಸಮಗ್ರ ವ್ಯಕ್ತಿತ್ವದ ವಿಕಾಸಕ್ಕೆ ಸಹಾಯ ಮಾಡುವುದು. ಸ್ತ್ರೀಯರನ್ನು ಜ್ಞಾನಿಗಳನ್ನಾಗಿ ಮಾಡಿ ತಮ್ಮ ಸುತ್ತಮುತ್ತಲಿನ ಸಂಕೋಲೆಗಳನ್ನು ಮುರಿದು ಹಾಕುವಂತೆ ಪ್ರೇರೇಪಿಸುವುದು. ಈ ಪ್ರಯತ್ನದಲ್ಲಿ ಸರ್ಕಾರ ಮತ್ತು ಅನ್ಯ ಸಂಘ ಸಂಸ್ಥೆಗಳು ಅವಳ ಶಿಕ್ಷಣಕ್ಕೆ ಆರ್ಥಿಕ ಸ್ವಾತಂತ್ರ್ಯವನ್ನು ಗಳಿಸಲು ರಾಜಕೀಯ ಪ್ರಜ್ಞೆಯನ್ನು ಬೆಳೆಸಿಕೊಳ್ಳಲು ಮೌಢ್ಯತೆಯಿಂದ ಹೊರಬರಲು ಅನೇಕ ಕ್ರಮಗಳನ್ನು ಕೈಗೊಂಡಿವೆ.

ಭಾರತದ ಪ್ರತಿಯೊಂದು ರಾಜಕೀಯ ಪಕ್ಷವು ಮಹಿಳಾ ವಿಭಾಗಗಳನ್ನು ಹೊಂದಿದೆ. ಈ ವಿಭಾಗಗಳು ಮಹಿಳೆಯರನ್ನು ರಾಜಕೀಯವಾಗಿ ಸಂಘಟಿಸುತ್ತಿವೆ. ರಾಜಕೀಯದಲ್ಲಿ ಮಹಿಳೆ ಸಕ್ರಿಯವಾಗಿ ಪಾತ್ರವಹಿಸಲು ಈ ಸಂಘಟನೆಗಳು ಸಹಾಯ ಮಾಡುತ್ತಿವೆ. ರಾಜಕೀಯದಲ್ಲಿ ಗ್ರಾಮೀಣ ಸ್ತ್ರೀಯರ ಪ್ರಾಮುಖ್ಯತೆಯನ್ನು ಅರಿತಿರುವ ಈ ಪಕ್ಷಗಳ ಮಹಿಳಾ ವಿಭಾಗಗಳು ಅವರ ಮನವೊಲಿಸುವ ಕಾರ್ಯದಲ್ಲಿ ತೊಡಗಿವೆ. ಅವರನ್ನು ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ ಪ್ರೇರೇಪಿಸಿ ಅವರಲ್ಲಿ ರಾಜಕೀಯ ಪ್ರಜ್ಞೆಯನ್ನು ಮೂಡಿಸುವಲ್ಲಿ ಯಶಸ್ವಿಯಾಗಿವೆ. ಮಹಿಳೆಯರ ಸಮಸ್ಯೆಗಳಿಗೆ ಪರಿಹಾರ ದೊರಕಿಸಲು ಅನೇಕ ಮಹಿಳಾ ಸಂಘಟನೆಗಳು, ಉದಯಗೊಂಡಿವೆ."[೧೭]

ಸ್ವಾತಂತ್ರ್ಯಾ ನಂತರದ ದಿನಗಳಲ್ಲಿ ಅಂದರೆ ಎಪ್ಪತ್ತರ ದಶಕದ ನಂತರ ಮಹಿಳೆಯರ ಶಿಕ್ಷಣದಲ್ಲಿ ಅನೇಕ ಸುಧಾರಣೆಗಳಾಗಿರುವುದನ್ನು ಕಾಣುತ್ತೇವೆ. ನಗರ ಮತ್ತು ಗ್ರಾಮೀಣ ಪ್ರದೇಶಗಳೆರಡರಲ್ಲೂ ಮಹಿಳೆಯರ ಶಿಕ್ಷಣ ಮಟ್ಟವು ಪುರುಷರಿಗೆ ಸರಿಸಮಾನವಾಗಿ ಬೆಳೆಯುತ್ತಿರುವುದನ್ನು ಕಾಣುತ್ತೇವೆ. ಇದರೊಂದಿಗೆ ಮಹಿಳೆಯರು ಸಾಹಿತ್ಯ ಕ್ಷೇತ್ರಕ್ಕೆ ಕಾಲಿಟ್ಟಿರುವುದರ ಜೊತೆಗೆ ನವೋದಯ, ನವ್ಯ,

ನವ್ಯೋತ್ತರಗಳೆಲ್ಲದಕ್ಕೂ ಸ್ಪಂದಿಸಿ ಸಣ್ಣ ಕತೆಗಳಿಂದ ಮೊದಲ್ಗೊಂಡು ಸಾಹಿತ್ಯ ಕ್ಷೇತ್ರದಲ್ಲಿ ಪುರುಷರಿಗೆ ಸಮಾನರಾಗಿ ಬೆಳೆಯುತ್ತಿರುವುದು ಕಂಡುಬರುವುದೇ ಅಲ್ಲದೆ ಮಹಿಳಾ ಲೇಖಕಿಯರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅತ್ಯಮೂಲ್ಯ ಕೊಡುಗೆ ನೀಡಿರುವುದು ಗಮನಾರ್ಹ ಸಂಗತಿಯಾಗಿದೆ.

"ಇಂದು ಮಹಿಳಾ ಸಾಹಿತ್ಯವನ್ನು ವಸ್ತುನಿಷ್ಠವಾಗಿ ವಿಮರ್ಶಿಸ ಬೇಕಾಗಿದೆ. ಮಹಿಳಾ ಸಾಹಿತ್ಯದ ಒಲವು ನಿಲುವುಗಳನ್ನು ಅವಳು ಬದುಕಿದ ಸಾಮಾಜಿಕ ಪರಿಸರ ಮತ್ತು ಎದುರಿಸಿದ ಪರಿಸ್ಥಿತಿಗಳ ಹಿನ್ನೆಲೆಯಲ್ಲಿ ಮೌಲ್ಯಮಾಪನ ಮಾಡಬೇಕಾಗಿದೆ. ಆಗ ಮಾತ್ರ ಮಹಿಳಾ ಸಾಹಿತ್ಯದ ಸಾಧ್ಯತೆ ಮಿತಿಗಳನ್ನು ಅಧಿಕೃತವಾಗಿ ಗುರುತಿಸಲು ಸಾಧ್ಯವಾಗುತ್ತದೆ. ಮಹಿಳೆ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಪಡೆದದ್ದು ತನ್ನನ್ನು ಕುರಿತು ಹಾಗೂ ಸಾಮಾಜಿಕ ಸ್ಥಿತ್ಯಂತರ, ಚಾರಿತ್ರಿಕ ಒತ್ತಡ ಮತ್ತು ಆಂತರಿಕ ಅಗತ್ಯ ಕಾರಣವಾದಂತೆ ಮಹಿಳಾ ಸಾಹಿತ್ಯದ ರಚನೆಗೆ ಬದಲಾದ ಸಾಮಾಜಿಕ ಮೌಲ್ಯಗಳು, ಸ್ತ್ರೀ ಶಿಕ್ಷಣ ಸ್ವಾತಂತ್ರ್ಯದ ರಚನೆಗೆ ಸಮಾನತೆಯ ಅವಕಾಶಗಳು ಕಾರಣವಾಗಿವೆ.

ಹೊಸಗನ್ನಡ ಸಾಹಿತ್ಯದ ಸಂದರ್ಭದಲ್ಲಿ ರಚನೆಗೊಂಡ ಮಹಿಳಾ ಸಾಹಿತ್ಯವನ್ನು ಅವಲೋಕಿಸಿದಾಗ ಮೂರು ರೀತಿಯ ಸಾಹಿತ್ಯಕ ಒಲವುಗಳನ್ನು ಕಾಣಬಹುದಾಗಿದೆ. ನವೋದಯದಿಂದ ನವ್ಯದವರೆಗೆ, ನವ್ಯದಿಂದ ದಲಿತ ಬಂಡಾಯದವರೆಗೆ, ಮತ್ತೊಂದನ್ನು ದಲಿತ ಬಂಡಾಯ ಸಾಹಿತ್ಯದ ಸಂದರ್ಭದಲ್ಲಿ ಗುರುತಿಸಬಹುದಾಗಿದೆ. ಸಂಚಿ ಹೊನ್ನಮ್ಮಳ ಸ್ತ್ರೀಪರವಾದ ಸಂದರ್ಭದಲ್ಲಿ ದ್ವಂದ್ವ ನಿಲುವು ಮೊದಲನೆಯ ಮಾದರಿಯ ಮಹಿಳಾ ಸಾಹಿತ್ಯದಲ್ಲಿ ಕಂಡುಬಂದರೆ ಎರಡನೆಯ ಮಾದರಿಯ ಮಹಿಳಾ ಸಾಹಿತ್ಯದಲ್ಲಿ ಪ್ರಯೋಗ ಶೀಲತೆಯನ್ನು ಕಾಣಬಹುದಾಗಿದೆ."[೧೮]

ಸ್ವಾತಂತ್ರ್ಯಾನಂತರ ಮಹಿಳೆಯರಲ್ಲಿ ಶಿಕ್ಷಣದ ಮಟ್ಟ ಸುಧಾರಿಸಿದಂತೆಲ್ಲ ಅವರ ಸ್ಥಿತಿಗತಿಗಳು ಉತ್ತಮಗೊಂಡಿರುವುದನ್ನು ಅನೇಕ ಮಹಿಳಾ ಲೇಖಕಿಯರು ಸಾಹಿತ್ಯ ಕೊಡುಗೆಯನ್ನು ಸಲ್ಲಿಸಿರುವುದರೊಂದಿಗೆ ಪರಿಸ್ಥಿತಿಯನ್ನು ವಿಶ್ಲೇಷಿಸುವುದನ್ನು ಸಾಹಿತ್ಯ ಲೋಕಕ್ಕೆ ಪಾದಾರ್ಪಣೆ ಮಾಡುವ ಮೂಲಕ ನಾವು ಪುರುಷರಿಗಿಂತ ಕಡಿಮೆಯಿಲ್ಲ ಎಂಬುದನ್ನು ಜಗತ್ ಜಾಹಿರು ಮಾಡಿರುವುದನ್ನು ಕಾಣಬಹುದು.

ಭಾನು ಮುಷ್ತಾಕರ ಬೆಂಕಿ ಮಳೆ ಕಥಾ ಸಂಕಲನದಲ್ಲಿ ಮುತುವಲ್ಲಿಉಸ್ಮಾದ್‌ಸಾಬ್ ತನ್ನ ತಂಗಿಯು ಕೇಳಿದ ಆಸ್ತಿಯ ಹಕ್ಕಿನ ಬಗ್ಗೆ ಗಮನಿಸಬಹುದಾದರೆ ಮಹಿಳೆಯು ತನ್ನ ಗಂಡನೊಡನೆ ಬಂದಿದ್ದರೂ ಸಹ ತಾನು ಕೇಳುವ ತನ್ನ ಹಕ್ಕನ್ನು ಪ್ರತಿಪಾದಿಸುವ ರೀವಿಯನ್ನು ನಾವಿಲ್ಲಿ ಕಾಣಬಹುದು. ನೀವು ಇಷ್ಟೆಲ್ಲಾ ಮೊಹಲ್ಲಾದ ಪಂಚಾಯಿತಿ ತೀರ್ಮಾನಗಳನ್ನು ಮಾಡುವವರು ನೀವೆ ಕರೆದು ತಗೋ ನಿನ್ನ ಪಾಲನ್ನು ಎನ್ನಬೇಕಿತ್ತು ನನ್ನ ವಿಚಾರವಂತೂ ಹೋಗಲಿ ಸಕೀನಾ ಅಕ್ಕನದು ಹೇಳಿ, ಇತ್ತ ಗಂಡನೂ ಇಲ್ಲ, ಅತ್ತ ದುಡಿಯುವ ಗಂಡು ಮಕ್ಕಳೂ ಇಲ್ಲ ಬೆಳೆದು ನಿಂತಿರುವ ಇಬ್ಬರು ಹೆಣ್ಣು ಮಕ್ಕಳ ಮದುವೆಯನ್ನು ಹೇಗೆ ಮಾಡಬೇಕು.

ಈಕೆ ಕೇಳುವ ಧಾಟಿಯನ್ನು ನಾವು ಗಮನಿಸಿದಾಗ ಮಹಿಳೆಯ ಸ್ಥಿತಿ ಯಾವ ಸ್ಥಿತಿಯನ್ನು ತಲುಪಿದೆ ಎಂಬುದನ್ನು ಗಮನಿಸಬಹುದು. ಇಲ್ಲಿ ಮಹಿಳೆ ತನ್ನ ತಂದೆಯ ಮನೆಯ ಆಸ್ತಿಯು ತನಗೆ ಬರಬಹುದೆಂಬ ವಿಚಾರವನ್ನು ಮತ್ತು ಕೇಳುವ ಹಕ್ಕನ್ನು ಮಹಿಳೆಯ ಪ್ರಬುದ್ಧತೆಯನ್ನು ನಾವಿಲ್ಲಿ ಮನಗಾಣಬಹುದು.

ಇದೇ ಸಂದರ್ಭದಲ್ಲಿ ನಾವು ಗಮನಿಸಬೇಕಾದ ಮುಖ್ಯ ಅಂಶವೆಂದರೆ ಮುತುವಲ್ಲಿಯ ಹೆಂಡತಿ ಗಂಡನ ರೂಬುರೂಬು ಬಂದು ಮಾತನಾಡುವ ಶಕ್ತಿ ಇಲ್ಲದಿದ್ದರೂ ತೆರೆಮರೆಯಲ್ಲೆ ನಿಂತು ನಾದಿನಿ ಕೇಳುವ ಆಸ್ತಿಯ ಹಕ್ಕಿನ ಬಗ್ಗೆ ಕೇಳಿಸಿಕೊಂಡು ಮನಸ್ಸಿನಲ್ಲೆ ಒಪ್ಪಿಕೊಳ್ಳುತ್ತಾಳೆ. ಈ ಅಂಶವನ್ನು ಗಮನಿಸಿದಾಗ ಆ ಮಹಿಳೆಯ ವಿವೇಚನಾಶಕ್ತಿ ಎಷ್ಟು ನಾಗಾಲೋಟದಲ್ಲಿ ಸಾಗುತ್ತಿದೆ ಎಂಬುದು ಕಂಡುಬರುತ್ತದೆ.

ಮುತುವಲ್ಲಿಸಾಹೇಬ ಮತ್ತು ಆರಿಫಾ ದಂಪತಿಗಳಿಗೆ ಇವರ ಒಟ್ಟು ಆಸ್ತಿಯಲ್ಲಿ ತಿಂಗಳಿಗೆ ನಾಲ್ಕು ಸಾವಿರ ರೂಪಾಯಿ ಬಾಡಿಗೆ ತರುವ ಮನೆ ಮತ್ತು ಕಾಫಿತೋಟವನ್ನು ಅವರ ತವರು ಮನೆಯವರು ಕೇಳದೆಯೇ ಉಡುಗೊರೆಯಾಗಿ ಕೊಟ್ಟಿದ್ದರು. ಆದರೆ ಮುತುವಲ್ಲಿಯ ತಂಗಿಯ ವಿಷಯದಲ್ಲಿ ಕೇಳಿದರೂ ಪಾಲಿನ ಹಕ್ಕನ್ನು ಕೇಳಿದರೂ ನಿರಾಕರಿಸಬಹುದಾದ ಸಂದರ್ಭವನ್ನು ನಾವು ಕಾಣುತ್ತೇವೆ. ಈ ಸಂವಾದದ ಕೊನೆಯಲ್ಲಿ ಮುತುವಲ್ಲಿಯ ತಂಗಿಯಾದ ಜಮಿಲಾ ಆಸ್ತಿಯನ್ನು ಕೊಡದಿದ್ದರೆ ಕಾನೂನು ಪ್ರಕಾರವಾಗಿ ಆಸ್ತಿಯನ್ನು ಪಡದೇ ಪಡೆಯುತ್ತೇನೆ ಎಂಬ ಬೆದರಿಕೆಯನ್ನು ಹಾಕುತ್ತಾಳೆ. ಇದರಿಂದ ಹೆಣ್ಣು ಮತ್ತು ಹೆಣ್ಣಿನ ಸ್ಥಿತಿ ಯಾವ ಮಟ್ಟ ತಲುಪುತ್ತದೆ ಎಂದು ಎಷ್ಟು ಚೆನ್ನಾಗಿ ಊಹಿಸಬಹುದು.

ಹೆಣ್ಣು ಮಕ್ಕಳಲ್ಲಿ ಸ್ವಾಭಿಮಾನ ಇರುವ ಮಹಿಳೆಯರನ್ನು ಕಾಣಬಹುದು. ಉದಾ ಸಕೀನಾ, ಅನಕ್ಷರಸ್ತೆಯಾಗಿದ್ದು ಅವಳು ತನ್ನ ಹಕ್ಕನ್ನು ಚಲಾಯಿಸಲಾಗದ ಮೂಢಮತಿಯಾಗಿ ಕಷ್ಟ ಅನುಭವಿಸುವುದನ್ನು ನಾವಿಲ್ಲಿ ಕಾಣಬಹುದು. ಮೌಢ್ಯತೆ ಇಲ್ಲಿ ಕಂಡುಬರುತ್ತದೆ. ಇಲ್ಲಿ ಸಕೀನಳು ತನ್ನ ಮಗನಿಗೆ ಕೆಲಸ ಕೊಡಿಸಬೇಕೆಂದು ಶಿಫಾರಸ್ಸಿಗಾಗಿ ತನ್ನ ಅಣ್ಣನ ಬಳಿಗೆ ಮಹಿಳೆಯಂತೆ ಸಾಮಾನ್ಯ ಸಾಲಿನಲ್ಲಿ ಹೋಗುವ ಮತ್ತು ಮನವಿ ಮಾಡಿಕೊಳ್ಳುವ ರೀತಿ ವರ್ಣನಾತೀತವಾಗಿದೆ. ಇಲ್ಲಿ ಜಮೀಲಳ ಅತ್ತಿಗೆ ನಾದಿನಿಯರ ವಿಷಯದಲ್ಲಿ ಮಾನವೀಯತೆಯಿಂದ ಅವರಿಗೆ ಸಲ್ಲಬೇಕಾದ್ದನ್ನು ಕೊಡಿ ಎಂದು ಗಂಡನಿಗೆ ಹೇಳುವ ಈ ಸಂದರ್ಭ ಜಮೀಲಳ ಅತ್ತಿಗೆಯ ಮನಸ್ಥಿತಿಯನ್ನು ಕಾಣಬಹುದು. ಹೆಣ್ಣಿಗೆ ಹೆಣ್ಣೆ ಇಲ್ಲಿ ಬೆಂಬಲ ಕೊಡುವುದನ್ನು ಕಾಣಬಹುದು.

ಇಲ್ಲಿ ಬಹುಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಅಕ್ಕ ತಂಗಿಯರ ನಡುವೆ ಇರಬಹುದಾದ ಸ್ಥಿತಿಗತಿ, ಧೈರ್ಯ, ಹೋರಾಟದ ಮನೋಭಾವ, ಅಂಜಿಕೆಯ ಮನೋಭಾವ, ಸ್ವಾಭಿಮಾನ ಮತ್ತು ವಿಷಣ್ಣತೆಯನ್ನು ಕಾಣಬಹುದು.

ನವೋದಯ ಸಂದರ್ಭದ ತಿರುಮಲಾಂಬಾ, ಕಲ್ಯಾಣಮ್ಮ, ಗೌರಮ್ಮ, ಶ್ಯಾಮಲಾದೇವಿ, ಜಾನಕಮ್ಮ, ಮೊದಲಾದ ಲೇಖಕಿಯರು ತಮ್ಮ ಕೃತಿಗಳಲ್ಲಿ ಸ್ತ್ರೀಯ ಸ್ಥಾನಮಾನಗಳ, ಮಾನಾಪಮಾನಗಳ, ನೋವು, ನಲಿವುಗಳ ಕುರಿತು, ವಿವಾಹ ಪೂರ್ವ-ವಿವಾಹ ನಂತರದ ಲೈಂಗಿಕ ಸಂಬಂಧಗಳಿಂದ ಉಂಟಾದ ಸಮಸ್ಯೆಗಳ ಕುರಿತು ಹಾಗೂ ಸ್ತ್ರೀ ಶಿಕ್ಷಣದ ಅಗತ್ಯದ ಕುರಿತು ವಿವೇಚಿಸಿರುವ ರೀತಿ ಪ್ರಗತಿಪರವಾಗಿದೆ. ಆದರೆ ಸ್ತ್ರೀಯ ಸ್ಥಾನಮಾನಗಳ ಕುರಿತಂತೆ ಲೇಖಕಿಯರ ಬದಲಾದ ದೃಷ್ಟಿ ಸುಧಾರಣಾ ಮನೋಧರ್ಮದ ಪರಿಧಿಯಾಚೆ ಬೆಳೆಯಲಿಲ್ಲ. ಆದರೂ ಶೈಕ್ಷಣಿಕ ಸೌಲಭ್ಯ, ಸಾಮಾಜಿಕ ಸ್ವಾತಂತ್ರ್ಯಇಲ್ಲದ ಅಂದಿನ ಸಂದರ್ಭಗಳಲ್ಲಿ ಲೇಖಕಿಯರು ಸ್ತ್ರೀ ಜಗತ್ತಿನ ಶೈಲಿಯಲ್ಲಿ ಆತ್ಮೀಯವಾಗಿ ಚಿತ್ರಿಸಿದ್ದು ಆಶಾದಾಯಕವಾಗಿದೆ.

"ಪ್ರಗತಿಶೀಲ ಚಳುವಳಿಯ ನಂತರದ ಲೇಖಕಿಯರು ಯಾವುದೇ ಸೈದ್ಧಾಂತಿಕ ಬದ್ಧತೆಗೆ ಒಳಗಾಗದೆ ತಮ್ಮ ಬದುಕಿನ ಅನುಭವಗಳಿಗೆ ಮಾತ್ರ ಬದ್ಧರಾದದ್ದು ಗಮನಿಸಬೇಕಾದ ಸಂಗತಿ. ಅನುಪಮಾ ನಿರಂಜನರ ಇತ್ತೀಚಿನ ಕಾದಂಬರಿಗಳು ಸ್ತ್ರೀಪಾತ್ರಗಳು ವ್ಯವಸ್ಥೆಯ ವಿರುದ್ಧ ಪ್ರತಿಭಟಿಸುವಂತೆ, ಪ್ರಶ್ನಿಸುವಂತೆ ಹಾಗೂ ಸಮಾನತೆಗಾಗಿ ಹೋರಾಡುವಂತೆ ವಾಣಿ, ಎಂ.ಕೆ. ಇಂದಿರಾ, ತ್ರಿವೇಣಿಯವರ ಕಾದಂಬರಿಗಳ ಸ್ತ್ರೀ ಪಾತ್ರಗಳು ಪ್ರಶ್ನಿಸುವುದಿಲ್ಲ, ಪ್ರತಿಭಟಿಸುವುದಿಲ್ಲ. ತ್ರಿವೇಣಿಯವರು ಸ್ತ್ರೀ ಸಂವೇದನೆಗಳನ್ನು ಮನಃಶಾಸ್ತ್ರದ ನಲೆಯಲ್ಲಿ ಚಿತ್ರಿಸಿದರೆ, ಅನುಪಮಾ ಅವರು ಸ್ತ್ರೀ ಕೇಂದ್ರಿತ ಪಾತ್ರಗಳನ್ನು ವೈಚಾರಿಕ ನೆಲೆಯಲ್ಲಿ ಚಿತ್ರಿಸಿದ್ದಾರೆ.

ವರ್ಗಸಂಘರ್ಷ ಕಾರ್ಮಿಕರ ಸಮಸ್ಯೆ ಹಾಗೂ ಸಂಘಟನೆಯ ಅಗತ್ಯ ಕುರಿತು ಸೈದ್ಧಾಂತಿಕವಾಗಿ ನಿವೇದಿಸಿದ್ದಾರೆ. ಸ್ತ್ರೀಸ್ವತಂತ್ರತೆ ಆರ್ಥಿಕ ಸಮಾನತೆಯಂತಹ ಆಶಯಗಳನ್ನು ತಮ್ಮ ಕಾದಂಬರಿಗಳಲ್ಲಿ ಪ್ರತಿಪಾದಿಸಿದ್ದಾರೆ. ಎಂ.ಕೆ. ಇಂದಿರಾ ಅವರು ಹೆಣ್ಣು ಗಂಡಿನ ಸಂಬಂಧಗಳನ್ನು ಹಾಗೂ ಸ್ತ್ರೀ ಸಮಸ್ಯೆಗಳನ್ನು ಮಾನವೀಯ ನೆಲೆಯಲ್ಲಿ ಚರ್ಚಿಸಿದ್ದಾರೆ. ಇವರು ಪುರುಷ ಪ್ರಧಾನ ವ್ಯವಸ್ಥೆಯ ರೀತಿ ನೀತಿಗಳನ್ನು ಸೈದ್ಧಾಂತಿಕವಾಗಿ ಆಲೋಚಿಸಿದ್ದಾರೆ. ಮಹಿಳಾ ಶೋಷಣೆಯ ಒಳನೋಟಗಳನ್ನು ತಮ್ಮ ಕೃತಿಗಳಲ್ಲಿ ಬಿಚ್ಚಿಟ್ಟಿದ್ದಾರೆ.

ನವೋದಯ, ಪ್ರಗತಿಶೀಲ, ನವ್ಯ ಸಂದರ್ಭದ ಲೇಖಕಿಯರು, ಮಧ್ಯಮ ವರ್ಗದ ಅನುಭವಗಳನ್ನು ತಮ್ಮ ಕಥೆ ಕಾದಂಬರಿಗಳಲ್ಲಿ ಚಿತ್ರಿಸಿದರೆ ದಲಿತ, ಬಂಡಾಯ ಸಂದರ್ಭದ ಲೇಖಕಿಯರು ಮಧ್ಯಮವರ್ಗದ ಅನುಭವಗಳೊಂದಿಗೆ ಕೆಳವರ್ಗದ ಶೋಷಿತರ ಸಂವೇದನೆಗಳನ್ನು ಬಿಚ್ಚಿಟ್ಟಿದ್ದಾರೆ. ಮುಸ್ಲಿಂ ಸಂಸ್ಕೃತಿಯ ಸಂವೇದನೆಗಳನ್ನು ಸಾರಾ ಅಬೂಬಕರ್ ಹಾಗೂ ಬಾನುಮುಷ್ತಾಕ್ ಅವರು ತಮ್ಮ ಕಥೆ ಕಾದಂಬರಿಗಳಲ್ಲಿ ಚಿತ್ರಿಸಿದರೆ, ಟಿ.ಬಿ.ಲಲಿತಾನಾಯಕ್ ಅವರು ಲಂಬಾಣಿ ಸಂಸ್ಕೃತಿಯ ಸಂವೇದನೆಗಳನ್ನು ಮತ್ತು ಸ್ತ್ರೀ ಮನಸ್ಸಿನ ಸೂಕ್ಷ್ಮ ಭಾವನೆಗಳನ್ನು ಪ್ರಾದೇಶಿಕ ಭಾಷೆಯಲ್ಲಿ ಕಲಾತ್ಮಕವಾಗಿ ನಿರೂಪಿಸುವ ವೈದೇಹಿಯವರ ಕಥೆಗಳು ಗಮನ ಸೆಳೆಯುತ್ತವೆ.

ನವೋದಯ, ಪ್ರಗತಿಶೀಲ, ನವ್ಯ ಸಂದರ್ಭದ ಲೇಖಕಿಯರ ಕಥೆ ಕಾದಂಬರಿಗಳಲ್ಲಿ ಕಾಣದೆ ಇರುವ ಪ್ರತಿ ಸಂಸ್ಕೃತಿಯ ಸಂವೇದನೆಗಳು, ಚಾರಿತ್ರಿಕ ಪ್ರಜ್ಞೆ, ಸ್ತ್ರೀವಾದಿ ಚಿಂತನೆ, ಪ್ರಾದೇಶಿಕತೆ ಇಂದಿನ ಲೇಖಕಿಯರ ಕಥೆ ಕಾದಂಬರಿಗಳಲ್ಲಿ ಕಾಣಬಹುದಾಗಿದೆ."[೧೯]

ಜಿ.ಎಸ್.ಆಮೂರ ಅವರು ಹೇಳುವ ಹಾಗೆ ಮಾಸ್ತಿಯವರಿಗಿಂತ ಮೊದಲು ಸಣ್ಣಕತೆಗಳನ್ನು ಬರೆದವರಿದ್ದಂತೆ ಅನೇಕ ಸಣ್ಣಕತೆಗಳನ್ನು ಬರೆದ ಮಹಿಳೆಯರಿದ್ದಾರೆ.

ಈಗ್ಗೆ ಮಹಿಳಾ ಕಥಾ ಸಾಹಿತ್ಯಕ್ಕೂ ಒಂದು ಪರಂಪರೆ ನಿರ್ಮಿತವಾಗಿದೆ. ಈ ಪರಂಪರೆಯ ನಾಲ್ಕು ಪೀಳಿಗೆಗಳನ್ನು ಸ್ಪಷ್ಟವಾಗಿ ಗುರುತಿಸಬಹುದಾದರೆ, ಶ್ಯಾಮಲಾ ಬೆಳಗಾಂವಕರ ಮೊದಲಾದ ಮೊದಲನೆಯ ಪೀಳಿಗೆಯ ಲೇಖಕಿಯರು. ಇವರ ಕತೆಗಳಲ್ಲಿ ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀ ಒಬ್ಬ ವ್ಯಕ್ತಿಯಾಗಿ ಗುರುತಿಸಲ್ಪಡದೆ ಪತ್ನಿ, ವಿಧವೆ, ವೇಶ್ಯೆ ಹೀಗೆ ಪುರುಷರ ಸಂಬಂಧದಲ್ಲಿಯೇ ಗುರುತಿಸಲ್ಪಟ್ಟಿದ್ದರಿಂದ ಅವಳಿಗೆ ಸ್ವತಂತ್ರವಾದ ಅಸ್ತಿತ್ವವಾಗಲಿ, ಅದರ ಕಲ್ಪನೆಯಾಗಲಿ ಇರಲಿಲ್ಲ. ಮೊದಲನೆ ಪೀಳಿಗೆಯ ಲೇಖಕಿಯರ

ಕತೆಗಳಲ್ಲಿ ಬರುವ ಸ್ತ್ರೀ ಪ್ರತಿಮೆಗಳೆಲ್ಲ ಈ ಅವ್ಯವಸ್ಥೆಯ ಸಂಕೇತಗಳಾಗಿಯೇ ಬರುತ್ತವೆ. ಈ ಸಂಕೇತಗಳನ್ನು ಭಾಷೆಯಲ್ಲಿ ಸೃಷ್ಟಿಸುವ ಕೃತಿಯ ಸ್ವರೂಪವೇ ಮೂಲತಃ ಪ್ರತಿಭಟನಾತ್ಮಕ ವಾದದ್ದು. ತಾವು ಸಮಾಜದಲ್ಲಿ ಕಂಡು, ಅನುಭವಿಸಿದ ಚಿತ್ರಗಳನ್ನೇ ಈ ಲೇಖಕಿಯರು ಕೊಡುತ್ತಿದ್ದುದರಿಂದ ವಾಸ್ತವ ಮಾರ್ಗದ ಅನುಸರಣೆ ಅವರಿಗೆ ಅವಶ್ಯವೆನಿಸಿತು. ಮಾಧ್ಯಮದ ಸಾಧ್ಯತೆಗಳ ಬಗ್ಗೆ ಅವರು ವಿಶೇಷ ಲಕ್ಷ್ಯ ಕೊಡದೆ ಹೋದುದರಿಂದ ಅವರ ಕೃತಿಗಳಲ್ಲಿ ಕತೆಗಳು 'ಸಣ್ಣಕತೆಯ' ಸಾಹಿತ್ಯ ಪ್ರಕಾರದ ವೈಶಿಷ್ಟ್ಯ ಸಾಧಿಸಿದ ಉದಾಹರಣೆಗಳು ಕಡಿಮೆ. ಎರಡನೆಯ ಪೀಳಿಗೆಯ ಲೇಖಕಿಯರು ಕಂಡ ಮಹಿಳೆಯರಲ್ಲಿಯೂ ಕೂಡ ಕ್ರಾಂತಿಕಾರಕ ಬದಲಾವಣೆಗಳು ಇರದೆ ಹೋದರೂ ಅವರಲ್ಲಿ ತಮ್ಮ ಅಸ್ಮಿತೆಯ ಅರಿವು ಜಾಗೃತ ವಾಗಿದ್ದುದರಿಂದ ವ್ಯವಸ್ಥೆಯ ವಿರುದ್ಧ ದನಿ ಎತ್ತುವುದು, ಪ್ರತಿಭಟನೆಯನ್ನು ಕೃತಿಗಿಳಿಸುವುದು ಅವಶ್ಯವೆನಿಸಿತು. ಈ ಪೀಳಿಗೆಯ ಪ್ರಮುಖ ಲೇಖಕಿಯರಾದ ಅನುಪಮಾ ನಿರಂಜನ ಹಾಗೂ ತ್ರಿವೇಣಿಯವರಂಥ ಕತೆಗಾರ್ತಿಯರಲ್ಲಿ ಬೆಳವಣಿಗೆಯನ್ನು ಕಾಣಬಹುದು. ಸ್ತ್ರೀಯನ್ನು ಕೇವಲ ಬಲಿಪಶುವನ್ನಾಗಿ ಕಾಣದೆ ಅವಳಲ್ಲಿ ಕರ್ತೃತ್ವ ಶಕ್ತಿಯನ್ನೂ ಗುರುತಿಸುವ ಮೂಲಕ ಅವಳ ಹೊಸ ಪ್ರತಿಮೆಗಳನ್ನು ಸೃಷ್ಟಿಸುವಲ್ಲಿಯೂ ಅವರು ಶಕ್ತರಾದರು. ಅವರ ಕತೆಗಳಲ್ಲಿ ಆಶಾವಾದವೂ ಸೀಮಿತವಾಗಿ ಕಾಣಿಸಿಕೊಂಡಿತು.

ಸ್ವಾತಂತ್ರ್ಯೋತ್ತರ ಕಾಲ ಖಂಡದಲ್ಲಿ ಬರೆಯತೊಡಗಿದ ಲೇಖಕಿಯರು ಬಲವಾದ ತಾತ್ವಿಕ ಆಸ್ಥೆಗಳನ್ನು ಬೆಳೆಸಿಕೊಂಡುದರಿಂದ ಅವರು ಬದುಕಿನ ಸಂಕೀರ್ಣತೆಯನ್ನು ತಮ್ಮ ಕತೆಗಳಲ್ಲಿ ಮೂಡಿಸುವಲ್ಲಿ ಬಹಳ ಆಸಕ್ತಿ ತೋರಿಸಿದರು. ಈ ಕುರಿತಂತೆ ಆಮೂರರು ಹೀಗೆ ಹೇಳಿದ್ದಾರೆ.

"ಈ ತಲೆಮಾರಿನ ಲೇಖಕಿಯರಲ್ಲಿ ಪ್ರಮುಖರಾದ ರಾಜಲಕ್ಷ್ಮಿ ಎನ್.ರಾವ್. ಹಾಗೂ ವೀಣಾರ ಕತೆಗಳಲ್ಲಿ ನಾವು ನೋಡುವ ಅಂತರ್ಮುಖತೆ, ಆತ್ಮಪ್ರಜ್ಞೆ, ದ್ವಂದ್ವಗಳ ಅರಿವು ನವ್ಯ ಮನೋಧರ್ಮದ ಅವಿಷ್ಕಾರಗಳು ಕತೆಯನ್ನು ಕೇವಲ ಮನೋರಂಜನೆಗಾಗಲಿ, ಸಾಮಾಜಿಕ ಜಾಗೃತಿಗಾಗಲಿ, ಬಳಸದೆ ಇವರು ಅದನ್ನು ಸತ್ಯದ ಶೋಧದಂಥ ಗಂಭೀರ ಪ್ರಯತ್ನಗಳಲ್ಲಿ ತೊಡಗಿಸಿದರು. ಹಾಗೂ ಅದನ್ನು ಒಂದು ಪ್ರಭುದ್ಧ ಮಾಧ್ಯಮವನ್ನಾಗಿ ಬಳಸಿಕೊಂಡರು.

೧೯೭೦ರ ನಂತರ ಬರೆಯತೊಡಗಿದ ಲೇಖಕಿಯರು ಒಂದಿಲ್ಲೊಂದು ರೀತಿಯಿಂದ ಜಾಗತಿಕ ಸ್ವರೂಪದ ಸ್ತ್ರೀಮುಕ್ತಿ ಚಳುವಳಿಗಳಿಂದ ಪ್ರಭಾವಿತರಾದವರು. ಇವರು ಬರೆಯುತ್ತಿರುವ ವೇಳೆಗೆ ಸಮಾಜದಲ್ಲಿಯೂ ಸಾಕಷ್ಟು ಸ್ಥಿತ್ಯಂತರಗಳಾಗಿದ್ದವು. ಮಹಿಳೆಗೆ ಇಂದು ಎಲ್ಲ ಕಾರ್ಯ ಕ್ಷೇತ್ರಗಳೂ ಮುಕ್ತವಾಗಿದೆಯಲ್ಲದೆ ಶಿಕ್ಷಣದ ಎಲ್ಲ ಪ್ರಕಾರಗಳೂ ಲಭ್ಯವಿವೆ. ಹೀಗಾಗಿ ಅವಳ ಅನುಭವದ ಹಿಂದೆ ಎಂದೂ ಇಲ್ಲದ ವ್ಯಾಪ್ತಿ, ವೈವಿಧ್ಯಗಳನ್ನು ಹೊಂದಿದೆ. ಅದರ ಜೊತೆಗೆಯ ಸಮಾನತೆ, ಸ್ವಾತಂತ್ರ್ಯಗಳೂ ಹೊಸ ಸಮಸ್ಯೆಗಳಿಗೆ ಹುಟ್ಟುಹಾಕಿದೆ. ಗಂಡು ಹೆಣ್ಣಿನ ಸಂಬಂಧಗಳಲ್ಲಿಯೂ ಬಿಕ್ಕಟ್ಟು ತಲೆದೋರಿದೆ. ಪುರುಷ ಕೇಂದ್ರಿತ ವ್ಯವಸ್ಥೆಯ ಅಂಗಗಳಾದ ಅವಿಭಕ್ತ ಕುಟುಂಬ ಹಾಗೂ ವಿವಾಹಗಳಂಥ, ಸಂಸ್ಥೆಗಳು ತಮ್ಮ ಶಕ್ತಿಯನ್ನು ಕಳೆದುಕೊಳ್ಳುತ್ತಿವೆ. ಆದರೆ ಸಾಮಾಜಿಕ ಧೋರಣೆಗಳಲ್ಲಿ ಬದಲಾವಣೆಯಾಗಿದ್ದರೂ, ಮನೋಧರ್ಮಗಳಲ್ಲಿ ಸಾಂಪ್ರದಾಯಿಕ ಜಾಡ್ಯ ಇನ್ನೂ ಉಳಿದುಕೊಂಡಿರುವುದರಿಂದ ಘರ್ಷಣೆಗಳು ನಡೆಯುತ್ತಲೆ ಇವೆ.

ವೈದೇಹಿ, ಸಾರಾ ಅಬೂಬಕರ್, ನೇಮಿಚಂದ್ರರಂಥ ಹೊಸ ತಲೆಮಾರಿನ ಲೇಖಕಿಯರಿಗೆ ತಮ್ಮ ಪರಿಸರದ ಸಾಂಸ್ಕೃತಿಕ ಹಾಗೂ ಚಾರಿತ್ರಿಕ ಸ್ವರೂಪದ ಅರಿವಿರುವುದರಿಂದ ಅವರು ಬರೆಯುತ್ತಿರುವ ಕತೆಗಳು ಮೊದಲಿನವರ ಕತೆಗಳಿಗಿಂತ ಭಿನ್ನವಾಗಿವೆ. ಸಮಾಜದ ಎಲ್ಲಾ ಸ್ತರಗಳಿಂದಲೂ ಲೇಖಕಿಯರು ಎದ್ದು ಬರುತ್ತಿರುವುದರಿಂದ ಸಂಸ್ಕೃತಿಯ ಬೇರೆ ಬೇರೆ ಮುಖಗಳು ಭಾಷೆಯಲ್ಲಿ ಒಡ ಮೂಡುತ್ತಿವೆ. ಕನ್ನಡದ ಸಣ್ಣಕತೆಯ ಭವಿಷ್ಯದ ದೃಷ್ಟಿಯಿಂದ ಇವೆಲ್ಲ ಒಳ್ಳೆಯ ಚಿನ್ಹೆಗಳು ಎಂದು ಬೇರೆಯಾಗಿ ಹೇಳಬೇಕಾಗಿಲ್ಲ."[೨೦]

ಇಪ್ಪತ್ತನೆಯ ಶತಮಾನದ ಸಂವೇದನೆ, ವೈಚಾರಿಕತೆಗಳ ಸ್ವರೂಪವೇ ಆಧುನಿಕತೆಯಲ್ಲಿ ರೂಪುಗೊಂಡುದ ರಿಂದ ಆಧುನಿಕತೆ ಎಂಬ ಪರಿಕಲ್ಪನೆಯನ್ನು ಮೂರು ವಿಧವಾಗಿ ನೋಡಬಹುದು.

ಮೊದಲನೆಯದಾಗಿ, ಅದೊಂದು ಐತಿಹಾಸಿಕ ಕಾಲಖಂಡಕ್ಕೆ ಸಂಬಂಧಿಸಿದ, ಸಾಮಾಜಿಕ ಅನುಭವದ ಒಂದು ಪ್ರಕಾರಕ್ಕೆ ಸೇರುವ ಪರಿಕಲ್ಪನೆ. ಅದನ್ನೊಂದು 'ಯೋಜನೆ' ಎಂಬ ಅರ್ಥದಲ್ಲಿಯೂ ಗ್ರಹಿಸಬಹುದು. ಎರಡನೆಯದಾಗಿ ಆಧುನಿಕತೆ ಎಂದರೆ ನಿರಂತರವಾದ ಪರಿವರ್ತನೆಯ ಕ್ರಿಯೆ ಎಂದೂ ಹೇಳಬಹುದಾಗಿದೆ. 'Modernity and Revolution' ಎಂಬ ತನ್ನ ಲೇಖನದಲ್ಲಿ ಪೆರ್‍ರಿ ಆ್ಯಂಡ್‌ರ್ಸನ್ ಈ ಮಾತನ್ನು ವಿವರವಾಗಿ ಹೇಳಿದ್ದಾನೆ. ಮೂರನೇಯದಾಗಿ ಅದನ್ನೊಂದು, ಗುಣ (Quality) ಎಂದೂ ನೋಡಬಹುದು.

ಈ ಗುಣದ ಲಕ್ಷಣಗಳೆಂದರೆ, ಭೂತವನ್ನು ಕಡೆಗಣಿಸಿ ಮುಕ್ತದೃಷ್ಟಿಯನ್ನಿಟ್ಟುಕೊಳ್ಳುವುದು ಹಾಗೂ ಸದೈವ ಹೊಸತಿಗಾಗಿ ಹಂಬಲಿಸುವುದು. ಇನ್ನೂ ಮಹಿಳಾ ಸಾಹಿತ್ಯದ ವಿಸ್ತೃತ ಪರಿಪ್ರೇಕ್ಷ್ಯದಲ್ಲಿಯೇ ಮಹಿಳೆಯರ ಕತೆಗಳನ್ನು ನೋಡ ಬೇಕಾಗುತ್ತದೆ. ಸ್ತ್ರೀವಾದಿ ಸಾಹಿತ್ಯದ ಮೂರು ರಚನೆಗಳನ್ನು ಡಿ.ಆರ್. ನಾಗರಾಜ್ ಗುರುತಿಸುತ್ತಾರೆ. ೧) ಪುರುಷ ಸ್ಥಿರೀಕರಣದ ರಚನೆಗಳು ೨) ಪುರುಷ ಸ್ತ್ರೀ ಸಮಸ್ಯಾತ್ಮಕ ರಚನೆಗಳು ಹಾಗೂ ೩) ಸ್ತ್ರೀ ಸಮೃದ್ಧತೆಯ ರಚನೆಗಳು.

ಮಹಿಳೆಯರ ಸಣ್ಣಕಥೆಗಳಿಗೆ ಸೀಮಿತವಾಗಿ ಹೇಳುವುದಾದರೆ, ಅವುಗಳಲ್ಲಿ ಬಹುಪಾಲು ಎರಡನೆಯ ಪ್ರಕಾರದ ರಚನೆಗಳೆ ಆಗಿವೆ. ಈ ಪ್ರಕಾರದಲ್ಲಿಯೂ ಒಳಬೇಧಗಳಿವೆ. ಕೆಲವೊಂದು ರಚನೆಗಳಿಗೆ ಪುರುಷ ಪ್ರಾಧಾನ್ಯ ವ್ಯವಸ್ಥೆಯ ವಿರೋಧ ಹಾಗೂ ಪ್ರತಿಭಟನೆಗಳು ವೈಚಾರಿಕತೆಯನ್ನೊದಗಿಸಿದರೆ ಬೇರೆ ಕೆಲವು ಪುರುಷ ನಿರ್ಮಿತ ಸ್ತ್ರೀ ಪ್ರತಿಮೆಗಳ ನಿರಾಕರಣೆಯ ಧೋರಣೆಗಳನ್ನು ಹೊಂದಿದವುಗಳು. ಸ್ತ್ರೀ ಸಾಹಿತ್ಯದ ಸಂದರ್ಭದಲ್ಲಿ ಪರಂಪರೆಯ ಸೃಷ್ಟಿ ಅತ್ಯಂತ ಮಹತ್ವದ್ದು.

ಪುರುಷ ಸಾಹಿತ್ಯದಲ್ಲಿದ್ದಂತೆ ಮಹಿಳಾ ಸಾಹಿತ್ಯದಲ್ಲಿಯೂ ಬಹಳಷ್ಟು ಲೇಖಕಿಯರು ಸಮಾಜದ ಮಧ್ಯಮ ವರ್ಗಗಳಿಂದ ಬಂದವರಾದುದರಿಂದ ಅವರ ಕತೆಗಳ ಸಾಂಸ್ಕೃತಿಕ ಪರಿಸರದಲ್ಲಿ ವೈವಿಧ್ಯವಿರುವುದಿಲ್ಲ.

ಪುರುಷರಂತೆ ಮಹಿಳೆಯರೂ ಸಣ್ಣಕತೆಯ ಕ್ಷೇತ್ರದಲ್ಲಿ ಪ್ರಯೋಗಶೀಲರಾಗಿದ್ದರು ಎಂಬ ಅಂಶವನ್ನು ಬೆಟಗೇರಿ ಕೃಷ್ಣಶರ್ಮರವರು ಬಹಳ ಹಿಂದೆಯೇ ಗುರುತಿಸಿದ್ದರು. ಸಣ್ಣಕಥೆಯ ಬೆಳೆ ಹುಲುಸಾದಂತೆಲ್ಲ ಅದರ ಸ್ವರೂಪವೂ ದಿನ ದಿನಕ್ಕೆ ಬದಲಾಗುತ್ತ ವೈವಿಧ್ಯವನ್ನು ಪಡೆಯುತ್ತ ನಡೆದಿದೆ. ಸ್ವಭಾವ ಚಿತ್ರಣ, ಮನೋ ವಿಶ್ಲೇಷಣೆ ಇವುಗಳು ಬೆಳೆಯುತ್ತ ಸಣ್ಣ ಕಥೆಯ ಬಗೆಗಿರುವ ಪರಂಪರೆಯ ವಾಖ್ಯೆ ಹೊಸ ಲೇಖಕರ

ಕಣ್ಣಿಂದ ಮರೆಯಾಗುತ್ತಲೇ ನಡೆದಿದೆ. ಜೀವನದ ಯಾವುದೊಂದು ಭಾಗವನ್ನು ಕುರಿತ ಕಥನವೂ ಇಂದು 'ಸಣ್ಣಕಥೆ' ಎನಿಸಿಕೊಳ್ಳತೊಡಗಿದೆ.

ನಮ್ಮ ದೇಶ ಪುರುಷ ಪ್ರಧಾನವಾದ ದೇಶವಾಗಿದೆ. ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣು ಹಿಂದಿನಿಂದಲೂ ಪುರುಷರ ದಬ್ಬಾಳಿಕೆಗೆ, ಶೋಷಣೆಗೆ ಒಳಗಾಗಿ ದುಃಖಿಸುತ್ತಲೇ ಬಂದಿದ್ದಾಳೆ. ನಮ್ಮ ಸಾಂಪ್ರದಾಯಿಕ ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣು ನಲುಗಿ ಹೋಗುವ ತನ್ನ ಅಸ್ತಿತ್ವವನ್ನೇ ಕಳೆದುಕೊಂಡು ಬಿಡುವ ವಾಸ್ತವ ಚಿತ್ರಣವನ್ನು ಸಾರ ಅಬೂಬಕರ್‌ರವರ ನಿಯಮ ನಿಯಮಗಳ ನಡುವೆ ಕತೆಯಲ್ಲಿ ಅತ್ಯಂತ ಹೃದಯಂಗಮವಾಗಿ ಚಿತ್ರಿಸಿದ್ದಾರೆ. ಗಂಡಿನ ದರ್ಪಗಳಿಗೆ, ದಬ್ಬಾಳಿಕೆಗಳಿಗೆ, ದಾಷ್ಟ್ಯಗಳಿಗೆ ಮತ್ತು ಬೇಜವಾಬ್ದಾರಿ ತನಗಳಿಗೆ ಸಿಲುಕಿ ಹೆಣ್ಣು ನಲುಗಿ ಹೋಗಿರುವ ಘಟನೆಗಳನ್ನು ನಾವಿಲ್ಲಿ ಕಾಣಬಹುದು. ಇದಲ್ಲದೆ ಅನ್ಯಾಯದ ಅತಿರೇಕಗಳು ಇಲ್ಲಿ ಅಭಿವ್ಯಕ್ತವಾಗಿವೆ. ಅದರಂತೆ ಹೆಣ್ಣಿನ ಮನಸ್ಸಿನ ಸೂಕ್ಷ್ಮತೆ, ಅತಂತ್ರತೆ, ಅಸಹಾಯಕತೆಗಳು ಇಲ್ಲಿ ಭಾವಪೂರ್ಣವಾಗಿ ಮೂಡಿ ಬಂದಿವೆ. ಮುಗ್ಧ ಜೀವಿಯಾದ ಜೊಹರಾ ಇವಳು ಕಥಾ ನಾಯಕಿ, ಹರಿದು ತಿನ್ನುವ ಕಡು ಬಡತನ ಇವುಗಳ ಸುಳಿಯಲ್ಲಿ ಸಿಕ್ಕಿ ಕೊನೆಗೆ ಸತ್ತು ಹೋಗುವ ವಿವರಗಳು ನಮ್ಮ ಸಮಾಜದ ಸ್ಥಿತಿಗೆ ಹಿಡಿದ ಕನ್ನಡಿಯಾಗಿದೆ. ಯಾವುದೋ ಒಂದು ಸಣ್ಣ ವಿಷಯಕ್ಕೆ ಸಂಬಂಧಿಸಿದಂತೆ ಜೊಹರಾ ಮತ್ತು ಗಂಡನಾದ ಖಾದರ್ ನಡುವೆ ಜಗಳವಾಗಿ ಆ ಜಗಳವಾಡಿದ್ದನ್ನೇ ಮುಂದಿಟ್ಟುಕೊಂಡು ಕಾದರ್ ಅವಳಿಗೆ ತಲಾಖ್ ಕೊಡುತ್ತಾನೆ. ಇದು ಜೊಹರಾಳಿಗೆ ಇಷ್ಟವಿಲ್ಲದಿದ್ದರೂ ಸಹ ಒಪ್ಪಿಕೊಳ್ಳಲೇಬೇಕಾದ ಸ್ಥಿತಿ ಇರುತ್ತದೆ. ಈ ವಿಷಯವನ್ನು ನಾವು ಹಿಂದೂ ಸಮಾಜದಲ್ಲಿ ಗಮನಿಸಿದಾಗ ಕಾನೂನು ಹೆಣ್ಣಿಗೆ ರಕ್ಷಣೆಯನ್ನು ಕೊಟ್ಟು ಅನುಕೂಲ ಮಾಡಿಕೊಡುತ್ತದೆ. ಜೊಹರಾ ಮೂರನೆಯ ಮಗುವಿಗೆ ಜನ್ಮ ನೀಡಿದಾಗ ಪೌಷ್ಠಿಕಾಂಶದ ಕೊರತೆಯಿಂದಾಗಿ ಪುಟ್ಟ ಮಗುವಿಗೆ ಹಾಲುಣಿಸುವುದು ಕಷ್ಟವಾಗಿ ಇದನ್ನು ನೋಡಲಾಗದೆ ಜೊಹರಾಳ ತಾಯಿ ಸ್ವಲ್ಪ ಚಹಾ ತಂದು ಮಗುವಿನ ಬಾಯಿಯಲ್ಲಿ ಇಟ್ಟಾಗ ಅದು ಚೀಪತೊಡಗುತ್ತದೆ. ಇತ್ತ ಜೊಹರಾ ದುಡಿಯಲೂ ಆಗದ, ಯಾರ ಸಹಕಾರವೂ ಇಲ್ಲದ ವಾತಾವರಣ ಉಂಟಾಗಿರುವುದನ್ನು ನಾವು ಗಮನಿಸಿದಾಗ ಈ ಮಹಿಳೆಯ ಸ್ಥಿತಿಯು ಊಹೆಗೂ ನಿಲುಕದಾಗಿದೆ. ತನ್ನ ಗಂಡ ಮತ್ತೆ ಜೊಹರಾಳನ್ನು ಮನೆಗೆ ಕರೆದುಕೊಂಡು ಹೋಗುತ್ತೇನೆಂಬ ವಿಷಯವನ್ನು ಪ್ರಸ್ತಾಪಿಸಿದಾಗ ಧರ್ಮದ ನಿಯಮವನ್ನು ಪಾಲಿಸಲು ಪ್ರಕೃತಿ ನಿಯಮದ ವಿರುದ್ಧದ ಹೋರಾಟ ನಡೆಯುತ್ತದೆ. ಈ ವಿಚಾರವನ್ನು ಗಮನಿಸಿದಾಗ ಈ ಮಹಿಳೆ ತನ್ನ ಸ್ವಂತ ನಿರ್ಧಾರವನ್ನು ತೆಗೆದುಕೊಳ್ಳಲಾರದ ಅಸಹಾಯಕ ಸ್ಥಿತಿಯಲ್ಲಿ ಇದ್ದಾಳೆ ಎಂಬುದನ್ನು ಗಮನಿಸಬಹುದು.

ಗಂಡಸು ಬೇಕೆಂದಾಗ ತಲಾಖ್ ಕೊಡುವುದು ಬೇಡವೆಂದಾಗ ಸುಮ್ಮನಿರುವುದು ಇದನ್ನು ಗಮನಿಸಿದರೆ ಇಲ್ಲಿ ಪುರುಷ ಪ್ರಾಧಾನ್ಯತೆ ಎದ್ದು ಕಾಣುತ್ತದೆ. ನಮ್ಮ ಮಹಿಳೆಯರಿಗೆ ಭಾರತಕ್ಕೆ ಸ್ವಾತಂತ್ರ್ಯ ಬಂದರೂ ಸಹ ತನ್ನ ನಿರ್ಧಾರವನ್ನು ಪ್ರಕಟಿಸಲು ಅಸಹಾಯಕಳಾಗುತ್ತಾಳೆ. ಮಹಿಳೆಗೆ ಸ್ವಾತಂತ್ರ್ಯವೆಂಬುದು ಕನಸಿನ ಮಾತು. ಕೊನೆಗೆ ಅನಾರೋಗ್ಯದಿಂದ ಮಾನಸಿಕವಾಗಿ ಕುಗ್ಗುತ್ತಾಳೆ. ಜೊತೆಗೆ ಮಾನಸಿಕ ತೊಳಲಾಟ ಜೊತೆಗೆ ಮಕ್ಕಳ ಭವಿಷ್ಯದ ಬಗ್ಗೆ ಚಿಂತನೆಗಳು ಇವೆಲ್ಲಾ ಸೇರಿ ಇವಳು ಕೊನೆಯ ಉಸಿರೆಳೆಯುವ ಸ್ಥಿತಿಗೆ ಬರುತ್ತಾಳೆ. ಇಷ್ಟಾದರೂ

ಸಹ ತನ್ನ ಗಂಡನ ಬಗ್ಗೆ ಚಿಂತಿಸುವ ಈ ಹೆಣ್ಣಿನ ಕರುಣಾಜನಕ ಸ್ಥಿತಿಯು ಕಣ್ಣಿಗೆ ಕಟ್ಟಿದಂತಾಗುತ್ತದೆ. ಇದರಲ್ಲಿ ಮುಸ್ಲಿಂ ಜನಾಂಗ ವ್ಯವಸ್ಥೆಯ ಅಡಿಯಲ್ಲಿ ಸಿಲುಕಿರುವ ಹೆಣ್ಣಿನ ಅಧೋಗತಿಯನ್ನು ನಾವಿಲ್ಲಿ ಕಾಣಬಹುದು.

ಕಾಳೇಗೌಡನಾಗವಾರರ ಮಾಯೆ ಕತೆಯನ್ನು ಪರಾಂಬರಿಸಿದಾಗ ಗಂಗಮ್ಮ ಎಂಬ ಕಲ್ಪಿತ ನಾಮದ ಮಹಿಳೆಯ ಬಗ್ಗೆ ಪೆದ್ದಯ್ಯನ ಭೇಟಿಯಿಂದ ಹಿಡಿದು ಕತೆಯ ಮುಕ್ತಾಯದವರೆಗೆ ವ್ಯಕ್ತವಾಗಿರುವುದನ್ನು ಸೂಕ್ಷ್ಮವಾಗಿ ನಾವಿಲ್ಲಿ ತಿಳಿಸಲೇಬೇಕಾಗಿದೆ. ಗಂಗಮ್ಮ ತನ್ನ ಸ್ವಂತ ಗ್ರಾಮದಲ್ಲಿ ಹುಟ್ಟಿ ಬೆಳೆದರೂ ಬೇರೆ ಊರಿಗೆ ಇಷ್ಟ ಇದ್ದೋ ಅಥವಾ ಇಷ್ಟ ಇಲ್ಲದೆಯೋ ವಿವಾಹವಾಗಿ ಅಲ್ಲಿಯ ಜನಗಳಿಗೆ ಹಾಗೂ ವಾತಾವರಣಕ್ಕೆ ಹೊಂದಿಕೊಳ್ಳಬೇಕಾದಂತಹ ಪರಿಸ್ಥಿತಿಯನ್ನು ನಾವಿಲ್ಲಿ ಕಾಣಬಹುದು. ನಂತರ ಅವಳ ತಂದೆ ತಾಯಿ ಗತಿಸಿದಾಗ ಅವಳಿಗೆ ಬೇರೆ ಊರೇ ಗತಿಯಾಯಿತು. ಆ ಊರಿನ ಮನೆಯಲ್ಲಿ ಇರಲು ಪುನಃ ಕಷ್ಟವಾಗುತ್ತದೆ. ಕಾರಣ ಸೋಮಾರಿ ಗಂಡ ಹಾಗೂ ಮಗು ಸಾವನ್ನಪ್ಪುವುದು. ಅತ್ತೆಯ ಜಗಳ ಇವುಗಳಿಂದ ಬೇಸತ್ತು ಮನೆಬಿಟ್ಟು ಹೊರಡುತ್ತಾಳೆ. ಪುನಃ ರಕ್ಷಣೆಗಾಗಿ ತನ್ನ ಅಣ್ಣನ ಮನೆಗೆ ಸ್ವಂತ ಊರಿಗೇ ಬರುತ್ತಾಳೆ. ಅಣ್ಣ ಅತ್ತಿಗೆಯ ಸಹಕಾರ ಸಿಗುವುದಿಲ್ಲ. ಪುನಃ ಅಜ್ಜಿಯ ಹತ್ತಿರ ಬರುತ್ತಾಳೆ ಅಲ್ಲಿಯೂ ಸಹ ಸೋದರ ಮಾವಂದಿರು ಮತ್ತು ಇತರರು ನಿಂದನೆಗಳನ್ನು ಹೊರಿಸುತ್ತಾರೆ. ಆ ನಿಂದನೆಗಳನ್ನು ತಾಳಲಾರದೆ ಜೀವನ ಬೇಸರವಾಗಿ ಆತ್ಮಹತ್ಯೆ ಮಾಡಿಕೊಳ್ಳಬೇಕೆಂಬ ದೃಢ ನಿರ್ಧಾರದೊಂದಿಗೆ ಮನೆ ಬಿಟ್ಟು ಹೊರಡುತ್ತಾಳೆ. ಬಸ್ಸಿನಲ್ಲಿ ಪ್ರಯಾಣ ಮಾಡಿ ಅಪರಿಚಿತ ಸ್ಥಳದಲ್ಲಿ ಇಳಿದು ಆತ್ಮಹತ್ಯೆಯ ಸ್ಥಳವನ್ನು ಗುರುತಿಸುತ್ತಾಳೆ. ಸಾಯುವ ಅಂತಿಮ ನಿರ್ಧಾರ ಮಾಡಿಕೊಂಡು ಕುಳಿತಿರುವ ಸಂದರ್ಭದಲ್ಲಿ ಪೆದ್ದಯ್ಯನ ಪ್ರವೇಶವಾಗುತ್ತದೆ. ಇಲ್ಲಿಂದ ಇವಳ ಮೌನವ್ರತ ಪ್ರಾರಂಭವಾಗುತ್ತದೆ. ಪೆದ್ದಯ್ಯ ತನ್ನ ಎಲ್ಲಾ ಬುದ್ಧಿಯನ್ನು ಉಪಯೋಗಿಸಿ ಅವಳ ನಿರ್ಧಾರವನ್ನು ಬದಲಾಯಿಸಿ ಬೇರೆ ಕಡೆ ಕರೆದೊಯ್ಯುತ್ತಾನೆ. ನಂತರ ಪೆದ್ದಯ್ಯನ ಹಿತವಚನ ಮತ್ತು ಬೆಂಬಲ ಸಹಕಾರದೊಂದಿಗೆ ಪೆದ್ದಯ್ಯನ ಊರಿಗೆ ಹೋಗುತ್ತಾಳೆ. ಆ ಊರನ್ನು ಪ್ರವೇಶಿಸುತ್ತಿದ್ದಂತೆಯೇ ಊರಿನ ಜನರಲ್ಲಿ ಉಂಟಾದ ಭಾವನೆಗಳ ಚಿತ್ರಣವನ್ನು ನಾವಿಲ್ಲಿ ನೋಡಬಹುದು. ಪೆದ್ದಯ್ಯನಿಗೂ ಗಂಗಮ್ಮನಿಗೂ ಸಂಬಂಧ ಕಲ್ಪಿಸಿ ಊರ ಜನತೆಯಿಂದ ಎದುರಾದ ಎಲ್ಲ ಅಪಮಾನ, ಅವಮಾನಗಳಿಗೆ ವಿಚಲಿತಳಾಗದೆ ಮೌನಕ್ಕೆ ಶರಣಾಗುತ್ತಾಳೆ. ದಿನಗಳೆದಂತೆ ಅವಳ ರೂಪ, ಯೌವ್ವನ, ನಡತೆ ಇವುಗಳಿಂದ ಜನರು ಮೇಲಿನ ನಿಂದನೆಗಳನ್ನು ಹೊರಿಸಿದುದು ಅವಳ ಸನ್ನಡತೆ ಹಾಗೂ ಮೌನದಿಂದ ಜನಗಳ ಮನಸ್ಸಿನ ಮೇಲೆ ಬೇರೆಯದೇ ರೀತಿ ಪರಿಣಾಮ ಉಂಟಾಗುವುದನ್ನು ಕಾಣಬಹುದು. ದಿನಗಳೆದಂತೆ ಜನರು ಇವಳನ್ನು ಮಾಯೆ ಅಥವಾ ದೇವತೆ ಎಂಬುದಾಗಿ ಒಪ್ಪಿಕೊಳ್ಳುವ ಹಂತಕ್ಕೆ ಬಂದು ಅವಳಿಗೆ ಗೌರವ ಸ್ಥಾನವನ್ನು ನೀಡಿ ಹರಕೆ, ಕಾಣಿಕೆ ಮುಂತಾದವುಗಳನ್ನು ನೀಡುತ್ತಾ ಇವಳಿಂದ ಈ ಗ್ರಾಮಕ್ಕೆ ಒಳ್ಳೆಯದಾಗುತ್ತಿದೆ ಎಂದು ಇವಳನ್ನು ಪೂಜಿಸುವ ಸ್ಥಿತಿಗೆ ಬರುತ್ತಾರೆ. ಈ ಕತೆಯಲ್ಲಿ ಗಮನಿಸಬೇಕಾದ ಅಂಶವೆಂದರೆ ಹೆಣ್ಣು ತನಗೆ ಇಷ್ಟ ಇರಲಿ ಬಿಡಲಿ ಮದುವೆಯಾದ ಮೇಲೆ ಅಪರಿಚಿತರ ಮನೆಗೆ ಹೋಗಿ ತನ್ನ ಜೀವಮಾನವನ್ನೆಲ್ಲ ಕಳೆಯಬೇಕಾದ ಪರಿಸ್ಥಿತಿ, ಆ ಮನೆಯಲ್ಲಿ ಗಂಡನ ಆಶ್ರಯ ತಪ್ಪಿದಾಗ ಪುನಃ ತೌರಮನೆಗೆ ಹೋಗಬೇಕು ತಂದೆ ತಾಯಿ ಇಲ್ಲದೆ ಇದ್ದಾಗ ಆ ಹೆಣ್ಣು ಎಲ್ಲಿಗೆ ಹೋಗಬೇಕು ಎಂಬ ಅತಂತ್ರ ಪರಿಸ್ಥಿತಿ ಉಂಟಾಗುವುದನ್ನು ಕಾಣಬಹುದು.

ಅವಳು ತನ್ನ ಪ್ರಾಣತ್ಯಾಗ ಮಾಡುವ ಪರಿಸ್ಥಿತಿ ಬಂತು. ಕೊನೆಗೆ ಅವಳ ವ್ಯಕ್ತಿತ್ವದ ಮೇಲೆ ನಡತೆ, ನಡವಳಿಕೆಗಳಿಂದ ಅವಳಿಗೆ ದೇವತೆಯ ಸ್ಥಾನ ದೊರಕುವುದನ್ನು ಇಲ್ಲಿ ಗಮನಿಸಬಹುದು. ಆದರೆ ಇಂತಹ ಪರಿಸ್ಥಿತಿ ಗಂಡಸಿಗೆ ಪ್ರಪಂಚದಲ್ಲಿ ಎಲ್ಲಿಯೂ ಕಾಣಸಿಗುವುದಿಲ್ಲ.

ಬಾನುಮುಷ್ತಾಕರ ಕರಿನಾಗರಗಳು ಕತೆಯಲ್ಲಿ ಬರುವ ಮುತುವಲ್ಲಿ ಸಾಹೇಬರ ಧರ್ಮಪತ್ನಿ ಅಮಿನಳು ಮದುವೆಯಾಗಿ ಹತ್ತು ವರ್ಷಗಳಲ್ಲಿ ಏಳು ಮಕ್ಕಳನ್ನು ಪಡೆದು ಚಿಕ್ಕ ವಯಸ್ಸಿಗೆ ಮುದುಕಿಯಾಗಿ ಕಾಣುವ ಪಪರಿಸ್ಥಿತಿ ಬಂದೊದಗಿದೆ. ಇನ್ನೊಂದು ಮುಖ್ಯ ಅಂಶವೆಂದರೆ ಸರ್ಕಾರದ ಕುಟುಂಬ ಯೋಜನೆಯನ್ನು ಅನುಸರಿಸಬೇಕೆಂಬ ಮನಸ್ಸು ಈ ಮಹಿಳೆಗೆ ಇದ್ದರೂ ಸಹ ಮುಸ್ಲಿಂ ಕಟ್ಟುಪಾಡಿನ ಸಂಪ್ರದಾಯಕ್ಕೆ ಕಟ್ಟುಬಿದ್ದು ಮುತುವಲ್ಲಿ ಈ ವಿಧಾನವನ್ನು ವಿರೋಧಿಸುತ್ತಾನೆ. ಸರ್ಕಾರದ ಯೋಜನೆಯನ್ನೂ ಅಳವಡಿಸಿಕೊಳ್ಳಲು ಇವಳಿಗೆ ಇಷ್ಟವಿದ್ದರೂ ಸಹ ಪರಿಸರ ಅವಳನ್ನು ಸ್ವಂತ ನಿರ್ಧಾರ ತೆಗೆದುಕೊಳ್ಳಲು ಬಿಡುವುದಿಲ್ಲ. ಇಲ್ಲಿ ಮಹಿಳೆಯು ತನ್ನ ಬೇಕುಬೇಡಗಳಿಗೆ ಸ್ವತಂತ್ರವಾಗಿ ನಿರ್ಧಾರ ತೆಗೆದುಕೊಳ್ಳುವ ಅವಕಾಶ ಇಲ್ಲವೇ ಇಲ್ಲ. ಈ ಸಂಪ್ರದಾಯ ಬರುಬರುತ್ತಾ ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಪರಿವರ್ತನೆಗೆ ಒಳಗಾಗಿರುವುದನ್ನು ಕಾಣಬಹುದು. ಶಿಕ್ಷಣದ ಪ್ರಭಾವದಿಂದ ಹೆಚ್ಚಿನ ಜ್ಞಾನದಿಂದ ಇಂತಹ ಬದಲಾವಣೆಗಳು ಆಗಿರುವುದು ಕಟ್ಟುಪಾಡುಗಳನ್ನು ಮೀರಿ ಮುಸ್ಲಿಂ ಮಹಿಳೆಯರು ಮುಂದೆ ಬರುತ್ತಿದ್ದಾರೆ.

ಮುತುವಲ್ಲಿ ಸಾಹೇಬರು ಮನೆಯನ್ನು ಬಿಟ್ಟು ಹೊರಟರೆಂದರೆ ಬೀದಿಯ ಹೆಣ್ಣು ಮಕ್ಕಳು ತಮ್ಮ ತಮ್ಮ ಕೆಲಸವನ್ನು ಬಿಟ್ಟು ಗೌರವ ಸೂಚಿಸಿ ಮನೆಯ ಒಳಗೆ ಹೋಗುತ್ತಿದ್ದರು. ಇದರಲ್ಲಿ ಮುತುವಲ್ಲಿ ಓರೆಗಣ್ಣಿನ ನೋಟ ಬೀರುತ್ತಿದ್ದರು. ಯಾರಾದರೂ ನನಗೆ ಗೌರವ ಸೂಚಿಸುತ್ತಾರೋ ಇಲ್ಲವೋ ಎಂದು, ಆದರೆ ಬರೀ ಸ್ತ್ರೀಯರು ಈ ರೀತಿ ನಡೆದುಕೊಳ್ಳುವುದನ್ನು ನೋಡಿದಾಗ ಮಾತ್ರ ಹೆಣ್ಣಿಗೇ ಏಕೆ ಈ ರೀತಿಯ ಸಂಕಷ್ಟ, ಒಂದು ಜನಾಂಗದ ವ್ಯವಸ್ಥೆ ಹೇಗಿದೆ ಎಂಬುದನ್ನು ಗಮನಿಸಬಹುದು. ಈ ವ್ಯವಸ್ಥೆ ಗಂಡಸರಿಗೆ ಏಕಿಲ್ಲ ಎಂದು ಕೇಳಬಹುದಲ್ಲವೆ.

ಇಲ್ಲಿ ಅಶ್ರಫ್‌ಳ ಗಂಡ ಆಟೋರಿಕ್ಷಾ ಓಡಿಸಿಕೊಂಡು ದುಡಿಯುತ್ತಿದ್ದರೂ ಸಹ ಹೆಂಡತಿ ಮಕ್ಕಳನ್ನು ನಿರ್ಲಕ್ಷಿಸಿ ಅಶ್ರಫ್‌ಳನ್ನು ಕುರಿತು ಹೆಣ್ಣು ಮಕ್ಕಳನ್ನು ನಾಯಿ ಹಡದಂಗೆ ಹಡೆದಿದ್ದೀಯಾ ಅಲೆಯುತ್ತಿದ್ದಿಯಾ ಎಂದು ಮೂದಲಿಸುತ್ತಾನೆ. ಅದಕ್ಕೆ ಕಾರಣ ಈ ಗಂಡು ಎಂಬುದನ್ನು ಮರೆತಿರಬಹುದು. ಇವನಿಗೆ ಗಂಡು ಮಗು ಇಲ್ಲ ಎನ್ನುವ ಒಂದೇ ಕಾರಣದಿಂದ ಇವಳನ್ನು ತ್ಯಜಿಸಿ ಬೇರೆ ಹೆಣ್ಣನ್ನು ಮದುವೆಯಾಗುವ ಪರಿಸ್ಥಿತಿ ಮುಟ್ಟಿದೆ. ಆದರೆ ಇಂತಹ ಸಂಕಷ್ಟ ಸ್ಥಿತಿಗೆ ಅಶ್ರಫ್ ಬಂದಿದ್ದಾಳೆ. ಇವಳು ನ್ಯಾಯದ ಮೊರೆ ಹೋದರೂ ಸಹ ಮುತುವಲ್ಲಿ ಇವಳ ಪರವಾಗಿ ನ್ಯಾಯ ತೀರ್ಮಾನ ಹೇಳಲು ಹಿಂಜರಿಯುತ್ತಾನೆ.

ಮೇಲೆ ಹೇಳಿದಂತೆ ಬೀದಿಯ ಹೆಣ್ಣುಮಕ್ಕಳು ಮುತುವಲ್ಲಿಯ ನ್ಯಾಯದ ಬಗ್ಗೆ ತಿರಸ್ಕಾರ ಉಂಟಾಗಿ ಅವನಿಗೆ ಗೌರವ ಕೊಡದೆ ಇರುವುದು ಕಂಡುಬರುತ್ತದೆ. ಒಟ್ಟಾರೆ ಈ ಕತೆಯಲ್ಲಿ ಹೆಣ್ಣು ಸ್ವತಂತ್ರವಾಗಿ ಬಾಳಲು ಎಷ್ಟು ಕಷ್ಟ ಎಂಬುದನ್ನು ಮತ್ತು ಸಮಾಜದಲ್ಲಿ ಹೆಂಗಸರ ಬಗ್ಗೆ ತಾಳಿರುವ ನಿಲುವು ಎಷ್ಟು ಕೀಳುಮಟ್ಟದ್ದಾಗಿ ಇರುತ್ತದೆ ಎಂಬುದನ್ನು ಈ ಕತೆ ಸುಂದರವಾಗಿ ನಿರೂಪಿಸುತ್ತದೆ.

ಸ್ವಾತಂತ್ರ್ಯಾನಂತರ ಬರೆದ ಕತೆಗಾರರಲ್ಲಿ ಪಿ.ಲಂಕೇಶ್‌ರವರು ಬರೆದ ಕತೆಗಳಲ್ಲಿ ಗ್ರಾಮೀಣ ಪ್ರದೇಶದಿಂದ ಬಂದ ದೇವಿ ಕತೆಯನ್ನು ಅವಲೋಕಿಸಿದಾಗ ಈ ಕತೆಯಲ್ಲಿ ಬರುವ ದೇವಿ ಪಾತ್ರವು ಮಹಿಳೆಯು ತನ್ನ ಸ್ವಾತಂತ್ರ್ಯವನ್ನು ಯಾವ ರೀತಿ ಉಪಯೋಗಿಸಿಕೊಳ್ಳಬಹುದು ಅಥವಾ ದುರುಪಯೋಗಪಡಿಸಿಕೊಳ್ಳಬಹುದು ಎಂಬ ವಿಷಯವನ್ನು ಕೇವಲ ಐದನೆಯ ತರಗತಿ ವಿದ್ಯಾಭ್ಯಾಸ ಮಾಡಿದ್ದ ದೇವಿಯು ತನ್ನ ಮಗಳು ಅಳಿಯರ ಜೀವನದ ಪ್ರಥಮ ದಿನದಂದು ತನ್ನ ಕೋಣೆಯಲ್ಲಿ ತನ್ನ ದಾಂಪತ್ಯ ಜೀವನದ ಮೊದಲ ದಿನದಿಂದ ಅವಳು ಅಜ್ಜಿ ಆಗುವ ಕನಸಿನೊಂದಿಗೆ ಅವಳು ಮನಸ್ಸಿನಲ್ಲಿ ತಂದುಕೊಳ್ಳುವ ಚಿತ್ರಣವನ್ನು ಕತೆಯನ್ನಾಗಿಸಿದ ಲಂಕೇಶ್‌ರವರ ಪ್ರಯತ್ನ ತುಂಬಾ ಮೆಚ್ಚತಕ್ಕದ್ದು.

ದೇವಿಯ ಗಂಡ ಪದವೀದರನಾದ ಇವನು ಸರ್ಕಾರಿ ನೌಕರನಾಗಿ ಪ್ರಥಮ ದಿನದಂದು ಕೆಲಸಕ್ಕೆ ಹಾಜರಾಗಲು ಹೋದಾಗ ಲಂಚದ ವಾತಾವರಣವನ್ನು ಕಂಡು ವಿಚಲಿತನಾಗಿ ಕೆಲಸಕ್ಕೆ ಹೋಗಬಾರದೆಂಬ ಖಿನ್ನತೆಯಿಂದ ಮನೆಯಲ್ಲೇ ಕುಳಿತುಕೊಂಡಿರುವುದನ್ನು ಗಮನಿಸಿ ದೇವಿಯು ತನ್ನ ಗಂಡನಿಗೆ ತನ್ನದೇ ಆದ ಮಾತುಗಳಿಂದ ಗಂಡನ ಮನಸ್ಸು ಪರಿವರ್ತನೆಯಾಗುವಂತೆ ಮಾಡುತ್ತಾಳೆ. ಆನಂತರ ಬೇರೆ ಬೇರೆ ಬಡ್ತಿ ಸಿಕ್ಕಿ ಊರಿಗೆ ವರ್ಗವಾದ ಗಂಡನ ಜೊತೆಗೂಡಿ ಮೈಸೂರು ಜಿಲ್ಲೆಗೆ ಹೋಗುತ್ತಾರೆ. ಅಲ್ಲಿಗೆ ಹೋದಾಗ ಚಲನಚಿತ್ರ ತಂಡದ ನಿರ್ದೇಶಕ ನಾಯ್ಡು ಇವಳಿಗೆ ಪರಿಚಯವಾಗುತ್ತಾನೆ. ಆಗ ತುಂಬು ಯೌವ್ವನೆಯಾದ ದೇವಿಯ ಆಕರ್ಷಣೆ, ಮೈಮಾಟ, ಉತ್ತಮ ನಡವಳಿಕೆ, ಚೆಲ್ಲಾಟ, ಬುದ್ಧಿವಂತಿಕೆಗಳನ್ನು ಕಂಡ ಆ ನಿರ್ದೇಶಕನಿಗೆ ಇವಳ ಮೇಲೆ ಅಪಾರ ಪ್ರೀತಿ ಉಂಟಾಗುತ್ತದೆ. ಈ ವಿಷಯವನ್ನು ದೇವಿ ಚೆನ್ನಾಗಿ ಅರಿತವಳಾಗಿರುತ್ತಾಳೆ. ಅವನ ಕೆಲಸಕಾರ್ಯಗಳಿಗೂ ಪ್ರಿತ್ಯಾಧಾರಗಳಿಂದ ಪ್ರೋತ್ಸಾಹ ಕೊಡುತ್ತಾಳೆಯೇ ಹೊರತು ತನ್ನನ್ನು ಒಪ್ಪಿಸಿಕೊಳ್ಳುವುದಿಲ್ಲ ಎಂಬುದನ್ನು ಕಾಣಬಹುದು. ನಾಯ್ಡುವಿನ ಎಲ್ಲಾ ಚಟುವಟಿಕೆಗಳನ್ನು ತನ್ನ ಗಂಡನ ಮುಂದೆ ಅರಹುತ್ತಾಳೆ. ಈ ವಿಷಯವನ್ನು ತಿಳಿದು ತನ್ನ ಗಂಡ ಯಾವುದೇ ಸಂದೇಹವನ್ನು ತೋರಿಸದೆ ನಕ್ಕು ಸುಮ್ಮನಾಗುತ್ತಾನೆ. ಇದರಿಂದ ಹೆಣ್ಣು ಯಾವ ಸಂದರ್ಭದಲ್ಲಿಯೂ ಸಹ ತನ್ನ ಸಹನೆ ಕಳೆದುಕೊಳ್ಳದೆ ತನ್ನ ಸ್ಥಿತಿಗತಿಯನ್ನು ಉತ್ತಮ ಪಡಿಸಿಕೊಳ್ಳಬಹುದಾದ ಒಳ್ಳೆಯ ಸನ್ನಿವೇಶವನ್ನು ಕಾಣಬಹುದು. ಈ ಎಲ್ಲಾ ವಿಷಯವನ್ನು ಗಮನಿಸಿದಾಗ ಈ ಕತೆಯಲ್ಲಿ ದೇವಿಯ ಗಂಡ ಚಂದ್ರಪ್ಪ ಗುಮಾಸ್ತನಾಗಿ ಕಲಸಕ್ಕೆ ಸೇರಿ ತಹಸೀಲ್ದಾರ, ಅಸಿಸ್ಟೆಂಟ್ ಕಮಿಶನರ್ ಆಗಿ ಒಳ್ಳೆಯ ಹೆಸರು ಮಾಡಿದ ಅಧಿಕಾರಿಯಾಗುವುದಕ್ಕೆ ಸ್ಫೂರ್ತಿ ತುಂಬಿದ ದೇವಿಯ ಪ್ರಯತ್ನ ಮೆಚ್ಚತಕ್ಕದ್ದೆ. ಒಟ್ಟಾರೆ ಈ ಕತೆಯಲ್ಲಿ ದೇವಿ ಎಂಬ ಮಹಿಳೆಯ ಗ್ರಾಮೀಣ ಬದುಕು, ನಂತರ ಅಧಿಕಾರಿಯ ಹೆಂಡತಿಯಾಗಿ ಸಂಸಾರದ ಬದುಕು ಮತ್ತು ಚಿತ್ರ ನಿರ್ದೇಶಕನ ಸಹಪಾಠಿಯಾಗಿ, ಗೆಳತಿಯಾಗಿ, ತನ್ನ ಮಗಳಿಗೆ ಒಳ್ಳೆಯ ತಾಯಿಯಾಗಿ, ಜೀವನವನ್ನು ನಿರ್ವಹಿಸಿ ನಿಭಾಯಿಸಿದ ರೀತಿಯನ್ನು ಭಾರತದ ಸ್ವಾತಂತ್ರ್ಯಾನಂತರ ಗ್ರಾಮೀಣ ಮಹಿಳೆಯ ಬದುಕಿನ ಸ್ಥಿತಿಗತಿಯನ್ನು ಅರ್ಥವತ್ತಾಗಿ ವಿವರಿಸಿರುವುದು ಈ ಕತೆಯಲ್ಲಿ ಕಂಡುಬರುತ್ತದೆ.

ಬೆಸಗರಹಳ್ಳಿ ರಾಮಣ್ಣನವರ ಕತೆಗಳಲ್ಲಿ ಬೇಲ ಕತೆಯಲ್ಲಿ ಕತೆಗಾರರ ತಂದೆ, ಬಿಹಾರದಲ್ಲಿ ಸಿಡುಬು ರೋಗ ಮತ್ತು ಜಯಪ್ರಕಾಶ ನಾರಾಯಣರ ಚಳುವಳಿ ಪ್ರಭಾವ ಹೆಚ್ಚಾಗಿದ್ದ ಕಾರಣದಿಂದ ಹೆಚ್ಚು ಸಂಬಳ

ಬರಬಹುದೆಂಬ ಆಸೆ ಇದ್ದರೂ ಸಹ ಅಲ್ಲಿ ಹೋಗಬಾರದೆಂದು ನಿರಾಕರಿಸುತ್ತಾರೆ. ಅಂತಹ ಸಂದರ್ಭದಲ್ಲಿ ಬೆಸಗರಹಳ್ಳಿ ರಾಮಣ್ಣ ತಮ್ಮ ತಾಯಿಯ ಮಾತನ್ನೇ ಅವಲಂಬಿಸುತ್ತಾರೆ. ಆಗ ತಾಯಿಯು (ಬೆಸಗರಹಳ್ಳಿ ರಾಮಣ್ಣ, ಬೇಲ ಕತೆ ಪು. ೯೭, ೯೮) ಹೋಗು ದೇಶದ ಕೆಲಸ ಮಾಡೊ ನಿನ್ನಾಸೆಗೆ ನಾನ್ಯಾಕೆ ಅಡ್ಡಬರಲಿ, ಹುಟ್ಟಿದ ಮೇಲೆ ಮನುಷ್ಯ ಸಾಯಲೇಬೇಕು. ದೇಶದ ಕೆಲಸ ಮಾಡ್ತ ಸತ್ತರೆ ಅದೇ ಸ್ವರ್ಗ ಅಲ್ಲವೆ

ಬಿಹಾರಕ್ಕೆ ಹೋಗಲು ತಂದೆಯನ್ನು ಕೇಳಿದಾಗ ರಾಮಣ್ಣ ಅವರ ಹೆಂಡತಿ ಬಿಹಾರಕ್ಕೆ ಹೋಗದಿದ್ದರೆ ಏನು? ಹೋಗುವುದರಿಂದ ಸಿಗುವ ಕಿರೀಟವಾದರೂ ಏನು? ನಾನು ಅಂತಹ ಭಯ ಏನೂ ಇಲ್ಲ ಎಂದಾಗ, ನನ್ನ ದಂತೆ ನೀನು ರಾಜಕೀಯ ಮಾಡೋದು ಜಾಸ್ತಿ ಆ ಜಯಪ್ರಕಾಶ ನಾರಾಯಣರ ಚಳುವಳಿ ಗಿಳುವಳಿ ಅಂತ ಅಲ್ಲಿ ಸೇರ್‍ಕೊಂಡು ಆಗಬಾರದ್ದು ಆದರೆ ನಮ್ಮ ಗತಿ ಏನಯ್ಯ ನನ್ನ ಮೂರು ಮೊಮ್ಮಕ್ಕಳ ಗತಿ ಏನಯ್ಯ ನೀನಿನ್ನು ಹುಡು ಹುಡುಗು ಆಡ್ದಂಗೆ ಆಡತಿ ಎಂದು ತಮ್ಮ ಅಸಮ್ಮತಿಯನ್ನು ಸ್ಪಷ್ಟವಾಗಿ ವ್ಯಕ್ತಪಡಿಸಿದರು.

ನಾನು ಜಗ್ಗಲಿಲ್ಲ. ಸಿಡುಬನ್ನು ನಿರ್ಮೂಲ ಮಾಡಲು ಪ್ರಪಂಚದ ಮೂಲೆ ಮೂಲೆಗಳಿಂದ ವೈದ್ಯರು ಹೆಣ್ಣು, ಗಂಡೆನ್ನದೆ, ಹರೆಯ ಮುಪ್ಪೆನ್ನದೆ ಬಂದು ಸೇವೆ ಸಲ್ಲಿಸುತ್ತಿರುವಾಗ ಈ ದೇಶದಲ್ಲಿ ಹುಟ್ಟಿ, ನಾವು ಕೆಲಸ ಮಾಡದಿದ್ದರೆ ನಮ್ಮನ್ನು ಹೆಣ್ಣಿಗರು ಎಂದು ಅವರು ಹಂಗಿಸುವುದಿಲ್ಲವೆ ಜೊತೆಗೆ, ಹೊರದೇಶದವರನ್ನು ಸುಡದ ಬಿಹಾರ ಜನತಾ ಚಳುವಳಿಗಾರರು ನಮ್ಮನ್ನೇ ಹಿಡಿದು ಸುಡಲು ಬಂದಾರೆ ಎಂದು ನಮ್ಮ ವಾದ ವಿವಾದವನ್ನು ಮೌನವಾಗಿ ಕೇಳುತ್ತ ಕುಳಿತಿದ್ದ ನನ್ನ ತಾಯಿಯನ್ನು ಕೇಳಿದೆ ನೀ ಏನಂತಿ ಅವ್ವ.

ನನ್ನ ತಾಯಿ ಮಾತಾಡಲಿಲ್ಲ. ಆದರೆ ಅವಳ ಮುಖದಲ್ಲಿ ಯಾವ ಭಯದ ಚಿಹ್ನೆಯೂ ಇರಲಿಲ್ಲ. ಬಹಳ ಗಂಭೀರವಾಗಿ ಕುಳಿತಿದ್ದಳು. ಇದನ್ನು ನೋಡಿದ ನನ್ನ ತಂದೆ ವಾದವನ್ನು ಮುಂದುವರಿಸಿ ನನಗೇನಯ್ಯ ನೀನುಂಟು ನಿನ್ನನ್ನು ಒಂಭತ್ತು ತಿಂಗಳು ಹೊತ್ತು ಹೆತ್ತವಳುಂಟು. ಇವಳು ಆಗಲಿ ಎಂದರೆ ಬಿಹಾರಕ್ಕಾದರೂ ಹೋಗು ಕಾವಿ ತೊಟ್ಟುಕೊಂಡು ಕಾಶಿಗಾದರೂ ಹೋಗು ಎಂದು ಮೌನತಾಳಿದ. ತಾಯಿಯ ಕಡೆ ನೋಡಿದೆ. ಮುಖ ಇನ್ನಷ್ಟು ಗಂಭೀರವಾಗಿತ್ತು. ಹೋಗಲೆನವ್ವ ಎಂದೆ.

ಬೆಸಗರಹಳ್ಳಿ ರಾಮಣ್ಣನವರು ವಿಶೇಷ ಕರ್ತವ್ಯದ ಮೇಲೆ ಬಿಹಾರಕ್ಕೆ ಹೋದಾಗ ಅವರಿಗೆ ನಿಯೋಜಿಸಿದ್ದ ಬಿಸಾಲ್ ಎಂಬ ಗ್ರಾಮಕ್ಕೆ ಕರ್ತವ್ಯದ ಮೇಲೆ ಬೇಟಿ ನೀಡಿದಾಗ ವಾಹನ ಚಾಲಕನಾದ ಗೋಪಾಲ್ ಪ್ರಸಾದ್‌ರಿಂದ ಆ ಊರಿನ ಬಹುಪಾಲು ಮಹಿಳೆಯರು ನರ್ತಕಿಯರು ಎಂಬ ವಿಷಯವನ್ನು ತಿಳಿದು ತುಂಬಾ ಆಶ್ಚರ್ಯವಾಯಿತು. ಆನಂತರ ಬಹು ಪ್ರಖ್ಯಾತವಾಗಿದ್ದ ಸುಂದರ ಯುವತಿಯಾದ ಬೇಲಳ ಆಹ್ವಾನ ಬಂದಾಗಲಂತೂ ಲೇಖಕರು ತಮ್ಮ ಕಿವಿಯನ್ನು ತಾವೇ ನಂಬದಾದರು. ಕುತೂಹಲದಿಂದ ಆಹ್ವಾನಕ್ಕೆ ಮನ್ನಣೆಕೊಟ್ಟು ಆ ಮನೆಗೆ ಭೇಟಿ ಕೊಟ್ಟಾಗ ಅವರಿಂದ ಪಡೆದ ಆತಿಥ್ಯದಿಂದ ಸಂತೋಷಪಟ್ಟರು. ಇನ್ನು ಹೊರಡೋಣ ಎಂದು ಹೊರಟು ನಿಂತಾಗ ಬೇಲ ಇವರುಗಳನ್ನು ಉದ್ದೇಶಿಸಿ ಅದರಲ್ಲೂ ಡಾಕ್ಟರನ್ನು ಉದ್ದೇಶಿಸಿ ಇದೇನು ಇಷ್ಟು ಬೇಗ ಹೊರಟಿರಿ ಇನ್ನು ಸ್ವಲ್ಪ ಹೊತ್ತು ಇದ್ದು ವಿಶ್ರಾಂತಿ ತೆಗೆದುಕೊಂಡು ಹೋಗಬಾರದೆ, ನೀವೇನು ನಮಗೆ ಅಪರಿಚಿತರೆ ಡಾಕ್ಟರ್ ಸಾಹೇಬರು ಪರದೇಶದವರೆ ಇವರು ಕರ್ನಾಟಕದವರಂತೆ ಬದಲಾಗಿ

ಜೊತೆಯಲ್ಲಿ ಅವರು ಭಾಷೆಯಲ್ಲಿ ಕತೆಗಾರರಂತೆ ಎಂಬುದನ್ನು ಕೇಳಿ, ಆಶ್ಚರ್ಯದಿಂದ ಲೇಖಕರು ಬೇಲಳನ್ನು ನೋಡುತ್ತಾರೆ.

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಬೇಲಳು ನರ್ತಕಿಯಾದರೂ ಸೌಂದರ್ಯವನ್ನು ಕಾಪಾಡಿಕೊಂಡು ಬಂದು ಒಳ್ಳೆಯ ಗೌರವವನ್ನು ಸಂಪಾದಿಸಿರುತ್ತಾಳೆ. ಇನ್ನೂ ಒಂದು ಮುಖ್ಯ ಅಂಶವನ್ನು ಹೇಳಬಯಸುವುದಾದರೆ ಬೇಲಳ ಸ್ಥಿತಿಗತಿ ಮತ್ತು ಅವಳ ಅಸಾಧಾರಣ ಸಾಹಿತ್ಯಕ ಚಿಂತನೆಯನ್ನು ನಾವು ಕಾಣಬಹುದು. ಯಾಕೆಂದರೆ ತಲತಲಾಂತರದಿಂದ ಒಂದು ಮೌಢ್ಯ ಸಂಪ್ರದಾಯದ ಜನಾಂಗದಲ್ಲಿ ಹುಟ್ಟಿದ ಬೇಲಳ ಸಾಹಿತ್ಯ ಹಾಗೂ ಸಾಂಸ್ಕೃತಿಕ ದಾಹವನ್ನು ಕಾಣಬಹುದಾಗಿದೆ. ಕರ್ನಾಟಕದ ಸಾಹಿತಿಗಳಾದ ರಾಮಣ್ಣನವರನ್ನು ಉದ್ದೇಶಿಸಿ ನಿಮ್ಮ ಸಾಹಿತ್ಯವನ್ನು ಓದಿ ಹೇಳಿ ಎಂದಾಗ, ಇವರು ಸಾಹಿತ್ಯವನ್ನು ಸ್ವಲ್ಪ ವಿವರಿಸಿದಾಗ, ಪಕ್ಕದಲ್ಲಿ ಇದ್ದ ಮಿಶ್ರಾರವರು ನಿಮ್ಮ ಸಾಹಿತ್ಯ ಸಮೃದ್ಧವಾಗಿದೆ ಎಂದು ಹೇಳಿದ ನಂತರ ನಿಮ್ಮ ಸಾಹಿತ್ಯ ಎಂದು ಯಾಕೆ ಹೇಳುತ್ತೀರಿ, ಇದು ಭಾರತಮಾತೆಯ ಸಾಹಿತ್ಯ ತುಂಬಾ ಅಮೋಘವಾದದ್ದು ಎಂಬುದಾಗಿ ಬೇಲ ನುಡಿಯುತ್ತಾಳೆ. ಬೇಲಳು ನರ್ತಕಿ ಆದರೂ ಸಹ ನರ್ತಕಿಯ ವಂಶಸ್ಥಳಾದರೂ ಸಹ ಕೇವಲ ಇಪ್ಪತ್ತೈದರ ಹರೆಯದ ಯುವತಿಯಾದರೂ ಸಹ ಕಲೆ, ಜ್ಞಾನ, ಸಾಹಿತ್ಯಾಭಿಮಾನ, ದೇಶಾಭಿಮಾನ ಇವುಗಳ ಬಗ್ಗೆ ಇರುವ ಅಭಿಮಾನವನ್ನು, ಅತ್ಯಂತ ಉನ್ನತ ಮಟ್ಟದಲ್ಲಿ ಬೇಲಳ, ವಿಚಾರಧಾರೆಯಿಂದ ತಿಳಿದು ಬರುತ್ತದೆ. ಇವಳ ಸೇವಾ ಮನೋಭಾವನೆ ಮತ್ತು ತಮ್ಮ ಗ್ರಾಮದ ಜನರ ಬಗ್ಗೆ ಕಳಕಳಿ ಇರುವುದು ಸ್ತ್ರೀಯರ ಗುಣಮಟ್ಟವನ್ನು ಅಳೆಯುವುದಕ್ಕೆ ಇದೂ ಒಂದು ಉದಾಹರಣೆ.

ಇಲ್ಲಿ ಬೇಲಳ ಸುಸಂಸ್ಕೃತ ಮನಸ್ಸನ್ನು ಹೇಳಲೇಬೇಕು. ಇಲ್ಲಿ ಲೇಖಕರು ಬೇಲಳನ್ನು ಅನುಭವಿಸಿ ಮರಳಿ ಹಿಂತಿರುಗಿ ತಮ್ಮ ಸ್ವರಾಜ್ಯಕ್ಕೆ ಹೊರಟಾಗ ಬೇಲಳು ಹೋಗಿಬನ್ನಿ ಎಂದು ಬೀಳ್ಕೊಡುಗೆಯಾಗಿ ಒಂದು ಕಾದಂಬರಿ ಮತ್ತು ನಿಮ್ಮ ಹೆಂಡತಿಗೆ ಇದನ್ನು ಕೊಡಿ ಎಂದು ಕುಂಕುಮದ ಭರಣಿಯೊಂದನ್ನು ಕೊಟ್ಟು ಇಲ್ಲಿ ನಡೆದ ಸಂಗತಿಗಳನ್ನು ಅಪ್ಪಿತಪ್ಪಿಯೂ ತಮ್ಮ ಹೆಂಡತಿಗೆ ಹೇಳಬಾರದೆಂಬ ವಚನವನ್ನು ತೆಗೆದುಕೊಂಡು ಬೀಳ್ಕೊಡುತ್ತಾಳೆ. ಇಲ್ಲಿ ಮುಖ್ಯವಾಗಿ ಗಮನಿಸಬಹುದಾದರೆ ಬೇಲಳು ತನ್ನನ್ನು ತಾನು ಅರ್ಪಿಸಿಕೊಂಡು ಪರೋಕ್ಷವಾಗಿ ಇನ್ನೊಂದು ಹೆಣ್ಣಿನ ಬಗ್ಗೆ ಹಾಗೂ ಸ್ತ್ರೀಯ ಸ್ಥಿತಿಗತಿಗಳನ್ನು ಸಾಹಿತ್ಯಕವಾಗಿ ಪ್ರಚಾರ ಮಾಡಲು ಪ್ರೇರೇಪಿಸುವುದನ್ನು ಗುರುತಿಸಬಹುದು.

ಶ್ರೀಕೃಷ್ಣ ಆಲನಹಳ್ಳಿ ಅವರ ಸಂಬಂಧ ಕತೆಯಲ್ಲಿ ಬರುವ ಲಲಿತಳ ಬಗ್ಗೆ ಒಳಹೊಕ್ಕು ನೋಡಿದಾಗ ಉತ್ತಮ ಜಾತಿಯವಳಾದ ಇವಳು ತಮ್ಮ ತಂದೆಯ ಮನೆಯಲ್ಲಿ ಬ್ರಾಹ್ಮಣರೆಂಬ ಗೌರವವನ್ನು ನೀಡುತ್ತಿದ್ದ ಸ್ಥಿತಿಯಲ್ಲಿ ತನ್ನ ಶೂದ್ರ ಸಹಪಾಠಿ ಜೊತೆಯಲ್ಲಿ ಶಾಲಾ ದಿನಗಳನ್ನು ಕಳೆದ ದಿನಗಳಿಗೂ, ಹಾಗೂ ತನ್ನ ಜಾತಿಯವನ ಸಂಗಡ ಮದುವೆಯಾದ ನಂತರ, ಭೇಟಿಯಾದ ದಿನಗಳಲ್ಲಿ ಸುಮಾರು ಹತ್ತು ಇಪ್ಪತ್ತು ವರ್ಷಗಳ ಅಂತರದಲ್ಲಿ ಆದ ಲಲಿತೆಯ ಸ್ಥಿತಿ ಮತ್ತು ಗತಿಯನ್ನು ಇಲ್ಲಿ ಅವಲೋಕಿಸಬಹುದಾಗಿದೆ. ಲಲಿತೆಯ ಗಂಡ ತನ್ನ ದಾಂಪತ್ಯ ಸುಖವನ್ನು ಅನುಭವಿಸುವುದಕ್ಕೆ ಮಾತ್ರ ಅವಳನ್ನು ಉಪಯೋಗಿಸಿಕೊಂಡು, ಅವಳ ಮತ್ತು ಅವಳ ಮಕ್ಕಳ ಕಷ್ಟ ಸುಖಗಳ ಬಗ್ಗೆ ನಿರ್ದಾಕ್ಷಿಣ್ಯವಾಗಿ ವರ್ತಿಸಿ, ಅವಳ ಮೇಲೆ ಕೈಮಾಡಿದ್ದೂ ಸಾಲದೆ

ಅವಳ ಮಗುವಿನ ಸಾವಿಗೂ ಕಾರಣನಾಗುತ್ತಾನೆ. ಇಂತಹ ಪರಿಸ್ಥಿತಿಯಲ್ಲಿ ತನ್ನ ಬಾಲ್ಯ ಸ್ನೇಹಿತನಿಂದ ದೊರೆತ ಸಹಾಯವನ್ನು ಸ್ವೀಕರಿಸಲು ಸ್ವತಂತ್ರಳಲ್ಲದ ಅಸಹಾಯಕ ಸ್ಥಿತಿಯನ್ನು ಮುಟ್ಟಿ ತನ್ನ ಸ್ಥಿತಿ ಮತ್ತು ಗತಿಯನ್ನು ಅಳೆದುಕೊಳ್ಳುತ್ತ ಜೀವನ ನಡೆಸುವುದನ್ನು ಗಮನಿಸಬಹುದು.

ನಾಗವೇಣಿ ಎಚ್.ರವರ ನಾಕನೆಯ ನೀರು ಕತೆಯಲ್ಲಿನ ಬೆಲ್ಲ ಎಂಬ ಉಪಕತೆಯಲ್ಲಿ ಚಿನ್ನಮ್ಮ ತನ್ನ ಮುನಿಸಿಕೊಂಡಿದ್ದ ಗಂಡನೊಂದಿಗೆ ಪ್ರತಿಭಟಿಸುವ ರೀತಿಯಲ್ಲಿ ಗಂಡ ಅಪ್ಪಣ್ಣನ ಸ್ನೇಹಿತ ಮನೆಗೆ ತಂದು ಇಟ್ಟಿದ್ದ ಬೆಲ್ಲದ ಗಂಟನ್ನು ಉಪಯೋಗಿಸಿಕೊಂಡು ಅವನನ್ನು ತನ್ನ ದಾರಿಗೆ ತಂದುಕೊಳ್ಳುತ್ತಾಳೆ ಎಂಬುದನ್ನು ಇಲ್ಲಿ ಗಮನಿಸಬಹುದು. ಹೆಂಗಸರು ಗಂಡನ ಮೇಲೆ ಹೇಗೆ ದಬ್ಬಾಳಿಕೆಮಾಡುತ್ತಾರೆ ಎಂಬ ಉದಾಹರಣೆಗಳು ಸಿಗುತ್ತವೆ. ಕೆಲವು ಹೆಂಗಸರು ರೂಪ, ನಟನೆ, ವಯ್ಯಾರಗಳಿದ ಗಂಡಂದಿರನ್ನು ನಿಯಂತ್ರಣದಲ್ಲಿಟ್ಟುಕೊಂಡು ತಮ್ಮ ಆಗು ಹೋಗುಗಳನ್ನು ಮತ್ತು ತಮ್ಮ ಸ್ಥಿತಿಯನ್ನು ಉತ್ತಮಪಡಿಸಿಕೊಳ್ಳುವುದರಿಂದ ಒಂದು ಗತಿಯನ್ನು ಕಾಣುತ್ತಾರೆ ಎಂಬುದನ್ನು ಈ ಒಂದು ಕತೆಯಲ್ಲಿ ಕಾಣಬಹುದು.

ಸ್ವಾತಂತ್ರ್ಯಾನಂತರದ ಭಾರತದಲ್ಲಿ ಸ್ತ್ರೀಯರ ಸ್ಥಿತಿಗತಿಗಳು ಎಂಬ ವಿಷಯದ ಬಗ್ಗೆ ಈ ಮೇಲಿನ ಎಲ್ಲ ಕತೆಗಾರರ ಕತೆಗಳನ್ನು ಪರಾಮರ್ಶಿಸಿ ಆಯಾ ಅಡಿಟಿಪ್ಪಣಿಗಳಿಗೆ ಸಂಬಂಧಿಸಿದಂತೆ ಹೆಣ್ಣಿನ ಸ್ಥಿತಿಗತಿಗಳ ಬಗ್ಗೆ ಕತೆಗಾರರು ತಮ್ಮ ಕತೆಗಳಲ್ಲಿ ನಮೂದಿಸಿರುವ ವಿಷಯಗಳ ಮೂಲಕ ಅಧ್ಯಯನಕ್ಕೆ ಸಂಬಂಧಿಸಿದಂತೆ ನನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದೇನೆ. ಮುಂದುವರೆದು ಭಾನು ಮುಷ್ತಾಕರ ಬೆಂಕಿಮಳೆ, ಕಾಳೇಗೌಡ ನಾಗವಾರರ ಮಾಯೆ, ಭಾನುಮುಷ್ತಾಕರ ಕರಿನಾಗರಗಳು, ಪಿ.ಲಂಕೇಶ್‌ರವರ ದೇವಿ, ಬೆಸಗರಹಳ್ಳಿ ರಾಮಣ್ಣನವರ ಬೇಲ, ಶ್ರೀಕೃಷ್ಣ ಆಲನಹಳ್ಳಿಯವರ ಸಂಬಂಧ, ನಾಗವೇಣಿ ಎಚ್.ರವರ ಬೆಲ್ಲ ಇವೆಲ್ಲವುಗಳನ್ನು ಅಭ್ಯಸಿಸಿ ನೋಡಿದಾಗ ಪ್ರತಿಯೊಂದು ಕತೆಯಲ್ಲಿಯೂ ಮೇಲ್ನೋಟಕ್ಕೆ ಹೆಣ್ಣು ಪ್ರಾಧಾನ್ಯತೆಯನ್ನು ಹೊಂದಿದ್ದರೂ ಸಹ ಮಹಿಳೆ ಸ್ಥಿತಿಗತಿಗಳಲ್ಲಿ ಹೆಚ್ಚು ಪಾಲು ಶೋಷಣೆ, ಅಸಹಾಯಕತೆ, ಬಡತನ, ಜಾತಿವ್ಯವಸ್ಥೆ, ವಿದ್ಯಾಭ್ಯಾಸ, ಆರೋಗ್ಯ, ಆರ್ಥಿಕತೆ, ಸಾಮಾಜಿಕತೆ ಇವುಗಳ ಬಲ ಹೆಣ್ಣಿಗೆ ಇಲ್ಲದೆ ಇರುವುದನ್ನು ಅಥವಾ ತಲುಪದೆ ಇರುವುದನ್ನು ನಾವು ನಗರ ಮತ್ತು ಗ್ರಾಮೀಣ ಪ್ರದೇಶ ಎರಡರಲ್ಲೂ ಕಾಣಬಹುದು.

ಹೆಣ್ಣಿನ ಸ್ಥಿತಿಗತಿಗಳನ್ನು ಒಂದೇ ನಾಣ್ಯದ ಎರಡು ಮುಖಗಳನ್ನಾಗಿ ನೋಡಬಹುದು. ಮೇಲೆ ಹೇಳಿದ ಎಲ್ಲಾ ವಿಷಯಗಳು ನಾಣ್ಯದ ಒಂದು ಮುಖವಾದರೆ ಮುಂದೆ ಹೆಸರಿಸಬಹುದಾದ ವಿಷಯಗಳಲ್ಲಿ ನಾಣ್ಯದ ಇನ್ನೊಂದು ಮುಖವನ್ನು ಕಾಣಬಹುದು. ಉದಾ ಕೆಲವು ಹೆಣ್ಣು ಮಕ್ಕಳು ತನ್ನ ಗಂಡನ ಮನೆಗೆ ಬಂದಾಗ ಅವಳು ತನ್ನ ಗಂಡನ ಬೇಕು ಬೇಡಗಳನ್ನು ಪೂರೈಸುವುದರ ಜೊತೆಗೆ ಮನೆಯ ಮತ್ತು ಗಂಡನ ವ್ಯವಸ್ಥೆಯನ್ನು ತನ್ನ ಹತೋಟಿಗೆ ತೆಗೆದುಕೊಳ್ಳಲು ಪ್ರಯತ್ನಿಸುವುದನ್ನು ಕಾಣಬಹುದು. ಮತ್ತೆ ಕೆಲವು ಸಂಸಾರಗಳಲ್ಲಿ ಈಗಾಗಲೆ ಹತೋಟಿಯನ್ನು ಸಾಧಿಸಿರುವುದು ಮಕ್ಕಳನ್ನು ಬೆಳೆಸುವ, ಶಿಕ್ಷಿಸುವ, ವಿದ್ಯಾಭ್ಯಾಸ ಕೊಡುವ, ಸಹನೆ, ದಯೆ, ಕರುಣೆ ಇವೆಲ್ಲವುಗಳನ್ನು ಹೊರುವ ಅಮಾಯಕ ಪರಿಸ್ಥಿತಿ ಒಂದೆಡೆಯಾದರೆ, ಜವಾಬ್ದಾರಿಯನ್ನು ಹೊತ್ತುಕೊಳ್ಳಲೇಬೇಕಾದ ಪರಿಸ್ಥಿತಿ ಇನ್ನೊಂದು ಕಡೆ. ನಂತರ ತನ್ನ ಬೇಕುಬೇಡಗಳ ಬಗ್ಗೆ ಸ್ವಂತ ನಿರ್ಧಾರ

ತೆಗೆದುಕೊಳ್ಳುವ ಸ್ವಾತಂತ್ರವೇ ಇಲ್ಲದಿರುವುದನ್ನು ಅನೇಕ ಸಂದರ್ಭಗಳಲ್ಲಿ ಕಾಣಬಹುದು. ಪ್ರತಿಯೊಂದು ಮಂಗಳಕಾರ್ಯ, ಶುಭ ಸಮಾರಂಭಗಳಲ್ಲಿ ಹೆಣ್ಣಿಗೆ ಪ್ರಥಮ ಆದ್ಯತೆಯನ್ನು ನೀಡುವುದನ್ನು ನಾವು ಕಾಣಬಹುದು. ಶಿಕ್ಷಣ, ಉದ್ಯಮ, ಆರೋಗ್ಯ, ರಾಜಕೀಯ, ವಿಜ್ಞಾನ ಕಲೆ, ಸಾಹಿತ್ಯ ರಚನೆ, ಸಂಶೋಧನೆ, ಸಂಘ ಸಂಸ್ಥೆ, ಅಭಿನಯ, ಪತ್ರಿಕೋದ್ಯಮ, ಚಲನಚಿತ್ರ ಮಾಧ್ಯಮ, ರಾಜ್ಯಾಂಗ, ಕಾರ್ಯಾಂಗ, ನ್ಯಾಯಾಂಗ, ರಕ್ಷಣಾ ವ್ಯವಸ್ಥೆ ಎಲ್ಲಾ ಕ್ಷೇತ್ರಗಳಲ್ಲೂ ಹೆಣ್ಣಿಗೆ ವಿಶಿಷ್ಟ ಸ್ಥಾನವನ್ನು ನೀಡಿರುವುದನ್ನು ಕಾಣಬಹುದು.

ಎಲ್ಲದಕ್ಕಿಂತಲೂ ಮುಖ್ಯವಾಗಿ ಸಾರಾ ಅಬೂಬಕರ್‌ರವರ ಭಾರತೀಯ ಸಮಾಜ ಸಂಸ್ಕೃತಿ ಮಹಿಳೆ ಎಂಬ ಲೇಖನದಲ್ಲಿ ವಿವಾಹವಾದ ಹೆಣ್ಣನ್ನು ಗಂಡನ ಮನೆಗೆ ಕಳುಹಿಸುವ ಸಂದರ್ಭದಲ್ಲಿ ಪ್ರತಿಯೊಬ್ಬ ತಂದೆ ತಾಯಿಯರು ಕೊಟ್ಟ ಮನೆಗೆ ಕೀರ್ತಿತಾ, ಚೆನ್ನಾಗಿ ಬಾಳು ಎಂಬ ಬುದ್ಧಿವಾದ ಹೇಳುವುದು ಸರ್ವೇ ಸಾಮಾನ್ಯ. ಗಂಡನ ಮನೆಯಲ್ಲಿ ನೆಮ್ಮದಿ ಇಲ್ಲವಾದರೆ ತೌವರಿಗೆ ಹಿಂತಿರುಗಿ ಬಾ ಎಂದು ಯಾವ ತಂದೆ,ತಾಯಿ ಹೇಳುವುದಿಲ್ಲ ಎಂಬ ಮಾತನ್ನು ಇವರು ಉಲ್ಲೇಖಿಸಿರುತ್ತಾರೆ. ಈ ಮಾತು ಹೇಳುವ ಅವಶ್ಯಕತೆ ಇಲ್ಲ. ಯಾಕೆಂದರೆ ನೈಸರ್ಗಿಕವಾಗಿ ಹೆಣ್ಣು ಬೇರೊಬ್ಬರ ಮನೆಯಲ್ಲಿ ಗಂಡನ ಜೊತೆಗೆ ಬಾಳಲೇಬೇಕಾದುದು ಪ್ರಕೃತಿ ನಿಯಮ. ಹಾಗಾದರೆ ಇವರ ಅಭಿಪ್ರಾಯ ಒಪ್ಪುವುದಾದರೆ ಗಂಡಸರು ಹೆಂಗಸರು ಒಟ್ಟಾಗಿ ನೆಂಟರಿಷ್ಟರ, ಸ್ನೇಹಿತರ ಮನೆಗಳಿಗೆ ಹೋದಾಗ ಹಿಂತಿರುಗಿ ಬರುವಾಗ ಮಹಿಳೆಯರನ್ನೇ ವಿಶೇಷವಾಗಿ ಗೌರವಿಸಿ ಕುಂಕುಮ ನೀಡುವ ಪದ್ಧತಿ ಇದ್ದು ಗಂಡಸರಿಗೆ ಈ ಗೌರವ ಏಕೆ ನೀಡುವುದಿಲ್ಲ ಎಂದು ಕೇಳಲಾದೀತೆ ಮೇಲಿನ ಲೇಖಕರು ಇದನ್ನು ಗಮನಿಸಬಹುದಾಗಿತ್ತು ಅಲ್ಲವೆ.

ಈ ಮೇಲಿನ ಎಲ್ಲಾ ವಿಚಾರಗಳಿಂದ ಭಾರತದ ಸ್ವಾತಂತ್ರ್ಯಾ ನಂತರ ಸಣ್ಣಕತೆಗಳಲ್ಲಿ ಸ್ತ್ರೀಯ ಸ್ಥಿತಿಗತಿಗಳನ್ನು ಕಾಣಬಹುದು.

ಲಲಿತಾನಾಯಕರ 'ತಾಯಿ ಸಾಕೀಬಾಯಿ'ಯ ಸಾಂಸ್ಕೃತಿಕ ಸಂದರ್ಭ ಮಹತ್ವದ್ದಾದರೂ ಹೆಣ್ಣಿನ ಅನುಭವದ ಸಾಮಾನ್ಯೀಕರಣವೇ ಅವರ ಮುಖ್ಯ ಉದ್ದೇಶವಾಗಿದೆ. ಸಾಕೀಬಾಯಿ ಬದುಕಿದ ಸಮುದಾಯದಲ್ಲಿ ಅವಳು ಮುನಿಯನೊಡನೆ ಇಟ್ಟುಕೊಂಡ ಲೈಂಗಿಕ ಸಂಬಂಧ ಅಪರಾಧವೆನಿಸುತ್ತದೆ. ಹೀಗಾಗಿ ಅವಳ ಮಕ್ಕಳೇ ಸೇಡಿನ ಭಾವನೆಯಿಂದ ಅವಳನ್ನು, ಅವಳ ಪ್ರೇಮಿಯನ್ನು ಕೊಲೆ ಮಾಡುತ್ತಾರೆ.

ಈ ಕತೆಯಲ್ಲಿ ನಾವು ಗಮನಿಸಲೇಬೇಕಾದ ಎರಡು ಅಂಶಗಳಿವೆ. ಒಂದು ಸಾಕಿ ತಾಯಿಯ ಮಾನವೀಯತೆ. ಮುನಿಯನೊಡನೆ ಓಡಿ ಹೋಗಿ ಅವಳು ಸುಖದಿಂದಿರಬಹುದಿತ್ತು. ಆದರೆ ಇದರಿಂದಾಗಿ ಮುನಿಯನ ರೋಗಿಷ್ಟ ಹೆಂಡತಿ, ಮದುವೆಗೆ ಬಂದ ಮಗಳು ತೊಂದರೆಗೀಡಾಗುವರೆಂಬ ಎಚ್ಚರ ಅವಳಲ್ಲಿರುವುದರಿಂದ ತನ್ನ ಸುಖದತ್ತ ಅವಳು ಬೆನ್ನು ತಿರುಗಿಸುತ್ತಾಳೆ. ತನ್ನ ಸುಮದಾಯದ ಹೊರಗಿನ, ಬೇರೆ ಜಾತಿಯಿಂದ ಬಂದ ಸೊಸೆ ಸೀತೆಯಿಂದ ಸಾಕೀಬಾಯಿಗೆ ದೊರಕುವ ಸಹಾಯ, ಅನುಕಂಪಗಳು ಸೀತೆಗೆ ಸಾಕೀಬಾಯಿಯನ್ನು ಉಳಿಸಿಕೊಳ್ಳಲಾಗುವುದಿಲ್ಲ. ಆದರೂ ಅವಳ ಕೃತಿಗೆ ಸಾಮಾಜಿಕ ಸಾಂಕೇತಿಕತೆಯಿದೆ.

ಗಂಡು ಹೆಣ್ಣಿನ ಸಂಬಂಧಗಳು ಎಲ್ಲ ತಲೆಮಾರುಗಳ ಲೇಖಕಿಯರ ಕತೆಗಳಿಗೆ ವಸ್ತುವನ್ನು ಒದಗಿಸಿವೆ. ದಿನ ಕಳೆದಂತೆ ಈ ಸಂಬಂಧಗಳು ಜಟಿಲವಾಗುತ್ತಿವೆಯೇ ಹೊರತು ಸರಳಗೊಂಡಿಲ್ಲ ಎನ್ನುವುದಕ್ಕೆ ಸದ್ಯದ

ಪೀಳಿಗೆಯ ಮಾಲತಿ ಪಟ್ಟಣಶೆಟ್ಟಿ, ಕಮಲಾ ಹೆಮ್ಮಿಗೆ, ನೇಮಿಚಂದ್ರ, ತುಳಸಿ ರಾಜಗೋಪಾಲ ಹಾಗೂ ಗಿರಿಜಮ್ಮ ಇವರ ಕತೆಗಳು ಉದಾಹರಣೆಗಳಾಗಿವೆ. ಈ ಜಟಿಲತೆಗೆ ಮುಖ್ಯ ಕಾರಣ ಸಮಾಜದಲ್ಲಿ ಸ್ತ್ರೀಯ ಬದಲಾಗುತ್ತಿರುವ ಸ್ಥಾನಮಾನಗಳು ಹಾಗೂ ಪುರುಷಪ್ರಧಾನ ವ್ಯವಸ್ಥೆಯಲ್ಲಿ ಇದರ ಪರಿಣಾಮವಾಗಿ ಕಾಣಿಸಿಕೊಂಡ ದ್ವಂದ್ವ ಸಂಬಂಧಗಳು. ಶತಮಾನಗಳಿಂದಲೂ ತನ್ನ ಭದ್ರತೆಯನ್ನು ಕಾಯ್ದುಕೊಂಡಿದ್ದ ವಿವಾಹ ಸಂಸ್ಥೆ ಇಂದು ಬಲವಾದ ಆಘಾತಕ್ಕೊಳಗಾಗಿದೆ. ಈ ಪರಿಸ್ಥಿತಿಗೆ ಪಾಶ್ಚಾತ್ಯ ಪ್ರಭಾವಗಳು ಹಾಗೂ ಸ್ತ್ರೀ ಚಳುವಳಿಗಳು ಬಹುಮಟ್ಟಿಗೆ ಕಾರಣಗಳಾಗಿವೆ.

ಇದರ ಒಂದು ನಿದರ್ಶನ ಮಾಲತಿ ಪಟ್ಟಣಶೆಟ್ಟಿಯವರ 'ನಾ ಯಾಕ ಹುಟ್ಟಿದೆನೊ' ಕತೆಯಲ್ಲಿದೆ. ವೈವಾಹಿಕ ವಿರಸವನ್ನು ಅದರಿಂದ ನೋವಿಗೊಳಗಾದ ಮಗುವಿನ ದೃಷ್ಟಿಯಿಂದ ನೋಡಿರುವುದು ಈ ಕತೆಯ ವೈಶಿಷ್ಟ್ಯ. ಆರು ವರ್ಷದ ಎಳೆಮಗು ರಚನಾಳಿಗೆ ತನ್ನ ತಂದೆ, ತಾಯಿ ಯಾಕೆ ದಿನವಿಡೀ ಜಗಳಾಡುತ್ತಾರೆ ಎನ್ನುವುದು ಒಂದು ಬಿಡಿಸಲಾರದ ಸಮಸ್ಯೆ. ಅವ್ವ ಅಪ್ಪರಿಬ್ಬರನ್ನು ಪ್ರೀತಿಸುವ ಅವಳಿಗೆ ಅವರ ಮಧ್ಯೆ ಮತ್ತೊಬ್ಬ ಹೆಣ್ಣು ಬರುವುದು ದಿಗಿಲು ಹುಟ್ಟಿಸುತ್ತದೆ. ಅಪ್ಪನ ಬೆಡ್‌ರೂಮಿನಲ್ಲಿ ಬೇರೆ ಹೆಂಗಸು ಇರುವ ದೃಶ್ಯವನ್ನು ಅವಳು ಅರ್ಥಮಾಡಿಕೊಳ್ಳಲಾರಳು. ಕತೆಯ ಬದಲಾಗುತ್ತಿರುವ ದೃಷ್ಟಿಕೋನ ದಿಗಿಲಿನ ವಾತಾವರಣವನ್ನು ಸಮರ್ಥವಾಗಿ ಸಂಕೇತಿಸುತ್ತದೆ.

ಕಮಲಾ ಹೆಮ್ಮಿಗೆಯವರ 'ನಾನು, ಅವನು ಮತ್ತು ಅವಳು' ಕತೆಯ ವಸ್ತುವೂ ವೈವಾಹಿಕ ವಿರಸವೇ. ಆದರೆ ಈ ವಿರಸದ ಕತೆಯ ಹಿನ್ನೆಲೆಯಲ್ಲಿ 'ಪ್ರೇಮ'ದ ಕತೆಗಳೂ ಇವೆ. ಈ ಕತೆಯ 'ನಾನು ಮತ್ತು ಅವನು' ಇವರ ನಡುವೆ 'ಅವಳು' ಇದ್ದಾಳೆ. 'ಅವಳು' ತಾನು ಪ್ರೀತಿಸಿದ ಮೈಖೇಲ್‌ನಿಗಾಗಿ ಶ್ರೀಮಂತ ಪತಿಯನ್ನೂ ಬೆಳೆದ ಮಕ್ಕಳನ್ನೂ ತೊರೆದು ಬಂದವಳು. ಮೈಖೇಲ್‌ನಿಗೆ ತನ್ನ ಊರಿನಲ್ಲಿ ಹೆಂಡತಿ ಮಕ್ಕಳಿರುವುದೂ ಅವಳ ಪ್ರೇಮಕ್ಕೆ ಅಡ್ಡ ಬರುವುದಿಲ್ಲ. ಅವಳು ಆರ್ಥಿಕವಾಗಿ ಸ್ವತಂತ್ರಳಾಗಿರುವುದರಿಂದ ಪರಿಸ್ಥಿತಿಯನ್ನು ನಿಭಾಯಿಸಿಕೊಳ್ಳಬಲ್ಲಳು. 'ನಾನು' ಎಂದು ಕರೆದುಕೊಳ್ಳುವ ನಿವೇದಕಿಗೆ ತನ್ನ ಸಹೋದ್ಯೋಗಿ ಶಾಂತುವಿನಲ್ಲಿ ಆಸಕ್ತಿಯಿದೆ."[೨೧]

"೧೯೪೭ ರ ಆಗಸ್ಟ್ ೧೫ರಂದು ಇಂಡಿಯಾ ಮತ್ತು ಪಾಕಿಸ್ಥಾನಗಳು ಬ್ರಿಟಿಷರ ಆಡಳಿತದಿಂದ ಬಿಡುಗಡೆ ಹೊಂದಿದವು. ೧೯೪೭ರಲ್ಲಿ ಅಖಿಲಭಾರತ ಮಹಿಳಾ ಸಂಸ್ಥೆಯ ಅಧ್ಯಕ್ಷರಾಗಿದ್ದ ಧನವಂತಿ ರಾಮರಾವ್ ಅವರು ಈ ಸಂದರ್ಭವನ್ನು ನೆನೆದು 'ಸಕಲ ಭಾರತೀಯರೂ ಸ್ವಾತಂತ್ರ್ಯಾನಂತರದ ಕೆಲವು ತಿಂಗಳುಗಳನ್ನು ತುಂಬಾ ದುರ್ಭರ ರೀತಿಯಲ್ಲಿ ಕಳೆದರು. ದೇಶವು ಇಬ್ಭಾಗವಾದದ್ದರೊಂದಿಗೆ, ಎರಡೂ ದೇಶಗಳ ಜನತೆ ತಾವು ನೆಲಸಬೇಕಾದ ಸ್ಥಳವನ್ನು ನಿರ್ಧರಿಸುವ ಪ್ರಕ್ರಿಯೆ ಅತ್ಯಂತ ಅನಿರೀಕ್ಷಿತವೂ ಕ್ರೂರವೂ, ದುಃಖಕರವೂ ಆಯಿತು. ಆಗ ಸಂಭವಿಸಿದ ದುರಂತಗಳು ಯಾವ ನಾಯಕರೂ ಕಲ್ಪಿಸದಷ್ಟು ಅಗಾಧವೂ, ತೀವ್ರವೂ ಆಗಿದ್ದವು. ಪಾಕಿಸ್ಥಾನದಲ್ಲಿ ನೆಲಸಿದ್ದ ನಮ್ಮ ಜನರನ್ನು ಇಂಡಿಯಾಕ್ಕೆ ಹೊಡೆದೋಡಿಸಲಾಯಿತು. ಎಲ್ಲವನ್ನೂ ಕಳೆದುಕೊಂಡು ರಿಕ್ತ ಸ್ಥಿತಿಯಲ್ಲಿ ದೇಶಕ್ಕೆ ಬಂದ ಈ ಬಂಧುಗಳ ಸಂಕಟವನ್ನು ಕಾಣುತ್ತಾ, ಇನ್ನೂರು ವರ್ಷಗಳ ಪರಕೀಯ ದಬ್ಬಾಳಿಕೆಯಿಂದ ನಾಡು ಬಿಡುಗಡೆ ಹೊಂದಿತೆಂಬ ಕ್ಷಣವನ್ನು ಆನಂದಿಸುವುದು ದುಸ್ಸಾಧ್ಯವೆನಿಸಿತು' ಎಂದು ಹೇಳಿದರು.

೧೯೪೮ರ ಜನವರಿ ೩೦ರಂದು ಮಹಾತ್ಮಗಾಂಧಿಯವರು ಒಬ್ಬ ದ್ರೋಹಿಯ ಗುಂಡಿಗೆ ಬಲಿಯಾದರು. ಸ್ವಾತಂತ್ರ್ಯಾನಂತರದ ಒಂದೇ ವರ್ಷದಲ್ಲಿ ಪ್ರಧಾನ ಮಹಿಳಾ ಸಂಸ್ಥೆಗಳಲ್ಲಿ ಕ್ರಿಯಾಶೀಲವಾಗಿ ತಮ್ಮನ್ನು ತೊಡಗಿಸಿಕೊಂಡು ಇದ್ದ ಮಹಿಳೆಯರು ಒಗ್ಗೂಡಿದ ದೇಶದ ಕನಸನ್ನು ಹಾಗೂ ಆತ್ಮೀಯ ನೇತಾರನನ್ನು ಒಟ್ಟಿಗೆ ಕಳೆದುಕೊಂಡಿದ್ದರು.

ಭಾರತ ಮತ್ತು ಪಾಕಿಸ್ಥಾನದ ಸಂರಚನಾ ವಿಧಾನದಲ್ಲೇ ಅಗಾಧ ವ್ಯತ್ಯಾಸ ತಲೆದೋರಿತು. ಜಾತ್ಯತೀತ ಪ್ರಜಾಪ್ರಭುತ್ವ ರಾಷ್ಟ್ರವಾಗಿ ಭಾರತ ತನ್ನನ್ನು ಗುರುತಿಸಿಕೊಂಡಿತಾದರೆ, ಪಾಕಿಸ್ಥಾನವು ಧಾರ್ಮಿಕ, ಸರ್ವಾಧಿಕಾರಿ ರಾಷ್ಟ್ರವೆನಿಸಿತು. ಭಾರತ ಸ್ವಾತಂತ್ರ್ಯಾನಂತರದಲ್ಲಿ ಇಲ್ಲಿನ ಭಾರತೀಯ ಮಹಿಳೆಯರು ಹಾಗೂ ಅವರಿಗೆ ಸಂಬಂಧಿಸಿದ ಎಲ್ಲ ಸಂಗತಿಗಳು ಎದುರಿಸುತ್ತಿರುವ ಚಾರಿತ್ರಿಕ ವಿಶ್ಲೇಷಣೆಯೊಂದಿಗೆ ಅರ್ಥಮಾಡಿಕೊಳ್ಳಲು ಉದ್ದೇಶಿಸಲಾಗಿದೆ."[೨೨]

"ಭಾರತ ಸಂವಿಧಾನವು 'ಸಮಾನತೆ'ಯು ಮೂಲಭೂತ ಹಕ್ಕು ಎಂದು ಘೋಷಿಸಿತು. ಈ ಹಕ್ಕು ಎಲ್ಲರಿಗೂ ಸಮಾನ ಕಾನೂನು ರಕ್ಷಣೆ, ಸಾರ್ವಜನಿಕ ಉದ್ಯೋಗ ಕ್ಷೇತ್ರದಲ್ಲಿ ಸಮಾನ ಅವಕಾಶಗಳು ಹಾಗೂ ಸಾರ್ವಜನಿಕವಾಗಿ ಯಾವುದೇ ತಾರತಮ್ಯದ ನಿಷೇಧಗಳನ್ನು ಒಳಗೊಂಡಿತ್ತು. ೧೯೫೫ರಿಂದ ೧೯೫೬ರವರೆಗೂ ಮದುವೆ ಮತ್ತು ವಿಚ್ಛೇಧನ, ದತ್ತು, ಆಸ್ತಿ ಹಕ್ಕುಗಳನ್ನು ಕುರಿತಂತೆ ಹಿಂದೂಗಳಿಗೆ ಪ್ರತ್ಯೇಕ ನಿಯಮಗಳನ್ನು ರೂಪಿಸಿತು.

ಜನರಿಗೆ ಸಂವಿಧಾನದ ಹಕ್ಕುಗಳಿಗಿಂತಲೂ ರಾಜಕೀಯ ವಾಸ್ತವವೇನೆಂಬುದೇ ಸದ್ಯಕ್ಕೆ ಪ್ರಮುಖವೆನಿಸಿದ್ದು. ಬ್ರಿಟಿಷ್ ಇಂಡಿಯಾ ಈಗ ಇಂಡಿಯಾ ಮತ್ತು ಪಾಕಿಸ್ಥಾನಗಳೆಂದು ಇಬ್ಭಾಗವಾದ ಸಂಗತಿ, ಎರಡೂ ದೇಶಗಳ ಜನತೆ ನೆಲೆಗಾಗಿ ಪರದಾಡುತ್ತಿದ್ದ ಸಂದರ್ಭವಾಗಿ ಪರಿಣಮಿಸಿ ಲಕ್ಷಾಂತರ ಸ್ತ್ರೀ ಪುರುಷರ ಬದುಕು ಅಲ್ಲೋಲ ಕಲ್ಲೋಲವಾಗಿತ್ತು. ಈ ವಲಸೆ ಪ್ರಕ್ರಿಯೆಯ ಕೊನೆಗೆ, ಪಾಕಿಸ್ಥಾನ ಮತ್ತು ಭಾರತಗಳ ನಡುವೆ ಎಂಟು ಲಕ್ಷ ಮಂದಿಯ ಸ್ಥಳಾಂತರವಾಗಿತ್ತು. ೧೯೪೭ರ ಕತೆ ವಸತಿ ಮೂಲಗಳನ್ನು ಆಸ್ತಿ ಮೂಲಗಳನ್ನು ಕಳೆದುಕೊಂಡು ಅನಾಥರಾದವರಲ್ಲಿ, ಅತ್ಯಂತ ಭೀಕರವಾಗಿ ವ್ಯಾಪಿಸಿದ ಕೋಮು ಗಲಭೆಗಳಲ್ಲಿ, ಕುಟುಂಬ, ಸಮುದಾಯ, ರಾಷ್ಟ್ರೀಯತೆಯ ಗುರುತು ಎಲ್ಲವನ್ನು ಮೊದಲಿಂದ ತೊಡಗಿ ಸದ್ಯದ ನಾಟಕೀಯ ವಾಸ್ತವದಲ್ಲಿ ಹೊಂದಿಸಿಕೊಳ್ಳಬೇಕಿದ್ದ" "ಕಷ್ಟದಲ್ಲಿ, ಲಿಂಗ ವ್ಯವಸ್ಥೆಯಲ್ಲಿನ ತಾರತಮ್ಯದ ಸಂಕಥನದಲ್ಲಿ ಹೆಚ್ಚಿನ ಶೋಚನೀಯ ಸ್ಥಿತಿಯದಾಗಿತ್ತು ಎಂದು ರಿತುಮೆನನ್ ಹಾಗೂ ಕಮಲಾಭಾಸಿನ್ ಅವರು ಹೇಳುತ್ತಾರೆ."[೨೩]

"ಒಂದು ಅಂದಾಜಿನಂತೆ ೮೦ ಸಾವಿರದಿಂದ ಒಂದೂವರೆ ಲಕ್ಷ ಸಂಖ್ಯೆಯ ಮಹಿಳೆಯರ ಮೇಲೆ ಈ ಸಂದರ್ಭದಲ್ಲಿ ಅತ್ಯಾಚಾರಗಳು ನಡೆದವು. ಹೆಂಗಸರೆಂದರೆ ಪಿತೃ ಪ್ರಧಾನ ಮನೆತನಗಳಲ್ಲಿ ಅವಲಂಬಿತ ಜೀವಿಗಳು ಎಂಬ ಪರಿಗಣನೆಯೇ ಇದ್ದದ್ದಕ್ಕೋ ಏನೋ, ಭಾರತ ಮತ್ತು ಪಾಕಿಸ್ಥಾನ ಎರಡೂ ದೇಶಗಳು ಈ ಹೆಂಗಸರನ್ನು ರಕ್ಷಿಸುವ ಹಾಗೂ ಪುನರ್ವಸಿತರನ್ನಾಗಿಸುವ ಪ್ರಕ್ರಿಯೆಗಳಿಗೆ ಒಪ್ಪಿಕೊಂಡವು.

೧೯೨೦, ೩೦, ೪೦ ರ ದಶಕಗಳಲ್ಲಿ ಸಮಾಜ ಸುಧಾರಣೆಯ ಹಾಗೂ ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸಿದ ಅನೇಕ ಮಹಿಳೆಯರಂತೂ ಸಂವಿಧಾನಾತ್ಮಕ ಅವಕಾಶಗಳು ಲಭ್ಯವಾದದ್ದನ್ನು ಕಾನೂನು

ಸುಧಾರಣೆಗಳಾದದ್ದನ್ನು ಕಾಣುತ್ತಾ ತುಂಬಾ ಸಮಾಧಾನಗೊಂಡರು. ಮೇಲ್ವರ್ಗ, ಮಧ್ಯಮ ವರ್ಗದ ಸಮಾಜದವರಾದ ಈ ಮಹಿಳೆಯರು ಈಗ ಬಂದ ಹೊಸ ಅವಕಾಶಗಳ ಲಾಭವನ್ನು ಪಡೆಯುವ ಮೊದಲಿಗರಾಗಿದ್ದರು. ಪಂಚವಾರ್ಷಿಕ ಯೋಜನೆಗಳನ್ನು ಅಭಿವೃದ್ಧಿಪಡಿಸುವಲ್ಲಿ ನೆರವನ್ನೀಯಬೇಕೆಂದು ಸರ್ಕಾರವು ಪ್ರಮುಖ ಮಹಿಳಾ ಸಂಸ್ಥೆಗಳನ್ನು ಕೇಳಿತು. ಆರ್ಥಿಕ ಬೆಳವಣಿಗೆಯೇ ಅತ್ಯಂತ ಮುಖ್ಯವಾದ ಸಂಗತಿಯಾಗಿದ್ದು, ಈ ಮೂಲಕವೇ ದೇಶವು ನಿರೀಕ್ಷಿಸುವ ಸಂಪದಭಿವೃದ್ಧಿಯಲ್ಲಿ ಮಹಿಳೆಯರೂ ತಮ್ಮ ನ್ಯಾಯದ ಪಾಲನ್ನು ಪಡೆಯಲು ಸಾಧ್ಯ ಎಂಬ ಸರ್ಕಾರದ ಅಭಿಪ್ರಾಯಕ್ಕೆ ಈ ಹೆಂಗಸರು ತಲೆತೂಗಿದರು."[೨೪]

"ಚಿರಪರಿಚಿತವೆನಿಸಿದ್ದ ಕೆಲವು ಮಹಿಳಾ ಸಂಸ್ಥೆಗಳಿಗೆ ಸ್ಥಿರವಾದ ಸ್ವಂತ ಕಟ್ಟಡಗಳು, ಸಿಬ್ಬಂದಿ ವರ್ಗದ ಕೊರತೆಯಿಲ್ಲದ ಕಾರ್ಯಾಲಯಗಳು, ಗ್ರಂಥಾಲಯಗಳು ಹಾಗೂ ಸ್ವಾಯತ್ತ ಅಧಿಕಾರಗಳು ದೊರೆತು ಅವು ಸಾಂಸ್ಥಿಕ ಲಕ್ಷಣಗಳನ್ನು ಪಡೆದುಬಿಟ್ಟವು. ಶಿಶುಪಾಲನಾ ಕೇಂದ್ರಗಳು, ವೈದ್ಯಕೀಯ, ಸೇವಾಕೇಂದ್ರಗಳು, ಉದ್ಯೋಗಸ್ಥ ಮಹಿಳೆಯರಿಗೆ ಹಾಸ್ಟೆಲ್‌ಗಳು, ವಿವಿಧ ಬಗೆಯ ಶಿಕ್ಷಣ ಕೇಂದ್ರಗಳು, ಇಂತಹ ಸ್ತ್ರೀಯರ ನೆರವಿನವೆನಿಸಿದ ಕಾರ್ಯಕ್ರಮಗಳನ್ನು ರೂಪಿಸಿ ನಡೆಸುವುದನ್ನು ಅವು ಮುಂದುವರೆಸಿದವು.

ಗಾಂಧಿಯವರ ನಿಕಟವರ್ತಿ ಅನುಯಾಯಿಗಳಾದ ಕೆಲವು ಮಹಿಳೆಯರಿಗೆ ಸಂವಿಧಾನ ಹಾಗೂ ಕಾನೂನಿನ ಹಕ್ಕುಗಳಿಗಿಂತ ಆರ್ಥಿಕ ಮತ್ತು ಸಾಮಾಜಿಕ ಬದಲಾವಣೆಗಳೇ ಮುಖ್ಯ ಸಂಗತಿಗಳೆಂದು ತೋರಿದವು. ಇವರಿಗೂ ಅತೃಪ್ತಿಗಳಿದ್ದವು. ಆದರೂ ಇವರಲ್ಲಿ ಅನೇಕರು ಸ್ವಂತ ಇಚ್ಛೆಯಿಂದ ಪ್ರಯತ್ನಗಳಲ್ಲಿ ತೊಡಗುವುದು ಸೂಕ್ತವೆಂದು ನಂಬಿದವರು ಇವರು ಮೂಲ ಅಗತ್ಯಗಳ ಯೋಜನೆಗಳನ್ನು ಹಾಕಿಕೊಂಡರು.

ಸ್ವಾತಂತ್ರ್ಯಾನಂತರದ ಕೆಲವು ವರ್ಷಗಳ ಪರಿಸ್ಥಿತಿಯ ಬಗೆಗೆ ಮೂರು ಮುಖ್ಯ ಸಂಗತಿಗಳನ್ನು ಗುರುತಿಸಬಹುದು. ಮೊದಲನೆಯದಾಗಿ ವಿಜಯ ಸಾಧನೆಯ ಸಂಭ್ರಮವು ನಿರಾಶ್ರಿತರ ವಿಷಯದಿಂದಾಗಿ ಮುಚ್ಚಿಯೇ ಹೋಯಿತು. ಎರಡನೆಯದಾಗಿ ಹೇಳಬೇಕೆಂದರೆ ಈ ನಿರಾಶ್ರಿತರ ಸಮಸ್ಯೆ ದುರಂತವಾಗಿ ಕಾಡದೇ ಹೋಗಿದ್ದರೂ ಮಹಿಳೆಯರ ಸಂಗತಿಗಳೆಲ್ಲವೂ ಸಾಂಸ್ಥಿಕ ರೂಪದವೆನಿಸಿ ಅಧಿಕಾರಶಾಹಿಗೆ ಒಳಪಟ್ಟಿದ್ದರ ಬಗೆಗೆ ಹೆಂಗಸರಲ್ಲಿ ಅಸಮಾಧಾನ, ಅತೃಪ್ತಿ ಹಾಗೂ ಸಂಕಟಗಳಂತೂ ಇದ್ದೇ ಇದ್ದವು. ಮೂರನೆಯದಾಗಿ ಸ್ವಾತಂತ್ರ್ಯ ಸಂಗ್ರಾಮದ ಅವಧಿಯಲ್ಲಿ ಕಾಂಗ್ರೆಸ್‌ನ ಪರಮಾಧಿಕಾರವನ್ನು ಕೆಲವು ಮಹಿಳೆಯರು ಒಪ್ಪಿಕೊಂಡರಾದರೂ, ಈ ಕುರಿತು ಹಲವರಿಗೆ ಇದ್ದದ್ದು ತೀರಾ ಅಸಮಾಧಾನವೇ. ಇಂಥಾ ಹಲವು ಮಹಿಳೆಯರು ಕ್ರಾಂತಿಕಾರಿ ಗುಂಪುಗಳಲ್ಲಿ ಸೇರಿಕೊಂಡರು. ಈ ಧೋರಣೆಗಳು ಸ್ವಾತಂತ್ರ್ಯಾನಂತರದಲ್ಲೂ ಮುಂದುವರೆದವು."[೨೫]

ಈ ಎಲ್ಲಾ ಉಲ್ಲೇಖಗಳು ಸ್ಥಾಪಿತ ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀ ಬದುಕು ಸುಧಾರಿಸುವುದು ಎಷ್ಟು ಕಷ್ಟ ಸಾಧ್ಯ ಎಂಬ ಕಡೆಗೆ ನಮ್ಮನ್ನು ಆಲೋಚಿಸುವಂತೆ ಮಾಡುತ್ತದೆ. ಈ ಸಮಾಜದಲ್ಲಿ ಸ್ಥಾಪಿತವಾಗಿರುವ ಮೌಲ್ಯಗಳು ಎಂದೆಂದೂ ಅವಿನಾಶ ಎಂಬ ನೆಲೆಯನ್ನು ಹೊಂದಿದುವಾಗಿವೆ ಎಂಬುದು ಗಮನಾರ್ಹ. ಭಾರತ ಸ್ವತಂತ್ರವಾಗಿ ವಿದ್ಯಾಭ್ಯಾಸ ಸಾರ್ವತ್ರಿಕವಾಗಿ ಮಹಿಳಾಪರ ವಾದ ಏನೆಲ್ಲಾ ಕಾನೂನು ಸೌಲಭ್ಯಗಳು ರೂಪುಗೊಂಡಿವೆಯಾದರೂ ಸ್ತ್ರೀ ಜೀವನ ಬಹಳ ಸಂಕಷ್ಟದಲ್ಲಿಯೇ ಉಳಿದುಕೊಂಡಿದೆ. ಸ್ತ್ರೀ

ಸಮಾನತೆಯ ವಿಷಯವಾಗಿ ನಿರ್ಣಯವಾಗುವುದು ಅಷ್ಟು ಸುಲಭದ ಸಂಗತಿಯಾಗಿರಲಿಲ್ಲ. ಕಾರಣ ಭಾರತೀಯ ಸಾಮಾಜಿಕ ಮೌಲ್ಯಗಳು 'ಯಥಾಸ್ಥಿತಿ'ವಾದದ ಮೇಲೆಯೇ ಇಂದಿಗೂ ವ್ಯವಹರಿಸಲ್ಪಡುತ್ತಿರುವುದು. ಹಾಗಾಗಿ ಯಾವುದೇ ವಿಚಾರ ಪರಿಶೀಲನೆ ನಿರ್ಣಯ ಎಂಬ ಹಂತಗಳನ್ನು ತಲುಪುವುದು ತ್ರಾಸದಾಯಕವಾದುದಾಗಿದೆ ಎಂತಲೇ ಇಲ್ಲಿನ ಸಾಮಾಜಿಕ ಪ್ರಶ್ನೆಗಳು ವೈಚಾರಿಕ ಆಯಾಮ ಪಡೆದು ಒಪ್ಪಿತವಾಗುವುದು ಸುಲಭ ಸಾಧ್ಯ ಅಂಶವೇನಲ್ಲ.

ಕಟು ಟೀಕೆಗಳ ನಡುವೆಯೂ ಭಾರತ ಸರ್ಕಾರವು ಘೋಷಿಸಿದ್ದ 'ಸಮಾನತೆ'ಯ ಬಗೆಗಿನ ಬದ್ಧತೆಯನ್ನು ತೀವ್ರವಾಗಿ ಸವಾಲೆಸೆದು ಪ್ರಶ್ನಿಸಿದ್ದು ಕಡಿಮೆಯೇ.' ಪ್ರಸ್ತುತ ಸಾಮಾಜಿಕ ಬದಲಾವಣೆಗೆ ಹಾಗೂ ಅಭಿವೃದ್ಧಿ ವಿಧಾನಗಳು ಇಲ್ಲಿನ ಮಹಿಳೆಯರ ಮೇಲಂತೂ ಪ್ರತಿಕೂಲ ಪರಿಣಾಮವನ್ನೇ ಬೀರಿದೆ ಎಂಬ ಈ ಘೋಷಣೆಯಂತೂ ಅನೇಕ ಭಾರತೀಯರಿಗೆ ಆಘಾತಕಾರಿಯಾಗಿ ತೋರಿತು. ಒಂದು ಕಡೆ ನೋಡಿದರೆ ದೇಶದ ಪ್ರಧಾನಿಯಾಗಿ ಇಂದಿರಾ ಗಾಂಧಿಯಂತಹ ಮಹಿಳೆ ಅಧಿಕಾರ ವಹಿಸಿದ್ದರು. ಪ್ರಪಂಚದ ಬಹುತೇಕ ರಾಷ್ಟ್ರಗಳಿಗೆ, ಭಾರತವು ಅಪರೂಪದ ಹೆಜ್ಜೆಗಳನ್ನಿರಿಸಿ, ವಿಶೇಷ ರಾಯಭಾರಿಗಳಾಗಿ ಮಹಿಳೆಯರನ್ನು ಕಳಿಸಿದೆ. ವಿಶ್ವಸಂಸ್ಥೆಗೆ ಅವರನ್ನು ಪ್ರತಿನಿಧಿಗಳನ್ನಾಗಿ ಕಳಿಸಲಾಗಿದೆ. ಅಂತರರಾಷ್ಟ್ರೀಯ ಸಮ್ಮೇಳನಗಳಲ್ಲಿ ದೇಶದ ಗಣ್ಯ ಪ್ರತಿನಿಧಿಗಳಾಗಿಯೂ ಅವರನ್ನು ಕಳಿಸಲಾಗುತ್ತಿದೆ. ಅಂತರರಾಷ್ಟ್ರೀಯ ಮಹಿಳಾ ವರ್ಷವನ್ನು ಸಂಭ್ರಮದಿಂದ ಆಚರಿಸುತ್ತಾ ದೇಶದಾದ್ಯಂತದ ಮಹಿಳಾ ಸಂಸ್ಥೆಗಳು ಮಹಿಳೆಯರ ಸಾಮರ್ಥ್ಯ ಹಾಗೂ ಸಾಧನೆಗಳನ್ನು ಪ್ರತಿ ಬಿಂಬಿಸುವ ವಿಶೇಷ ಅಧಿವೇಶನಗಳನ್ನು ಆಯೋಜಿಸುತ್ತಿವೆ.

" 'ಸಮಾನತೆಯೆಡೆಗೆ' ವರದಿಯು ಪ್ರಕಟಗೊಳ್ಳುವುದಕ್ಕೆ ಒಂದು ವರ್ಷ ಮೊದಲೇ ತನ್ನ ಸ್ವಾತಂತ್ರ್ಯೋತ್ಸವ ಸಂಚಿಕೆಯ ಮುಖಪುಟದಲ್ಲಿ, ಆಧುನಿಕ ಮಹಿಳೆಯರನ್ನು ಗುರಿಯಾಗಿಸಿಕೊಂಡಿರುವ ಖ್ಯಾತ ಪತ್ರಿಕೆ ಫೆಮಿನಾ, ಇಂದಿರಾ ಗಾಂಧಿಯವರನ್ನು ದುರ್ಗಾಮಾತೆಯಂತೆ ಚಿತ್ರಿಸಿತು. ಈ ಬಗ್ಗೆ ಪತ್ರಿಕೆಯಲ್ಲಿ 'ಭಾರತದಲ್ಲಿ ಒಬ್ಬ ಹೆಂಗಸಾಗಿ ಹುಟ್ಟಿ ಬಾಳುವುದೆಂದರೆ ಆಕೆ ಒಬ್ಬ ವ್ಯಕ್ತಿ ಮಾತ್ರವೇ ಆಗಿರದೆ ಹೆಂಡತಿ, ತಾಯಿ, ಮೊದಲಾಗಿ ಅದೆಷ್ಟೋ ಪಾತ್ರಗಳನ್ನು ನಿರ್ವಹಿಸುತ್ತಾಳೆ. ಹೆಂಗಸು ಸಂಸ್ಕೃತಿ ಮತ್ತು ಪರಂಪರೆಗಳ ಆಗರವಾಗಿರಬೇಕೆಂಬ ಹೊಣೆಯನ್ನೂ ಹೊರಬೇಕು."[೨೬]

ಸ್ವಾತಂತ್ರ್ಯಾ ನಂತರ ಮಹಿಳೆಯರ ಬಗ್ಗೆ ಅವಲೋಕಿಸಿದಾಗ, ಸ್ತ್ರೀಯು ತನ್ನ ಸಮಾನತೆಯ ಕಡೆ ಹೆಚ್ಚು ಗಮನ ನೀಡುತ್ತಾ ಬಂದಿರುವುದನ್ನು ಕಾಣುತ್ತೇವೆ. ಸ್ತ್ರೀಯು ಹೆಚ್ಚಾಗಿ ತನ್ನ ಬದುಕನ್ನು ಶಿಕ್ಷಣದಲ್ಲಿ, ಉದ್ಯೋಗದಲ್ಲಿ, ರಾಜಕೀಯದಲ್ಲಿ, ಸಾಹಿತ್ಯ ಕ್ಷೇತ್ರದಲ್ಲಿ ಸಮಾನತೆಯನ್ನು ಸಾಧಿಸಿದ್ದಾಳೆ. ಉದಾಹರಣೆಗೆ ಸರೋಜಿನಿ ಮಹಿಷಿ, ಇಂದಿರಾ ಗಾಂಧಿ, ಮದರ್ ತೆರೀಸಾ ಮುಂತಾದವರು ನಮ್ಮ ಕಣ್ಣೆದುರಿಗೆ ಸವಾರ ನಡೆ ಸಾಧಿಸಿರುತ್ತಾರೆ.

ಇನ್ನು ನಾನು ಅಧ್ಯಯನಕ್ಕೆ ತೆಗೆದುಕೊಂಡ ಕತೆಗಾರ್ತಿಯರ ಕತೆಗಳಲ್ಲಿ ಸ್ತ್ರೀಯರ ಸ್ಥಿತಿಗತಿಗಳು ಹೇಗಿದ್ದವು ಎಂಬುದನ್ನು ಗುರುತಿಸುವ ಪ್ರಯತ್ನ ಮಾಡಿದ್ದೇನೆ. ಅದರ ವಿವರಗಳನ್ನು ಈ ಕೆಳಕಂಡ ಅಂಶಗಳ ಹಿನ್ನೆಲೆಯಲ್ಲಿ ಚರ್ಚಿಸುತ್ತೇನೆ.

"ಕನ್ನಡದಲ್ಲಿ ಸಾಹಿತ್ಯಿಕವಾಗಿ ಮಹಿಳೆ ಸಾಧನೆ ಕಡಿಮೆ ಅನಿಸಿದರೂ, ಇರುವಷ್ಟೇ ಗಮನಿಸುವಂಥಾಗಿದೆ. ಹನ್ನೆರಡನೆಯ ಶತಮಾನದ ಅಕ್ಕಮಹಾದೇವಿ ತನ್ನ ಐಹಿಕ ಬದುಕಿನ ನಿವಾರಣೆಯ ಸಂದರ್ಭದಲ್ಲಿ ಇಂದಿಗೂ ಪ್ರಸ್ತುತವಾಗುತ್ತಾಳೆ. ಅದ್ದೂರಿಯಾಗಿ ಬದುಕಬಹುದಾಗಿದ್ದ ಸ್ಥಿತಿಯನ್ನು ಹೆಣ್ಣಿಗೆ ಅಸ್ಪೃಶ್ಯವಾಗಿದ್ದ ಅನಂತತೆಯ್ನು ಅರಸಿ ಹೊರಟು ಬಿಡುತ್ತಾಳೆ. ಆದರೆ ಆ ಅನಂತತೆಯ ಆಶಯ ಗಂಡಾದ ಚನ್ನಮಲ್ಲಿಕಾರ್ಜುನ ನಲ್ಲಿ ಕೇಂದ್ರೀಕೃತವಾಗುತ್ತದೆ ಎಂಬ ಆರೋಪವನ್ನು ಆಕೆ ಎದುರಿಸುತ್ತಿದ್ದಾಳೆ. ಈಕೆಯ ಸಮಕಾಲೀನರಾದ ಕೆಳವರ್ಗದ ಶರಣೆಯರ ಸಾಧನೆಯೂ ಕಡಿಮೆಯಲ್ಲ. ಹೇಳುವುದಾದರೆ ಅಕ್ಕನ ರೀತಿಗಿಂತ ಇವರ ಐಹಿಕ ಬದುಕಿನ ರೀತಿಯು ಹೆಚ್ಚು ಸಂಘರ್ಷಾತ್ಮಕವಾಗಿರುವಂತೆ ತೋರುತ್ತದೆ.

ಸಂಚಿಯ ಹೊನ್ನಮ್ಮನ ಸಾಂಪ್ರದಾಯಿಕ ಬರಹ ಹೇಗೆ ಹೆಣ್ಣಿನ ನೆಲೆಗಳನ್ನು ಶೋಧಿಸಲು ಪ್ರಯತ್ನಿಸುತ್ತದೆ ಎಂಬುದು ಗಮನಾರ್ಹ. ಆದರೆ ಸಮಕಾಲೀನ ಬದುಕಿನ ಮೇಲೆ ಆಕೆಯ ಪ್ರಭಾವ ಅಷ್ಟಾಗಿ ಆಗುತ್ತಿರುವಂತೆ ಕಾಣುತ್ತಿಲ್ಲ. ಆಧುನಿಕ ಸಾಹಿತ್ಯದಲ್ಲಿ ಹೆಣ್ಣು ಆ ಎಲ್ಲ ಸಂದರ್ಭಕ್ಕೂ ಭಿನ್ನವಾಗಿ ಮುಂದುವರಿಯುತ್ತಿರುವ ಸೂಚನೆಗಳು ಕಾಣುತ್ತಿವೆ. ಅಷ್ಟೇ ಅಲ್ಲ ಅವು ಆರೋಗ್ಯಕಾರಿಯಾಗಿಯೂ ಇವೆ. ಇದರಿಂದಾಗಿ ಸಾಮಾಜಿಕ ಸಂದರ್ಭದ ಗತಿಶೀಲತೆಯು ಹೆಚ್ಚು ಮಾನವೀಯಗೊಳ್ಳುವುದು ಸಾಧ್ಯವಾಗುತ್ತದೆ.

ಮಾಸ್ತಿಯವರ ಸಂದರ್ಭದಲ್ಲಿ ಬರೆದಿರುವ ಗೌರಮ್ಮ ಅವರು ನಮ್ಮ ವಿಮರ್ಶಾ ಕ್ಷೇತ್ರಕ್ಕೆ ದೂರವಾಗಿಯೇ ಉಳಿದಿರುವುದು ಬಹಳ ಆಶ್ಚರ್ಯವಾಗಿದೆ. ಟಿ.ಪಿ. ಅಶೋಕ ಈಚೆಗೆ ಗಮನ ಸೆಳೆಯುವ ಪ್ರಯತ್ನ ಮಾಡಿದ್ದಾರೆ. ಈಗಿನ ಲೇಖಕಿ ತನ್ನ ಕಾಲದ ತೊಡಕುಗಳನ್ನು ನಿವಾರಿಸಿಕೊಂಡು ಗೌರಮ್ಮನವರ ಕಾಳಜಿಗಳನ್ನು ಮೈಗೂಡಿಸಿಕೊಳ್ಳುವ ದಿಕ್ಕಿನಲ್ಲಿದ್ದಾಳೆ. ಬಹುಪಾಲು ಎಲ್ಲ ಲೇಖಕಿಯರಿಗೂ ಅಪ್ರಾಪ್ತ ವಯಸ್ಸಿನ ಹುಡುಗಿಯನ್ನು ಕೃತಿಯ ಕೇಂದ್ರಕ್ಕೆ ತರಲು ಸಾಧ್ಯವಾಗಿಲ್ಲ. ಇದಕ್ಕೆ ಬಹು ಮುಖ್ಯಕಾರಣ ಇವರ ವೈಚಾರಿಕ ಗ್ರಹಿಕೆಗಳು. ಇವುಗಳನ್ನು ಅರಗಿಸಿಕೊಳ್ಳಲು ಸಾಧ್ಯವಿರುವ ಪ್ರಬುದ್ಧ ಹೆಣ್ಣಿನ ಮೂಲಕ ವಿರೋಧಿ ಘಟಕದೊಡನೆ ಸಂವಾದ ಸೃಷ್ಟಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಬಹುಶಃ ಇದು ಅವರ ತಕ್ಷಣದ ವೇಗಕ್ಕೆ ಸರಿಯಾಗಿರಬಹುದು ಆದರೆ ಇವರೆಲ್ಲರೂ ಇನ್ನೂ ಬರೆಯುತ್ತಿರುವುದರಿಂದ ಏನನ್ನೂ ಖಚಿತವಾಗಿ ಹೇಳಲು ಕಷ್ಟವಾಗುತ್ತದೆ."

"ವೈದೇಹಿಯವರಂತೆ ದೇಶೀಯತೆಯ ನೆಲೆಯಲ್ಲಿಯೇ ಬರೆಯುತ್ತಿರುವ ಲೇಖಕಿಯರಲ್ಲಿ ಮಿತ್ರಾ ವೆಂಕಟ್ರಾಜ, ಎಚ್.ನಾಗವೇಣಿ ಹಾಗೂ ಎಂ.ಎಸ್.ವೇದಾ ಮುಖ್ಯರಾಗಿದ್ದಾರೆ. ಮಿತ್ರಾರ 'ಒಂದು ಒಸಗೆ ಒಯ್ಯುವುದಿತ್ತು'.

ಈಗಿನ ಲೇಖಕಿ ತನ್ನ ಕಾಲದ ತೊಡಕುಗಳನ್ನು ನಿವಾರಿಸಿಕೊಂಡು, ಗೌರಮ್ಮನವರ ಕಾಳಜಿಗಳನ್ನು ಮೈಗೂಡಿಸಿಕೊಳ್ಳುವ ದಿಕ್ಕಿನಲ್ಲಿದ್ದಾಳೆ. ಸಂಪ್ರದಾಯ ಬದ್ಧವಾಗಿರುವ ಹೆಣ್ಣನ್ನು ಅವರು ಚಿತ್ರಿಸುವ ಬಗೆ ಈಗಿನ ಸಂದರ್ಭಕ್ಕೆ ಸವಾಲಾಗುತ್ತದೆ. 'ವಾಣಿಯ ಸಮಸ್ಯೆ' ಕತೆಯ ಇಡೀ ಆವರಣ ಸಂಪ್ರದಾಯ ಬದ್ಧವಾದುದು. ವಿಧವೆ ಇಂದು ನೆರೆಮನೆಯ ರತ್ನನ ಮೂಲಕ ತನ್ನ ಕಮರಿ ಹೋಗುತ್ತಿದ್ದ ಬಯಕೆಗಳನ್ನು ಜಾಗೃತಗೊಳಿಸಿಕೊಳ್ಳುವ ಹಂತದಲ್ಲಿದ್ದಾಳೆ. ಆದರೆ ಅದು ಸಾಮಾಜಿಕವಾಗಿ ದುರಂತವಾಗಬಹುದಾದ

ಸಾಧ್ಯತೆಯಿಂದ ತಪ್ಪಿಸಿಕೊಳ್ಳಲು, ಬೇರೊಂದು ಕಡೆಹೊರಟು ಹೋಗುತ್ತಾಳೆ. ಯಾವ ಜವಾಬ್ದಾರಿಯುತ ಕೆಲಸ ಕಾರ್ಯಗಳು ಇಲ್ಲದಿದ್ದೂ ವಾಣಿ ರತ್ನನಿಗೆ ಸಾಟಿಯಾಗದ ಸಂಗಾತಿಯಾಗಿದ್ದಾಳೆ."೨೭

"ತನ್ನ ಹೆಂಡತಿ ಇಂದುವಿನ ಹಾಗೆ ಸದಾ ಚಟುವಟಿಕೆಯಿಂದಿದ್ದರೆ ಎಂದು ಆಪೇಕ್ಷಿಸುವುದರ ಮೂಲಕ ಆತ ಆಕೆಯನ್ನು ಇಷ್ಟಪಡತೊಡಗುತ್ತಾನೆ. ರತ್ನನಿಗೆ ವಾಣಿ ತಕ್ಕವಳಲ್ಲ ಎಂದು ಇಂದು ಯೋಚಿಸುವುದರ ಮೂಲಕ ತನ್ನಂಥವಳು ತಕ್ಕವಳಾಗಬಹುದು ಎಂಬ ಪರೋಕ್ಷ ಸ್ಥಿತಿಯಲ್ಲಿ ಅವನನ್ನು ಇಷ್ಟಪಡತೊಡಗುತ್ತಾಳೆ. ಆದರೆ ಉಂಟಾಗುವ ಪರಿಣಾಮಗಳು ಯಾರನ್ನೂ ನೆಮ್ಮದಿಯಾಗಿರಿಸಲಾರವು ಎಂಬ ಅರಿವು ಅವಳಿಗಿದೆ. ಗೌರಮ್ಮ ಇದನ್ನು ಆಗುಮಾಡುವ ರೀತಿ ಎಷ್ಟು ಸಹಜವಾಗಿದೆ ಎಂದು ನಿಬ್ಬೆರಗನ್ನುಂಟು ಮಾಡುತ್ತದೆ. ಅವರ ಮೊದಲ ಕತೆ 'ಪುನರ್ವಿವಾಹ' ಬಾಲ ವಿಧವೆಯ ಬದುಕಿಗೆ ಸಂಬಂಧಿಸಿದ್ದು. ಲೇಖಕಿ ಕತೆಯ ಬಗೆಗೆ ಅಡಿಟಿಪ್ಪಣಿಯಲ್ಲಿ ಅಸಮಾಧಾನ ವ್ಯಕ್ತಪಡಿಸಿದ್ದಾರೆ. ಯಾಕೆಂದರೆ, ಅದು ಸಾಗುವ ದಾರಿ ಸರಳವಾಗಿದೆ. ಮೇಲು ತೋರಿಕೆಯ ಘಟಕಗಳು ಕೇವಲ ಒಂದು ಉಪನ್ಯಾಸದ ಧಾಟಿಯಲ್ಲಿವೆ. ಆದರೆ ಮೂವತ್ತರ ದಶಕದಲ್ಲಿ ವಿಧವಾ ವಿವಾಹದ ಪರವಾಗಿ ಹೆಣ್ಣು ದನಿಯೆತ್ತಿದ್ದು ವಿಶಿಷ್ಟವಾಗಿದೆ. ಕತೆಯು ಹೇಳುವಂತೆ ಗಂಡಿನ ಪುನರ್ವಿವಾಹಕ್ಕೆ ಐಶ್ವರ್ಯವೊಂದೇ ಪ್ರೇರಕವಲ್ಲ. ಈ ಹಿನ್ನೆಲೆಯ ಬಡವ ಕೂಡ ನಮ್ಮ ವ್ಯವಸ್ಥೆಯಲ್ಲಿ ಮದುವೆಯಾಗುವುದು ಸಾಧ್ಯವಿದೆ. ಆದರೆ ತನ್ನ ಹೊಣೆಗಾರಿಕೆ ಕೊಂಚವೂ ಇಲ್ಲದ ರಾಜಿಯ ಬಾಲವಿಧವೆ ಪಟ್ಟ ಕ್ರೂರವಾಗಿದೆ. ಅವಳ ಬದುಕಿನ ಗತಿಯನ್ನು ಈಗಾಗಲೇ ವಿವಾಹೇತರ ಘಟಕದಲ್ಲಿ ಇರಿಸಲು ಸಮಾಜ ನಿರ್ಧರಿಸಿಬಿಟ್ಟಿದೆ. ಯಾಕೆಂದರೆ ಅವಳನ್ನು ಮದುವೆಯಾಗಲು ಈ ಸಮಾಜದ ಯಾವ ಗಂಡೂ ಇಷ್ಟಪಡುತ್ತಿಲ್ಲ. ವ್ಯವಸ್ಥೀಕೃತ ಆಶಯಗಳಲ್ಲಿ ಬದುಕು ಚಲನಸ್ಥಿತಿಯನ್ನು ಕಳೆದುಕೊಂಡಿರುವಾಗ ಅದಕ್ಕೆ ವಿರುದ್ಧವಾಗಿ ಹೋಗುವ ಎದೆಗಾರಿಕೆಯನ್ನು ಯಾರು ತೋರಬಲ್ಲರು? ಗೌರಮ್ಮ ಈ ಸಂದರ್ಭದಲ್ಲಿ ಜಡವಾಗಿ ಬಿಟ್ಟಿರುವ ವೈಯಕ್ತಿಕ, ಕೌಟುಂಬಿಕ, ಸಾಮಾಜಿಕ ಸಮಸ್ಯೆಗಳನ್ನು ಕೆಣಕುತ್ತಾರೆ.

'ಅವುಗಳಿಗೆ ಕೆಲವು ಕಡೆ ಪರಿಹಾರ ಸಿಗುತ್ತದೆ, ಮತ್ತೆ ಕೆಲವು ಕಡೆ ವೈಯಕ್ತಿಕ ನಿರ್ಧಾರಗಳು ಪರಿಹಾರವನ್ನು ನಿರಾಕರಿಸುತ್ತವೆ. ಸಾಗುವ ಮಾರ್ಗವನ್ನು ಲೇಖಕಿ ಸ್ವಲ್ಪಮಟ್ಟಿಗೆ ಸರಳೀಕರಿಸಿದರೂ, ಮೂಲ ಸಮಸ್ಯೆಯನ್ನು ಗಂಭೀರವಾಗಿ ಮುಟ್ಟುತ್ತಾರೆ. ಅದರ ಸಾಮಾಜಿಕ ನಿರ್ದೇಶನ ಶಕ್ತಿಯನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡುತ್ತಾರೆ. 'ಅಪರಾಧಿ ಯಾರು?' ಕತೆಯ ಹಿಂದೂಹೆಣ್ಣು ತನ್ನ ಮತದೊಳಗೆ ದಾರುಣ ತಿರಸ್ಕಾರಕ್ಕೆ ಒಳಗಾಗಿ, ಪ್ರೀತಿಯಿಂದ ಕರೆದುಕೊಳ್ಳುವ ಮುಸ್ಲಿಂ ಮತಕ್ಕೆ ಸೇರಿಕೊಳ್ಳುತ್ತಾಳೆ. ಅವಳ ದುರಂತಕ್ಕೆ ಕಾರಣನಾದ ಹಿಂದೂ ಗಂಡು, ತನ್ನ ಮತದ ಸಾಂಸ್ಕೃತಿಕತೆಯನ್ನು ಕಾಯ್ದುಕೊಳ್ಳುವ ಹುನ್ನಾರಿನಲ್ಲಿ ಸಮಾಜದ್ರೋಹಿ ಯಾಗುವುದು ಕತೆಯ ವಿಷಾದ ದನಿಯನ್ನು ಮಡುಗಟ್ಟಿಸುತ್ತದೆ.

ಇಲ್ಲಿ ಹಿಂದೂ ಮುಸ್ಲಿಂ ಎನ್ನುವ ಸರಳೀಕರಣವಿಲ್ಲ. ಬದುಕುವ ಸಂದರ್ಭ ಮುಖ್ಯವಾಗುತ್ತದೆ. ವ್ಯಕ್ತಿಯ ಅಸ್ತಿತ್ವ ಮೂಲ ಬೇರಿನಲ್ಲೇ ಇರಬೇಕೆಂಬ ಸ್ಥಿರತೆಯನ್ನು ಇದು ತಿರಸ್ಕರಿಸುತ್ತದೆ. 'ಹೋಗಿಯೇ ಬಿಟ್ಟಿದ್ದ' ಕತೆಯಲ್ಲಿ ಹಿಂದೂ ಮುಸ್ಲಿಂ ಗಂಡು ಹೆಣ್ಣಿನ ಪ್ರೀತಿ ಒಂದುಗೂಡಲು ಸಾಧ್ಯವಿಲ್ಲ ಎಂಬ ದುರಂತ ಇದೆ. ಮತೀಯ ಸಮಸ್ಯೆಗೆ ಇದು ಭಾವಾತಿರೇಕದ ಸುಲಭ ಪರಿಹಾರ ಅನಿಸುತ್ತದೆ. ಹಿಂದೂ ಮುಸ್ಲಿಂ ಘಟಕಗಳು ಒಂದೆಡೆ ಸೇರುವುದು ನಮ್ಮಲ್ಲಿ ಕಷ್ಟವಿದೆಯಾದರೂ, ಕತೆಯ ನಡಿಗೆ ಸಹಜವಾಗುವುದಿಲ್ಲ."೨೮

ಈ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿದಾಗ ಗಂಡು ಮತ್ತು ಹೆಣ್ಣಿನ ಆಲೋಚನಾ ಕ್ರಮಗಳು ಹೊಂದಾಣಿಕೆಯಾಗುವಲ್ಲಿ ಇಂತಹದೇ ಕೆಲವು ಕಾರಣಗಳು ಮುಖ್ಯವಾಗುತ್ತವೆ ಎಂದು ನಿರ್ಧಾರಕ್ಕೆ ಬರುವುದು ಕಷ್ಟವಾಗುತ್ತದೆ. ಎರಡು ಮನಸ್ಥಿತಿಗಳು ಒಟ್ಟಾಗಿ ಸೇರಿ ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡು ಹೋದರೆ ಮಾತ್ರ ನಿಜವಾದ ಹೊಂದಾಣಿಕೆ ಸಾಧ್ಯ. ಇದು ಎಲ್ಲಾ ಕಾಲಕ್ಕೂ ಅನ್ವಯಿಸುವ ಅಂಶವಾಗಿದೆ.

" 'ಪ್ರಾಯಶ್ಚಿತ್ತ'ದಲ್ಲಿ ನಳಿನಿಯ ತಾಯಿಯ ಆತ್ಮಹತ್ಯೆಗೆ ಮೂರ್ತಿಯ ತಂದೆ ಕಾರಣ ಎಂಬ ಸೂಚನೆ ಇದೆ. ಅದು ಲೈಂಗಿಕ ಸಂಬಂಧದ್ದಾಗಿರಬಹುದು. ಆದರೆ ಮೂರ್ತಿ ತಂದೆಯ ವಿರೋಧವನ್ನು ಅಲಕ್ಷಿಸಿ ನಲಿನಿಯನ್ನು ಮದುವೆಯಾಗುತ್ತಾನೆ. ಇಲ್ಲಿ ಹೆಣ್ಣನ್ನು ಕೇವಲ ಲೈಂಗಿಕ ಪಾವಿತ್ರ್ಯದಲ್ಲಿ ಗಮನಿಸುವ ಸಾಮಾಜಿಕ ಆಶಯವನ್ನು ತಿರಸ್ಕರಿಸಲಾಗಿದೆ. 'ಆಹುತಿ'ಯಲ್ಲಿ ಗಂಡಿನ ಸರ್ವಾಧಿಕಾರವನ್ನು ಆತ್ಮಹತ್ಯೆಯ ಮೂಲಕ ಹೆಣ್ಣು ತಿರಸ್ಕರಿಸುತ್ತಾಳೆ. ಗೌರಮ್ಮ ಹೆಣ್ಣು ಗಂಡಿನ ಸಾಧ್ಯತೆಗಳನ್ನು ಗಮನಿಸುವಾಗ ಸರಳೀಕರಣದ ವಿಭಜನೆಗೆ ಇಳಿಯುವುದಿಲ್ಲ. ಆದರೆ ಪುರುಷ ಪ್ರಧಾನ ಸಮಾಜ ಹೆಣ್ಣಿನ ಮೇಲೆ ಹೇರುವ ಅವಿವೇಕಗಳನ್ನು ಸ್ಪಷ್ಟವಾಗಿ ವಿರೋಧಿಸುತ್ತಾರೆ. ಮುನ್ನಾದಿನ ಕತೆಯಲ್ಲಿ ಹಿಂದೂ ನಿರ್ಗತಿಕ ಯುವಕ, ತನ್ನ ಬದುಕಿನ ಚಲನೆಯನ್ನು ಮತೀಯ ಘಟಕಗಳನ್ನು ಮೀರುವುದರ ಮೂಲಕ ಗುರುತಿಸಿಕೊಳ್ಳುತ್ತಾನೆ.

ಆತ್ಮೀಯವಾಗಿ ಹರಿಯುವ ಗೌರಮ್ಮನವರ ಬರವಣಿಗೆಯನ್ನು ಅವರ ಹಿರಿಯ ಸಮಕಾಲೀನರಾದ ಮಾಸ್ತಿಯವರಿಗೆ ಹೋಲಿಸಬಹುದು. ಅವರಿಗೆ ಕತೆಯ ಚೌಕಟ್ಟನ್ನು ಮಾಸ್ತಿಯವರ ಹಾಗೆ ಸಾಮಾಜಿಕ ಪರಿಭಾವನೆಯಾಗಿ ಮಾಡಲು ಕಷ್ಟವಾಗುತ್ತಾದರೂ, ಸಾಮಾಜಿಕ ಅವಿವೇಕಗಳು ವ್ಯಕ್ತಿಯ ಬದುಕನ್ನು ಛಿದ್ರ ಮಾಡಬಾರದೆಂಬ ಕಳಕಳಿ ಬರವಣಿಗೆಯ ಉದ್ದಕ್ಕೂ ಕಾಣಿಸಿಕೊಳ್ಳುತ್ತದೆ. ಮಾಸ್ತಿಯವರಿಗೆ ಆನಂದರನ್ನು ನಿಕಟವರ್ತಿಯಾಗಿಸುವುದರ ಬದಲು ಗೌರಮ್ಮನವರನ್ನು ಮಾಡಿಕೊಂಡರೆ, ಆ ಸಂಬಂಧವಾದ ತೌಲನಿಕ ಅಧ್ಯಯನದಲ್ಲಿ ಸಂಸ್ಕೃತಿ ಸಂಬಂಧಿಯಾದ ಹಲವಾರು ಒಳ ನೋಟಗಳು ಸಿಗುವ ಸಾಧ್ಯತೆ ಇದೆ.

ಸ್ತ್ರೀ ಪರವಾದ ಕಾಳಜಿಗಳು ವ್ಯವಸ್ಥಿತವಾಗಿ ಬದುಕನ್ನು ಪ್ರವೇಶಿಸುತ್ತಿರುವುದು ತೀರಾ ಈಚೆಗೆ. ಸ್ವಾತಂತ್ರ್ಯಾ ನಂತರದಲ್ಲಿ ಹಲವಾರು ಸ್ಥಿತ್ಯಂತರಗಳು ನಡೆದ ಹಾಗೆ ಈ ಸ್ತ್ರೀಕೇಂದ್ರಿತ ದೃಷ್ಟಿಕೋನವೂ ಆರಂಭವಾಯಿತು. ಇದರ ಪ್ರಮುಖ ಉದ್ದೇಶ, ಗಂಡು ಬದುಕಿನಲ್ಲಿ ಹೇಗೆ ತನ್ನ ಅಸ್ತಿತ್ವವನ್ನು ಕಾಯ್ದುಕೊಳ್ಳಲು ಪ್ರಯತ್ನಿಸುತ್ತಾನೋ ಹಾಗೆ. ಅಂಥದೇ ಸ್ವತಂತ್ರ ಆವರಣದಲ್ಲಿ ಹೆಣ್ಣು ತನ್ನ ಅಸ್ತಿತ್ವವನ್ನು ರೂಪಿಸಿಕೊಳ್ಳುವ ಪ್ರಯತ್ನ ಮಾಡುವುದು. ಗಂಡು ತನಗೆ ಸಂಬಂಧಿಸಿದ ಘಟಕಗಳ ನಿರ್ವಹಣೆಯಲ್ಲಿ ಹೆಣ್ಣಿನ ಪ್ರವೇಶವನ್ನು ನಿರ್ಬಂಧಿಸುತ್ತಾನೆ. ಹೆಣ್ಣು ಕೂಡ ತಾನು ಇಚ್ಛಿಸಿದ ಬದುಕಿನ ಆವರಣವನ್ನು ಕಟ್ಟಿಕೊಳ್ಳಲು ಮತ್ತು ಅದರಲ್ಲಿ ತನ್ನತನವನ್ನು ಉಳಿಸಿಕೊಳ್ಳಲು ಮಾಡುವ ಪ್ರಯತ್ನದಲ್ಲಿ ಗಂಡಿನ ಪ್ರವೇಶವನ್ನು ವಿರೋಧಿಸುತ್ತಾಳೆ. ಸಾಂಪ್ರದಾಯಿಕ ಮನೋಧರ್ಮಕ್ಕೆ ತೀರಾ ವಿರೋಧಿ ಪ್ರಕ್ರಿಯೆಯಾಗಿರುವ ಇದು, ಕೇವಲ ಚಿಂತನೆಯ ಮಟ್ಟದಲ್ಲೇ ಪುರುಷ ವರ್ಗವನ್ನು ಬೆಚ್ಚಿಸಿ ಬಿಡುತ್ತದೆ."[೨೮]

ಈ ಮೇಲಿನ ಎಲ್ಲಾ ಅಂಶಗಳನ್ನು ನಾವು ಗಮನಿಸಿದಾಗ ಗಂಡು ಮತ್ತು ಹೆಣ್ಣು ಎನ್ನದೆ ಎಲ್ಲದರಲ್ಲಿಯೂ ಸಹ ಸ್ತ್ರೀಯರು ಪುರುಷನಿಗೆ ಸರಿಸಮಾನವಾಗಿ ಮುಂದುವರಿಯಬೇಕೆಂಬುದು ಇಂತಹ ಸ್ತ್ರೀಪರ ಕಾಳಜಿಗಳ

ಆಶಯವಾಗಿದೆ. ಆದರೆ ಇಂತಹ ಸ್ತ್ರೀಪರ ಸಂಘಟನೆಗಳು ಕೆಲಸ ನಿರ್ವಹಿಸುವಾಗ ಪುರುಷರನ್ನು ವಿರೋಧಿಸುವುದು ಅಷ್ಟು ಸಮಂಜಸವಾಗಿ ಕಂಡುಬರುವುದಿಲ್ಲ. ಪುರುಷರ ಮಧ್ಯದಲ್ಲಿಯೇ ಇದ್ದುಕೊಂಡು ಹೆಣ್ಣು ಸಾಧನೆಯತ್ತ ನಡೆಯುವುದನ್ನು ಇಲ್ಲಿ ಮುಖ್ಯವಾಗಿ ಗಮನಿಸಬೇಕಾಗುತ್ತದೆ.

"ಹೆಣ್ಣು ತನ್ನನ್ನು ಗಂಡಿನಂತೆ ಕೇಂದ್ರ ಮಾಡಿಕೊಳ್ಳುವ ಸಂದರ್ಭದಲ್ಲಿ ಹಲವಾರು ವಿಘಟನೆಗಳು ಸಂಘರ್ಷಗಳು ಎದುರಾಗುತ್ತವೆ. ಇದು ಮೇಲುಹಂತದಿಂದ ಮಧ್ಯಮ ಹಂತಕ್ಕೆ ಇದೀಗ ತಾನೇ ಇಳಿದಿದೆ. ಅದರ ಪ್ರಾರಂಭದ ಲಕ್ಷಣ ಹಲವಾರು ಗೊಂದಲಗಳನ್ನು ಆತಂಕಗಳನ್ನು ಸೃಷ್ಟಿಸಿದೆ. ಇದು ಸಾಮಾಜಿಕ ಚಳವಳಿ ಸ್ವರೂಪ ಪಡೆದುಕೊಳ್ಳುತ್ತಿರುವುದರಿಂದ, ಸಾಮಾನ್ಯ ಧೋರಣೆಯಾಗಿಯೂ ಚರ್ಚೆಯಾಗುತ್ತಿದೆ. ಸಾಮಾಜಿಕವಾಗಿ ಇಂಥ ಪರಿವರ್ತನೆಯ ಪ್ರಕ್ರಿಯೆಯೊಂದು ಬದುಕಿನಲ್ಲಿ ಪ್ರವೇಶಿಸುತ್ತಿದೆ ಎಂದಾಗ, ಅದರ ಅತ್ಯುನ್ನತ ಪ್ರತಿನಿಧಿಯಾದ ಸಾಹಿತ್ಯ ಅದನ್ನು ಗಮನಿಸಬೇಕಾದುದು ಅನಿವಾರ್ಯವಾಗಿದೆ. ಅಂಥ ಸ್ಥಿತಿಯನ್ನು ಹೆಣ್ಣೇ ಸಾಹಿತ್ಯಕ್ಕೆ ಪರಿಚಯಿಸುತ್ತಿರುವುದು ಇನ್ನೂ ಗಮನಾರ್ಹವಾದ ಸಂಗತಿ. ಯಾಕೆಂದರೆ ತನ್ನ ಬದುಕಿನಲ್ಲೇ ತಲ್ಲಣ ಎಳಿಸುವ ಈ ಅಲೆಯ ಬಿಸಿ ಹೊಡೆತವನ್ನು ತಾಳಿಕೊಂಡು ಭಾಷೆಗೆ ದಕ್ಕಿಸಿಕೊಳ್ಳುವ ಸಂಗತಿ ಸಾಮಾನ್ಯವಾದುದಲ್ಲ. ಈ ಬಗೆಯ ಸ್ತ್ರೀಪರವಾದ ಚಿಂತನೆಗೆ ಎಲ್ಲ ಅರ್ಥದಲ್ಲೂ ಸ್ಪಷ್ಟವಾಗಿ ತೆರೆದುಕೊಂಡವರಲ್ಲಿ ವೀಣಾಶಾಂತೇಶ್ವರ ಮೊದಲಿಗರು.

ಕತೆ, ಕಾದಂಬರಿಗಳಲ್ಲಿ ಸ್ತ್ರೀಪರವಾದ ಶೋಧನೆಯನ್ನು ಪ್ರಧಾನ ಉದ್ದೇಶವಾಗಿ ಮಾಡಿಕೊಂಡಿರುವ ವೀಣಾ, ಬದುಕಿನ ಅಪಾಯಕಾರಿ ಘಟಕಗಳಲ್ಲಿ ತೀರಾ ನಿರ್ಲಿಪ್ತವಾಗಿ ಮುಖಾಮುಖಿಯಾಗುವ ಧೈರ್ಯ ತೋರಿದ್ದಾರೆ. ಗಂಡು ಓದಲು ಬೆಚ್ಚುವಂತಹ ಇವರ ಬರವಣಿಗೆಯ ಕ್ರಿಯಾಸತ್ತ್ವ, ಆಧುನಿಕತೆಯು ಒಡ್ಡುವ ಸಂಘರ್ಷದಲ್ಲಿದೆ. ಬದುಕಿನ ಕೇಂದ್ರವಾಗುವ ಹೆಣ್ಣು ಗಂಡಿನ ಸಂಬಂಧದ ಕೌಟುಂಬಿಕ ಆಶ್ರಯವು ವೀಣಾ ಅವರ ಸೃಜನಶೀಲತೆಯ ಪ್ರೇರಣೆಯಾಗಿದೆ.

ಗಂಡು ಜಾಣ್ಮೆಯಿಂದ, ತನ್ನ ಸ್ವಾರ್ಥಕ್ಕಾಗಿ ಹೆಣ್ಣನ್ನು ಬಳಸಿಕೊಳ್ಳುವ ತಾಂತ್ರಿಕ ಯಶಸ್ಸು 'ಕವಲು' ಕತೆಯದಾಗಿದೆ. ಐವತ್ತರ ಗಡಿ ದಾಟಿರುವ 'ಅವನು' ಇಪ್ಪತ್ತು ವರ್ಷಗಳ ಸಂಬಂಧದಲ್ಲಿ ಮೀನಾಕ್ಷಿ ಅನ್ಯಳಾಗಿ ಉಳಿಯುವ ದುರಂತಕ್ಕೆ ಕಾರಣವಾಗಿದ್ದಾನೆ ಎಂಬುದನ್ನು ಕಲಾತ್ಮಕ ಆವರಣದೊಳಗೆ ಕಡೆದಿರುವ ರೀತಿ, ಮಹಿಳಾ ಸಾಹಿತ್ಯ ಪಡೆಯಬೇಕಾಗಿರುವ ಆಯಾಮವನ್ನು ಸ್ಪಷ್ಟಪಡಿಸುತ್ತದೆ. ಕೌಟುಂಬಿಕವಾಗಿ ಇರುವ ಹೆಣ್ಣನ್ನು ಉಳಿಸಿಕೊಂಡೂ, ಠಕ್ಕು ಭರವಸೆಗಳಲ್ಲಿ ಬೇರೊಂದು ಹೆಣ್ಣನ್ನು ಲೈಂಗಿಕವಾಗಿ ಬಳಸಿಕೊಳ್ಳುವುದು 'ಅವನ' ವ್ಯಕ್ತಿತ್ವದ ಪ್ರಧಾನ ಆಶಯವಾಗಿದೆ. ಆದ್ದರಿಂದ ಅವನ ಪ್ರತಿಯೊಂದು ನಡೆನುಡಿಯೂ ಅವಳನ್ನು ನಂಬಿಸುವ ವಂಚನೆಯಲ್ಲಿ ದಿನದಿಂದ ದಿನಕ್ಕೆ ನವೀನಗೊಳ್ಳುತ್ತದೆ. ಅವಳು ಇದ್ದರೂ ಇರಬಹುದು ಎಂಬ ನಿರೀಕ್ಷೆಯಲ್ಲಿ ಕಾಯುತ್ತಾಳೆ.

ಆದರೆ ಅದು 'ಅವನ' ವಂಚನೆಯ ಒಂದು ಅವಿಭಾಜ್ಯ ಅಂಗವೇ ಆಗಿಬಿಟ್ಟಾಗ, ತನ್ನ ಸ್ವಂತಿಕೆಯನ್ನು ನಿರ್ಧಾರಕ ಗಳಿಗೆಯಲ್ಲಿ ಪ್ರಕಟಗೊಳಿಸುವುದೇ, ಅವಳು ಬದುಕಿನ ಅರಿವಿಗೆ, ಅನುಭವದ ಸಾಂಸ್ಕೃತಿಕ ಪಲ್ಲಟಕ್ಕೆ ಗೌರವ ತೋರುತ್ತಿರುವ ಸೂಚನೆಯಾಗಿದೆ. ಮೀನಾಕ್ಷಿಯ ಈ ಬಂಡಾಯ ವೈಯುಕ್ತಿಕತೆಯು

ನಾಶವಾಗುವುದನ್ನು ತಡೆಯುವ ಸಮಕಾಲೀನ ಆಶೋತ್ತರಗಳಿಗೆ ನಿದರ್ಶನವಾಗಿದೆ. ಸ್ವಾತಂತ್ರ್ಯದ ಹಂಬಲದಲ್ಲಿ ಹೆಣ್ಣು ವಿಘಟನೆಯ ನೆಲೆಗಳನ್ನು ನಿರಾಕರಿಸಿ, ಅದರಿಂದ ಉತ್ಪನ್ನವಾಗುವ ದುರಂತಕ್ಕೆ ಬಲಿಯಾಗುವುದನ್ನು 'ಅವಳ ಸ್ವಾತಂತ್ರ್ಯ' ಸಶಕ್ತವಾಗಿ ವ್ಯಕ್ತಪಡಿಸಿದೆ."[೨೦]

ಇಂದಿನ ಸಮಾಜದಲ್ಲಿ ಹೆಣ್ಣು ಗಂಡಿನ ಸಂಬಂಧ ತುಂಬಾ ಪ್ರಾಮುಖ್ಯವಾದದ್ದು. ಪುರುಷರು ಹೆಣ್ಣಿನ ಆಕರ್ಷಣೆಗೆ ಒಳಪಟ್ಟು ಅವರನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳುವುದನ್ನು ಕಾಣುತ್ತೇವೆ. ಹಾಗೂ ಪುರುಷರು ಹೆಣ್ಣನ್ನು ಪ್ರತಿಯೊಂದು ಸಂದರ್ಭದಲ್ಲಿಯೂ ನಿಯಂತ್ರಣದಲ್ಲಿ ಇಟ್ಟುಕೊಂಡು ತನ್ನಿಚ್ಛೆಯಂತೆ ನಡೆಸಿಕೊಳ್ಳಬೇಕೆಂಬುದು ಪುರುಷನ ಇಚ್ಛೆಯಾಗಿರುತ್ತದೆ. ಕುಟುಂಬ ಹಾಗೂ ಈ ಸಮಾಜ ಹೆಣ್ಣನ್ನು ತಮ್ಮ ಅಂಕೆಯಲ್ಲಿ ಇಟ್ಟುಕೊಳ್ಳಬೇಕೆಂದು ಹವಣಿಸುವುದನ್ನು ಕಾಣಬಹುದು. ಇತ್ತೀಚಿನ ದಿನಗಳಲ್ಲಿ ಪುರುಷನಿಗೆ ಸರಿಸಮಾನಳಾಗಿ ತನ್ನ ಹಕ್ಕನ್ನು ಪ್ರತಿಪಾದಿಸುವ ಹಾಗೂ ವಿರೋಧಿಸುವವರಿಗೆ ಪ್ರತ್ಯುತ್ತರವನ್ನು ನೀಡುವಂತಹ ಬಂಡಾಯ ಪ್ರವೃತ್ತಿಗಳನ್ನು ಕಾಣಬಹುದಾಗಿದೆ.

"ವಿಮಲಾ ಕೌಟುಂಬಿಕ ಒತ್ತಡಗಳಲ್ಲಿ ತನ್ನ ಆಶಯಗಳನ್ನು ತಿರಸ್ಕೃತ ಆವರಣದೊಳಗೆ ಮರು ಪರಿಶೀಲಿಸಿಕೊಳ್ಳುವ ಅಥವಾ ಅವು ಯಾವ ಅರ್ಥವೂ ಇಲ್ಲದೆ ಕಮರಿ ಹೋಗುವ, ಗಂಡು ತನ್ನ ಬಿಡುವಿನ ವೇಳೆಯನ್ನು ತನಗಾಗಿ ಮಾತ್ರವೇ ಬಳಸಿಕೊಳ್ಳಬೇಕೆಂಬ ಹಿನ್ನೆಲೆಯಲ್ಲಿ ಹೆಣ್ಣಿನ ಸ್ಥಾನಮಾನವನ್ನು ಸಾಂಪ್ರದಾಯಿಕ ಸ್ತರದಲ್ಲಿ ನಿರ್ದೇಶಿಸುವುದು ಈ ಸಂದರ್ಭದ ವ್ಯಂಗ್ಯಕ್ಕೆ ಮಹತ್ವದ ಕೊಡುಗೆಯಾಗಿದೆ. ಇಲ್ಲಿ ಲೈಂಗಿಕ ಸಂಬಂಧ ಕೂಡ ಜೀವಂತಿಕೆಯಿಲ್ಲದ, ಕೇವಲ ಗಂಡಿನ ಬಯಕೆಗಷ್ಟೇ ಹೆಣ್ಣು ಅಸ್ತಿತ್ವ ಕಾಯ್ದುಕೊಳ್ಳಬೇಕಾಗಿರುವ ಹೀನಾಯ ಸ್ಥಿತಿಯನ್ನು ವಿಮಲಾ ಪ್ರತಿನಿಧಿಸುತ್ತಾಳೆ. ಶೋಷಣೆಯನ್ನು ಒಪ್ಪಿಕೊಳ್ಳುವುದರಲ್ಲೇ ಬಂಡಾಯದ ಹೊಳಹನ್ನು ತೋರುವಳಾದರೂ, ಕೌಟುಂಬಿಕ ಬಂಧನವು ಅದನ್ನು ಹೊಸಗಿ ಹಾಕಿಬಿಡುತ್ತದೆ. ತನ್ನ ಜೀವನದಲ್ಲಿ ಸಾಧಿಸಲು ಸಾಧ್ಯವಾಗದೇ ಇದ್ದದ್ದನ್ನು ಭಾಷಣದಲ್ಲಿ ಪ್ರಖರವಾಗಿ ಮಂಡಿಸುತ್ತಾಳೆ. ಆದರೆ ಅದು ಬದುಕಿನ ಹತಾಶೆಯ, ಅಸಹಾಯಕತೆಯ ಸಂಕೇತವಾಗಿದೆ. ಹೆಣ್ಣು ಗಂಡಿನ ಭೋಗ ಸಾಮಗ್ರಿ, ಕೇವಲ ಸೇವಕ ಸ್ತರದವಳು ಎಂಬ ಸಾಂಪ್ರದಾಯಿಕ ದೃಷ್ಟಿಕೋನವನ್ನು ಪ್ರಬುದ್ಧವಾಗಿ ಪರಿಚಯ ಮಾಡಿಕೊಡುತ್ತಲೇ, ಅದಕ್ಕಿಂತ ಭಿನ್ನವಾದ ಮಾರ್ಗವನ್ನು, ಬದುಕು ತನ್ನನ್ನು ಒಳಗೊಳ್ಳಬೇಕು ಎಂಬ ಹೆಣ್ಣಿನ ಆಶಯವನ್ನು ಕತೆ ಯಾವ ಆಡಂಬರವೂ ಇಲ್ಲದೆ ಅಭಿವ್ಯಕ್ತಿಸಿದೆ. ಹೆಣ್ಣಿನ ಬಗೆಗೆ ಇರುವ ಗಂಡಿನ ದೃಷ್ಟಿಕೋನವು ಬದಲಾಗಬೇಕು ಎಂಬುದನ್ನು ಹೇಳುವ ರೀತಿಯು ವೀಣಾ ಅವರ ಶ್ರೇಷ್ಠ ಕಲಾತ್ಮಕ ಸಿದ್ಧಿಯ ದ್ಯೋತಕವಾಗಿದೆ.

ಹಿಂದೂ ಮುಸ್ಲಿಂ ಬದುಕಿನ ವಿವರಗಳು 'ತಿರುಗಿ ಹೋದಳು' ಕತೆಯಲ್ಲಿ ಶಿಕ್ಷಿತ ಮತ್ತು ಅಶಿಕ್ಷಿತ ನೆಲೆಯಲ್ಲಿ ಅನಾವರಣಗೊಂಡಿದೆ. ಸಹಜವಾಗಿ ಅರಳಿ ಬಾಳಬಹುದಾಗಿದ್ದ ಹಮೀದಾ ಇಳಿ ವಯಸ್ಸಿನ ಮಹಮ್ಮದ ಗೌಸನನ್ನು ಮದುವೆಯಾಗಿ, ಕೇವಲ ಅವನೊಡನೆ ಮಲಗುವಷ್ಟಕ್ಕೇ ಸೀಮಿತವಾಗುತ್ತಾಳೆ. ಇದರಿಂದಾಗಿ ಹುಟ್ಟಿದ ಮಕ್ಕಳ ಸಂಪೂರ್ಣ ಹೊಣೆ ಹಮೀದಳದೇ ಆಗುತ್ತದೆ. ಅವನಿಗೆ ಈಕೆ ವೇಶ್ಯೆಯಾಗುತ್ತಾಳೆ. ಅಂದರೆ ಗಂಡು ತನಗೆ ಸರಿಕಂಡ ರೀತಿಯಲ್ಲಿ ಹೆಣ್ಣನ್ನು ಬಳಸಿಕೊಳ್ಳುತ್ತಾನೆ.

ಇಂಥ ಸ್ಥಿತಿಯನ್ನು ಲಕ್ಷ್ಮಿ ತಿರಸ್ಕರಿಸಬೇಕೆಂದು ಹಮೀದಳಿಗೆ ಹೇಳುತ್ತಾಳೆ. ಆದರೆ ಜೀವನದಲ್ಲಿ ಒಮ್ಮೆ ಮಾತ್ರ ಶಾಸ್ತ್ರಾನುಸಾರ ಗಂಡನನ್ನು ಪಡೆಯಬಹುದಾಗಿದ್ದ ಹಮೀದ, ಆತನ ಕ್ರೌರ್ಯ ಎಷ್ಟೇ ಅಮಾನವೀಯ ವಾಗಿದ್ದರೂ ವಿರೋಧಿಸುವುದನ್ನಾಗಲಿ, ತಿರಸ್ಕರಿಸುವುದನ್ನಾಗಲಿ ಕಳೆದುಕೊಂಡಿರುತ್ತಾಳೆ. ಈ ಬಗೆಯ ಅಸಹಾಯಕ ಸ್ಥಿತಿಯ ಅನುಭವ ಲಕ್ಷ್ಮಿಗೆ ತನ್ನ ಬದುಕಿನ ಸಂದರ್ಭದಲ್ಲೇ ಎದುರಾದಾಗ, ಹಮೀದಳನ್ನು ಅರ್ಥಮಾಡಿಕೊಳ್ಳುತ್ತಾಳೆ. ಗಂಡನ ತಾತ್ಸಾರ ಮತ್ತು ನಾಟಕೀಯ ಪ್ರೀತಿ ಪ್ರೇಮ ತನ್ನ ಬಾಳಿನ ಬೇರುಗಳನ್ನು ಅಲುಗಾಡಿಸುತ್ತಿದ್ದರೂ, ಸಹಿಸಿಕೊಳ್ಳುತ್ತಾಳೆ. ಹಮೀದಳಿಗೆ ತಾನು ಬೋಧಿಸುತ್ತಿದ್ದ ಬಂಡಾಯ ಅರ್ಥಹೀನ ವಾದದ್ದು ಎಂಬುದರ ಕಟು ಅನುಭವವಾಗುತ್ತದೆ. ಇಲ್ಲಿ ಅರಿವು ಇದ್ದೂ ಶೋಷಿತಳಾಗುತ್ತಿರುವುದು ಸ್ಥಿತಿಯ ಸಾಂದರ್ಭಿಕ ಒತ್ತಡದಲ್ಲಿ ಅನಿವಾರ್ಯವಾಗಿ ಬಿಡುವುದರಿಂದ, ಗಂಡಿನ ಚೆಲ್ಲಾಟಗಳು ಸಾಂಸ್ಕೃತಿಕವಾಗಿ ಅಪಾಯಕಾರಿಯಾಗುವ ದಾರಿಯಲ್ಲಿ ಸಾಗುತ್ತವೆ. ಇದು ಹೆಣ್ಣಿನ ನೋವನ್ನು ಹೆಚ್ಚಿಸುವುದಾದರೂ, ಕೌಟುಂಬಿಕ ಬದುಕಿನಿಂದ ಹೆಣ್ಣು ಗಂಡು ಇಬ್ಬರೂ ಒಟ್ಟಿಗೆ ವಂಚಿತರಾಗುತ್ತಿದ್ದಾರೆ ಅನಿಸುತ್ತದೆ."[೩೧] ಯಾಕೆಂದರೆ, ಸುರೇಶ ಅನ್ಯ ನೆಲೆಯಲ್ಲಿ ಆಸಕ್ತನಾಗಿದ್ದಾನೆ. ಆದರೆ ಅದು ಅವನನ್ನು ಸಂತೃಪ್ತವಾಗಿಸುತ್ತಿಲ್ಲ ಎಂಬುದರ ಸೂಚನೆಯನ್ನು ಕತೆ ಸ್ಪಷ್ಟವಾಗಿ ಕೊಡುತ್ತದೆ. ಅಲ್ಲದೆ ಹಣದ ಸುಲಿಗೆಯೂ ಪ್ರಧಾನವಾಗಿರುವಂತೆ ಕಾಣುತ್ತದೆ.

"ಹೆಣ್ಣಿನ ವ್ಯಕ್ತಿತ್ವ ಭಾರತೀಯ ಸಮಾಜದಲ್ಲಿ ಹಲವಾರು ನಿರೀಕ್ಷೆಗಳಲ್ಲಿ ಹರಿದು ಹಂಚಿ ಹೋಗಿರುವುದರಿಂದ, ಇವುಗಳ ನಡುವೆ ಆಕೆಯ ನೆಲೆ ಯಾವುದು ಎಂಬುದನ್ನು ಶೋಧಿಸುವ ಪ್ರಯತ್ನ ವೀಣಾ ಅವರ ಸಾಹಿತ್ಯದಲ್ಲಿ ಕಂಡು ಬರುತ್ತದೆ. ಭಾರತೀಯ ಹೆಣ್ಣು ಪುರುಷ ಪ್ರಧಾನ ವ್ಯವಸ್ಥೆಯ ಕಟ್ಟುಪಾಡುಗಳನ್ನು ಕಳಚಿ ಹಾಕುವ ಪ್ರಕ್ರಿಯೆಯನ್ನು ಇದೀಗ ತಾನೆ ಪ್ರಾರಂಭಿಸಿದ್ದಾಳೆ. ಸದ್ಯದ ಜರೂರಿನ ಸಂದರ್ಭದಲ್ಲಿ ಹೆಣ್ಣು ಸಂಸ್ಕೃತಿಗೆ ಪೂರಕವಾಗಿ ನಿಲ್ಲುವ ಸಾಧ್ಯತೆ ಎರಡು ರೀತಿಯಲ್ಲಿ ಗುರುತಿಸಬಹುದು.

ಕನ್ನಡದಲ್ಲಿ ಮಹಿಳೆ ಎದುರಿಸುತ್ತಿರುವ ಸವಾಲು ಹಲವಾರು ಬಗೆಯಲ್ಲಿದೆ. ಎಲ್ಲ ಬಗೆಯ ಸ್ಥಿತ್ಯಂತರಕ್ಕೂ ಶರಣಾಗತಿಗೂ ಒಳಗಾಗುತ್ತಿರುವ ಮೊದಲ ಜವಾಬ್ದಾರಿ ಈ ತಲೆಮಾರಿನ ಲೇಖಕಿಯರದು. ಹೆಣ್ಣು ಸಂಪ್ರದಾಯಬದ್ಧವಾಗಿ ಬದುಕುತ್ತಿರುವಾಗ ಅಲ್ಲಿ ಸೃಷ್ಟಿಯಾಗುವ ಅನುಭವಗಳು ಮತ್ತು ಪರಂಪರೆಯ ವಲಯದೊಳಗೆ ಆಧುನಿಕ ಪ್ರಕ್ರಿಯೆಯನ್ನು ಎದುರಿಸುತ್ತಿರುವಾಗ ಉಂಟಾಗುವ ಆತಂಕಗಳು ಅವಳ ವ್ಯಕ್ತಿತ್ವ ನಿರ್ಮಾಣದಲ್ಲಿ ಹೇಗೆ ಸಹಕಾರಿಯಾಗುತ್ತವೆ ಎಂಬುದು ಎಲ್ಲ ಲೇಖಕಿಯರ ಕೇಂದ್ರ ಆಶಯವಾಗಿದೆ. ಇಂಥ ಸಂದರ್ಭದಲ್ಲಿ ಬರವಣಿಗೆ ಹರಿಯುವ ದಿಕ್ಕನ್ನು ಖಚಿತಪಡಿಸಿಕೊಳ್ಳುವುದು ಬಹಳ ಕಷ್ಟವಾಗುತ್ತದೆ. ಯಾಕೆಂದರೆ, ಇಲ್ಲಿ ಯಾವುದೋ ಒಂದರ ಸೆಳುವಿಗೆ ಸಿಲುಕಿಬಿಡಬಹುದಾದ ಅಥವಾ ಕಳೆದುಹೋಗಬಹುದಾದ ಅಪಾಯ ಇರುತ್ತದೆ. ಇಂಥ ಅಪಾಯವನ್ನು ಸೃಜನಶೀಲವಾಗಿ ವೈದೇಹಿ ಹೇಗೆ ಎದುರಿಸಿದ್ದಾರೆ ಎಂಬ ಅಧ್ಯಯನ ನಿಜಕ್ಕೂ ಆಸಕ್ತಿ ಮೂಡಿಸುತ್ತದೆ."[೩೨]

ಒಟ್ಟಾರೆ ಹೇಳುವುದಾದರೆ ಸ್ವಾತಂತ್ರ್ಯೋತ್ತರ ಸಣ್ಣ ಕತೆಗಳಲ್ಲಿ ಸ್ತ್ರೀಯ ಬದುಕಿನ ಅನಾವರಣ ಗಂಭೀರವಾದುದು. ಸ್ತ್ರೀ ಪರಿಭಾವನೆಯು ಎಲ್ಲಾ ಮುಖಗಳಿಂದಲೂ ಆಕೆಯನ್ನು ಸ್ವಾವಲಂಬಿಯನ್ನಾಗಿಸುವ ದಿಶೆಯಲ್ಲಿಯೇ ವ್ಯಕ್ತವಾಗಿರುವುದು ಅವಶ್ಯ ಗಮನಿಸಬೇಕಾದ ವಿಚಾರ. ಗ್ರಾಮೀಣ ಬದುಕು ಬಹುಮುಖ್ಯವಾಗಿ

ಕೂಡುಕಟ್ಟಿನ ನೆಲೆಯದಾದ್ದರಿಂದ ವೈಯಕ್ತಿಕ ಆಸೆ-ಆಕಾಂಕ್ಷೆಗಳು, ಒಲವು-ನಿಲವುಗಳು ಒಂದು ಹಂತದವರೆಗೆ ವ್ಯಕ್ತವಾದರೂ ನಂತರದಲ್ಲಿ ಅವು ಪ್ರಧಾನ ವಾಂಛೆಯಾಗಿ ಉಳಿಯುವುದಿಲ್ಲ. ಸ್ತ್ರೀ ಬದುಕು ಎಂಬ ಪ್ರತ್ಯೇಕ ಅಸ್ತಿತ್ವ ಗ್ರಾಮೀಣ ಬದುಕಿನಲ್ಲಿ ನೆಲೆಗೊಂಡರೆ ಗ್ರಾಮೀಣ ವ್ಯವಸ್ಥೆಯ ಎಲ್ಲಾ ಸ್ವರೂಪಗಳಲ್ಲೂ ಏರುಪೇರು ಉಂಟಾಗಿ ಬಿಡುತ್ತದೆ. ಹಾಗಾಗಿಯೇ ಗ್ರಾಮೀಣ ಬದುಕಿನ ಕತೆಗಳಲ್ಲಿ ಈ ಸಡಿಲತೆ, ಸ್ವಾತಂತ್ರ್ಯವನ್ನು ಬಹಳ ಎಚ್ಚರಿಕೆಯಿಂದಲೇ ಲೇಖಕರು ಚಿತ್ರಿಸಿದ್ದಾರೆ. 'ಪರಿಭಾವನೆ'ಯ ಬಗ್ಗೆ ಗಂಭೀರವಾಗಿ ಪ್ರತಿಕ್ರಿಯಿಸಿದ್ದಾರೆ. ನಮ್ಮ ಲೇಖಕರಿಗೆ ಮುಖ್ಯವಾದುದು ಗ್ರಾಮೀಣ ಬದುಕಿನಲ್ಲಿ ಮುಖ್ಯವಾಗಿರುವ ಸಾಮುದಾಯಿಕ ಸ್ವರೂಪವೇ ವಿನಾ ನಗರದ ಅನಾಥ, ಅಪರಿಚಿತ, ಒಂಟಿತನದ ಬದುಕಲ್ಲ. ಎಲ್ಲಾ ಲೇಖಕರಲ್ಲಿ 'ಸ್ತ್ರೀ ಬದುಕಿನ ಮುಖ್ಯ ಜೀವನಾಡಿ' ಎಂಬ ಮುಖ್ಯ ಧ್ವನಿ ವ್ಯಕ್ತವಾಗಿರುವುದು ಈ ಕಾರಣದಿಂದಲೇ. ಒಬ್ಬ ಸ್ತ್ರೀಯ ಪತನ ಆಯಾ ಕುಟುಂಬದ ಎಲ್ಲಾ ಆಗುಹೋಗುಗಳ ಮೇಲೂ ಗಂಭೀರ ಪರಿಣಾಮ ಬೀರುತ್ತದೆ. ಸಹಜ ಸಾವಿನಿಂದ ಆಗುವ ಪರಿಣಾಮವೇ ಸಹಿಸಿಕೊಳ್ಳುವುದು ಕಷ್ಟ. ಇನ್ನು ಶೋಷಣಾತ್ಮಕ ತಾರತಮ್ಯದ ಗೋಳು ಮತ್ತು ಅಸಹಜ ಸಾವು ಆ ಕುಟುಂಬದ ಮಕ್ಕಳು ಮರಿಯಾದಿ ಸದಸ್ಯರನ್ನು ಬಾಧಿಸದೆ ಬಿಡುವುದಿಲ್ಲ.

## ೫. ೨. ಲಿಂಗಭೇದ ನೀತಿ ಮತ್ತು ಗ್ರಾಮೀಣ ಸಮಾಜ

"ಯಾವುದೇ ಒಂದು ದೇಶದ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಅಳೆಯುವ ಮಾನದಂಡ ದೇಶದಲ್ಲಿ ಸ್ತ್ರೀಯು ಹೊಂದಿರುವ ಸ್ಥಾನಮಾನದಲ್ಲಿ ಅಡಗಿದೆ. ಸ್ತ್ರೀಯರಿಗೆ ಉತ್ತಮ ಸ್ಥಾನಮಾನಗಳನ್ನು ಕೊಡದ ಸಮಾಜ ಎಂದಿಗೂ ಪ್ರಗತಿ ಸಾಧಿಸಲಾರದು. ನಮ್ಮ ದೇಶದ ಮಟ್ಟಿಗೆ ಇದು ಸತ್ಯಕ್ಕೆ ಅತೀ ಹತ್ತಿರವಾದ ಮಾತು. ನಮ್ಮ ದೇಶದ ಸ್ತ್ರೀಯರ ಸ್ಥಾನಮಾನ ಉನ್ನತ ಸ್ಥಿತಿಯಲ್ಲಿದ್ದಾಗ ನಮ್ಮ ದೇಶವು ಪ್ರಗತಿ ಪಥದಲ್ಲಿ ಸಾಗುತ್ತಿತ್ತು. ಯಾವಾಗ ಸ್ತ್ರೀಯರ ಸ್ಥಾನಮಾನದಲ್ಲಿ ಅವನತಿ ಪ್ರಾರಂಭವಾಯಿತೊ ಹಾಗೆ ಸಮಾಜದ ಅವನತಿಯೂ ಪ್ರಾರಂಭವಾಯಿತು.

ಸ್ತ್ರೀಯ ಸ್ಥಾನ-ಮಾನದ ಅವನತಿಯಿಂದಾಗಿ ನಮ್ಮ ದೇಶವು ದಾಸ್ಯದ ಸಂಕೋಲೆಗಳಲ್ಲಿ ಬಿದ್ದು ಒದ್ದಾಡಿ ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುವ ಸ್ಥಿತಿಯನ್ನು ತಲುಪಿತು. ತನ್ನ ಸ್ಥಾನಮಾನದ ಅವನತಿಯಾಗಿದ್ದರೂ ಭಾರತ ದೇಶವನ್ನು ದಾಸ್ಯದ ಸಂಕೋಲೆಯಿಂದ ಬಿಡಿಸಲು ಪ್ರೇರಣೆಯಾಗಿ ನಿಂತವಳು ಸ್ತ್ರೀಯೇ. ಇತಿಹಾಸದ ಪುಟಗಳು ಇದಕ್ಕೆ ಸಾಕ್ಷಿಯಾಗಿ ನಿಂತಿವೆ. ಜಗತ್ತಿನ ಎಲ್ಲಾ ಸಂಸ್ಕೃತಿಗಳಿಗಿಂತಲೂ ಅತ್ಯುತ್ತಮ ಸಂಸ್ಕೃತಿ ಎನಿಸಿಕೊಂಡಿರುವ ಭಾರತೀಯ ಸಂಸ್ಕೃತಿಯನ್ನು ಗುರುತಿಸುವುದು ಆರ್ಯ ಸಂಸ್ಕೃತಿಯಿಂದ. ಈ ಆರ್ಯ ಸಂಸ್ಕೃತಿಯ ತೊಟ್ಟಿಲುಗಳು ಗ್ರಾಮಗಳೇ. ಅವರು ಮೊದಲು ನಿರ್ಮಿಸಿದ್ದು ಗ್ರಾಮಗಳನ್ನೇ ಹೊರತು ನಗರಗಳನ್ನಲ್ಲ. ಹಾಗಾಗಿ ಈ ಸಂಸ್ಕೃತಿಯ ಭವ್ಯತೆಗೆ ಗ್ರಾಮೀಣ ಸ್ತ್ರೀಯರ ಕೊಡುಗೆ ಅಪಾರವಾದುದು."[೩೩]

ಲಿಂಗಭೇದ ನೀತಿ ಮತ್ತು ಗ್ರಾಮೀಣ ಸಮಾಜ ಈ ವಿಷಯವನ್ನು ಪರಿಶೀಲಿಸಿ ನೋಡಿದಾಗ ಗ್ರಾಮೀಣ ಸಮಾಜದಲ್ಲಿಯೂ ಮಗು ಜನ್ಮ ತಳೆದ ದಿನದಂದಿನಿಂದಲೇ ಲಿಂಗ ತಾರತಮ್ಯವನ್ನು ಕಾಣಬಹುದು. ಹೆಣ್ಣು ಮಗು ಹುಟ್ಟಿದ ತಕ್ಷಣ ಗಂಡು ಸಂತಾನವಾಗಲಿಲ್ಲ, ಆಸ್ತಿ ಮತ್ತು ಇತರ ಕೆಲಸಗಳಿಗೆ ವಾರಸುದಾರರಿಲ್ಲ ಸತ್ತಾಗ ಕೊಳ್ಳಿ ಇಡಲು ಹೆಣ್ಣು ಮಗಳಿಂದ ಸಾಧ್ಯವಿಲ್ಲ. ಹೆಣ್ಣು ಮಗಳು ಬೇರೆ ಮನೆಗೆ ಹೋಗುತ್ತಾಳೆ.

ತಂದೆ ತಾಯಿಗಳಿಗೆ ದುಡಿದು ಹಾಕುವುದಕ್ಕೆ ಗಂಡು ಮಕ್ಕಳು ಮೂಲ ಎಂಬುದನ್ನು ತೋರಿಸುವುದನ್ನು ನಾವು ಕಾಣಬಹುದು. ಕುಟುಂಬ ಯೋಜನೆಯಲ್ಲಿಯೂ ಸಹ ಬರಿ ಹೆಣ್ಣು ಮಕ್ಕಳಾದರೆ ಗಂಡು ಮಗುವಾಗುವವರೆಗೂ ಕಾಯುವುದು. ಗಂಡು ಮಗು ಹಡೆಯದ ತಾಯಿಯನ್ನು ನೀಂದಿಸುವುದು. ಗಂಡು ದಿಕ್ಕಿಲ್ಲದ ಮನೆ ಎಂದು ಹೀಯ್ಯಾಳಿಸುವುದು. ಮದುವೆಯಾಗದವರನ್ನು ಸಮಾಜದಲ್ಲಿ ಕೆಳಮಟ್ಟದಲ್ಲಿ ನೋಡುವುದು. ಇದರ ಜೊತೆಗೆ ಮನೆಯಲ್ಲಿ ತಂದೆ, ತಾಯಂದಿರು ಹೆಣ್ಣು ಮಕ್ಕಳ ಪೋಷಣೆ ಮತ್ತು ಆಧಾರಣೆಯ ಬಗ್ಗೆ ತಾರತಮ್ಯ ತೋರುವುದು. ಹೆಚ್ಚಿನ ಶಿಕ್ಷಣ ಕೊಡಿಸದೆ ಇರುವುದು ಬೇರೆ ಮನೆಗೆ ಹೋಗುತ್ತಾಳೆ ಇವಳಿಗೆ ಏಕೆ ಓದು ಎಂದು ತಾತ್ಸಾರ ತೋರುವುದು. ಮುಂತಾದ ಅನೇಕ ಉದಾಹರಣೆಗಳಿಂದ ಲಿಂಗಭೇದವನ್ನು ಕಾಣಬಹುದು. ಊರಿನ ಅನೇಕ ಮುಖ್ಯ ಕೆಲಸ ಕಾರ್ಯಗಳಿಗೆ ಪ್ರತಿಯೊಂದಕ್ಕೂ ಪುರುಷರನ್ನೇ ಆಯ್ಕೆ ಮಾಡಿಕೊಳ್ಳುವುದು ಹೆಂಗಸರಿಗೆ ಪ್ರತ್ಯೇಕ ಕೆಲಸ ಗಂಡಸರಿಗೆ ಪ್ರತ್ಯೇಕ ಎಂಬ ತಾರತಮ್ಯ ತೋರುವುದು. ಹೆಂಗಸರ ದುಡಿಮೆ ಮತ್ತು ಗಂಡಸರ ದುಡಿಮೆಯಲ್ಲಿ ವ್ಯತ್ಯಾಸ ಕಾಣಬಹುದು. ದೇವಸ್ಥಾನದ ಮತ್ತಿತರ ಪೂಜಾ ಸ್ಥಳಗಳಲ್ಲಿ ಪುರುಷರನ್ನೇ ಅರ್ಚಕರನ್ನಾಗಿ ನೇಮಿಸುವುದು. ಇದರಲ್ಲಿ ನಾವು ಅತ್ಯಂತ ಲಿಂಗತಾರತಮ್ಯ ನೋಡುವುದು. ಇವೆಲ್ಲ ಅಂಶಗಳನ್ನು ನಾವು ಗ್ರಾಮೀಣ ಸಮಾಜದಲ್ಲಿ ಕಾಣಬಹುದು. ಗ್ರಾಮೀಣ ಸಮಾಜದಲ್ಲಿ ಯಾವುದೇ ನ್ಯಾಯ ಪಂಚಾಯತಿ ತೀರ್ಮಾನಗಳಿಗೆ ಗಂಡಸರೇ ಮುಖ್ಯರಾಗಿರುತ್ತಾರೆ. ನಮ್ಮ ಗ್ರಾಮೀಣ ಸಮಾಜದಲ್ಲಿ ಹೆಣ್ಣು ವಿಧವೆಯಾದರೆ ಗ್ರಾಮೀಣ ಪ್ರದೇಶಗಳಲ್ಲಿ ಯಾವುದೇ ಮಂಗಳಕಾರ್ಯ, ಸಭೆ, ಸಮಾರಂಭಗಳಲ್ಲಿ ಭಾಗವಹಿಸುವಂತಿಲ್ಲ. ಇದು ಸಮಾಜದ ಕಟ್ಟುಪಾಡು. ಶುಭ ಕೆಲಸಗಳಿಗೆ ಹೊರಟರೆ ವಿಧವೆ ಎದುರಿಗೆ ಬಂದಾಗ ಅಪಶಕುನವೆಂದು ಭಾವಿಸುವುದು. ಪ್ರತಿಯೊಂದು ಕೆಡುಕು ಮನೆಯಲ್ಲಿ ಉಂಟಾದಾಗ ಎಲ್ಲದಕ್ಕೂ ಹೆಣ್ಣೇ ಕಾರಣವೆಂದು ಸೂಚಿಸುವುದು ಇವೆಲ್ಲ ನಮ್ಮ ಗ್ರಾಮೀಣ ಸಮಾಜದಲ್ಲಿ ಕಾಣುತ್ತೇವೆ.

" 'ಲಿಂಗ' ಮತ್ತು 'ಲಿಂಗ ವ್ಯವಸ್ಥೆ' ಎಂಬ ಪರಿಕಲ್ಪನೆಗಳಿಗೆ ವ್ಯತ್ಯಾಸಗಳನ್ನು ಗುರುತಿಸುವುದೇ ಸಂಸ್ಕೃತಿ ಎನ್ನುವ ಪದವನ್ನು ಬಳಸಿಕೊಳ್ಳುವುದರ ಮೂಲಕ. ಲಿಂಗ ಎನ್ನುವುದು ಸ್ತ್ರೀ ಪುರುಷರ ನಡುವಣ ಜೈವಿಕ ವ್ಯತ್ಯಾಸಗಳನ್ನು ತಿಳಿಸುವಂಥ ಒಂದು ಪರಿಕಲ್ಪನೆಯಾದರೆ, ಲಿಂಗ ವ್ಯವಸ್ಥೆ ಎನ್ನುವುದು ಸಂಸ್ಕೃತಿಯಿಂದ ನಿರ್ಮಿತವಾದಂಥ ಒಂದು ವಾಸ್ತವ. ಇದನ್ನು ತಿರಸ್ಕರಿಸುವುದಾಗಲೀ, ಆ ವ್ಯತ್ಯಾಸಗಳಿಗೆ ಅತಿಯಾದ ಪ್ರಾಮುಖ್ಯತೆಯನ್ನು ನೀಡುವುದಾಗಲೀ ವೃಥಾ ಕಾಲಹರಣವಷ್ಟೆ. ಭಿನ್ನ ಜೈವಿಕತೆಯ ಕಾರಣದಿಂದಾಗಿ ಸ್ತ್ರೀ ಪುರುಷರು ಮಾಡಬಹುದಾದ ಅಥವಾ ಮಾಡಬಾರದ ಕಾರ್ಯಗಳಲ್ಲೂ ವ್ಯತ್ಯಾಸಗಳಿರಬೇಕೆನ್ನುವುದು ಸಂಸ್ಕೃತಿ ನಿರ್ಮಾಣ ಮಾಡಿ, ಪೋಷಿಸಿಕೊಂಡು ಬಂದಿರುವಂಥ ಒಂದು ಮಿಥ್ಯೆ. ಸ್ತ್ರೀಯನ್ನು ದುರ್ಬಲೆ ಎನ್ನುವುದು, ಹಲವು ಜವಾಬ್ದಾರಿಗಳು ಆಕೆಗೆ ಮೀಸಲು ಎಂಬ ಮೌಲ್ಯವನ್ನು ಬಿತ್ತಿ, ಪುರುಷರು ಆ ಕೆಲಸಗಳಿಂದ ದೂರವಿರುವಂತೆ ಮಾಡಿರುವುದು, ಸ್ತ್ರೀಯರು ಜೀವನ ನಡೆಸಲು ನಾನಾ ಅಡ್ಡಿಗಳನ್ನು ಒಡ್ಡುವುದು - ಇವೆಲ್ಲವೂ ಸಂಸ್ಕೃತಿಯ ಸೃಷ್ಟಿಯೇ ಸರಿ."[೨೪]

ಸ್ತ್ರೀಯು ನಿರ್ವಹಿಸುವ ಜೈವಿಕ ಪಾತ್ರಗಳು ಆಕೆಯ ದೇಹ ರಚನೆಯ ಕಾರಣದಿಂದಾಗಿ ಎಂಬುದು ನಿಜ. ಗರ್ಭಧಾರಣೆ, ಶಿಶುವಿಗೆ ಜನ್ಮ ನೀಡುವುದು ಹಾಗೂ ಶಿಶುವಿಗೆ ಹಾಲನ್ನುಣಿಸುವುದು ಈ ಮೂರೂ

ಸ್ತ್ರೀಯರು ನಿರ್ವಹಿಸುವ ಜೈವಿಕ ಪಾತ್ರಗಳು. ಆದರೆ ಸಮಾಜದ ಮತ್ತಾವುದೇ ಚಟುವಟಿಕೆಯಲ್ಲಿ ಸ್ತ್ರೀಯರು ಪಾಲ್ಗೊಳ್ಳಬಾರದು ಎಂಬುದಕ್ಕೆ ಯಾವ ಆಧರವೂ ಇಲ್ಲ. ಭಿನ್ನ ಜೈವಿಕತೆ, ಭಿನ್ನಪಾತ್ರ ಹಂಚಿಕೆಗೆ ಕಾರಣವಾಗಿ, ಅದೇ ಪ್ರವೃತ್ತಿ ಇಂದಿಗೂ ಮುಂದುವರೆದುಕೊಂಡು ಬಂದಿರುವುದಕ್ಕೆ ಸಾಂಸ್ಕೃತಿಕ ವ್ಯವಸ್ಥೆಯೇ ಕಾರಣ ಎಂದೇನೂ ಪ್ರತ್ಯೇಕವಾಗಿ ಹೇಳಬೇಕಿಲ್ಲ. ಸ್ತ್ರೀಯು ತನ್ನ ಜೀವನದಲ್ಲಿ ಹಲವಾರು ಸಂದರ್ಭಗಳಲ್ಲಿ, ಎಂದರೆ ಋತುಮತಿಯಾದಾಗ ಅಥವಾ ಶಿಶುವಿಗೆ ಜನ್ಮ ನೀಡಿದಾಗ ಅವಳನ್ನು ತಾತ್ಕಾಲಿಕವಾಗಿ ಸಕ್ರಿಯ ಸಾಮಾಜಿಕ ಜೀವನದಿಂದ ದೂರವಿಡುವಂಥ ಒಂದು ವ್ಯವಸ್ಥೆ ಸೃಷ್ಟಿಯಾಗಿ, ಅದನ್ನೇ ಮುಂದಿಟ್ಟುಕೊಂಡು ಅವಳ ಬದುಕಿನಲ್ಲಿ ವಿವಾಹ, ತಾಯ್ತನ, ಮಕ್ಕಳ ಲಾಲನೆ ಪಾಲನೆ ಇವುಗಳೇ ಮುಖ್ಯವಾದ ಜವಾಬ್ದಾರಿಗಳು ಎನ್ನುವ ಒಂದು ಮಿಥ್ಯೆಯನ್ನು ಸಂಸ್ಕೃತಿ ನಿರ್ಮಿಸಿದೆ.

"ಪ್ರತಿಯೊಂದು ಸಮಾಜದಲ್ಲೂ ವ್ಯಕ್ತಿಯ ಲಿಂಗ ಹಾಗೂ ವಯಸ್ಸಿನ ಆಧಾರಗಳ ಮೇಲೆ ಪಾತ್ರ ಹಂಚಿಕೆಯನ್ನು ಮಾಡುವಂಥ ವ್ಯವಸ್ಥೆ ಜಾರಿಯಲ್ಲಿದೆ. ಮಹಿಳೆಯರು ತಮ್ಮ ಜೈವಿಕ ರಚನೆಯ ಕಾರಣದಿಂದಾಗಿ ಶಿಶು ಜನನ ಹಾಗೂ ಶಿಶುವಿನ ಲಾಲನೆ- ಪಾಲನೆಯ ಜವಾಬ್ದಾರಿಗಳನ್ನು ವಹಿಸಿಕೊಳ್ಳುತ್ತಾರೆ. ಈ ಸಮಯದಲ್ಲಿ ಅವರು ಹೆಚ್ಚಾಗಿ ಮನೆಯೊಳಗೇ ಇರುತ್ತಿದ್ದರಾದ್ದರಿಂದ, ಮನೆಯ ಒಳಗೆ ಹಾಗೂ ಮನೆಯ ಸುತ್ತ-ಮುತ್ತ ನಿರ್ವಹಿಸಬೇಕಾದಂಥ ಜವಾಬ್ದಾರಿಗಳಿಗೆ ಎಲ್ಲ ಬಗೆಯ ದುಡಿಮೆಯೂ ಸಮಾಜದ ಉಳಿವು ಹಾಗೂ ಅಭಿವೃದ್ಧಿಗಳಿಗೆ ಅತ್ಯಾವಶ್ಯವಾದುದಾದರೂ ದುಡಿಮೆಯನ್ನೇ "ಪುರುಷರ ಕೆಲಸ" "ಮಹಿಳೆಯರ ಕೆಲಸ" ಎಂದರೆ ಅದು ಅನುತ್ಪಾದಕ ಅಥವಾ ಅಪ್ರಯೋಜಕ ಎಂಬ ಭಾವನೆಯನ್ನು ಬಿತ್ತುವುದರ ಮೂಲಕ ಸಂಸ್ಕೃತಿ ಲಿಂಗ ಬೇದವನ್ನು ಒಂದು ಸ್ಥಾಪಿತ ವ್ಯವಸ್ಥೆಯನ್ನಾಗಿಸಿದೆ."[೩೫]

ಸಮಾಜದ ಎಲ್ಲ ಸಂಸ್ಥೆಗಳಲ್ಲೂ ಒಂದಲ್ಲ ಒಂದು ಬಗೆಯಲ್ಲಿ ಲಿಂಗ ತಾರತಮ್ಯ ಸಾಂಸ್ಕೃತಿಕ ವ್ಯವಸ್ಥೆಯ ಮೂಲಕ ಬೇರೂರುತ್ತದೆ. ಕುಟುಂಬದಲ್ಲಿ ಗಂಡು ಮಗುವಿಗೆ ನೀಡುವ ಅತಿ ಪ್ರಾಶಸ್ತ್ಯ ಹೆಣ್ಣು-ಗಂಡು ಮಕ್ಕಳಿಗೆ ಸಂಪನ್ಮೂಲಗಳ ಹಂಚಿಕೆಯಲ್ಲಿ ಕಂಡುಬರುವ ತಾರತಮ್ಯ, ಸ್ತ್ರೀ ಸದಸ್ಯರ ಮೇಲೆ ನಡೆಯುವ ಕೌಟುಂಬಿಕ ದೌರ್ಜನ್ಯದ ವಿವಿಧ ಮುಖಗಳು. ಇವೆಲ್ಲಾ ಲಿಂಗ ವ್ಯವಸ್ಥೆಯ ಪೂರ್ವಗ್ರಹಗಳನ್ನು ಎಳೆಯ ವಯಸ್ಸಿನಿಂದಲೇ ರೂಢಿಸಿಕೊಳ್ಳುವಲ್ಲಿ ವ್ಯಕ್ತಿಗಳಿಗೆ ತರಬೇತಿಯನ್ನು ನೀಡುತ್ತವೆ. ಶಿಕ್ಷಣ, ಲಿಂಗ ಭೇದವನ್ನು ತೊಡೆದು ಹಾಕಲು ಅತ್ಯಂತ ಉಪಯುಕ್ತವಾದ ಸಾಧನ ಎನ್ನುವುದು ನಿಜವಾದರೂ, ಈ ಶಿಕ್ಷಣ ವ್ಯವಸ್ಥೆಯಲ್ಲಿಯೇ ಲಿಂಗ ತಾರತಮ್ಯ ಹಾಸುಹೊಕ್ಕಾಗಿದೆ. ಶಿಕ್ಷಣ ಸಂಸ್ಥೆಗಳಲ್ಲಿ ವಿದ್ಯಾರ್ಥಿ - ವಿದ್ಯಾರ್ಥಿನಿಯರ ನಡವಳಿಕೆ, ಶಿಕ್ಷಕರು ಲಿಂಗ ಸಂಬಂಧಿ ವಿಚಾರಗಳ ಬಗ್ಗೆ ತಳೆಯುವ ನಿಲುವುಗಳು, ಹೆಣ್ಣು ಗಂಡು ಮಕ್ಕಳಿಗೆ ದೊರೆಯುವ ವಿಭಿನ್ನ ಅವಕಾಶಗಳು, ಅವರ ಮೇಲೆ ಹೇರುವ ವಿಭಿನ್ನ ನಿಬಂಧನೆಗಳು ಆಧುನಿಕತೆಯ ಮೌಲ್ಯಗಳನ್ನು ಬಿತ್ತುವ ಶಿಕ್ಷಣದಂಥ ಒಂದು ವ್ಯವಸ್ಥೆ ಕೂಡ ಸಾಂಪ್ರದಾಯಿಕ ಸಾಂಸ್ಕೃತಿಕ ಸಂದರ್ಭಗಳ ಹಿಡಿತದಿಂದ ಹೊರಬಂದಿಲ್ಲ ಎನ್ನುವುದಕ್ಕೆ ಸಾಕ್ಷಿಯಾಗಿದೆ.

"ಆದರೆ ಇಂದಿನ ಗ್ರಾಮೀಣ ಸ್ತ್ರೀ ತನ್ನ ಸಾಮಾಜಿಕ, ಆರ್ಥಿಕ, ಧಾರ್ಮಿಕ ಮತ್ತು ರಾಜಕೀಯ ಸ್ಥಾನಮಾನವನ್ನು ಕಳೆದುಕೊಂಡು ಪುರುಷನ ನೆರಳಾಗಿ ತನ್ನ ಜೀವನವನ್ನು ಸಾಗಿಸುತ್ತಿದ್ದಾಳೆ. ಪುರುಷನ ಆಶ್ರಯವಿಲ್ಲದೆ ತನಗೆ ಬದುಕಲು ಸಾಧ್ಯವೇ ಇಲ್ಲ ಎಂಬ ಭಾವನೆ ಅವಳಲ್ಲಿ ಆಳವಾಗಿ ಬೇರೂರಿಬಿಟ್ಟಿದೆ.

ಆದ್ದರಿಂದ ಅವಳು ತನ್ನ ಅಸ್ತಿತ್ವವನ್ನು, ಸ್ಥಾನಮಾನವನ್ನು ಶೂನ್ಯಕ್ಕೆ ಹೋಲಿಸಿಕೊಂಡಿದ್ದಾಳೆ. ಅವಳ ಸ್ಥಾನಮಾನವೆಲ್ಲ ಕುಟುಂಬದ ಜವಾಬ್ದಾರಿಗಳನ್ನು ನಿಭಾಯಿಸುವುದರಲ್ಲಿ ಕೇಂದ್ರೀಕೃತವಾಗಿದೆ. ಹಾಗಾಗಿ ಒಬ್ಬ ಮಾನವಳಾಗಿ ಅವಳು ಅನುಭವಿಸಬೇಕಾದ ಎಲ್ಲಾ ಹಕ್ಕು ಭಾದ್ಯತೆಗಳನ್ನು, ಸ್ಥಾನಮಾನಗಳನ್ನು ತ್ಯಾಗ ಮಾಡಿದ್ದಾಳೆ.

ವಿವಾಹವೇ ಅವಳ ಜೀವನದ ಅಂತಿಮ ಗುರಿ. ಅವಿವಾಹಿತಳಾಗಿ ಅವಳು ಉಳಿದರೆ ಅವಳ ಸ್ಥಾನಮಾನ ಸಮಾಜದಲ್ಲಿ ಅಧೋಗತಿಗೆ ಇಳಿಯುತ್ತದೆ. ಪತಿಯೇ ಪರದೈವ ಎಂದೆಣಿಸಿರುವ ಗ್ರಾಮೀಣ ಸ್ತ್ರೀ ತನ್ನ ಗಂಡನನ್ನು ಕಳೆದುಕೊಂಡಾಕ್ಷಣ ತನ್ನ ಎಲ್ಲಾ ಸ್ಥಾನಮಾನಗಳನ್ನು ಕಳೆದುಕೊಂಡು ಮೂಲೆ ಗುಂಪಾಗಿದ್ದಾಳೆ. ಮಂಗಳ ಕಾರ್ಯಗಳಲ್ಲಿ ಅವಳಿಗೆ ಯಾವುದೇ ಸ್ಥಾನವಿಲ್ಲ. ಅಮಂಗಲದ ಸಂಕೇತವಾಗಿ ಅವಳು ಸಮಾಜದಲ್ಲಿ ಬಾಳುವೆ ನಡೆಸುತ್ತಿದ್ದಾಳೆ. ಅವಳ ಮುಖದರ್ಶನವು ಅಮಂಗಲಕರವೆಂದು ಅವಮಾನಗೊಳಿಸುವುದರಿಂದ ಅವರು ಮನೆಯಿಂದ ಆಚೆ ಬರುವುದೇ ಇಲ್ಲ."[೩೬] ವಿದ್ಯೆಯಿಂದ ವಂಚಿತಳಾಗಿರುವ ಗ್ರಾಮೀಣ ಸ್ತ್ರೀ ತನ್ನ ಸ್ವಂತ ನಿರ್ಧಾರಗಳನ್ನು ತೆಗೆದುಕೊಳ್ಳುವಲ್ಲಿ ಅಸಮರ್ಥಳಾಗಿದ್ದಾಳೆ. ಯಾವುದೇ ಕೆಲಸ ಮಾಡಬೇಕಾದರೂ ಗಂಡನ ಅಥವಾ ಮನೆಯ ಹಿರಿಯ ಪುರುಷನ ಅಪ್ಪಣೆ ಇಲ್ಲದೆ ಮಾಡುವುದೇ ಇಲ್ಲ. ತನ್ನ ಜೀವನದ ಎಲ್ಲಾ ನಿರ್ಧಾರಗಳನ್ನು ತೆಗೆದುಕೊಳ್ಳುವ ಹಕ್ಕು ಮಾರಕವಾಗಿದ್ದರೂ ಅವನ ಆಜ್ಞಾಪಾಲಕಳಾಗಿ ಅವಳು ತನ್ನ ಜೀವನವನ್ನು ಸಾಗಿಸುತ್ತಿದ್ದಾಳೆ. ಹೀಗೆ ಅವಳು ತಾನೇ ಸ್ವತಃ ತನ್ನ ಸ್ಥಾನಮಾನವನ್ನು ಸಮಾಜದಲ್ಲಿ ತಗ್ಗಿಸಿಕೊಂಡಿದ್ದಾಳೆ.

ಗ್ರಾಮೀಣ ಸಮಾಜದಲ್ಲಿ ಸ್ತ್ರೀಯ ಆರ್ಥಿಕ ಸ್ಥಾನಮಾನ ಶೂನ್ಯಕ್ಕೆ ಸಮ. ಅವಳು ಆರ್ಥಿಕವಾಗಿ ಪುರುಷನನ್ನೇ ಅವಲಂಬಿಸಿದ್ದಾಳೆ. ಅವಳು ಕುಟುಂಬದ ಆರ್ಥಿಕ ಅಭಿವೃದ್ಧಿಗಾಗಿ ಮಾಡುವ ಎಲ್ಲಾ ಕಾರ್ಯಗಳಿಗೆ ಯಾವ ಬೆಲೆಯೂ ದೊರಕುವುದಿಲ್ಲ. ಅವಳ ಅವಿರತ ದುಡಿಮೆಗೆ ಈ ಸಮಾಜ ಬೆಲೆಯನ್ನೇ ಕಟ್ಟುವುದಿಲ್ಲ. ಒಂದು ವೇಳೆ ಇವಳ ಶ್ರಮಕ್ಕೆ ಬೆಲೆ ಕಟ್ಟಿದರೆ ಕುಟುಂಬದ ಆರ್ಥಿಕ ಅಭಿವೃದ್ಧಿಯಲ್ಲಿ ಸಿಂಹಪಾಲು ಇವಳದ್ದಾಗುತ್ತದೆ. ಆಗ ಅವಳು ಆರ್ಥಿಕವಾಗಿ ಸ್ವತಂತ್ರಳಾಗಿ ತನ್ನ ಸ್ಥಾನಮಾನವನ್ನು ಏರಿಸಿಕೊಳ್ಳಬಹುದು. ಆದರೆ ದುರಾದೃಷ್ಟವಶಾತ್ ಅವಳ ದುಡಿಮೆಗೆ ಈ ಸಮಾಜ ಬೆಲೆ ಕಟ್ಟದೆ ಅವಳ ಸ್ಥಾನಮಾನವನ್ನು ಅಂಧಕಾರದಲ್ಲಿ ಮುಳುಗಿಸಿಬಿಟ್ಟಿದೆ.

ಒಮ್ಮೆ ಅವಳು ಆರ್ಥಿಕವಾಗಿ ತನ್ನ ಸ್ಥಾನಮಾನವನ್ನು ಏರಿಸಿಕೊಂಡರೆ ಸಾಕು ಉಳಿದ ಎಲ್ಲಾ ಕ್ಷೇತ್ರಗಳಲ್ಲೂ ಅವಳು ತನ್ನ ಸ್ಥಾನಮಾನವನ್ನು ಏರಿಸಿಕೊಳ್ಳುವಲ್ಲಿ ಸಫಲಳಾಗುವಳು. ಆದರೆ ಅವಳು ತನ್ನ ಅಸಮರ್ಥತೆಯಿಂದಾಗಿ ತನ್ನ ಸ್ಥಾನಮಾನವನ್ನು ಏರಿಸಿಕೊಳ್ಳಲು ಅಸಫಲಳಾಗಿದ್ದಾಳೆ."[೩೭]

ಕರೀಗೌಡ ಬೀಚನಹಳ್ಳಿಯವರ ಕಡಲಮಂತು ಕತೆಯಲ್ಲಿ ತಿಮ್ಮಿ ಎಂಬ ಹರೆಯದ ವಯಸ್ಸಿನ ಹುಡುಗಿ. ಕೊಪ್ಪಲಿನ ಕೆಂಚಯ್ಯ ಅವಳನ್ನು ಮದುವೆಯಾಗುತ್ತಾನೆ. ತಿಮ್ಮಿಯು ತುಂಬಾ ಸುಂದರಳಾಗಿದ್ದು ಒಳ್ಳೆಯ ಮೈಕಟ್ಟನ್ನು ಹೊಂದಿರುತ್ತಾಳೆ. ಆದರೆ ಕೆಂಪಯ್ಯನಿಗೆ ಮಾತ್ರ ತುಂಬಾ ವಯಸ್ಸಾಗಿರುತ್ತದೆ. ಅವಳಿಗೂ ಅವನಿಗೂ ಹೋಲಿಕೆ ಇರುವುದಿಲ್ಲ. ಆದರೂ ತಿಮ್ಮಿಗೆ ಎರಡು ಮಕ್ಕಳಾಗುತ್ತವೆ. ಒಂದು ಗಂಡು, ಒಂದು

ಹೆಣ್ಣು. ಇದನ್ನು ತಿಳಿದ ಗ್ರಾಮದವರು ಹುಣಿಸೆಮರ ಮುಪ್ಪಾದರೂ, ಹುಳಿ ಮುಪ್ಪಾಗುವುದಿಲ್ಲ ಎಂಬ ಮಾತಿನ ಮೂಲಕ ತಿಮ್ಮಿಯನ್ನು ಹಂಗಿಸುತ್ತಾರೆ. ತಿಮ್ಮಿಯನ್ನು ಅವಳ ತಂದೆ ವಯಸ್ಸಿಗೆ ತಕ್ಕ ವರನನ್ನು ನೋಡಿ ಮದುವೆ ಮಾಡಲು ಅಶಕ್ತನಾಗಿರುತ್ತಾನೆ. ಜೊತೆಗೆ ಏನೋ ಒಂದು ತನ್ನ ಜವಾಬ್ದಾರಿ ಕಳೆದರೆ ಸಾಕು ಎಂಬ ತಾತ್ಸಾರ ಮನೋಭಾವನೆಯಿಂದ ಅವಳಿಗೆ ಮದುವೆ ಮಾಡಿರುತ್ತಾನೆ. ಇದನ್ನು ಗಮನಿಸಿದಾಗ ಆ ಗ್ರಾಮದಲ್ಲಿ ಲಿಂಗ ತಾರತಮ್ಯ ಕಂಡು ಬರುತ್ತದೆ. ಇದನ್ನು ವಿವರಿಸಿ ಹೇಳುವುದಾದರೆ ಒಬ್ಬ ಯುವಕನಿಗೆ ಈ ರೀತಿ ವಯಸ್ಸಾದ ಹೆಣ್ಣು ಹುಡುಗಿಯನ್ನು ತಂದು ಮದುವೆ ಮಾಡುವ ಅವಕಾಶವೇ ಇಲ್ಲ. ಇಂತಹ ತಾರತಮ್ಯವನ್ನು ಇಂದಿಗೂ ನಾವು ನಮ್ಮ ಗ್ರಾಮೀಣ ಸಮಾಜದಲ್ಲಿ ಕಾಣುತ್ತೇವೆ. ಕೆಂಚಯ್ಯನಿಗೆ ಈಗಾಗಲೇ ಮೊದಲನೆಯ ಹೆಂಡತಿ ಇದ್ದು, ಹಿರೇ ಮಗಳು ಮದುವೆಯ ವಯಸ್ಸಿಗೆ ಬರುತ್ತಿದ್ದಾಳೆ. ಅಂತಹದರಲ್ಲಿ ತಾನೇ ಇನ್ನೊಂದು ಮದುವೆ ಮಾಡಿಕೊಂಡಿದ್ದಾನೆ ಎಂಬುದನ್ನು ಗ್ರಾಮದ ಜನರು ಕೆಂಚಯ್ಯನ ಬಗ್ಗೆ ಆಡಿಕೊಳ್ಳುತ್ತಾರೆ. ಸಮಾಜ ಸರಿಯಾಗಿದ್ದರೂ ಏನೆಲ್ಲ ನಿಂದಿಸುವುದನ್ನು ಕಾಣಬಹುದು.

"ಗ್ರಾಮೀಣ ಸ್ತ್ರೀಯರು ಗೃಹಕೃತ್ಯಗಳಲ್ಲಿ ಗಂಡಸರ ಸೇವೆಯನ್ನು ಸಹಕಾರವನ್ನು ನಿರೀಕ್ಷಿಸುವುದೇ ಇಲ್ಲ. ಭಾರತದ ಗ್ರಾಮಗಳಲ್ಲಿ ಪುರುಷರು ಗೃಹಕೃತ್ಯಗಳನ್ನು ಹಂಚಿಕೊಂಡು ಮಾಡುವ ಕ್ರಮವೇ ಇಲ್ಲವಾದ್ದರಿಂದ ಸ್ತ್ರೀಯರು ಅದರ ಸಂಪೂರ್ಣ ಜವಾಬ್ದಾರಿ ತಮ್ಮದೆಂದು ತಿಳಿದಿದ್ದು ಮನೆಯವರ ಸೇವೆಗೆ ಸದಾ ಸಿದ್ಧವಿರುತ್ತಾರೆ. ಅವರು ಕುಟುಂಬದ ಬೆನ್ನೆಲುಬುಗಳಿದ್ದಂತೆ ಕುಟುಂಬದ ನಿತ್ಯ ವ್ಯವಹಾರಗಳಿಗಾಗಿ ತಮ್ಮ ಜೀವನವನ್ನು ಬಿಡುವಿಲ್ಲದಂತೆ ಸ್ತ್ರೀಯರು ತೇಯುವರು. ಅವರ ಜವಾಬ್ದಾರಿ ನೂರು ಮುಖದವುಗಳು. ಮಕ್ಕಳ ಪಾಲನೆ, ಪೋಷಣೆ, ಸೇವಕರ ನಿರ್ವಹಣೆ, ಮನೆಯ ಆಂತರಿಕ ಬೇಕು ಬೇಡಿಕೆಗಳ ಜೋಡಣೆ, ಅಡಿಗೆ ಮನೆಯ ಜವಾಬ್ದಾರಿ ಅವರ ಪಾಲಾಗಿದೆ. ಅದಲ್ಲದೆ ಕುಟುಂಬದ ಕೋಳಿ, ಹಂದಿ, ಕುರಿ ಸಾಕಣೆಕೆಯ ಜವಾಬ್ದಾರಿಯು ಇವಳದೆ. ತರಕಾರಿ, ಸೊಪ್ಪು ಮೊದಲಾದವುಗಳನ್ನು ಬೆಳೆಸಿ ಮನೆಯ ಆದಾಯಕ್ಕೂ ಸಹಾಯಕಳಾಗುತ್ತಾಳೆ. ಹಸುಗಳನ್ನು ಪೋಷಿಸುವುದು, ಅವುಗಳ ಹಾಲು ಹಿಂಡುವುದು, ಹಾಲು ಬೆಣ್ಣೆಗಳ ವ್ಯವಸ್ಥೆ ನೋಡುವುದು ಆಕೆಯ ಪಾಲಿನ ಕರ್ತವ್ಯವಾಗಿದೆ. ಇಷ್ಟೆ ಅಲ್ಲದೆ ಗೃಹಕೃತ್ಯಗಳನ್ನು ಮುಗಿಸಿಕೊಂಡು ಹೊಲ, ಗದ್ದೆ, ತೋಟಗಳ ಮೇಲುಸ್ತುವಾರಿಯನ್ನು ನಿರ್ವಹಿಸುತ್ತಾ ಪುರುಷರೊಂದಿಗೆ ಸೇರಿಕೊಂಡು ಕೃಷಿ ಕಾರ್ಯಗಳಲ್ಲೂ ಭಾಗಿಗಳಾಗುತ್ತಾರೆ.

ಗ್ರಾಮೀಣ ಸ್ತ್ರೀಯರು ಧರ್ಮಶ್ರದ್ಧೆಯುಳ್ಳವರು. ದೇವರು ಮತ್ತು ದೈವಿಕ ಶಕ್ತಿಗಳಲ್ಲಿ ಅವರಿಗೆ ಆಳವಾದ ಶ್ರದ್ಧೆ ನಂಬಿಕೆಗಳಿವೆ. ಜೊತೆಗೆ ಭಯ ಭಕ್ತಿಯೂ ಇದೆ. ಜೀವನದ ಪ್ರತಿಯೊಂದು ಹಂತದಲ್ಲಿಯೂ ಕೂಡ ಧರ್ಮದ ಕಲ್ಪನೆಯು ಇಲ್ಲಿ ವಿಶಾಲವಾಗಿ ಕಂಡುಬರುತ್ತದೆ."[೩೮]

ಸ್ತ್ರೀಯನ್ನು ತಾಯಿ, ಹೆಂಡತಿ, ಅಕ್ಕ, ತಂಗಿ, ಮಗಳೆಂಬ ಸಾಂಪ್ರದಾಯಿಕ ಪಾತ್ರ ಚೌಕಟ್ಟುಗಳಲ್ಲಿ ಬಂಧಿಸಿ ಗ್ರಾಮೀಣ ಸಮಾಜವು ಅವಳ ಪ್ರತ್ಯೇಕ ಅಸ್ತಿತ್ವವನ್ನೇ ಇಲ್ಲವಾಗಿಸಿದೆ. ಅವಳು ಪುರುಷನ ಜೀವನದ ಒಂದು ಭಾಗವಾಗಿ ಉಳಿದುಬಿಟ್ಟಿದ್ದಾಳೆ.

ಸಮಾಜವನ್ನು ನಖಶಿಖಾಂತ ಪೀಡಿಸುತ್ತಿರುವ ಬಡತನ ಮಹಿಳೆಯ ಶ್ರಮವನ್ನು ಸಂಪೂರ್ಣವಾಗಿ ಕಬಳಿಸಿ ಅವಳ ಮಾನಸಿಕ ಮತ್ತು ವೈಚಾರಿಕ ಶಕ್ತಿಯನ್ನು ನಾಶಪಡಿಸುತ್ತಿದೆ. ಬಡತನದ ಬೇಗೆಯಿಂದ ಬಳಲುವ ಈ ಮಹಿಳೆಯರು ಹೊಲಗದ್ದೆಗಳಲ್ಲಿ ಕೂಲಿ ಕೆಲಸವನ್ನು, ಮನೆಗೆಲಸವನ್ನು ಇನ್ನೂ ಚಿಕ್ಕಪುಟ್ಟ ಕೆಲಸಗಳಲ್ಲಿ ತೊಡಗುತ್ತಾರೆ. ಇಂತಹ ಮಹಿಳೆಯರಲ್ಲಿ ಹೆಚ್ಚು ಸಂಘಟನ ಶಕ್ತಿ ಇರುವುದಿಲ್ಲ ಮತ್ತು ಅವರಿಗೆ ಸುರಕ್ಷೆಯಿರುವುದಿಲ್ಲ. ಈ ಬಡತನ ಸ್ತ್ರೀಯನ್ನು ಪುರುಷನ ಗುಲಾಮಳನ್ನಾಗಿ ಮಾಡುತ್ತದೆ.

ಕಾಳೇಗೌಡನಾಗವಾರರ ಬೆಟ್ಟಸಾಲುಮಳೆ ಕತೆಯಲ್ಲಿ ಗರ್ಭಿಣಿಯಾದ ಈರಣ್ಣನ ಹೆಂಡತಿ ನೀರಿಗೆ ಬಿದ್ದಿರುತ್ತಾಳೆ. ಆ ಸಮಯದಲ್ಲಿ ಹತ್ತಿರವಿದ್ದ ಒಬ್ಬ ಯುವಕ ಅಲ್ಲಿ ಯಾವುದೇ ಲಿಂಗಭೇದವಿಲ್ಲದೆ ನೀರಿಗೆ ಧುಮುಕಿ ಅವಳನ್ನು ಈಚೆಗೆ ಎಳೆದು ತರುತ್ತಾನೆ. ಅಷ್ಟರಲ್ಲಿ ಅವಳ ಜೀವಹೋಗಿರುವುದನ್ನು ಗಮನಿಸುತ್ತಾನೆ. ಆದರೂ ತನಗೆ ಸಂಬಂಧವಿಲ್ಲದ ಯಾರದೋ ಹೇಳಿಕೆಯಿಲ್ಲದೆ ಆ ಹೆಂಗಸನ್ನು ಎತ್ತಿಕೊಂಡು ಬರುವುದನ್ನು ಸ್ವಲ್ಪ ಆಲೋಚಿಸಿದಾಗ, ಆ ಸಂದರ್ಭದಲ್ಲಿ ಆ ಯುವಕ ಮುಂದೆ ಬರಬಹುದಾದ ನಿಂದನೆ ಅಥವಾ ಇನ್ನಾವುದೋ ಹೊಗಳಿಕೆ, ತೆಗಳಿಕೆಗಳ ಬಗ್ಗೆ ಯೋಚಿಸದೆ ಈ ಕೆಲಸವನ್ನು ಮಿಂಚಿನಂತೆ ನಿರ್ವಹಿಸುತ್ತಾನೆ.

ಆ ಹುಡುಗ ಹೆಣವನ್ನು ಸ್ಮಶಾನದ ಬಳಿ ಇಳಿಸಿ, ಊರಿನ ಮುಖಂಡರಿಗೆ ತಿಳಿಸಿದ. ಊರಿನವರು ಚರ್ಚೆ ಮಾಡಿ ಆ ಹೆಂಗಸು ಕಾಯಿಲೆ ಇಂದ ಸತ್ತಿದ್ದಾಳೋ ಅಥವಾ ಅನೈತಿಕತೆಯಿಂದ ಅಥವಾ ಅವಳ ಶೀಲ ಶಂಖಿಸಿ ಗಂಡನೆ ಸಾಯಿಸಿದ್ದಾನೋ ಅಥವಾ ಅವಳೇ ಆತ್ಮಹತ್ಯೆ ಮಾಡಿಕೊಂಡಳೊ ಎಂಬ ಹಲವಾರು ಪ್ರಶ್ನೆಗಳು ಎದ್ದಾಗ ಗ್ರಾಮದಲ್ಲಿ ಅಸಂಬದ್ಧವಾದ ಸಾವು ಸಂಭವಿಸಿದಾಗ ಪೋಲೀಸು ಗ್ರಾಮಕ್ಕೆ ಬರುವುದು ಎಲ್ಲರನ್ನು ವಿಚಾರಣೆ ಮಾಡುವುದು, ಗದರಿಸುವುದು ಮುಂತಾದ ತೊಂದರೆ ಕೊಡುತ್ತಾರೆ ಎಂಬುದು ಗ್ರಾಮದ ಜನರ ಮನಸ್ಸಿನಲ್ಲಿ ಬಂದು, ಇನ್ನೇನು ಅವಳು ಸತ್ತು ಹೋಗಿದ್ದಾಳೆ ಏನು ಮಾಡಿದರೂ ಬದುಕುವುದಿಲ್ಲ ಎಂದು ಆ ಹೆಣವನ್ನು ಪೋಲೀಸರಿಗೆ ತಿಳಿಸದೆ ಇದನ್ನು ತಪ್ಪಿಸುವ ಉದ್ದೇಶದಿಂದ ಊರಿನ ಜನರೆಲ್ಲ ಒಟ್ಟಾಗಿ ಸೇರಿ ಆ ಹೆಣವನ್ನು ಸುಟ್ಟು ಹಾಕುತ್ತಾರೆ. ಇದಾದ ನಂತರ ಸತ್ತು ಹೋದ ಮಹಿಳೆಯ ತಂದೆ ತಾಯಿಗಳು ತಮ್ಮ ಅಳಿಯನೇ ಯಾವುದೋ ಕಾರಣಕ್ಕೆ ತನ್ನ ಹೆಂಡತಿಯನ್ನು ಕೊಲೆ ಮಾಡಿದ್ದಾನೆ ಎಂದು ಅನುಮಾನಿಸಿ ಪೋಲೀಸರಿಗೆ ದೂರು ಕೊಡುತ್ತಾರೆ. ಇದನ್ನನುಸರಿಸಿ ಪೋಲೀಸಿನವರು ಗ್ರಾಮಕ್ಕೆ ವಿಚಾರಣೆಗೆಂದು ಬರುತ್ತಾರೆ. ಆಗ ಗ್ರಾಮದ ಜನರು ಯಾರೂ ಸಹ ಬಾಯಿ ಬಿಡುವುದಿಲ್ಲ. ಅಲ್ಲಿ ನೀರು ಸೇದುತ್ತಿದ್ದ ಕೆಲವು ಹೆಂಗಸರನ್ನು ಪೋಲೀಸರು ವಿಚಾರಿಸಿದ ಧಾಟಿಯಿಂದ ಬೇಸತ್ತ ತಿಮ್ಮಕ್ಕ ಎನ್ನುವ ಮಹಿಳೆ ಪೋಲೀಸರ ವರ್ತನೆಯನ್ನು ಪ್ರತಿಭಟಿಸಿ ಸೊಂಟದ ಮೇಲಿದ್ದ ಕೊಡವನ್ನು ಕೆಳಕ್ಕೆಸೆದು ನಡು ಕಟ್ಟಿಕೊಂಡು ಪೋಲೀಸರ ಮೇಲೆ ಎರಗುತ್ತಾಳೆ. ಆಗ ಇತರೆ ಹೆಂಗಸರೂ ಸಹ ಅವಳಿಗೆ ಬೆಂಬಲ ನೀಡಿ ಚಪ್ಪಲಿ, ಹಗ್ಗ, ಪೊರಕೆ, ದೊಣ್ಣೆ ಇವುಗಳಿಂದ ಪ್ರತಿಭಟಿಸುತ್ತಾರೆ. ಅಷ್ಟರಲ್ಲಿ ಪೋಲೀಸ್ ಇನ್‌ಸ್ಪೆಕ್ಟರ್ ಪಿಸ್ತೂಲ್ ತೆಗೆಯಲು ಹವಣಿಸುತ್ತಿದ್ದಾಗ ಜನರು ಅದನ್ನೆಲ್ಲ ಕಿತ್ತೆಸೆದು ಅವನನ್ನೇ ತುಳಿಯುತ್ತಾರೆ. ಇತರ ಪೋಲಿಸರ ಮೇಲೆ ಜನರು ಧಾಳಿ ನಡೆಸುತ್ತಾರೆ. ಇಲ್ಲಿ ಊರ ಹೆಂಗಸರ ಸಾಹಸವನ್ನು ಕಣ್ಣಾರೆ ಕಂಡ ಶಾಲೆಯ ಹುಡುಗರುಗಳೂ ಸಹ ಹಿರಿಯರಿಗೆ ನೆರವಾಗುವುದನ್ನು ಕಾಣಬಹುದು.

ನಂತರ ಹೊಲದಲ್ಲಿ ಕೆಲಸ ಮಾಡುತ್ತಿದ್ದ ಊರಿನ ಸಾಹುಕಾರ ಈ ಘಟನೆಯನ್ನು ಕೇಳಿ ಊರೊಳಗೆ ಬಂದು ಪೋಲಿಸರು ಮತ್ತು ಇನ್‌ಸ್ಪೆಕ್ಟರನ್ನು ಕಟ್ಟಿ ಹಾಕಿದ್ದನ್ನು ನೋಡಿ ಸರ್ಕಾರಿ ನೌಕರರನ್ನು ಈ ರೀತಿ ಮಾಡಿದರೆ ಸರ್ಕಾರ ನಮ್ಮ ಮೇಲೆ ಕ್ರಮ ತೆಗೆದುಕೊಳ್ಳುತ್ತದೆ ಎಂದು ಜನರಿಗೆ ಹೇಳಿ ಕೂಡಲೇ ಅವರನ್ನು ಬಿಡುಗಡೆಗೊಳಿಸಿದನು. ಆಮೇಲೆ ಪೋಲಿಸರ ಬಳಿಗೆ ಸಾಹುಕಾರ ಊರಿನ ಪರವಾಗಿ ಕ್ಷಮೆ ಕೇಳಲು ಹೋಗುತ್ತಾನೆ. ಆಗ ಪೋಲಿಸ್ ಇನ್‌ಸ್ಪೆಕ್ಟರ್ ಸವಾಲು ಹಾಕುತ್ತಾನೆ. ನಾನು ಈ ಊರಿನ ಜನರಿಗೆ ಬುದ್ಧಿ ಕಲಿಸದಿದ್ದರೆ ನಾನು ಸಿದ್ಧಲಿಂಗಪ್ಪನ ಮಗನೇ ಅಲ್ಲ ಎಂದು ಸವಾಲು ಹಾಕುತ್ತಾನೆ. ಆಗ ಊರಿನ ಜನರು ಕೆಲವರು ಪೋಲೀಸರನ್ನು ಕೆಣಕಿದ್ದೇ ತಪ್ಪಾಯಿತು ಇನ್ನು ಊರಿಗೆ ಏನು ಕೇಡಾಗುತ್ತದೆಯೋ ಎಂದು ಭಾವಿಸಿದರು. ಈರಣ್ಣನ ಹೆಂಡತಿಯು ಸತ್ತ ದೆಸೆಯಿಂದ ಕೇವಲ ಒಬ್ಬ ಹೆಂಗಸಿನ ಕಾರಣದಿಂದ ಇಡೀ ಊರಿಗೆ ಊರೇ ತೊಂದರೆಗೆ ಸಿಲುಕಿಕೊಳ್ಳಬಹುದು ಎಂಬುದಾಗಿ ಕೆಲವರು ಯೋಚಿಸಿದರು. ಆದರೆ ದಳ್ಳಾಳಿ ಮತ್ತು ಅಶ್ವತ್ಥ ಅದನ್ನು ಒಪ್ಪಲು ಸಿದ್ಧರಿರಲಿಲ್ಲ. ಆದದ್ದಾಯಿತು ಎಷ್ಟೇ ಹಣ ಖರ್ಚಾದರೂ ಲಾಯರನ್ನು ಇಟ್ಟು ಕೋರ್ಟಿನಲ್ಲಿ ವ್ಯಾಜ್ಯ ಆಡಿದರೂ ಸರಿ ಊರು ಮಾತ್ರ ಯಾವುದಕ್ಕೂ ಒಂದಾಗಿರಬೇಕೆಂದು ತೀರ್ಮಾನ ತೆಗೆದು ಕೊಳ್ಳಲಾಯಿತು. ಊರೊಟ್ಟಿನ ಹಣ ಗ್ರಾಮದ ಚೀಟಿ ಹಣ, ಕೇರಿ ಕಂತುಗಳ ಹಣ, ಇದೂ ಸಾಲದಿದ್ದಲ್ಲಿ ಪ್ರತಿ ಮನೆಯಿಂದಲೂ ಹಣ ವಸೂಲಿ ಹೀಗೆ ಎಲ್ಲಾ ಮೂಲದಿಂದಲೂ ಹಣ ಸಂಗ್ರಹಿಸಿ ತಮಗೆ ತಿಳಿದಂತೆ ಹಣ ವಿನಿಯೋಗಿಸಲು ಸಾಹುಕಾರನಿಗೆ ಅಧಿಕಾರವನ್ನು ನೀಡಲಾಯಿತು.

ಪೋಲಿಸರು ಗ್ರಾಮದ ಮೇಲೆ ದಾಳಿ ಮಾಡಿ ಎಲ್ಲರನ್ನೂ ಹಿಂಹಿಸತೊಡಗಿದರು. ಈ ಮಧ್ಯೆ ಪ್ರಾರಂಭದಲ್ಲಿ ಪೋಲಿಸರ ವಿರುದ್ಧ ಸೆಟೆದು ನಿಂತು ಕ್ರಾಂತಿಕಾರಿಯಾಗಿ ಹೋರಾಟದಲ್ಲಿ ಮುಂದಾಗಿದ್ದ ತಿಮ್ಮಕ್ಕನನ್ನು ಸಾಹುಕಾರರ ಒಂದು ಕೊಠಡಿಯಲ್ಲಿ ಕೂಡಿ ಹಾಕಿ ಅವಳಿಗೆ ವಿಶೇಷವಾದ ರಕ್ಷಣೆಯನ್ನು ಗ್ರಾಮಸ್ಥರು ನೀಡಿದ್ದರು. ಸ್ವಲ್ಪ ದಿನ ಕಳೆದ ನಂತರ ಪೋಲಿಸರ ಹಿಂಸೆಯಿಂದ ಮನ ನೊಂದಿರುವ ಗ್ರಾಮಸ್ಥರು ಅಸಹಾಯಕ ಸ್ಥಿತಿಯಲ್ಲಿರುತ್ತಾರೆ. ಇಂತಹ ಸಂದರ್ಭದಲ್ಲಿ ಅಲ್ಪಸ್ವಲ್ಪ ವಿದ್ಯೆ ಕಲಿತಿದ್ದ ಕರಿಶೆಟ್ಟಿಯು ಸಹ ಎಲ್ಲರಿಂದ ವಿಷಯವನ್ನು ತಿಳಿದುಕೊಳ್ಳುತ್ತಿರುವ ವೇಳೆ ದಳ್ಳಾಳಿ ಲಿಂಗಯ್ಯ ಪೋಲಿಸರ ದೌರ್ಜನ್ಯ ಹಾಗೂ ಸ್ತ್ರೀಯರ ಪ್ರತಿಭಟನೆಯನ್ನು ವಿವರಿಸುತ್ತಿರುವ ಸಂದರ್ಭದಲ್ಲಿ ಅವನಿಗೆ ಆದ ನೋವು ಚಿತ್ರಹಿಂಸೆಗಳನ್ನು ನೆನೆದುಕೊಳ್ಳುತ್ತ ಪೋಲಿಸರ ಮೇಲೆ ದಳ್ಳಾಳಿ ಸಿಟ್ಟು ಮಾಡಿಕೊಳ್ಳಲಿಲ್ಲ. ಬದಲಾಗಿ ಊರಿಗೆ ಸಂಬಂಧಿಸಿದ ಇಂತಹ ಘಟನೆಯಲ್ಲಿ ತಾನೂ ಸಹ ಸೇರಿಕೊಂಡು ಹೋರಾಟ ಮಾಡಿದ ಬಗ್ಗೆ ಹೆಮ್ಮೆಯಿಂದ ಹೇಳಿಕೊಳ್ಳುತ್ತಾನೆ. ಮೇಲೆ ಹೇಳಿದ ವಿಷಯ ಕೇಳಿ ಶೆಟ್ಟಿ ತಾನು ಅಂತಹ ಸಂದರ್ಭದಲ್ಲಿ ಇರಲಿಲ್ಲವಲ್ಲ ಎಂದು ಕೊರಗುತ್ತಾನೆ. ಧೈರ್ಯದಿಂದ ಕಾದಾಟಕ್ಕೆ ನಿಂತ ತಿಮ್ಮಕ್ಕನ ಬಗ್ಗೆ ಅಭಿಮಾನ ಮೂಡಿತು. ನಂತರ ಶೆಟ್ಟಿ ತನ್ನ ಮನೆಗೆ ಪ್ರವೇಶಿಸಿದಾಗ ಕುಂಬಾರ ಕಸುಬಿನ ಅವರ ಮನೆಯಲ್ಲಿ ಈ ವಿದ್ಯಾವಂತ ತರುಣನಿಗೆ, ಮನೆಯಲ್ಲಿ ಸಿಗುವ ಆತಿಥ್ಯವನ್ನು ಅವರ ಮನೆಯವರು ನೀಡುವ ಆತಿಥ್ಯ, ಉಪಚಾರ ಹಾಗೂ ಗ್ರಾಮದ ಜನರು ಅವನಿಗೆ, ನೀಡುವ ವಿಶೇಷ ಗೌರವವನ್ನು ನಾವಿಲ್ಲಿ ಕಾಣಬಹುದು. ಶೆಟ್ಟಿ ಅಸ್ಪೃಶ್ಯಳಾದ ತಿಮ್ಮಕ್ಕನ ಮನೆಗೆ ಹೋದಾಗ ತಾನು ತಂದಿದ್ದ ಕೆಲವು ಬಟ್ಟೆ, ಬರೆ ವಸ್ತುಗಳನ್ನು ತಿಮ್ಮಕ್ಕನಿಗೆ ಕೊಡುತ್ತಾನೆ. ಆ ಸಂದರ್ಭದಲ್ಲಿ ಗ್ರಾಮಸ್ಥರು ತಿಮ್ಮಕ್ಕನ ಮನೆಯವರಿಗೆ ನೆರವಾಗಿದ್ದು ಮತ್ತು ಅವರ ಮನೆಯಲ್ಲಿ ಊಟ ಮಾಡಿದ್ದರಿಂದ ಇವನಿಗೆ ಬಹಿಷ್ಕಾರ ಹಾಕುತ್ತಾರೆ.

ಆ ಬಹಿಷ್ಕಾರದ ಸಂದರ್ಭದಲ್ಲಿ ಶೆಟ್ಟಿ ಪೋಲಿಸರಿಗೆ ಹೇಳಿ ಗ್ರಾಮಸ್ಥರ ಮೇಲೆ ಕ್ರಮ ತೆಗೆದುಕೊಳ್ಳುವಂತೆ ಮಾಡಿ ತಿಮ್ಮಕ್ಕನ ಮನೆಯವರಿಗೆ ನ್ಯಾಯ ಒದಗಿಸಿಕೊಟ್ಟಿರುವ ಸಂದರ್ಭವನ್ನು ತಿಮ್ಮಕ್ಕ ಮತ್ತು ಮಗಳು ಪುಟ್ಟಲಕ್ಷ್ಮಿ, ಗಂಡಹೊನ್ನ ಇವರೆಲ್ಲರೂ ವಿಶ್ವಾಸದಿಂದ ಶೆಟ್ಟಿಗೆ ಆತಿಥ್ಯ ನೀಡುತ್ತಾರೆ. ಈ ಘಟನೆಗಳೆಲ್ಲವನ್ನೂ ನೋಡಿ ಗ್ರಾಮಸ್ಥರು ಅವನ ಸೇವಾ ಮನೋಭಾವಕ್ಕೆ ಮಾರು ಹೋಗುತ್ತಾರೆ.

ಈ ಶೆಟ್ಟಿಯು ಅಸ್ಪೃಶ್ಯಳಾದ ತಿಮ್ಮಕ್ಕನ ಮಗಳನ್ನು ಮದುವೆಯಾಗಲು ಮನಸ್ಸು ಮಾಡಿದ್ದ. ಆಗ ಅವಳು ಸಹಕಾರ ಕೊಡುತ್ತಾಳೆ. ಆನಂತರ ಇವರಿಬ್ಬರೂ ಮಾತನಾಡುವ ಸಂದರ್ಭದಲ್ಲಿ ಗ್ರಾಮದ ಜನರ ಸಿಟ್ಟು ವಿಕೋಪಕ್ಕೆ ಹೋಗಿ ಅವನಿಗೆ ತೊಂದರೆ ಕೊಡುತ್ತಾರೆ. ಆನಂತರ ದಳ್ಳಾಳಿ ಬಂದು ಸಮಾಧಾನ ಮಾಡಿ ಶೆಟ್ಟಿಯನ್ನು ಅವರ ಮನೆಗೆ ಕರೆದುಕೊಂಡು ಹೋಗುತ್ತಾನೆ. ಈ ಮೇಲಿನ ಎಲ್ಲಾ ಸನ್ನಿವೇಶವನ್ನು ಗಮನಿಸಿ ನೋಡಿದರೆ ಗ್ರಾಮಗಳಲ್ಲಿ ಲಿಂಗ ಭೇದವಿಲ್ಲದೆ ಜನರು ಹೋರಾಡುವುದನ್ನು ಗಮನಿಸಬಹುದು. ಮತ್ತು ಅಂತರ್ಜಾತಿಯ ವಿವಾಹಕ್ಕೆ ವಿರೋಧ ಮತ್ತು ಸಹಕಾರ ಎರಡೂ ಇರುವುದನ್ನು ಕಾಣಬಹುದು. ಆದರೂ ಇವೆಲ್ಲದರ ಮಧ್ಯೆ ಶೆಟ್ಟಿ ಪುಟ್ಟ ಲಕ್ಷ್ಮಿಯನ್ನು ಮದುವೆಯಾಗುವುದನ್ನು ಕಾಣಬಹುದು. ಇವೆಲ್ಲಕ್ಕಿಂತ ಮುಖ್ಯವಾಗಿ ಗ್ರಾಮದ ಜನರು ಗ್ರಾಮದ ಮತ್ತು ವೈಯಕ್ತಿಕವಾಗಿ ನಡೆಯುವ ಘಟನೆಗಳಿಗೆ ಪ್ರತಿಯೊಬ್ಬರೂ ತಮ್ಮ ತನು, ಮನ, ಧನಗಳನ್ನು ಅರ್ಪಿಸುವುದನ್ನು ಸ್ಪಷ್ಟವಾಗಿ ಕಾಣಬಹುದು.

"ಲಿಂಗ ಭೇದವನ್ನು ಆಧರಿಸಿದಂತೆ ಸಮಾಜದಲ್ಲಿ ಇರುವ ಎರಡು ಘಟಕಗಳೆಂದರೆ ಸ್ತ್ರೀ ಮತ್ತು ಪುರುಷ. ಇದು ಸ್ತ್ರೀ-ಪುರುಷರ ಶಾರೀರಿಕ ಭೇದವನ್ನು ಅವಲಂಬಿಸಿದ್ದರೂ, ಪರಂಪರೆ ಮತ್ತು ಸಂಸ್ಕೃತಿಯ ನೀತಿಯ ಅನುಸಾರ ಹೆಂಗಸು ಮತ್ತು ಗಂಡಸು ಎಂಬೆರಡು ವಿಶೇಷಗಳು ಶಾರೀರಿಕ ಭೇದಕ್ಕೆ ವ್ಯತಿರಿಕ್ತವಾಗಿ ಸಾಂಸ್ಕೃತಿಕ ಅರ್ಥವೇ ಮೂಲವಾಗಿ ಅಂಟಿಕೊಂಡಿರುವುದು ಸ್ಪಷ್ಟ. ಸಿಮೋನ್ ದಿ ಬೋವಾಳು ಹೇಳಿರುವಂತೆ 'One is not born a woman, one becomes one'- ಯಾರೂ ಹೆಣ್ಣು ಎಂಬುದಾಗಿ ಜನ್ಮ ಪಡೆಯುವುದಿಲ್ಲಾ. ಆದರೆ ಅನಂತರ ಅವಳನ್ನು ಹೆಣ್ಣಾಗಿ ರೂಪಿಸಲಾಗುತ್ತದೆ ಎಂಬ ಮಾತು ಸತ್ಯವಾದುದು. ಉದಾ: ಪ್ರತಿಯೊಬ್ಬ ಹೆಣ್ಣು ಶಾರೀರಿಕವಾಗಿ ದುರ್ಬಲಳಾಗಿದ್ದು, ಚಂಚಲ ಸ್ವಭಾವ, ಶರೀರ ಸೌಂದರ್ಯದ ಪ್ರತೀಕವಾಗಿದ್ದಾಳೆ. ಭಯ, ಸ್ತುತಿ, ನಮ್ರತೆ, ವಿನಯ, ದಯೆ ಇವು ಸ್ತ್ರೀಯಲ್ಲಿನ ಜನ್ಮದಾತ ಗುಣಗಳು. ಇದಕ್ಕೆ ವಿರುದ್ಧವಾಗಿ ಪುರುಷ ಶಾರೀರಿಕವಾಗಿ ಸಮರ್ಥ, ಪರಾಕ್ರಮಿ, ಬುದ್ಧಿವಂತ, ದಿಟ್ಟ, ಒರಟ, ಹುಂಬ, ಅಹಂಕಾರಿ ಯಾಗಿರುತ್ತಾನೆ. ಇವೆಲ್ಲ ಸಂಸ್ಕೃತಿಯೇ ರೂಪಿಸಿದ ಸ್ತ್ರೀ ಮತ್ತು ಪುರುಷರ ಗುಣಗಳಾಗಿವೆ.

ಜನಿಸುವ ಪ್ರತಿಯೊಂದು ಮನುಷ್ಯ ಜೀವಿಯನ್ನು ಲಿಂಗ ವೈಶಿಷ್ಟ್ಯಾನುಸಾರ ಈ ಪರಿಧಿಯಲ್ಲಿಯೇ ನೆಲೆಗೊಳಿಸಲಾಗುವುದು. ಹಾಗೆ ಮಾಡದಿರುವುದನ್ನು ವಿಕೃತವೆಂದೇ ಭಾವಿಸಲಾಗುತ್ತದೆ. ಎಂತಲೇ ಸ್ತ್ರೀಯನ್ನು ಪುರುಷನೆಂದು, ಪುರುಷನನ್ನು ಸ್ತ್ರೀ ಎಂಬುದಾಗಿ ಹೇಳುವುದು ನಿಂದೆಯಾಗಿಯೂ, ಲಿಂಗ ವೈಶಿಷ್ಟ್ಯಕ್ಕೆ ವಿರುದ್ಧವಾದುದರ ದ್ಯೋತಕವೆಂಬುದಾಗಿಯೂ ಭಾವಿಸಲಾಗುತ್ತದೆ."[೬೯]

ಇದಕ್ಕೆ ಪೂರಕವಾಗಿ ವಿಠಲರಾವ್ ಗಾಯಕ್ವಾಡ್‌ರವರ (ಅನು) ಸ್ತ್ರೀವಾದಿ ವಿಮರ್ಶೆ ಸ್ವರೂಪ ಮತ್ತು ಪರಿಕಲ್ಪನೆಗಳು ಎಂಬ ಪುಸ್ತಕದಲ್ಲಿ ಲಿಂಗಭೇದದ ವಿಚಾರವಾಗಿ ಹೇಳಿರುವ ಅಂಶಗಳನ್ನು ಗಮನಿಸಬಹುದು.

ಮಾನವ ಅಂದಾಕ್ಷಣ ಸ್ತ್ರೀಪುರುಷ ಎಂದು ಅರ್ಥ ಬರುತ್ತದೆ. ಗಂಡು ಮತ್ತು ಹೆಣ್ಣು ಪ್ರಾಕೃತಿಕ ನಿಯಮಕ್ಕೆ ಅನುಸಾರವಾಗಿ ಲಿಂಗಭೇದ ಉಂಟಾಗುತ್ತದೆ. ವಂಶಾಭಿವೃದ್ಧಿಗೆ ಮಹಿಳೆಯ ಅಂಗ ರಚನೆ ಪುರುಷನಿಗೆ ಆಕರ್ಷಕ ಸೆಳೆತ ಇರುವುದನ್ನು ಕಾಣುತ್ತಿದ್ದೇವೆ. ನಿಜವಾದ ಅರ್ಥದಲ್ಲಿ ಮಾನವನ ರಚನೆಯೇ ಲಿಂಗಭೇದದ ಮೂಲ ಎಂಬುದನ್ನು ನಾವಿಲ್ಲಿ ಕಾಣಬಹುದು. ಆದ್ದರಿಂದ ಈ ಲಿಂಗಭೇದ ನೀತಿಯ ಬಗ್ಗೆ ಚರ್ಚಿಸಲೇಬೇಕಾದ ಆವಶ್ಯಕತೆಯೇ ಕಂಡುಬರುವುದಿಲ್ಲ. ಆದಾಗ್ಯೂ ತಾರತಮ್ಯ ಮತ್ತು ದೌರ್ಜನ್ಯಗಳು ಈ ಬಗ್ಗೆ ಮರು ಚಿಂತನೆಗೆ ಪ್ರೇರೇಪಿಸುತ್ತವೆ.

'ಶೂದ್ರ' ಕಥಾನಾಯಕನಿಗೂ, 'ಬ್ರಾಹ್ಮಣ' ಹುಡುಗಿ ಲಲಿತಳಿಗೂ ಇರುವ ಸಂಬಂಧ ಸೂಕ್ಷ್ಮವಾಗಿ ಚಿತ್ರಿತವಾಗಿದೆ. ಎಂಟು ವರ್ಷಗಳ ನಂತರ ತನ್ನ ಹಳ್ಳಿಯಲ್ಲಿ ತನ್ನ ಜೊತೆಯಲ್ಲಿಯೇ ಓದಿದ ಬ್ರಾಹ್ಮಣ ಹುಡುಗಿ ಲಲಿತ ಮೈಸೂರಿನಲ್ಲಿ ಆಸ್ಪತ್ರೆಯೊಂದರಲ್ಲಿ ಹಠಾತ್ತನೆ ಅನಿರೀಕ್ಷಿತವಾಗಿ ಭೇಟಿಯಾದಾಗ ಆಕೆ ಆತನಿಗೆ ಗುರುತು ಹಿಡಿಯಲಾರದಷ್ಟು ದೈಹಿಕವಾಗಿ ಮಾನಸಿಕವಾಗಿ ಬಡವಳಾಗಿದ್ದಾಳೆ. ಆಕೆಯೇ ಕೊನೆಗೆ ಆತನಿಗೆ "ನಾನು ಲಲಿತ ನೆನಪಾಗಲಿಲ್ಲವೆ?" ಎಂದಾಗ ಆತನಿಗೆ ನೆನಪಾಗುವುದು ಈಗಿನ ಆಕೆಯ ನಾಲ್ಕು ಮಕ್ಕಳ ಬಡಪಾಯಿಯ ಚಿತ್ರವಲ್ಲ. ಎಂಟುವರ್ಷಗಳ ಹಿಂದಿನ, ಅದಕ್ಕೂ ತನ್ನ ಬಾಲ್ಯಕಾಲದಲ್ಲಿ ಕಂಡ ಆಕೆಯ ತಿದ್ದಿ ಮಾಡಿದ ಗೊಂಬೆಯಂಥ ಮುಖದ ಲಲಿತ ಮಾತ್ರ.

ಆಗ ಆತ ಮೈಸೂರಿಗೆ ಓದಲು ಬಂದ. ರಜ ಸಿಕ್ಕಾಗ ಊರಿಗೆ ಹೋದಾಗಲೆಲ್ಲಾ ಆಕೆಯನ್ನು ಮಾತನಾಡಿಸಿ ಬರುತ್ತಿದ್ದ. ಆದರೆ ಒಮ್ಮೆ ಮಾತನಾಡಿಸಲು ಹೋದಾಗ ಆಕೆ ಹೇಳಿದ್ದು "ಇನ್ಮೇಲೆ ಎಲ್ಲೂ ಹೊರಗೆ ಹೋಗಬಾರದಂತೆ ನಂಗೆ ಮದುವೆ ಮಾಡ್ತಾರಂತೆ. ಅಲ್ದೆ ಯಾರ ಜೊತೆಯೂ ಮನೆಗೆ ಬಂದರೂ ಮಾತನಾಡಬಾರದಂತೆ" ಅಂದಳು.

ಆಕೆ ಅವಳ ಅಜ್ಜಿ, ಅಪ್ಪ, ಅವ್ವ ಇವರ ಕಟ್ಟಳೆಯಲ್ಲಿ ಬೆಳೆದ ಹುಡುಗಿ. ಅಜ್ಜಿಯಂತೂ ಶೂದ್ರರು ಎಂದರೆ ಹಾರಿ ಬೀಳ್ತಾಳೆ. ಆತ ಮತ್ತು ಲಲಿತ ಒಟ್ಟಿಗೆ ಬೆಳೆದವರು. ಇಷ್ಟಕ್ಕೂ ಲಲಿತ ನನಗೆ ಏನಾಗಬೇಕು? ಚಿಕ್ಕಂದಿನಲ್ಲಿ ಒಟ್ಟಿಗೆ ಆಡಿ, ಓದಿ ಬೆಳೆದಿದ್ದರೂ ಒಂದೇ ಒಂದು ದಿನ ಅವಳ ಮನೆಯ ಹಜಾರ ದಾಟಿ ನಡುಮನೆಯ ಹೊಸ್ತಿಲೊಳಗೆ ಹೋಗಿದ್ದಿಲ್ಲ. ನನ್ನ ಅಜ್ಜ, ಅವ್ವ ಕೂಡ ಅವಳ ಮನೆಯ ಹಜಾರದ ಅಂಚಿನಿಂದ ಒಂದು ಹೆಜ್ಜೆ ಮುಂದೆ ಇಟ್ಟಿದ್ದ ನೆನಪಿಲ್ಲ. ಸುತ್ತಮುತ್ತೆಲ್ಲ ಬರೀ ಶೂದ್ರರ ಮನೆಗಳಿದ್ದರೂ ಊರಿಗೊಂದೇ ಬ್ರಾಹ್ಮಣರ ಮನೆಯಾಗಿದ್ದ ಲಲಿತಳ ಅಪ್ಪನ ಬ್ರಾಹ್ಮಣತನಕ್ಕೆ ಕಿಂಚಿತ್ತೂ ಮೈಲಿಗೆಯಾಗುವಂತಿಲ್ಲ ಸಂಬಂಧ.

ಆಕೆಯ ಭೇಟಿಯಾದ ಅನಂತರ ಆಕೆಯ ಸ್ಥಿತಿ ಕಂಡು ಆತನಿಗೆ ವ್ಯಾಕುಲತೆ ಶುರುವಾಗುತ್ತದೆ. ಬಾಲ್ಯದಲ್ಲಿ ಅವರಿಬ್ಬರಲ್ಲಿದ್ದ ಆಕರ್ಷಣೆ ಅವರಿಗೆ ನೆನಪಾಗುತ್ತದೆ. ತನ್ನ ಮಗುವೊಂದನ್ನು ಕಂಕುಳಲ್ಲಿ ಇರುಕಿಕೊಂಡು ಮತ್ತೊಂದು ಮಗುವನ್ನು ಆಸ್ಪತ್ರೆಗೆ ಕರೆತಂದಿದ್ದಾಳೆ. ಆ ಹೆಣ್ಣು ಮಗುವಿಗೆ ನಾಯಿ ಕಚ್ಚಿದೆ. ಅಸಹಾಯಕ ಸ್ಥಿತಿಯಲ್ಲಿ ಇದ್ದಾಳೆ. ಕಥಾನಾಯಕ ಅವಳ ಸ್ಥಿತಿಯನ್ನು ಕಂಡು ಆಕೆಗೆ ನೆರವು ನೀಡಲು ಹೊರಡುತ್ತಾನೆ.

ಆಕೆಯ ಮನೆಯನ್ನು ಹುಡುಕಿಕೊಂಡು ಹೋಗಿ ಹಣಕೊಟ್ಟು ಆ ಹುಡುಗಿಯನ್ನು ಬೆಂಗಳೂರಿಗೆ ಕರೆದುಕೊಂಡು ಹೋಗಿ ತೋರಿಸಲು ಹೇಳಿ ಬರುತ್ತಾನೆ. ಆದರೆ ಲಲಿತಳಿಗೆ ಸಿಕ್ಕಿರುವ ಗಂಡ ರಾಕ್ಷಸ. ಆತ ಹಳ್ಳಿಯ ಮುಗ್ಧ ಹೆಣ್ಣನ್ನು ಹಿಂಡಿರುವುದು ಕಥಾನಾಯಕನಿಗೆ ಬೇಸರ ತರಿಸುತ್ತದೆ. ಆತ ಲಲಿತಳ ಅಪ್ಪನ ಮೇಲೆ ಯಾವುದೋ ವಿಚಾರಕ್ಕೆ ಜಗಳ ಬೇರೆ ಮಾಡಿಕೊಂಡು "ನೀನು ಸತ್ತರೂ ಆಕೆಯ ನಿನ್ನ ಮನೆಯ ಹೊಸ್ತಿಲು ಮೆಟ್ಟಿಸುವುದಿಲ್ಲಾ" ಎಂದಿದ್ದಾನೆ. ಆಕೆಯ ಬಗ್ಗೆ ಆತನಿಗೆ ಅನಾದರ.

ಆಕೆ ತನ್ನ ಪಾಲಿಗೆ ಬಂದ ಬದುಕನ್ನು ಪ್ರತಿಭಟನೆಯೇ ಇಲ್ಲದೇ ಒಪ್ಪಿಕೊಂಡು ಸಾಗಿದ್ದಾಳೆ. ಕಥಾನಾಯಕನೂ ಒಂದು ರೀತಿಯಲ್ಲಿ ತತ್ವಜ್ಞಾನಿಯಂತೆ ಆಕೆಯ ಬದುಕನ್ನು ಯಾವುದೇ ಸೋಗುಗಳಿಲ್ಲದೆ ಸಾಕ್ಷಿ ಪ್ರಜ್ಞೆಯಿಂದ ಗ್ರಹಿಸುತ್ತಾ ಹೋಗುತ್ತಾನೆ. ಆದರೆ ಆತನಲ್ಲಿ ಆಕೆಯ ಬದುಕು ಹೀಗಾಯಿತಲ್ಲ ಎಂಬುದರ ಗಾಢ ವಿಷಾದದ ಧ್ವನಿ ಇದೆ. ತನ್ನೂರಿನ ತನ್ನ ಬಾಲ್ಯ ಸಂಗಾತಿಯು ಇಂತಹ ಬರ್ಬರ ಸ್ಥಿತಿಗೆ ಇಳಿಸಿದ ಕಟ್ಟುಕಟ್ಟಳೆ, ಜಾತಿ ಪದ್ಧತಿ ಇವುಗಳ ಬಗ್ಗೆ ಕಥೆಯೊಳಗೆ ಸಿಟ್ಟಿನ ಮೆಲು ದನಿಗಳೂ ಇವೆ.

ಕಥೆಗಾರರು ವರ್ಣಿಸುವಂತೆ "ನಾವಿಬ್ಬರೂ ತೀರ ಭಿನ್ನ ಭಿನ್ನವಾದ ಸಂಸ್ಕಾರಗಳಲ್ಲಿ ಬೆಳೆದವರಾಗಿದ್ದರೂ ನಾನು ಲಲಿತ ಮಾತ್ರ ಒಟ್ಟಿಗೆ. ನನ್ನ ಊಟ ಲಲಿತ ತಿನ್ನುತ್ತಿರಲಿಲ್ಲ. ಅವಳ ಮನೆಯ ರುಚಿ ರುಚಿಯಾದ ತಿಂಡಿ ನನಗೆ ಕೊಡದೆ ಯಾವತ್ತೂ ಒಬ್ಬಳೆ ತಿನ್ನುತ್ತಿರಲಿಲ್ಲ. ನಾನು ನಮ್ಮ ಮನೆಯಲ್ಲಿ ವಿಶೇಷ ಮಾಡಿ ಕಳಿಸಿದ್ದ ದಿನ ಆಕೆಯನ್ನು ತಿನ್ನಲು ಒತ್ತಾಯಿಸುತ್ತಿದ್ದೆ."[೩೯] ಸ್ತ್ರೀ ಬದುಕು ಎಂಥ ನಿರ್ಬಂಧಿತ ಸ್ವರೂಪದ್ದು ಎಂಬುದನ್ನು ಈ ವಿವರಗಳು ಮನದಟ್ಟು ಮಾಡುತ್ತವೆ. ಲಲಿತಳಲ್ಲಿ ಏಕೆ ಧೈರ್ಯ ಬರಲಿಲ್ಲ; ಎಲ್ಲ ನಿರ್ಬಂಧಗಳನ್ನು ದಾಟಲಿಲ್ಲ ಎಂಬ ಪ್ರಶ್ನೆಗಳು ಅನಾವಶ್ಯಕ. ವಿದ್ಯಾಭ್ಯಾಸ ಕೂಡ ಇಲ್ಲಿ ಅವಳ ಪಾಲಿಗೆ ಏನೂ ಆಗಿಲ್ಲವೆಂದು ಅರ್ಥ. ಇದು ಬಹಳಷ್ಟು ಸ್ತ್ರೀಯರ ವಿಷಯವಾಗಿಯೂ ನಿಜ.

ಶ್ರೀಕೃಷ್ಣ ಆಲನಹಳ್ಳಿಯವರ ಸಂಬಂಧ ಕತೆಯಲ್ಲಿ ಬರುವ ಹಳ್ಳಿಯಲ್ಲೇ ಹುಟ್ಟಿ ಬೆಳೆದ ಲಲಿತ ಮತ್ತು ಕಥಾ ನಾಯಕರ ಬಗ್ಗೆ ಆಳವಾಗಿ ಚಿಂತಿಸಿ ನೋಡಿದಾಗ ಶಾಲೆಯಲ್ಲಿ ಒಟ್ಟಿಗೆ ಓದುತ್ತಿದ್ದ ಇವರಿಬ್ಬರ ಮನಸ್ಸಿನಲ್ಲಿ ಯಾವುದೋ ಲಿಂಗಭೇದವಿಲ್ಲದೆ ವಿದ್ಯಾಭ್ಯಾಸ ಮಾಡಿರುವುದನ್ನು ನಾವು ಕಾಣುತ್ತೇವೆ. ಲಲಿತ ಪ್ರೌಢಾವಸ್ಥೆಗೆ ಬಂದನಂತರ ಅವಳ ಅಜ್ಜಿ ಮತ್ತು ಮನೆಯವರೆಲ್ಲ ಲಲಿತಳಿಗೆ ನೀನು ಗಂಡು ಮಕ್ಕಳ ಜೊತೆ ಹೆಚ್ಚು ಮಾತನಾಡಬಾರದು, ಯಾರ ಜೊತೆಯೂ ಹೋಗಬಾರದು ಎಂದು ಹೇಳುವ ಬುದ್ಧಿವಾದ ಮತ್ತು ಅಂಕೆಯಲ್ಲಿಡುವಂತಹ ಮಾತುಗಳನ್ನು ನಾವು ಗಮನಿಸಿದಾಗ ಇಲ್ಲಿ ಗ್ರಾಮೀಣ ಜನತೆಯು ಲಿಂಗಭೇದಕ್ಕೆ ಯಾವ ರೀತಿ ಒತ್ತು ಕೊಡುತ್ತಾರೆ ಎಂಬುದು ಕಂಡುಬರುತ್ತದೆ. ಅಲ್ಲದೆ ಈ ಕತೆಯಲ್ಲಿ ಶೂದ್ರ ಕಥಾ ನಾಯಕ ಬ್ರಾಹ್ಮಣ ಹುಡುಗಿ ಲಲಿತೆ ಇವರ ಬಗ್ಗೆ ಅವರ ಮನೆಯಲ್ಲಿ ಮತ್ತು ಗ್ರಾಮೀಣ ಸಮಾಜದಲ್ಲಿ ಮೇಲು ಕೀಳು ಭಾವನೆಯನ್ನು ಕಾಣಬಹುದು. ಆದರೆ ಲಲಿತೆಯನ್ನು ಗಮನಿಸಿದರೆ ಪ್ರೌಢಾವಸ್ಥೆಗೆ ಬರುವವರೆಗೂ ಮನೆಯವರಿಂದ ಬುದ್ಧಿ ಹೇಳಿಸಿಕೊಳ್ಳುವವರೆಗೂ ಲಿಂಗಭೇದದ ಬಗ್ಗೆ ಹಾಗೂ ಜಾತಿಯ ಬಗ್ಗೆ ಯಾವುದೇ ಯೋಚನೆಯನ್ನು ಮಾಡಿರಲಿಲ್ಲ. ಲಲಿತೆಯು ಮದುವೆಯಾಗಿ ನಗರ ಸೇರಿದ ನಂತರವೂ ಗಂಡ, ಮಕ್ಕಳ ಮಧ್ಯದಲ್ಲಿಯೇ ಯಾವ ಸುಖ, ಸಂತೋಷ ಯಾವ ಬದಲಾವಣೆಯೇ ಕಾಣದಿರುವುದನ್ನು ಗಮನಿಸಬಹುದು.

ವಿದ್ಯಾವಂತನಾದ ಶೂದ್ರ ಕಥಾನಾಯಕ ಮತ್ತೊಮ್ಮೆ ಅದೇ ನಗರದಲ್ಲಿ ಭೇಟಿ ಮಾಡಿದಾಗ ಅವಳ ಸ್ಥಿತಿಯನ್ನು ಕಂಡು ಪಶ್ಚಾತ್ತಾಪ ಪಡುತ್ತಾನೆ. ಅಂದರೆ ಇದಕ್ಕೆಲ್ಲಾ ಲಲಿತೆಯ ತವರಿನ ಸಾಂಪ್ರದಾಯಿಕ ಸಮಾಜದ ಕಟ್ಟುಪಾಡುಗಳಿಂದ ಅವಳ ಏಳಿಗೆ ಕುಂಠಿತವಾಗಿರುವುದನ್ನು ಕಾಣುತ್ತೇವೆ. ಇದೇ ಕಥಾ ನಾಯಕನಿಗೆ ಸಮಾಜದ ಪ್ರೋತ್ಸಾಹದಿಂದಾಗಿ ಒಳ್ಳೆಯ ವಿದ್ಯಾವಂತನಾಗಿ, ಉದ್ಯೋಗಸ್ಥನಾಗಿ, ನಗರವಾಸಿಯಾಗಿ, ಸಾಹಿತಿಯಾಗಿ, ಕೀರ್ತಿವಂತನಾಗಿ ಬೆಳೆಯುವುದಕ್ಕೆ ಗ್ರಾಮೀಣ ಸಮಾಜ ಮತ್ತು ನಗರ ಸಮಾಜದ ಪ್ರೋತ್ಸಾಹವೇ ಬಹುಮುಖ್ಯ ಕಾರಣವೆಂದು ಗಂಟಾಘೋಷವಾಗಿ ಹೇಳಬಹುದು.

"ತಳವಾರ ಮನೆತನದ ಮೈನೆರೆದ ಮುಗ್ಧ ಹೆಣ್ಣು ಮಗಳಾದ ಸುಶೀಲೆಯ ಬದುಕು ದುರಂತವಾಗುವುದರ ವಸ್ತುವನ್ನಾಗುಳ್ಳ ಕಥೆ ಇದು. ಆಕೆಯ ಪ್ರಣಯ, ಪ್ರೇಮ, ಕಾಮ ಇವೆಲ್ಲಾ ಬಯಲಾಗುವುದಕ್ಕೆ ಆ ಸಮಾಜದ ವ್ಯಕ್ತಿಗಳೆ ಕಾರಣರಾಗಿದ್ದಾರೆ. ಆಕೆಯ ಜೀವನವನ್ನು ದುರಂತದೆಡೆಗೆ ತಳ್ಳುವಲ್ಲಿ ಆಕೆಯ ಸೋದರ ಮಾವನಾದ ಬೀಡಿ ಸಿದ್ದಣ್ಣನೇ ಕಾರಣ. ತನ್ನ ದೂರದ ಸಂಬಂಧಿ ಯುವಕ ಹನುಮಂತನಲ್ಲಿ ಸುಶೀಲೆಗೆ ಪ್ರೇಮ, ಪ್ರಣಯ, ಇವರಿಬ್ಬರ ಎಚ್ಚರ ತಪ್ಪಿದ ಪ್ರಣಯದಲ್ಲಿ ಸುಶೀಲೆ ಗರ್ಭಿಣಿಯಾಗುತ್ತಾಳೆ. ಈ ವಿಷಯ ತಿಳಿದ ಆಕೆಯ ಅವ್ವ ಕರಿಯಕ್ಕ ಮತ್ತು ಸೋದರಮಾವ ಬೀಡಿ ಸಿದ್ದಣ್ಣ ಇಬ್ಬರೂ ಸೇರಿ ಸುಶೀಲೆಯ ಮೇಲೆ ಕೋಪ ಕಾರುತ್ತಾರೆ. ಆಕೆಯನ್ನು ಹೊಡೆದು ಬಡಿದು ಅದಕ್ಕೆ ಕಾರಣ ತಿಳಿದಾಗ ಆಕೆ ಹನುಮಂತನ ಹೆಸರನ್ನು ಹೇಳುತ್ತಾಳೆ. ಕೊನೆಗೆ ಹನುಮಂತನನ್ನು ಆಕೆಯನ್ನು ಮದುವೆ ಮಾಡಿಕೊಳ್ಳುವಂತೆ ಒಪ್ಪಿಸುತ್ತಾರೆ. ಆಗ ಆತ ಮುಂದಿನ ಯುಗಾದಿ ಕಳೆದ ಮೇಲೆ ಆಕೆಯನ್ನು ಲಗ್ನ ಮಾಡಿಕೊಳ್ಳುವುದಾಗಿ ಆತನಿಂದ ಹಾಗೂ ಆತನ ತಂದೆ ತಾಯಿಗಳಿಂದ ಭರವಸೆ ಸಿಕ್ಕ ಮೇಲೆ ಕರಿಯಕ್ಕ ತನ್ನ ಮಗಳಿಗೆ ಕುಂಬಾರ ದುರ್ಗಜ್ಜಿಯ ಔಷಧದಿಂದ ಗರ್ಭ ತೆಗೆಸುತ್ತಾಳೆ. ಈ ಪ್ರಕರಣ ಬೀಡಿ ಸಿದ್ದಣ್ಣನಿಗೆ ಚೆನ್ನಾಗಿ ಗೊತ್ತು. ಮುಂದೆ ಕರಿಯಕ್ಕ ಯಾವುದೋ ಊರಿಗೆ ಹೋಗಿದ್ದಾಗ ಸುಶೀಲೆಯ ಬದುಕಿನಲ್ಲಿ ನಡೆಯುವ ಪ್ರಕರಣ ಕಥೆಯಲ್ಲಿ ಕುತೂಹಲ ಸೆಳೆಯುತ್ತದೆ."[೪೦]

ಇವರದೇ ಆದ ಇನ್ನೊಂದು ಕತೆಯಲ್ಲಿ ಬರುವ ಗ್ರಾಮೀಣ ಸಮಾಜದಲ್ಲಿ ಬೀಡಿ ಸಿದ್ದಣ್ಣ, ಹನುಮಂತ, ಛೇರ್ಮನ್, ಸುಶೀಲೆಯ ತಾಯಿ ಕರಿಯಕ್ಕನ ಪಾತ್ರಗಳು ಬಹುಮುಖ್ಯವಾಗಿವೆ. ಸುಶೀಲೆಯು ದೂರದ ಸಂಬಂಧಿ ಹನುಮಂತನಲ್ಲಿ ಅನುರಕ್ತಳಾಗಿದ್ದಾಳೆ. ಅವನೂ ಇದಕ್ಕೆ ಸ್ಪಂದಿಸಿ ಸುಶೀಲೆಯು ಗರ್ಭವತಿ ಯಾಗುತ್ತಾಳೆ. ಸುಶೀಲೆಯ ತಾಯಿ ಕರಿಯಕ್ಕ ಮತ್ತಿತರರು ಸುಶೀಲೆಯನ್ನು ಮದುವೆಯಾಗಲು ಹನುಮಂತನನ್ನು ಒಪ್ಪಿಸುತ್ತಾರೆ. ಹನುಮಂತನು ಮದುವೆಯಾಗಲು ಕಾಲಾವಕಾಶ ಕೋರುತ್ತಾನೆ. ಆದರೂ ಕರಿಯಕ್ಕ ಸಮಾಜಕ್ಕೆ ಹೆದರಿ ಸುಶೀಲೆಯ ಗರ್ಭವನ್ನು ತೆಗೆಸುತ್ತಾಳೆ. ಈ ಪ್ರಕರಣ ಬೀಡಿ ಸಿದ್ದಣ್ಣನಿಗೆ ತಿಳಿದಿರುತ್ತದೆ. ದಷ್ಟಪುಷ್ಟವಾಗಿ ರೂಪವತಿಯಾಗಿರುವ ಇವಳನ್ನು ಇವಳ ವಯಸ್ಸಿನ ಮಗಳಿದ್ದರೂ ಸಹ ಬೀಡಿ ಸಿದ್ದಣ್ಣ ಸುಶೀಲೆಯನ್ನು ಅನುಭವಿಸಬೇಕೆಂಬ ಆಕಾಂಕ್ಷೆ ಉಳ್ಳವನಾಗಿರುತ್ತಾನೆ. ಸುಶೀಲೆಯ ಆಕರ್ಷಕ ವ್ಯಕ್ತಿತ್ವಕ್ಕೆ ಮಾರುಹೋಗಿ ಛೇರ್ಮನ್ನು ಸಹ ಸುಶೀಲೆಯನ್ನು ಅನುಭವಿಸಬೇಕೆಂಬ ಮಹತ್ವಾಕಾಂಕ್ಷೆ ಉಳ್ಳವನಾಗಿರುತ್ತಾನೆ. ತಾಯಿ ಕರಿಯಕ್ಕ ಬೇರೆ ಊರಿಗೆ ಹೋಗಿದ್ದನ್ನು ತಿಳಿಯದೆ ಹನುಮಂತನು ಸುಶೀಲೆಯ ಮನೆಗೆ ಬರುತ್ತಾನೆ. ಅಂದು ರಾತ್ರಿ ತಂಗುತ್ತಾನೆ. ಈ ವಿಷಯ ಸಿದ್ದಣ್ಣ ಮತ್ತು ಛೇರ್ಮನ್‌ರವರಿಗೆ ತಿಳಿದಿರುತ್ತದೆ. ನಂತರ ಇವರುಗಳಿಗೆ ಅವನು ತಂಗಿರುವ ವಿಷಯ ತುಂಬಾ ಹೊಟ್ಟೆಕಿಚ್ಚು ತರಿಸುತ್ತದೆ. ಅಂದು ರಾತ್ರಿ ಹನುಮಂತ ಮತ್ತು

ಸುಶೀಲೆಯರ ನಡುವೆ ನಡೆದುದನ್ನು ಏನೆಲ್ಲಾ ಎಂಬಂತೆ ಊಹಿಸುವ ವಿಚಾರವನ್ನು ಮತ್ತು ಸಿದ್ದಣ್ಣ ಅನುಮಾನ ಪಡುವ ವಿಷಯವನ್ನು ಲೇಖಕರು ಚಿತ್ರಿಸಿರುವುದನ್ನು ಕಾಣುತ್ತೇವೆ. ಈ ಕತೆಯ ಮುಖ್ಯ ಸಾರಾಂಶ ಒಬ್ಬ ಗ್ರಾಮೀಣ ಮಹಿಳೆಯಾದ ಲಲಿತಳನ್ನು ಯಾವ ದೃಷ್ಟಿಯಿಂದ ಗ್ರಾಮೀಣ ಸಮಾಜದ ಮುಖಂಡರು ನೋಡುತ್ತಾರೆ ಎನ್ನುವುದನ್ನು ನಾವು ಕಾಣಬಹುದು. ಇದೇ ಸ್ಥಾನದಲ್ಲಿ ಒಬ್ಬ ಹುಡುಗನ ಬಗ್ಗೆ ಯಾವುದೇ ಕಲ್ಪನೆಯಾಗಲಿ, ವಿಚಾರವನ್ನಾಗಲಿ, ಈ ಗ್ರಾಮದ ಸಿದ್ದಣ್ಣ, ಛೇರ್ಮನ್ ಇವರ ಬಗ್ಗೆ ಯೋಚನೆ ಮಾಡುತ್ತಿದ್ದರೆ? ಯಾಕೆ ಹೀಗೆ ಗ್ರಾಮೀಣ ಸಮಾಜದ ವ್ಯವಸ್ಥೆ ಈ ರೀತಿ ಇದೆ ಎಂದುಕೊಳ್ಳಬಹುದು. ಆದ್ದರಿಂದ ಗ್ರಾಮೀಣ ಪ್ರದೇಶದಲ್ಲಿ ಲಿಂಗಭೇದ ಮತ್ತು ಗ್ರಾಮೀಣ ಸಮಾಜದ ವರ್ತನೆ, ನೀತಿ, ನಡವಳಿಕೆ ಹೇಗಿರುತ್ತದೆ ಎಂಬುದನ್ನು ಊಹಿಸಬಹುದಾಗಿದೆ.

ಈ ಹೊತ್ತಿನ ಮತ್ತೊಬ್ಬ ಮಹತ್ವದ ಲೇಖಕರಾದ ಲಂಕೇಶರ ಕಥಾ ಸಾಹಿತ್ಯವನ್ನು ಕುರಿತಂತೆ ಹೀಗೆ ಹೇಳಬಹುದು. ಅನೇಕ ಕಾರಣಗಲಿಂದ ಹೆಣ್ಣು ವಿವಾಹ ಮಾಡಿಕೊಳ್ಳಲು ಸಾಧ್ಯವಾಗದೆ ಇರಬಹುದು. ಈ ಹೆಣ್ಣಿಗೆ ಸಮಾಜದಲ್ಲಿ ಯಾವ ರೀತಿಯ ಸ್ಥಾನಮಾನಗಳನ್ನು ನೀಡಬಹುದಾಗಿರುತ್ತದೆ. ಮದುವೆಯಾದ ಹೆಣ್ಣನ್ನು ನಿರ್ಲಕ್ಷಿಸುವ ಉದಾಸೀನ ಮಾಡುವ ಅನೇಕ ಉದಾಹರಣೆಗಳನ್ನು ನೋಡಬಹುದು. ಕಾರಣಾಂತರದಿಂದ ವಿಧವೆಯಾದ ಪಕ್ಷದಲ್ಲಿ ಸಮಾಜ ತುಂಬಾ ಕೆಳಮಟ್ಟದಲ್ಲಿ ಇವಳನ್ನು ಇಡುತ್ತದೆ. ಉದಾ. ಮಂಗಳ ಕಾರ್ಯಗಳಲ್ಲಿ ಭಾಗವಹಿಸುವುದಿಲ್ಲ. ಹಣೆಗೆ ಕುಂಕುಮ, ಹೂವು ಮುಡಿಯುವಂತಿಲ್ಲ. ಶುಭ ಸಮಾರಂಭಗಳಲ್ಲಿ ಭಾಗವಹಿಸಲು ಗ್ರಾಮೀಣ ಸಮಾಜ ಅನುಮತಿ ಕೊಡುವುದಿಲ್ಲ. ಅನೇಕ ವೇಳೆ ವಿವಾಹಿತಳನ್ನು ತ್ಯಜಿಸುವ ಉದಾಹರಣೆಗಳು ಬೇಕಾದಷ್ಟಿವೆ. ಇಂತಹ ವೇಳೆಯಲ್ಲಿ ಗಂಡಸು ಬೇರೆ ವಿವಾಹ ಆಗಬಹುದು. ಅಥವಾ ಬೇರೊಬ್ಬ ಹೆಣ್ಣಿನ ಜೊತೆಯಲ್ಲಿ ಸುಖಪಡಬಹುದು. ಇದನ್ನು ಪ್ರತಿಭಟಿಸಲು ಹೆಣ್ಣಿಗೆ ಉತ್ತೇಜನ ದೊರೆಯುವುದಿಲ್ಲ. ವಿವಾಹಿತಳಾದ ಹೆಣ್ಣು ಗಂಡ ಸತ್ತರೆ, ಪುನರ್ವಿವಾಹವಾಗುವುದು ಗ್ರಾಮೀಣ ಪ್ರದೇಶಗಳಲ್ಲಿ ಕನಸಿನ ಮಾತಾಗೇ ಉಳಿದಿದೆ. ಪ್ರತಿಯೊಂದು ದಾಂಪತ್ಯ ಜೀವನದಲ್ಲಿಯೂ ಹೆಂಡತಿಯ ವಾದಕ್ಕೆ ಯಾವ ಮನ್ನಣೆಯೂ ದೊರೆಯುವುದಿಲ್ಲ. ಹೆಂಡತಿಯ ಶೀಲ, ನಡವಳಿಕೆಗಳ ಬಗ್ಗೆ ಸಂಶಯಾಸ್ಪದ ರೀತಿಯಲ್ಲಿ ನೋಡಿ ನಿಂದನೆ ಮಾಡುವುದನ್ನು ಕಾಣುತ್ತೇವೆ. ಆದರೆ ಇದನ್ನು ವಿರೋಧಿಸುವ ಅವಕಾಶ ಹೆಣ್ಣಿಗೆ ಇರುವುದಿಲ್ಲ. ಗ್ರಾಮೀಣ ಸಮಾಜದಲ್ಲಿ ಹೆಣ್ಣಿಗೆ ಸ್ವಾತಂತ್ರ್ಯ ಇಲ್ಲದಿರುವುದನ್ನು ಕಾಣಬಹುದು.

ಈ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿ ನೋಡಿದಾಗ ಗ್ರಾಮೀಣ ಸಮಾಜದಲ್ಲಿ ಮಹಿಳೆಯರು ಸ್ತ್ರೀ ಸ್ವಾತಂತ್ರ್ಯವಿಲ್ಲದೆ, ಲಿಂಗಭೇದಕ್ಕೆ ಒಳಪಟ್ಟು ಅನೇಕ ಕಷ್ಟ, ನಷ್ಟಗಳನ್ನು ಎದುರಿಸಿ ಜೀವನ ಸಾಗಿಸುವ ವ್ಯವಸ್ಥೆ ಗ್ರಾಮೀಣ ಪ್ರದೇಶದಲ್ಲಿ ಕಂಡುಬರುತ್ತದೆ.

"ಲೈಂಗಿಕ ಸುಖವನ್ನು ಜೀವನದ ಸಾರಸರ್ವಸ್ವ ಎಂದು ಭಾವಿಸದೆ ಇರುವ 'ಕಣ್ಮರೆ' ಕಥೆಯ ಅಚ್ಚಮ್ಮನಂತಹವರ ನಿಲುವು ತೋರಿಕೆಯದು ಎನ್ನುತ್ತವೆ. ರಜಕಾರರ ಧಾಳಿಯ ನಿರೀಕ್ಷೆಯಲ್ಲಿ ಜನ ನೀತಿ ಅನೀತಿಗಳ ನಡುವಿನ ಗೆರೆಯನ್ನು ಗುರುತಿಸುವ ಶಕ್ತಿಯನ್ನು ಕಳೆದುಕೊಳ್ಳುತ್ತಾರೆ. ಆ ಹಂತದಲ್ಲಿ ವಾಸ್ತವಿಕವಾಗಿ

ದಾಳಿ ಮಾಡಿದ ರಜಕಾರರ ಗುಂಪಿನಲ್ಲಿದ್ದ ಮುಸ್ಲಿಂ ಹುಡುಗ ಹಿಂದೂ ಹುಡುಗಿಯೊಂದಿಗೆ ಹೊಂದುವ ಲೈಂಗಿಕ ಸಹಚರ್ಯವನ್ನು ಸಹಜ ಪ್ರೀತಿಯ ಪ್ರಕಟಣೆಯ ಒಂದು ರೂಪ ಎಂದು ಚಿತ್ರಿಸುವ 'ದಾಳಿ' ಕಥೆಯು ವೈಯುಕ್ತಿಕವಾಗಿ ತನಗೆ ಇಷ್ಟವಾದದ್ದು ಎಂದು ಮುನ್ನುಡಿಯಲ್ಲಿ ಹೇಳಿಕೊಳ್ಳುವ ಲಂಕೇಶರ ವೈಯುಕ್ತಿಕ ಅಭಿಪ್ರಾಯವೂ ಒಟ್ಟಾರೆ ಕಥೆಗಳ ಅಭಿಪ್ರಾಯವೂ ಒಂದೇ ಎಂಬುದು ಗಮನಿಸಬೇಕಾದ ಸಂಗತಿ. ಮುಕ್ತ ಲೈಂಗಿಕತೆಯ ಪ್ರತಿಪಾದಕನಾಗಿ ನಿಲ್ಲುವ ಲಂಕೇಶ್ (ರಾವಣ)ನ ಮುಂದೆ ರಾಮ ವಿಜೃಂಭಿಸುವುದು ತಾನು ಪ್ರತಿಪಾದಿಸುವ ಕಟ್ಟುಪಾಡಿನ ಬದುಕಿನ ಆದರ್ಶದಿಂದಾಗಿ ಒಂದು ಹೆಣ್ಣನ್ನು ನೋಡಿದರೆ ಅಕ್ಕ ತಂಗಿ ಅವ್ವ ಎಂದುಕೊಳ್ಳುವ ಭಾವ ಕೃತಕವಾದದ್ದು ಅವಳನ್ನು ಭೋಗಿಸುವ ಭಾವವೇ ಸಹಜವಾದದ್ದು ಎನ್ನುವ ವಿಚಾರವಾದಿ ಲೇಖಕನಿಗೆ ಸಮಾಜವು ಲೈಂಗಿಕ ಜೀವನಕ್ಕೆ ಸಂಬಂಧಿಸಿದಂತೆ ಆರೋಗ್ಯಕರ ವ್ಯವಸ್ಥೆಗೆ ಒಳಪಡಬೇಕು ಎಂಬ ಆಶಯವು ಅವಾಸ್ತವಿಕವಾದ ಆದರ್ಶ ಎನ್ನಿಸುವುದು ಆಶ್ಚರ್ಯದ ಸಂಗತಿ. ಮೂರು ವರ್ಷದ ಹುಡುಗಿಯ ಮೇಲೂ ಅತ್ಯಾಚಾರ ನಡೆಯುವುದು, ವೇಶ್ಯಾಗೃಹಗಳಿಗೆ ತಮ್ಮ ಹುಡುಗಿಯರನ್ನು ಮಾರಿ ಅವರ ಬದುಕನ್ನು ಮೂರಾಬಟ್ಟೆ ಮಾರುತ್ತಿರುವಂತಹ ಸಂಗತಿಗಳು ಕಟ್ಟುಪಾಡಿನ ಬದುಕು ವಾಸ್ತವಿಕವಾದ ಒಂದು ಅಗತ್ಯ ಎಂಬುದನ್ನು ಎತ್ತಿಹಿಡಿಯುತ್ತಿರುವಾಗ ಲೈಂಗಿಕ ಸುಖದ ಬೇಡಿಕೆಗೆ ಚೌಕಟ್ಟು ಇರಬೇಕಾದದ್ದು ಯೋಗ್ಯ ಎನ್ನುವ ಮಾತು ಜವಾಬ್ದಾರಿ ಲೇಖಕನಿಂದ ಬರಬೇಕಾಗುತ್ತದೆ. ಸಹಜವಾದದ್ದನ್ನೆಲ್ಲ ಯಥಾವತ್ತಾಗಿ ಒಪ್ಪಿಕೊಳ್ಳಲೇಬೇಕು ಎಂದಾದರೆ ವಿಜ್ಞಾನವನ್ನು ಬದಿಗಿರಿಸಬೇಕಾಗುತ್ತದೆ. ಸಹಜ ಪ್ರಕೃತಿಯನ್ನು ನಮಗೆ ಬೇಕಾದಂತೆ ಒಗ್ಗಿಸಿಕೊಳ್ಳುವ ವಿಜ್ಞಾನ ಯೋಗ್ಯವಾದದ್ದು ಎನ್ನುವುದಾದರೆ ಲೈಂಗಿಕ ಬೇಡಿಕೆಯನ್ನು ವೈಯಕ್ತಿಕ, ಸಾಮುದಾಯಿಕ ಹಿತಾಸಕ್ತಿಯ ದೃಷ್ಟಿಯಿಂದ ವ್ಯವಸ್ಥೆಗೆ ಒಳಪಡಿಸಿಯೂ ಯೋಗ್ಯವಾದದ್ದೇ ಆಗುತ್ತದೆ.

ಬದುಕು ಕೇವಲ ಲೈಂಗಿಕ ಸುಖವನ್ನು ಪಡೆಯುವುದಕ್ಕೆ ಸೀಮಿತವಾಗಿಯೂ ಇಲ್ಲ. ಸ್ತ್ರೀ ಪುರುಷರಿಗೆ ಅವರದೇ ಆದ ವ್ಯಕ್ತಿತ್ವವಿರುತ್ತದೆ. ಆ ವ್ಯಕ್ತಿತ್ವಕ್ಕೆ ಅನುಗುಣವಾದ ಕನಸುಗಳಿರುತ್ತವೆ. ಆ ಕನಸುಗಳು ವೈಯಕ್ತಿಕ ಕೌಶಲ್ಯವನ್ನು ಹೆಚ್ಚಿಸಿಕೊಳ್ಳುವುದಕ್ಕೆ, ಕಲಾತ್ಮಕವಾಗಿ ಕಾರ್ಯಭಾರವನ್ನು ನಿರ್ವಹಿಸುವುದಕ್ಕೆ ಇತರರ ಕಷ್ಟಸುಖಗಳಿಗೆ ಸ್ಪಂದಿಸುವುದಕ್ಕೆ, ವೈಯಕ್ತಿಕ ಮತ್ತು ಸಾಮುದಾಯಿಕ ಸ್ವಾತಂತ್ರ್ಯ ಘನತೆಗಳನ್ನು ಎತ್ತಿ ಹಿಡಿಯುವುದಕ್ಕೆ ಹೀಗೆ ಹತ್ತು ಹಲವು ಆಶಯಗಳ ಪ್ರತೀಕಗಳಾಗಿರುತ್ತವೆ. ಇಂದು ಕೆಲವು ಸ್ತ್ರೀಯರಾದರೂ ಮನೆ, ಗಂಡ, ಮಕ್ಕಳು ಎನ್ನುವ ಸೀಮಿತ ಚೌಕಟ್ಟನ್ನು ದಾಟುತ್ತಿದ್ದಾರೆ. ಜಗತ್ತಿನ ವೈಶಾಲ್ಯವನ್ನು ಅನುಭವಿಸಲು ತಮ್ಮನ್ನು ತೆರೆದುಕೊಳ್ಳುತ್ತಿದ್ದಾರೆ. ತಮ್ಮ ವೈಯಕ್ತಿಕ ಪ್ರತಿಭೆಯ ಫಲವನ್ನು ಸಮುದಾಯಕ್ಕೆ ಕಾಣಿಕೆಯಾಗಿ ಕೊಡಲು ಮುಂದಾಗುತ್ತಿದ್ದಾರೆ."[೪೧]

ಲಂಕೇಶರವರ ಕಣ್ಮರೆ ಕತೆಯಲ್ಲಿ ಬರುವ ಅಚ್ಚಮ್ಮನಂತಹ ಮಹಿಳೆ ಇಲ್ಲಿನವರೆಗೂ ನಾವು ಭಾವಿಸದೆ ಇರುವ ಲೈಂಗಿಕ ಸುಖಕ್ಕೆ ಅತಿ ಮಹತ್ವವನ್ನು ನೀಡದೆ ಇರಬಹುದಾದ ಒಂದು ನಿಲುವನ್ನು ಅಧ್ಯಯನಕಾರರು ತೋರಿಕೆಯದು ಎನ್ನುತ್ತಾರೆ. ಆದರೆ ಸೃಷ್ಟಿ ವೈಚಿತ್ರ್ಯ ಇದಕ್ಕೆ ಪುಷ್ಟಿ ಕೊಡುವುದಿಲ್ಲ. ಈ ಮಹಿಳೆ ಸ್ವಾರ್ಥತೆಯಲ್ಲಿ ಕುಂದಿರಬಹುದು. ಭಯದ ವಾತಾವರಣ ಇರಬಹುದು. ಅವಕಾಶದಿಂದ ವಂಚಿತಳಾಗಿರಬಹುದು. ಪುರುಷನ ಬಗ್ಗೆ ಭಾವನೆಗಳು ಸರಿ ಇಲ್ಲದೆ ಇರಬಹುದು. ಆದುದರಿಂದ ಕತೆಗಾರರ ರಚನೆ ಸಮರ್ಥನೆಗೆ ನಿಲುಕುತ್ತದೆ.

ಇದೇ ವಿಮರ್ಶಕರ ಲೈಂಗಿಕತೆಯ ವಿಚಾರವಾದಿ ಲಂಕೇಶ್‌ರವರನ್ನು ಕುರಿತು ಕತೆಗಳ ರಾಮಾಯಣದಲ್ಲಿ ಬರುವ ಶ್ರೀರಾಮಚಂದ್ರ ಪರಸ್ತ್ರೀಯನ್ನು ಅಕ್ಕ ತಂಗಿ ಅವ್ವ ಎಂದುಕೊಳ್ಳುವ ಭಾವ ಕೃತಕವಾದದ್ದು ಎಂದಿದ್ದಾರೆ. ವಿಮರ್ಶಕರು ಇದನ್ನು ಇವರು ಸರಿಯಾದ ದೃಷ್ಟಿಕೋನದಿಂದ ಗ್ರಹಿಸಲಿಲ್ಲವೆಂದು ಕಾಣುತ್ತದೆ. ದೇಶದ ಪ್ರತಿಯೊಬ್ಬ ಪ್ರಜೆಗೂ ತಿಳಿದಿರುವಂತೆ ಗ್ರಾಮ ಮತ್ತು ನಗರವಾಸಿಗಳೂ ಸಹ ಶ್ರೀರಾಮಚಂದ್ರನ ಆದರ್ಶ ಪಾಲನೆಯನ್ನು ಏಕಪತ್ನಿವ್ರತಸ್ಥನೆಂಬ ನಾಣ್ನುಡಿಗೆ ಎಲ್ಲರ ಸಹಮತವಿದೆ. ಅದೇ ನಮ್ಮ ಆಡುಮಾತಿನಲ್ಲಿ ಹೇಳುವುದಾದರೆ ಶ್ರೀಕೃಷ್ಣ ಸ್ತ್ರೀಲೋಲ, ನಾರಿಯರ ಸಹವಾಸಗಾರ, ಕೃಷ್ಣಲೀಲೆ, ಹದಿನಾರು ಸಾವಿರ ಹೆಂಡತಿಯರ ಗಂಡ ಎಂಬ ಪ್ರತೀತಿಯೂ ಇದೆ. ಆದರೆ ಶ್ರೀರಾಮನಿಗೆ ಈ ರೀತಿ ಎಲ್ಲೂ ಹೇಳುವುದಿಲ್ಲ. ಪ್ರತಿಯೊಂದು ಸಂಸಾರದಲ್ಲೂ ಶ್ರೀರಾಮನ ಮಾತನ್ನು ಉದ್ಧರಿಸುವುದು ಕಂಡುಬರುತ್ತದೆ. ಈ ವಿಚಾರ ವಿಮರ್ಶಕರಿಗೆ ಹೊಳೆದಿರಬಹುದಿತ್ತಲ್ಲವೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಗ್ರಾಮೀಣ ಪ್ರದೇಶಗಳಲ್ಲಿ ಮಹಿಳೆಯು ಯಾವಾಗಲೂ ಸೀತೆಯ ಆದರ್ಶವನ್ನು ಇಟ್ಟುಕೊಂಡು ಬದುಕಬೇಕಾದ ಪರಿಸ್ಥಿತಿಯನ್ನು ಕಾಣುತ್ತೇವೆ.

"ಇಂತಹ ಪ್ರಯತ್ನಕ್ಕೆ ಲಂಕೇಶರ ಕಥೆಗಳು ತೊಡರುಗಾಲನ್ನಿಡುತ್ತವೆ ಎಂದೇ ಅನ್ನಿಸುತ್ತದೆ. ಬಹುಪಾಲು ಕಥೆಗಳಲ್ಲಿ ಸ್ತ್ರೀಯರ ಪ್ರವೇಶವಾಗುವುದೇ ಅವರ ಅಂಗಾಂಗದ ವರ್ಣನೆಗಳು ಬಹುಮುಖ್ಯ ಎನ್ನುವಂತೆ ಬರುತ್ತವೆ. ಆ ವರ್ಣನೆಗಳು ಗಂಡಿನ ದೃಷ್ಟಿಯಿಂದ ಕಾಮ ಪ್ರಚೋದನೆಯನ್ನುಂಟುಮಾಡುವ ವರ್ಣನೆಗಳೇ ಆಗಿರುತ್ತವೆ. ಸ್ತ್ರೀಯನ್ನು ಕುರಿತ ಗಂಡಿನ ಮೆಚ್ಚಿಕೆಯು ಅವಳನ್ನು ಭೋಗಿಸುವ ಉದ್ದೇಶ ಹೊಂದಿರುವಂತೆ ಬರುತ್ತದೆ. ಅವಳನ್ನು ಭೋಗಿಸುವುದಕ್ಕಾಗಿ ಗಂಡು ಯಾವ ಮಾರ್ಗವನ್ನಾದರೂ ಅನುಸರಿಸುತ್ತಾನೆ ಎನ್ನುವುದನ್ನು 'ಗುತ್ತಿಗೀತ ಆದದ್ದು', 'ಕೊನೆ', 'ಮಾರಲಾಗದ ನೆಲ' ಕಥೆಗಳು ವಿಶೇಷವಾಗಿ ಚಿತ್ರಿಸುತ್ತವೆ.

'ಕಲ್ಲು ಕರಗುವ ಸಮಯ'ದಲ್ಲೂ ಹೆಣ್ಣಿನ ವ್ಯಕ್ತಿತ್ವದ ಘನತೆಯನ್ನು ಪ್ರತಿಪಾದಿಸುವುದಕ್ಕೆ ಜಾಗ ಇಲ್ಲ. ಹೀಗೆ ಸ್ತ್ರೀಯನ್ನು ಭೋಗಿಸುವುದೂ ಸಹಜ ಎಂದು ಒಪ್ಪಿಕೊಂಡುಬಿಡುವಂತೆ, ಭೌತಿಕ ಸಮೃದ್ಧಿಗಾಗಿ ಅಥವಾ ಭೌತಿಕ ಸಮೃದ್ಧಿಯ ಪ್ರದರ್ಶನದ ಭಾಗವಾಗಿ ಸ್ತ್ರೀಯನ್ನು ಭೋಗಸಾಧನವನ್ನಾಗಿ ಬಳಸಿಕೊಂಡುಬಿಡುವುದನ್ನು ಸುಮ್ಮನೆ ಒಪ್ಪಿಕೊಂಡು ಬಿಡುವ ಲೇಖಕ 'ಕುರುಡು ಕಾಂಚಾಣ'ದಲ್ಲಿ 'ನಮ್ಮ ನಡುವಿನ ಹುಡುಗ'ದಲ್ಲಿ ಅಥವಾ 'ಅಸ್ವಸ್ಥರು' ಕಥೆಯಲ್ಲಿ ಗಂಡು ವೈಚಾರಿಕ ನಿಲುವು ಎಂದುಕೊಂಡದಕ್ಕೆ ವಿರೋಧಿಯಾಗಿ ನಿಂತ ಹೆಣ್ಣನ್ನು ದೂಷಿಸುವಂತೆ, 'ಜೊತೆಗಾರ' ಕಥೆಯಲ್ಲಿ ಜೋಸೆಫೈನಳನ್ನು 'ಮಾರಲಾಗದ ನೆಲ' ಕಥೆಯಲ್ಲಿ ಸಾವಂತ್ರಿಯನ್ನು ಆಸ್ತಿಯನ್ನು ಉಳಿಸಿಕೊಳ್ಳಲು ಸಾಧನವನ್ನಾಗಿ ಮಾಡಿಕೊಳ್ಳುವ ಗಂಡನ್ನ ದೂಷಿಸುವುದಿರಲಿ ವಿರೋಧಿಸುವ ಧ್ವನಿಯನ್ನು ಎತ್ತುವುದಿಲ್ಲ.

ಬದಲಿಗೆ ಆಸ್ತಿಯನ್ನು ಉಳಿಸಿಕೊಳ್ಳುವ, ಕಬಳಿಸುವ ಪ್ರಕ್ರಿಯೆಯನ್ನು ಒಂದು ರೀತಿಯಲ್ಲಿ ವಸ್ತುನಿಷ್ಠ ಎನ್ನುವಂತೆ ವರ್ಣಿಸುವುದು ಕಂಡುಬರುತ್ತದೆ. ಇನ್ನೊಬ್ಬ ತನ್ನ ಹೆಂಡತಿಯ ಮೇಲೊ ತಾಯಿಯ ಮೇಲೊ ಅಥವಾ ಅಕ್ಕನ ಮೇಲೊ ಕಣ್ಣು ಹಾಕಿದರೆ ಚಡಪಡಿಸಿ ಅಬ್ಬರಿಸುವ ಗಂಡು ತಾನೇ ಇನ್ನೊಬ್ಬಳ ಮೇಲೆ ಲೈಂಗಿಕ ದೃಷ್ಟಿ ಬೀರಿದರೆ ಅದಕ್ಕೆ ಸಮರ್ಥನೆ ಕೊಟ್ಟುಕೊಳ್ಳುವುದು ಕಂಡು ಬರುತ್ತದೆ.

ಲಂಕೇಶರ ಕಥಾ ಪ್ರಪಂಚದಲ್ಲಿ ಗಂಡು ಹೆಣ್ಣಿನ ಕೂಡುವಿಕೆಯು ಸಮಸ್ಯೆಯನ್ನು ಎದುರಿಸಲಾರದವನು ಮೊರೆ ಹೋಗುವ ಒಂದು ಆಶ್ರಯ ತಾಣವೆಂಬಂತೆ ಚಿತ್ರಿತವಾಗಿ, ಗಮನಿಸಲು ಹೊರಟ ಸಮಸ್ಯೆಯು ತನ್ನ ಮಹತ್ವವನ್ನು ಕಳೆದುಕೊಳ್ಳುತ್ತದೆ. 'ಸ್ಟೆಲ್ಲಾ ಎಂಬ ಹುಡುಗಿ' ಕಥೆಯಲ್ಲಿ ಸ್ಟೆಲ್ಲಾಳ ಸಮಸ್ಯೆಯು ಹಳ್ಳಿಯಲ್ಲಿದ್ದ ಅವಳ ಭೂಮಿಯನ್ನು ಮಾರಿ ಹಣ ಕೊಡಬೇಕೆಂದು ಒತ್ತಾಯಿಸುತ್ತಿರುವ ಗಂಡನನ್ನು ಹೇಗೆ ತಡೆಯುವುದು ಮತ್ತು ಹಣ ಕೊಡದೆ ಗಂಡನನ್ನು ತನ್ನ ಸಂಸಾರ ಸಂಗಾತಿಯನ್ನಾಗಿ, ಜವಾಬ್ದಾರನಾದ ಪಾಲುದಾರನನ್ನಾಗಿ ಉಳಿಸಿಕೊಳ್ಳುವುದು ಹೇಗೆ ಎಂಬುದು. ಆದರೆ ಆ ಕಥೆಯು ಈ ಸಮಸ್ಯೆಯನ್ನು ಗಂಭೀರವಾಗಿ ಗಮನಿಸುವುದರ ಬದಲಿಗೆ ನರ್ಸ್ ಆಗಿರುವ ಅವಳ ದೈಹಿಕ ಸಾಹಚರ್ಯವನ್ನು ಬಯಸುವ ರೋಗಿ, ಪ್ರಿಯಕರ, ಗಂಡ ಇವರ ನಡವಳಿಕೆಯನ್ನು ಪ್ರಧಾನವಾಗಿಸುತ್ತದೆ."[೪೨]

ಈ ಮೇಲಿನ ಅಭಿಪ್ರಾಯವನ್ನು ಗಮನಿಸಿದಾಗ ಲಂಕೇಶರ ಬಹುಪಾಲು ಕತೆಗಳಲ್ಲಿ ಸ್ತ್ರೀಯರಿಂದಲೇ ಪ್ರಾರಂಭವಾಗುವ ಕತೆಗಳು. ಅವರ ಅಂಗಾಂಗಗಳ ಬಗ್ಗೆ ವಿಶೇಷವಾಗಿ ಒತ್ತು ಕೊಟ್ಟಿರುವುದು ಕಂಡುಬರುತ್ತದೆ. ಈಗಾಗಲೇ ನಾವು ಈ ಅಧ್ಯಯನ ಭಾಗದ ಅನೇಕ ಅಭಿಪ್ರಾಯಗಳಲ್ಲಿ ಹೆಣ್ಣಿನ ಆಕರ್ಷಣೆ ಬಗ್ಗೆ ಮತ್ತು ಸೃಷ್ಟಿ ನಿಯಮಕ್ಕೆ ಹೊಂದಿಕೊಂಡಿರುವ ಈ ವಿಷಯ ಸಮಾಜಕ್ಕೆ ತುಂಬಾ ಅತ್ಯಾವಶ್ಯಕ ವಸ್ತುನಿಷ್ಠವಾಗಿರುತ್ತದೆ. ಆದ್ದರಿಂದ ಈ ವಿಷಯ ಪ್ರಸ್ತಾಪಗಳನ್ನು ಸಂದರ್ಭಾನುಸಾರವಾಗಿ ಇಷ್ಟವಿದ್ದೋ ಅಥವಾ ಇಷ್ಟವಿಲ್ಲದೆಯೋ ಒಪ್ಪಿಕೊಳ್ಳಲೇ ಬೇಕಾಗುತ್ತದೆ ಎಂಬುದು ನನ್ನ ವೈಯಕ್ತಿಕ ಅಭಿಪ್ರಾಯ. ಇವರ ಗುತ್ತಿಗೀತ ಆದದ್ದು ಕೊನೆ, ಮಾರಲಾಗದ ನೆಲ ಕತೆಗಳಲ್ಲಿ ಸ್ತ್ರೀಯರನ್ನು ಕುರಿತು ಗಂಡು ಮೆಚ್ಚುವುದನ್ನು ಬರೀ ಅವಳನ್ನು ಭೋಗಿಸುವ ಉದ್ದೇಶ ಎಂಬ ಚಿತ್ರ ಮಾತ್ರ ಈ ವಿಮರ್ಶಕರಿಗೆ ಏಕೆ ಉದ್ಭವಿಸುತ್ತದೆ ಎಂಬುದು ತಿಳಿದು ಬರುವುದಿಲ್ಲ. ಇಲ್ಲಿ ಪ್ರತಿಯೊಂದು ವಿಷಯದಲ್ಲಿಯೂ ಲಿಂಗಭೇದವನ್ನು ಹೆಚ್ಚಾಗಿ ಗಮನಿಸಬಹುದು. ಈ ವಿಚಾರ ಪ್ರತಿಯೊಂದು ಗ್ರಾಮೀಣ ಸಮಾಜ ಹಾಗೂ ನಗರ ಸಮಾಜದಲ್ಲಿ ಪ್ರತಿನಿತ್ಯ ಕಾಣಬಹುದಾಗಿದೆ.

ಲಂಕೇಶರ ಕಲ್ಲುಕರಗುವ ಸಮಯ ಕತೆಯಲ್ಲಿ ಬರುವ ಶ್ಯಾಮಲಾ ಮತ್ತು ತಿಪ್ಪಣ್ಣ ಇವರ ನಡವಳಿಕೆ, ಸ್ನೇಹ, ಪ್ರೀತಿ, ವಿಶ್ವಾಸ ಭಾವನೆಗಳನ್ನು ಕೆದಕಿ ನೋಡಿದಾಗ ನಾವು ಇದುವರೆಗೂ ಮೇಲಿನ ಎಲ್ಲಾ ಸಂದರ್ಭಗಳಲ್ಲೂ ಭಾವಿಸಿದ ವಿಷಯಗಳಲ್ಲಿ ಲಿಂಗಭೇದ ಮತ್ತು ಗ್ರಾಮೀಣ ಸಮಾಜವನ್ನು ಉದ್ದೇಶಿಸಿ ವಿವರಣೆ ನೀಡಿರುವುದು ಸ್ಪಷ್ಟವಾಗಿದೆ. ಆದರೆ ಈ ಮೇಲೆ ತಿಳಿಸಿರುವ ಕತೆಯಲ್ಲಿ ಶ್ಯಾಮಲಾಳ ವರ್ತನೆ, ಭಾವನೆ, ಸೌಂದರ್ಯ, ಮಾತುಗಳು, ಧೈರ್ಯ, ಚಿಂತನೆ ಇವುಗಳು ಯಾವುದೇ ರೀತಿಯಲ್ಲಿ ತಿಪ್ಪಣ್ಣನನ್ನು ಶ್ಯಾಮಲಾಳಿಗೆ ಹೋಲಿಸಲು ಸಾಧ್ಯವಾಗುತ್ತಿಲ್ಲ. ಇನ್ನು ಶ್ಯಾಮಲಾಳ ತಂದೆಯ ಬಗ್ಗೆ ಕತೆಯಲ್ಲಿ ಬರುವ ಅವನ ಸಿಟ್ಟು, ಕೋಪ, ಕ್ರೂರತನ ಇವುಗಳೆಲ್ಲವನ್ನು ತನ್ನ ಕರುಳಿನ ಕುಡಿಯಿಂದ ವ್ಯಕ್ತವಾದ ಸಂಬಂಧವು ಮಲ್ಲಯ್ಯನು ತಿಪ್ಪಣ್ಣನ ಮನೆಗೆ ಹೋಗಿ ಇವನನ್ನು ನೋಡಿದ ಮೇಲೆ ಅವನ ಮನಸ್ಸಿನ ಮೇಲೆ ಉಂಟಾದ ಪರಿಣಾಮವನ್ನು ಗಮನಿಸಬಹುದಾಗಿದೆ. ಆನಂತರ ಸ್ವಾಮಿಗಳಿಂದ ಶ್ಯಾಮಲಾಳ ಮನಸ್ಸು ಪರಿವರ್ತನೆ ಯಾಗಬಹುದೆಂಬ ಊಹೆ ತಪ್ಪಾಗಿದ್ದನ್ನು ಗಮನಿಸಬಹುದು. ಕೊನೆಗೆ ತಿಪ್ಪಣ್ಣನೂ ಸಹ ಯಾವುದೇ ಆಸೆ ಆಕಾಂಕ್ಷೆಗಳಿಗೆ ಬಲಿಯಾಗದೆ ಮತ್ತು ತನ್ನ ಗ್ರಾಮದ ಸ್ನೇಹಿತರು ಸಂಘಟಿಸಿದ್ದ ಕ್ರಾಂತಿಕಾರಿ ಸಂಘದ

ಹಿತವಚನಕ್ಕೂ ತಲೆಬಾಗದೆ, ನಿರ್ಲಿಪ್ತನಾಗಿ ಇದ್ದು ಬಿಡುವುದನ್ನು ನಾವು ಕಾಣಬಹುದು. ಒಟ್ಟಾರೆ ಈ ಕತೆಯಲ್ಲಿ ನಾವು ಗಮನಿಸಬೇಕಾದ ಮುಖ್ಯ ಅಂಶಗಳೆಂದರೆ ಲಿಂಗಭೇದ ನೀತಿ ಇಲ್ಲಿ ಯಾವುದೇ ಕೆಲಸ ಮಾಡದೆ ಇರುವುದನ್ನು ಗಮನಿಸಬಹುದು. ಇನ್ನು ಆ ಗ್ರಾಮದಲ್ಲಿ ಸಮಾಜ ಹೇಳಿದಂತೆ ಮಾಡಬಹುದೆಂಬ ವಿಚಾರ ಗೊತ್ತಿದ್ದರೂ ಸಹ ಇಲ್ಲಿ ಯಾವುದೇ ಕ್ರಮ ತೆಗೆದುಕೊಳ್ಳದೆ ಇವರ ಬಗ್ಗೆ ತಟಸ್ಥ ನಿಲವು ತಳೆದಿರುವುದನ್ನು ಗಮನಿಸಬಹುದು. ಇಲ್ಲಿ ಲೇಖಕರು ಇದನ್ನು ಚಿತ್ರಿಸಿದ ರೀತಿ ವಿಶೇಷವಾದ ಚಾಕಚಕ್ಯತೆ ಬಳಸಿರುವುದನ್ನು ಮನಗಾಣಬಹುದು.

"ವಾಸ್ತವ ಬದುಕಿನಲ್ಲಿ ಪ್ರತಿಯೊಬ್ಬರಿಗೂ ಅವರದೇ ಆದ ಸಮಸ್ಯೆಗಳಿರುತ್ತವೆ. ಆ ಸಮಸ್ಯೆಗಳಿಗೆ ಸಾಧ್ಯತೆಯ ನೆಲೆಯಲ್ಲಿ ಬದುಕುವುದನ್ನೇ ಪರಿಹಾರವಾಗಿ ಕಂಡುಕೊಳ್ಳಬೇಕಾಗುತ್ತದೆ. ಭಾವುಕತೆಯಿಂದ ಅಥವಾ ಸಮಸ್ಯೆಗೆ ಬೆನ್ನು ಹಾಕುವುದರಿಂದ ಬದುಕು ಸಿದ್ಧಿಸುವುದಿಲ್ಲ. ಇದನ್ನು ಸ್ತ್ರೀಯರ ದೃಷ್ಟಿಯಿಂದಲೂ ಅವರ ಪರವಾದ ಸಹಾನುಭೂತಿ ಇರುವ ಲೇಖಕ ಅತ್ಯಗತ್ಯವಾಗಿ ಪ್ರಸ್ತಾಪಿಸಬೇಕು. ಮದುವೆಯಾಗಬೇಕು, ಲೈಂಗಿಕ ಸುಖವನ್ನು ಅನುಭವಿಸಬೇಕು. ಗಂಡಿನ ಭದ್ರ ಕವಚದ ಒಳಗೆ ಸುರಕ್ಷಿತವಾಗಿ ಇರಬೇಕು ಎಂದು ಸ್ತ್ರೀಯರು ಕನಸು ಕಾಣುತ್ತಿರುವುದರಿಂದಾಗಿಯೇ ಅವರು ವೈಯಕ್ತಿಕವಾಗಿ ಸಶಕ್ತರಾಗಿ ರೂಪುಗೊಳ್ಳಲಾರದೇ ಹೋಗಿದ್ದಾರೆ. ಇದರಿಂದಾಗಿಯೇ ಅವರ ಕನಸನ್ನು ನನಸನ್ನಾಗಿಸದ ಪರಿಸ್ಥಿತಿಯಿಂದಾಗಿ ಹುಟ್ಟಿಕೊಂಡಿರುವ ವೇಶ್ಯಾ ಪದ್ಧತಿ, ದೇವದಾಸಿ ಪದ್ಧತಿ, ಹುಡುಗಿಯರ ಮಾರಾಟ, ಗಂಡನೊಂದಿಗಿನ ಸಹ ಜೀವನಕ್ಕಾಗಿ ತನ್ನದು ಎನ್ನುವುದನ್ನೆಲ್ಲ ಗೋರಿ ಹೂತಿಡಬೇಕಾಗಿರುವುದೇ ಮೊದಲಾದ ಸಮಸ್ಯೆಗಳಿಂದ ಸ್ತ್ರೀಯರ ಬದುಕು ಜರ್ಝರಿತವಾಗಿದೆ.

ಲಂಕೇಶರ ಕಥೆಗಳು ಸಮರಸದ, ವೈಚಾರಿಕವಾದ ಮತ್ತು ಮಾನವೀಯ ಬದುಕಿಗೆ ಅಡ್ಡಿಯಾಗಿರುವುದು ಹೆಣ್ಣೇ ಎಂದು ದೊಡ್ಡ ದನಿಯಲ್ಲಿ ದೂಷಿಸುತ್ತವೆ. 'ಕುರುಡು ಕಾಂಚಾಣ' ಕಥೆಯಲ್ಲಿಯ ಕ್ಷೌರಿಕನಿಗೆ ತಾಯಿಯ ಮೃತ ಸಂಸ್ಕಾರಕ್ಕಾಗಿ ವಾಗ್ದಾನ ಮಾಡಿದ ೧೫ ರೂಪಾಯಿಗಳನ್ನು ಕೊಡದೇ ಹೋದರೆ ಅದಕ್ಕೆ ಹೆಂಡತಿ ಎತ್ತಿದ ತಕರಾರುಗಳೇ ಪ್ರಧಾನ ಕಾರಣ."[೪೩]

ಇವರ "ಇನ್ನೊಂದು ಗುಂಪು ಕಥೆಗಳಲ್ಲಿ ಕಥೆಗಾರರು ಹಳ್ಳಿಯ ಬದುಕನ್ನು ಅದರೊಂದಿಗಿನ ಭೂತಕಾಲದ ಕೊಂಡಿಗಳನ್ನು ಕಳಚಿಕೊಳ್ಳದ, ನಿರ್ಲಿಪ್ತ ಪ್ರವಾಸಿಯಂತೆ ನೋಡುತ್ತಾರೆ. ಸದ್ಯದ ನಿರೂಪಕನ ನಗರದ ಬದುಕು ಮತ್ತು ಅದೇ ನಿರೂಪಕನೇ ಎದುರಿಸಬೇಕಾಗುವ ಹಳ್ಳಿಯ ಬದುಕನ್ನು ಪರಸ್ಪರ ಅರ್ಥಶೋಧನೆಯೆಂದೂ ಬಳಸಿಕೊಳ್ಳಲಾಗುತ್ತದೆ. ಇವನು ಹಳ್ಳಿಯಲ್ಲೂ ಆಗಂತುಕ, ಈ ಸ್ಥಿತಿಯು ಇಡೀ ಒಂದು ತಲೆಮಾರಿನ ಅನುಭವವೂ ಆಗುವುದರಿಂದ ಮುಖ್ಯವಾಗುತ್ತದೆ."[೪೪]

ಇದೇ ಹಿನ್ನೆಲೆಯಲ್ಲಿ ಅಮರೇಶ ನುಗಡೋಣಿಯವರ ಊರಮ್ಮ ಕತೆಯನ್ನು ಅವಲೋಕಿಸಿದಾಗ ಲಿಂಗಭೇದ ನೀತಿಯನ್ನು ಗ್ರಾಮೀಣ ಸಮಾಜದಲ್ಲಿ ಕಾಣಬಹುದು. ಬಾಲ್ಯದಿಂದ ಭೀಮ ಮತ್ತು ಊರಮ್ಮ ಇವರು ಸ್ನೇಹಿತರಾಗಿದ್ದರು. ಒಟ್ಟಿಗೆ ಬೆಳೆದಿದ್ದರು. ಇಲ್ಲಿ ಗ್ರಾಮೀಣ ಸಮಾಜದಲ್ಲಿ ಈ ಕತೆಯಲ್ಲಿ ಬರುವಂತೆ ಹೆಣ್ಣು ಮಕ್ಕಳ ಒಪ್ಪಿಗೆ ಇಲ್ಲದೆಯೇ ಊರಮ್ಮನನ್ನು ಊರ ಬಸವಿಯಾಗಿ ಬಿಡುತ್ತಾರೆ. ಇವಳಿಗೆ ತಂದೆ ತಾಯಿ ಇರುವುದಿಲ್ಲ. ಮಲ್ಲವ್ವ ಪೋಷಿಸಿ ಬೆಳೆಸುತ್ತಾಳೆ ಊರಮ್ಮನನ್ನು. ಇಲ್ಲಿ ಮಹಿಳೆಯ ಶೋಷಣೆ

ಕಂಡುಬರುತ್ತದೆ. ಈ ವ್ಯವಸ್ಥೆಯನ್ನು ಗ್ರಾಮದ ಜನರು ಯಾವುದೇ ಆಕ್ಷೇಪಣೆ ಇಲ್ಲದೆ ಒಪ್ಪಿಕೊಳ್ಳುತ್ತಾರೆ. ಮೂಢನಂಬಿಕೆ ಮತ್ತು ಗೊಡ್ಡು ಸಂಪ್ರದಾಯಗಳ ಮೊರೆಗೆ ಹೋಗಿ ಒಂದು ಹೆಣ್ಣಿನ ಜೀವನವನ್ನು ಹಾಳು ಮಾಡುವ ಸ್ಥಿತಿಯನ್ನು ತಲುಪುತ್ತದೆ ಎಂಬುದನ್ನು ಕಾಣಬಹುದು.

ಪಿ.ಲಂಕೇಶ್‌ರವರ ಕತೆಗಳಲ್ಲಿ ರಚನೆ, ವಿಚಾರವಾದ, ಮಾನವೀಯ ಬದುಕಿಗೆ ಹೆಣ್ಣೇ ಪ್ರಮುಖ ಆಕರ್ಷಣೆ ಹಾಗೂ ಪ್ರತಿಯೊಂದು ಕತೆಯಲ್ಲೂ ಬರುವ ನಾಯಕ ನಾಯಕಿಯರ ಪಾತ್ರಗಳ ನಡವಳಿಕೆಗಳನ್ನು ಗಮನಿಸಿದಾಗ ವಿವಿಧ ಲೇಖಕರು ತಮ್ಮ ಲೇಖನಗಳಲ್ಲಿ ಪ್ರಾಮುಖ್ಯತೆಯನ್ನು ನೀಡುವ ಹೆಣ್ಣಿನ ಆಕರ್ಷಣೆ, ಪ್ರೀತಿ, ಪ್ರೇಮ, ನೋವು, ನಲಿವು ಸಮಾಜದ ಹೊಗಳಿಕೆ, ತೆಗಳಿಕೆ ಚರ್ಚಾಸ್ಪದವಾದ ವಿಷಯಗಳು, ಟೀಕೆ ಟಿಪ್ಪಣಿಗಳ ಭೇದ ಭಾವಗಳು ಇವರ ಲೇಖನಗಳಲ್ಲಿ ಕಂಡುಬರುವುದಿಲ್ಲ ಎಂಬ ಅಂಶವನ್ನು ನಾನು ಇಲ್ಲಿ ಒತ್ತಿ ಹೇಳಬಯಸುತ್ತೇನೆ. ಲಿಂಗಭೇದನೀತಿ ಮತ್ತು ಗ್ರಾಮೀಣ ಸಮಾಜದ ಬಗ್ಗೆ ಇವರು ಪರ ವಿರೋಧವಿಲ್ಲದ ತಟಸ್ಥ ನೀತಿಯನ್ನು ತಮ್ಮ ಕಲ್ಲುಕರಗುವ ಸಮಯ ಕತೆಯಲ್ಲಿ ಅಭಿವ್ಯಕ್ತಿಸಿರುವುದನ್ನು ಕಾಣಬಹುದು.

"ಈ ಕಥೆಗಳು ಸಮಕಾಲೀನ ಕನ್ನಡ ಸಾಹಿತ್ಯದ ಕೆಲವು ಮುಖ್ಯ ಸಮಸ್ಯೆಗಳನ್ನು, ಆಶಯಗಳನ್ನು ತಮ್ಮದೇ ಆದ ರೀತಿಯಲ್ಲಿ ಸ್ಪಂದಿಸುವುದರಿಂದ ಬಹಳ ಮುಖ್ಯವಾಗುತ್ತದೆ. ದಲಿತರು, ಹಿಂದುಳಿದವರು ಹಾಗೂ ಹೆಣ್ಣು ಮಕ್ಕಳ ವಿಷಾದದ ಸ್ವರೂಪವನ್ನು ಅವರಷ್ಟೇ ತೀವ್ರವಾಗಿ ಅನುಭವಿಸುವ, ಮಂಡಿಸುವ ಈ ಕಥೆಗಳು ಸಿಕ್ಕನ್ನು ಬಿಡಿಸಲು ಪ್ರಯತ್ನಿಸುವುದು ಮಾತ್ರ ಮಾನವತಾವಾದ ಮತ್ತು ಪ್ರೀತಿಯ ಫಲವಾದ ಹೃದಯ ಪರಿವರ್ತನೆಯ ನೆಲೆಯಲ್ಲಿಯೇ ಬದುಕಿನ ಸುಖಗಳ ಬಗೆಗಿನ ತೆರೆದ ಮನಸ್ಸು, ಆತ್ಮಗೌರವ ಮತ್ತು ಕ್ಷುಲ್ಲಕವಾದುದರ ಬಗೆಗಿನ ತಿರಸ್ಕಾರದ ಫಲವಾದ ಲಂಕೇಶರ ಸ್ತ್ರೀ ಪಾತ್ರಗಳು, ಹೆಣ್ಣಿನ ತ್ಯಾಗಪರತೆಗೆ ಒತ್ತುಕೊಡುತ್ತಿದ್ದ, ಪಾರಂಪರಿಕ ಮಹಿಳೆಯರಿಗಿಂತ ಭಿನ್ನವಾಗಿದ್ದರೂ ಅವರ ಹಾಗೆಯೇ ಚೈತನ್ಯದ, ಪೋಷಕಶಕ್ತಿಯ ಕೇಂದ್ರಗಳಾಗಿದ್ದಾರೆ. ಆದರೆ ಈ ಕಥೆಗಳ ಒಟ್ಟು ತುಡಿತವಿರುವುದು ಪ್ರೀತಿಪೂರ್ಣವಾದ ತಿಳುವಳಿಕೆ ಹಾಗೂ ಒಪ್ಪಂದಗಳ ಕಡೆಗೆ ವಿನಾ ಅನಿವಾರ್ಯವಾದ, ಮುಖಾಮುಖಿಯ ಕಡೆಗಲ್ಲ. ಈ ಮಾತಿಗೆ ಅತ್ಯುತ್ತಮ ನಿದರ್ಶನವೆಂದರೆ ಆಕ್ರಮಣಕಾರ ಹಾಗೂ ಆಕ್ರಮಿತರ ನಡುವಿನ ವ್ಯತ್ಯಾಸವನ್ನೇ ಅಳಿಸಿಹಾಕಿ, ಯಾವುದೇ ಹಠ ನಿಲುವಿನ ಪರಿಣಾಮವಾದ ಬರ್ಬರತೆಯ ಮೇಲೆ ಬೆಳಕು ಚೆಲ್ಲುವ 'ದಾಳಿ' ಕಥೆ. ಈ ಕಥೆಯ ಮಲ್ಲಿ ಕಂಬನಿ ತುಂಬಿದ ಕಣ್ಣುಗಳ ಮೂಲಕ ಕಂಡುಕೊಳ್ಳುವ ಕ್ರೌರ್ಯ ಮತ್ತು ಅದಕ್ಕೆ ಮುಂದಿನ ಘಟನೆಗಳು ಒಟ್ಟು ಆ ಸನ್ನಿವೇಶದ ಬಗ್ಗೆ ಲಂಕೇಶರ ಸದ್ಯದ ನಿಲುವನ್ನು ಸಮರ್ಥವಾಗಿ ಹೇಳುತ್ತವೆ. ಅನ್ಯಾಯಕ್ಕೆ ಗುರಿಯಾದ ಸಮುದಾಯವೊಂದು ಕ್ರಮೇಣ ಧೈರ್ಯ, ಆತ್ಮವಿಶ್ವಾಸ, ಪ್ರತಿಭಟನೆಯ ಎಚ್ಚರಗಳನ್ನು ಸಂಪಾದಿಸುತ್ತಾ ತನ್ನಲ್ಲಿ ಮೊದಲಿನಿಂದಲೂ ಇದ್ದ ವಿವೇಕ, ಪ್ರತಿಭೆಗಳನ್ನು ಬಯಲಿಗೆ ತರುವ ಪವಾಡವು ಈ ಕಥೆಗಳಲ್ಲಿ ಸಮರ್ಥವಾಗಿ ನಡೆದಿದೆ. ಇದೆಲ್ಲವನ್ನು ಈಗಾಗಲೇ ಆಗಿ ಹೋಗಿರುವ ಸಾಧನೆಯೆಂದು ತೋರಿಸದೆ, ಈ ನಡೆಯುತ್ತಿರುವ ಬದಲಾವಣೆ ಎನ್ನುವಂತೆ ಗ್ರಹಿಸಲಾಗಿದೆ. ಆದ್ದರಿಂದ ಸನ್ನಿವೇಶದ ಸಂಕೀರ್ಣತೆಯು ಮಾಯವಾಗಿಲ್ಲ. ಅವರ ಈ ಸಂಕಲನದ ಬೇರೆ ಬೇರೆ ಕಥೆಗಳನ್ನು ಪರಸ್ಪರ ಪೂರಕವಾದ ಸ್ಥಿರ ಚಿತ್ರಗಳಂತೆ ನೋಡಿದಾಗ ನಮಗೆ ಸಮಗ್ರ ಸನ್ನಿವೇಶದ ಗ್ರಹಿಕೆ ಸಿಗುತ್ತದೆ. 'ಸಹಪಾಠಿ'

ಕಥೆಯ ಭಗವಾನ್ ಪ್ರಾರಂಭಿಸಿದ ಕೆಲಸವು 'ಮುಟ್ಟಿಸಿಕೊಂಡವನು' ಕಥೆಯ ತಿಮ್ಮಪ್ಪನವರಲ್ಲಿ ಮುಂದುವರಿಯುತ್ತದೆ. 'ಕಣ್ಮರೆ' ಕಥೆಯಲ್ಲಿ ಭ್ರಮರ, ಸಾವಿತ್ರಿ, ಅಚ್ಚಮ್ಮರು ಅನುಭವಿಸಿದ ಸೋಲು ಮತ್ತು ಹತಾಶೆಗಳು, 'ಕಲ್ಲು ಕರಗುವ ಸಮಯ'ದ ಶ್ಯಾಮಲ ಹಾಗೂ 'ದೇವಿ'ಯ ನಾಯಕಿಯರಲ್ಲಿ ಸಾರ್ಥಕತೆಯನ್ನು ಪಡೆದುಕೊಳ್ಳುತ್ತವೆ.

'ಕೃತಜ್ಞತೆಯ' ನಿರ್ಮಲಾಗೆ ತೆರೆಯದ ಬಾಗಿಲು 'ಸುಭದ್ರ ಕಥೆಯ ನಾಯಕಿಗೆ ತೆರೆಯುತ್ತದೆ. ಎಂದರೆ ಹಿಂದೆಂದೂ ಕಂಡರಿಯದ, ಬದಲಾವಣೆಯ ಮಹಾಪೂರದಲ್ಲಿ ನಿಮಿರಿದ ವಿವಿಧ ಪಾತ್ರಗಳ 'ಗತಿ-ಸ್ಥಿತಿ'ಗಳನ್ನು ದಾಖಲೆ ಮಾಡುತ್ತಾ ಹೋದಂತೆ ವಿಶ್ವರೂಪದರ್ಶನವು ಸಾಧ್ಯವಾಗುತ್ತದೆ. ಲಂಕೇಶರ ಮೊದಲ ಕಥೆಗಳು ಕೂಡ ಅರವತ್ತರ ದಶಕದ ಮಧ್ಯಮವರ್ಗದ ಬದುಕಿನ ಗಟ್ಟಿತನವನ್ನು ಹೀಗೆಯೇ ಅನಾವರಣ ಮಾಡಿದ್ದವೆಂಬ ಸಂಗತಿಯನ್ನು ಮರೆಯಬಾರದು. ಇಲ್ಲಿಯೂ ಕೆಲಸ ಮಾಡಿರುವ ಪ್ರತಿಭೆಯು ಅದೇ. ಆದರೆ ಆ ಪ್ರತಿಭೆಯ ತೆಕ್ಕೆಗೆ ಸಿಕ್ಕಿರುವ ಸಮುದಾಯ ಇನ್ನಷ್ಟು ವಿಶಾಲವಾದುದು. ಅವರು ತಲುಪಿರುವ ಅಂತರಂಗದ ಆಳಗಳು ಮೊದಲಿಗಿಂತ ಗಾಢವಾದವು."[೬೫]

'ಬೆಂಕಿ ಮಳೆ' ಬಾನುಮುಷ್ತಾಕರ ಕಥಾ ಸಂಕಲನ. ಇವರ ಎಲ್ಲಾ ಕಥೆಗಳಲ್ಲೂ ಕೂಡ ಮುಸ್ಲಿಂ ಸಮುದಾಯದ ಆಚರಣೆ, ಸಂಪ್ರದಾಯ ಹಾಗೂ ಮನಃಸ್ಥಿತಿಯ ಒಳನೋಟವನ್ನು ಮೌಲ್ಯಗಳನ್ನು ಯಶಸ್ವಿಯಾಗಿ ಕಾರ್ಯಗತಗೊಳಿಸಲು ಪ್ರಪಂಚಾದ್ಯಂತ ಧರ್ಮ ಮತ್ತು ದೇವರುಗಳನ್ನು ನಿರಾಯಾಸವಾಗಿ ಬಳಸಿಕೊಳ್ಳುವ ಹಲವಾರು ಚಾರಿತ್ರಿಕ ಸನ್ನಿವೇಶಗಳನ್ನು ನೋಡಿದ್ದೇವೆ. ಆದರೆ ಮಹಿಳೆ ಇವರ ಮುಖ್ಯ ಕಾಳಜಿಯಾಗಿದ್ದಾಳೆ.

ಪ್ರತಿಯೊಂದು ಸಮಾಜವೂ ತಾನು ಆದರ್ಶಪ್ರಾಯವೆಂದು ಎತ್ತಿ ಹಿಡಿಯುವ ಮಾಲ್ಯಗಳು ಹಾಗೂ ಆಚರಣೆಗಳನ್ನು ಒಂದು ಪೀಳಿಗೆಯಿಂದ ಮತ್ತೊಂದು ಪೀಳಿಗೆಗೆ ವರ್ಗಾಯಿಸುವುದರ ಮೂಲಕ ಆ ಸಂಸ್ಕೃತಿಯನ್ನು ಉಳಿಸಿಕೊಂಡು ಬರುವುದರತ್ತ ಗಮನವನ್ನು ಹರಿಸುತ್ತದೆ. ತಮ್ಮ-ತಮ್ಮ ಸಂಸ್ಕೃತಿಯ ಮೂಲ ಸಾರವನ್ನು ಉಳಿಸಿಕೊಂಡು ಬರಬೇಕೆನ್ನುವುದು ಎಲ್ಲಾ ಸಮಾಜಗಳ ಹಂಬಲವಾಗಿರುವುದರಿಂದ, ಪ್ರತಿಯೊಂದು ಸಮಾಜದಲ್ಲೂ ಸಂಸ್ಕೃತಿಯನ್ನು ಸಂರಕ್ಷಿಸಲು ಅನೇಕ ಸಾಧನಗಳನ್ನು ಸೃಷ್ಟಿಮಾಡಲಾಗುತ್ತದೆ. ಅವುಗಳಲ್ಲಿ ಪ್ರಮುಖವಾದವು ಸಾಮಾಜಿಕ ಸಂಸ್ಥೆಗಳು.

ಆರ್.ಇಂದಿರಾರವರು ಬಾನು ಮುಷ್ತಾಕ್‌ರವರ ಬೆಂಕಿಮಳೆ ಕಥಾ ಸಂಕಲನದ ಬಗ್ಗೆ ನೀಡಿರುವ ವಿವರಣೆಗಳು ಸಮಯೋಚಿತವಾಗಿದ್ದು, ಇವರ ಎಲ್ಲಾ ಕಥೆಗಳಲ್ಲೂ ಕೂಡ ಮುಸ್ಲಿಂ ಮಹಿಳೆಯರನ್ನು ಹಾಗೂ ಸಮಾಜವನ್ನು ಗಮನದಲ್ಲಿಟ್ಟುಕೊಂಡು ಬರೆದಿರುವುದನ್ನು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿರುವುದು ಸಮಂಜಸವಾಗಿರುತ್ತದೆ. ಮತ್ತು ಪ್ರತಿಯೊಂದು ಸಮಾಜದಲ್ಲಿಯೂ ಲಿಂಗ ಮತ್ತು ಲಿಂಗವ್ಯವಸ್ಥೆ ಎಂಬುದು ಮಹಿಳೆಯರ ವಿಭಿನ್ನ ಜೈವಿಕತೆಯ ಕಾರಣದಿಂದಾಗಿ, ಸ್ತ್ರೀ ಪುರುಷರು ಮಾಡಬಹುದಾದ, ಮಾಡಬಾರದ ವಿಂಗಡಣೆಯನ್ನು ತುಂಬಾ ಅರ್ಥವತ್ತಾಗಿ ವಿವರಿಸಿರುತ್ತಾರೆ. ಹಾಗೆಯೇ ಗರ್ಭಧಾರಣೆ, ಶಿಶುವಿಗೆ ಜನ್ಮ ನೀಡುವುದು, ಶಿಶುವಿಗೆ ಹಾಲುಣಿಸುವುದು ಇವೆಲ್ಲ ಮಾನವನು ನಿರ್ಮಿಸಿದ್ದಲ್ಲ. ಇದಲ್ಲದೆ ಮಹಿಳೆಯರನ್ನು ಮತ್ತು ಪುರುಷರನ್ನು

ವಿವಿಧ ಕಾರ್ಯಗಗ ಸಮಯಕ್ಕೆ ತಕ್ಕಂತೆ ಉಪಯೋಗಿಸಿಕೊಳ್ಳುವುದರಲ್ಲಿ ಲಿಂಗ ತಾರತಮ್ಯ ಮಾಡುವುದನ್ನು ಗ್ರಾಮೀಣ ಸಮಾಜದಲ್ಲಿ ಮತ್ತು ನಗರ ಪ್ರದೇಶಗಳಲ್ಲಿ ಬಹುಮುಖ್ಯವಾಗಿ ಕಾಣಬಹುದು.

ಇದಾದ ನಂತರ ಮುಖ್ಯವಾಗಿ ಮಹಿಳೆಯರ ಬಗ್ಗೆ ಪುರುಷ ಮತ್ತು ಸ್ತ್ರೀಯರಲ್ಲಿ ಕೆಲಸ ಕಾರ್ಯಗಳಲ್ಲಿ ಭಿನ್ನ ಭೇದ ಭಾವವನ್ನು ಕಾಣಬಹುದಾಗಿದೆ. ಉದಾ. ಹೇಳಬೇಕೆಂದರೆ ಮನೆಯಿಂದ ಹೊರಗೆ ಪುರುಷ ದುಡಿದು ಸಂಪಾದನೆ ಮಾಡುವ ಪದ್ಧತಿಯನ್ನು ಕಾಣಬಹುದು. ಮಹಿಳೆಯು ಮನೆಯಲ್ಲೇ ಇರುವ ಕೈಲಾಗದ ಅಶಕ್ತಳು ಎಂಬ ಭಾವನೆಗಳನ್ನು ಸಮಾಜದಲ್ಲಿ ಕಾಣುತ್ತೇವೆ. ಉದಾ. ಮಹಿಳೆಯು ಪುರುಷನಿಗಿಂತ ಒಂದೂವರೆ ಪಟ್ಟು ಹೆಚ್ಚು ಕೆಲಸವನ್ನು ಮನೆಯ ಒಳಗೆ ಮತ್ತು ಮನೆಯ ಸುತ್ತಮುತ್ತಲಿನಲ್ಲೇ ನಿರ್ವಹಿಸುವುದನ್ನು ಕಾಣುತ್ತೇವೆ. ಒಟ್ಟಾರೆ ಈ ಅಧ್ಯಯನದಲ್ಲಿ ಲಿಂಗಭೇದ ನೀತಿ ಮತ್ತು ಗ್ರಾಮೀಣ ಸಮಾಜದ ವ್ಯವಸ್ಥೆಯನ್ನು ವಿವಿಧ ಹಂತಗಳಲ್ಲಿ ವಿವಿಧ ರೂಪಗಳಲ್ಲಿ ವಿವಿಧ ಮಗ್ಗಲುಗಳಿಂದ ವಿವಿಧ ಕತೆಗಾರರ ಲೇಖನಗಳಿಂದ ವಿವಿಧ ವಿಮರ್ಶಕರಿಂದ, ಸ್ವಂತ ಗ್ರಹಿಕೆಗಳಿಂದ ಅಭ್ಯಸಿಸಿ, ಚರ್ಚಿಸಿ ಅಂತಿಮ ನಿರ್ಣಯಕ್ಕೆ ಬರಲಾಗಿದೆ.

ಮಕ್ಕಳಿಗೆ ಜನ್ಮ ನೀಡುವುದು, ಅವರನ್ನು ಬೆಳೆಸುವುದು, ರೋಗಿಗಳ ಶುಶ್ರೂಷೆ ಮಾಡುವುದು ಹೀಗೆ ಮನೆಯ ಒಳಗೆ ಮತ್ತು ಹೊರಗೆ ಮಹಿಳೆಯರು ಮಾಡುವ ಅನೇಕ ಕೆಲಸಗಳಿಗೆ ಮೌಲ್ಯವೇ ಇಲ್ಲದಂಥ ಪರಿಸ್ಥಿತಿ ನಿರ್ಮಾಣವಾಗಿ ಇದೇ ಒಂದು ಸ್ಥಾಪಿತ ವ್ಯವಸ್ಥೆಯಾಯಿತು. ಆಹಾರವನ್ನು ಉತ್ಪಾದಿಸಿದರೆ ಸಾಕೇ? ಆ ಆಹಾರವನ್ನು ಶುದ್ಧಿಮಾಡುವ, ವಿತರಿಸುವ ಹಾಗೂ ಸಂರಕ್ಷಿಸುವ ಕೆಲಸಗಳೂ ಕೂಡ ಅಷ್ಟೆ ಮುಖ್ಯವಾಗುತ್ತದೆ. ಮನೆಯ ಹೊರಗೆ ಹೋಗಿ ಹಣ ಸಂಪಾದನೆಗಾಗಿ ದುಡಿಮೆಯಲ್ಲಿ ತೊಡಗಿದ್ದರೆ, ಅವರು ದುಡಿಮೆಗಾರರಲ್ಲ ಎನ್ನುವುದು ಯಾವ ಬಗೆಯ ನ್ಯಾಯ?

ಇಂತಹ ಪ್ರಶ್ನೆಗಳನ್ನು ಸ್ತ್ರೀವಾದಿ ಚಿಂತಕರು ಆಗಾಗ್ಗೆ ಎತ್ತುತ್ತಿದ್ದರೂ, ಸಂಸ್ಕೃತಿ 'ಪುರುಷರ ದುಡಿಮೆ ಬೆಲೆಯುಳ್ಳದ್ದು, ಮಹಿಳೆಯರ ದುಡಿಮೆ ಬೆಲೆಯಿಲ್ಲದ್ದು' ಎಂಬುದನ್ನು ಎತ್ತಿ ಹಿಡಿಯುತ್ತಲೇ ಬಂದಿದೆ. ಹಾಗೆಯೇ ಧಾರ್ಮಿಕವಾಗಿಯೂ ಸ್ತ್ರೀಯರನ್ನು ಬೇರೆ ಬೇರೆ ನೆಲೆಗಳಿಂದ ನಿರ್ಬಂಧಿಸಲಾಗಿದೆ.

"ಧರ್ಮ ಯಾವುದೇ ಸಮಾಜದಲ್ಲಿ ಆ ಸಮಾಜದ ಸಂಸ್ಕೃತಿಯ ಒಂದು ಅವಿಭಾಜ್ಯ ಅಂಗ. ಧರ್ಮ ಸಾಮಾಜಿಕ ನಿಯಂತ್ರಣದ ಒಂದು ಸಾಧನವೂ ಹೌದು. ಸಂಸ್ಕೃತಿಯ ವರ್ಗಾವಣೆಯ ಜವಾಬ್ದಾರಿಯನ್ನು ಹೊತ್ತಿರುವಂತಹ ಒಂದು ಸಾಮಾಜಿಕ ಸಂಸ್ಥೆಯೂ ಹೌದು. ಸರಳ ಸಮಾಜಗಳಿಂದ ಹಿಡಿದು, ಸಂಕೀರ್ಣ ಸಮಾಜಗಳವರೆಗೂ ಧರ್ಮದ ಪ್ರಭಾವ ಸಾಮಾಜಿಕ ಜನಜೀವನದ ಮೇಲೆ ಜೀವಂತವಾಗಿರುವುದನ್ನು ನಾವು ಕಾಣಬಹುದು. ಧರ್ಮ, ಸಂಸ್ಕೃತಿಯನ್ನು ರೂಪಿಸುವಂತಹ ಪ್ರಮುಖ ಸಾಧನವೂ ಆಗಿರುವುದರಿಂದ ಲಿಂಗ ವ್ಯವಸ್ಥೆಯನ್ನು ಕುರಿತಂತೆ ಸಂಸ್ಕೃತಿಯ ನಿಲುವುಗಳು ರೂಪುಗೊಳ್ಳುವುದಕ್ಕೆ, ಧಾರ್ಮಿಕ ಪದ್ಧತಿಗಳೂ ಕಾರಣವಾಗುತ್ತದೆ ಎಂದೇನೂ, ಪ್ರತ್ಯೇಕವಾಗಿ ಹೇಳಬೇಕಿಲ್ಲ. ಮಹಿಳೆಯ ವಿಷಯಕ್ಕೆ ಬಂದಾಗಲಂತೂ ಎಲ್ಲ ಸಂಸ್ಕೃತಿಗಳಲ್ಲೂ ದ್ವಿಮುಖ ನಿಲುವುಗಳು ತಾಂಡವವಾಡುತ್ತಿರುವುದನ್ನು ನಾವು ಕಾಣಬಹುದು. ಮಹಿಳೆಯನ್ನು ಒಂದೆಡೆ ದೇವಿ ಸಮಾನಳೆಂದು ಕಾಣುವುದು ನಮ್ಮ ಸಂಸ್ಕೃತಿಯೋ, ಅಥವಾ ಅವಳನ್ನು ವರದಕ್ಷಿಣೆಗಾಗಿ ಹಿಂಸಿಸಿ ಬೆಂಕಿ ಹಚ್ಚಿ ಕೊಲೆ ಮಾಡುವುದು ನಮ್ಮ ಸಂಸ್ಕೃತಿಯೋ ಎನ್ನುವ ಸಂದಿಗ್ಧಕ್ಕೆ, ನಮ್ಮ ಬಳಿ ಉತ್ತರವಿಲ್ಲ.

ಧರ್ಮದ ಹೆಸರಿನಲ್ಲಿ ಮಹಿಳೆಯನ್ನು ಎರಡನೆ ದರ್ಜೆಯ ಪ್ರಜೆಯಂತೆ ನಡೆಸಿಕೊಳ್ಳುವ ನಮ್ಮ ಸಮಾಜದಲ್ಲಿ, ಸತಿಪದ್ಧತಿ, ಹೆಣ್ಣುಶಿಶು ಹತ್ಯೆ, ಬಾಲ್ಯವಿವಾಹ, ವಿಧವೆಯರ ಮೇಲೆ ನಡೆಯುವ ದೌರ್ಜನ್ಯಗಳು, ದೇವದಾಸಿ ಪದ್ಧತಿ, ದ್ವಿಪತ್ನಿತ್ವ, ಪುರುಷ ದಬ್ಬಾಳಿಕೆ ಇವೆಲ್ಲವೂ ಸಂಸ್ಕೃತಿಯ ವಿವಿಧ ಮುಖಗಳೇ ಆಗಿವೆ. ಎಲ್ಲ ಧರ್ಮಗಳೂ ನಾಮ ಮಾತ್ರಕ್ಕೆ 'ಸರ್ವರೂ ಸಮಾನರು' ಎಂಬ ತತ್ವವನ್ನು ಪ್ರತಿಪಾದಿಸುತ್ತವೆಯೇ ಹೊರತು ವಾಸ್ತವದಲ್ಲಿ ಲಿಂಗ ಅಸಮಾನತೆ, ಧರ್ಮಕ್ಕೆ, ಸಂಸ್ಕೃತಿಯ ಕೊಡುಗೆಯೋ, ಸಂಸ್ಕೃತಿಗೆ ಧರ್ಮದ ಕೊಡುಗೆಯೋ ಎಂಬ ಪ್ರಶ್ನೆ ಎದುರಾದಾಗ, ಈ ಎರಡೂ ವ್ಯವಸ್ಥೆಗಳೂ, ಲಿಂಗ ಅಸಮಾನತೆಯ ಸೃಷ್ಟಿಗೆ ಕಾರಣವಾಗಿರುವುದೇ ಅಲ್ಲದೆ, ಅದರ ಪೋಷಣೆಗೂ ಸಮಾನ ರೀತಿಯಲ್ಲಿ ಹೊಣೆಗಾರಿಕೆಯನ್ನು ಹೊತ್ತಿದೆ ಎಂಬುದು ನಮಗೆ ಅರಿವಾಗುತ್ತದೆ.

ಯಾವುದೇ ಸಮಾಜದಲ್ಲಿ ಲಿಂಗ ವ್ಯವಸ್ಥೆಯ ನ್ಯಾಯವನ್ನು ಪ್ರತಿಪಾದಿಸಬೇಕಾಗಿರುವುದು, ಆ ಸಮಾಜ ಸೃಷ್ಟಿಸುವಂತಹ ನ್ಯಾಯ ಪಾಲನಾ ವ್ಯವಸ್ಥೆ. ಲಿಂಗ ವ್ಯವಸ್ಥೆ, ಜಾತಿ ವ್ಯವಸ್ಥೆ, ಧರ್ಮ ಮುಂತಾದ ಸ್ಥಾಪಿತ ವ್ಯವಸ್ಥೆಗಳಲ್ಲಿ ಬದಲಾವಣೆಗಳು ಸುಲಭದಲ್ಲಿ ಉಂಟಾಗುವುದಿಲ್ಲ. ಹಾಗೆ ಬದಲಾವಣೆಗಳು ಉಂಟಾದರೂ ಈ ಬದಲಾವಣೆಗಳಿಗೆ ಸಾರ್ವತ್ರಿಕ ಅಂಗೀಕಾರ ದೊರೆಯುವುದೂ ಇಲ್ಲ.

ಸಂಸ್ಕೃತಿ ಮತ್ತು ಸಮಾಜ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಒಂದನ್ನೊಂದು ಸೃಷ್ಟಿಸಿ, ಪೋಷಿಸಿ, ಪುಷ್ಟೀಕರಿಸುವ ವ್ಯವಸ್ಥೆಗಳು, ಇವೆರಡೂ ಸಂಸ್ಕೃತಿ ರಕ್ಷಣೆಯ ಆಶ್ರಯದಲ್ಲಿ ನಡೆಯುತ್ತಿರುವ ಸಂಪ್ರದಾಯದ ಧಾಳಿಗೆ ಪ್ರಬಲ ಪ್ರತಿಭಟನೆ ವ್ಯಕ್ತವಾದಾಗ ಮಾತ್ರ ಸಾಮಾಜಿಕ ಬದಲಾವಣೆಯ ಹೋರಾಟಕ್ಕೆ ಅರ್ಥ ಬರುವುದು."[೪೭]

ಒಟ್ಟಾರೆ ಲಿಂಗತಾರತಮ್ಯ ಎಂಬುದು ಗ್ರಾಮೀಣ ಬದುಕಿನಲ್ಲಿಯೂ ಬಹಳ ಗಂಭೀರವಾಗಿಯೇ ನೆಲೆಗೊಂಡಿದೆ. ಹೆಣ್ಣು ಮಕ್ಕಳು ದುಡಿಯುತ್ತಿರುತ್ತರಾದರೂ ಬದುಕಿನ ಎಲ್ಲಾ ನಿರ್ಣಾಯಕ ಘಟ್ಟಗಳು ಪುರುಷನ ಮೂಲಕವೇ ಆಗುತ್ತಿರುತ್ತದೆ. ವಿದ್ಯಾಭ್ಯಾಸವೇ ಮೊದಲಾಗಿ ಏನೆಲ್ಲ ಸೌಲಭ್ಯಗಳು ಈ ಸ್ಥಿತಿಯನ್ನು ಸಡಿಲಗೊಳಿಸಲಾರದಾಗಿವೆ. ಕಾರಣ ಸಂಕಲ್ಪ ಮಾತ್ರವೇ ಇದಕ್ಕೆ ಪರಿಹಾರ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ನಗರಗಳ ಸ್ತ್ರೀಯರ ಬದುಕಿನಲ್ಲಿ ಉಂಟಾದ ಸುಧಾರಣೆಗಳು ಅವರಲ್ಲಿ ಕೆಲವಾರು ಬದಲಾವಣೆಗಳನ್ನು ತಂದವು. ಆದರೆ ಈ ಸಾಧ್ಯತೆಯು ಗ್ರಾಮೀಣ ಸ್ತ್ರೀಯರ ಬದುಕಿನಲ್ಲಿ ಸಾಧ್ಯವಾಗಲಿಲ್ಲ. ಲಿಂಗತಾರತಮ್ಯವು ಇಂದಿಗೂ ಅಲ್ಲಿ ಬಹುಮುಖ್ಯವಾದ ಅಂಶವಾಗಿಯೇ ಉಳಿದಿದೆ ಎಂಬುದು ಗಮನಾರ್ಹ ಅಂಶ.

### ೫. ೩. ಸ್ತ್ರೀಸಮಾನತೆ

ಕನ್ನಡ ಸಾಹಿತ್ಯ ಹುಟ್ಟಿ, ಬೆಳೆದು ಬಲಿಷ್ಟವಾಗಿ ಪಂಪ, ರನ್ನರಂತಹ ಶ್ರೇಷ್ಠ ಕವಿಗಳನ್ನು ನೀಡಿದ ಮೇಲೂ ಕವಯಿತ್ರಿಯೊಬ್ಬಳ ಧ್ವನಿಯನ್ನಾಲಿಸಲು ಎರಡು ಶತಕಗಳಿಗೂ ಹೆಚ್ಚು ಕಾಲ ಕಾಯಬೇಕಾಯಿತು. ದೀರ್ಘಕಾಲದ ನಿರೀಕ್ಷೆ ಸಫಲವಾಗುವಂತೆ ವಚನ ಸಾಹಿತ್ಯ ಕಾಲದಲ್ಲಿ ಅಕ್ಕಮಹಾದೇವಿ ಕಂಡುಬರುತ್ತಾಳೆ. ಆವರೆಗೆ ಕಂಡು, ಕೇಳಿ ಅರಿಯದ ದಿಟ್ಟತನದಿಂದ ಸಮಾಜವನ್ನು ಪ್ರಭುತ್ವವನ್ನು ಎದುರಿಸಿ ವ್ಯವಸ್ಥೆಯನ್ನು ಧಿಕ್ಕರಿಸಿ, ಆಧ್ಯಾತ್ಮಿಕ ಸಾಧನೆಯಲ್ಲಿ ಪುರುಷನಿಗೆ ಸಾಟಿಯಾಗಿ ನಿಲ್ಲಬಲ್ಲ ಸಾಮರ್ಥ್ಯ ಹೆಣ್ಣಿಗಿದೆ ಎಂಬುದನ್ನು

ಸಾಬೀತುಗೊಳಿಸಿದ್ದು ಮಾತ್ರವಲ್ಲ ಶ್ರೇಷ್ಠ ಅನುಭಾವಿಯೂ ಕವಿಯತ್ರಿಯೂ ಆಗಿ ಎಲ್ಲ ಕಾಲ ದೇಶಗಳ ವಿಮರ್ಶೆಯ ಕಮ್ಮಟದಲ್ಲೂ ಚೊಕ್ಕವಾಗಿ ಗಟ್ಟಿಯಾಗಿ ನಿಲ್ಲಬಲ್ಲವಳಾಗಿದ್ದಾಳೆ.

ಬ್ರಿಟಿಷ್ ವಸಾಹತುಶಾಹಿಯ ಪ್ರಭಾವದಿಂದ ಮಹಿಳೆ ಭಾರತದಲ್ಲಿ ಆಧುನಿಕ ಚಿಂತನೆಯ ಪ್ರಮುಖ ಆಸಕ್ತಿಯಾದಳು. ಮಹಿಳೆಯರ ಸ್ಥಿತಿ ಮತ್ತು ಸ್ಥಾನಮಾನವನ್ನು ಬ್ರಿಟಿಷ್ ಮತ್ತು ಭಾರತದ ಸಮಾಜ ಸುಧಾರಕರು ಹಾಗು ರಾಜಕಾರಣಿಗಳು ಈ ದೇಶದ ಆಧುನಿಕತೆ ಮತ್ತು ಸಾಂಪ್ರದಾಯಿಕತೆಯನ್ನು ಅಳೆಯುವ ಮಾನದಂಡಗಳಾಗಿ ಕಂಡರು. ಆಧುನಿಕತೆ, ಸುಧಾರಣೆ, ಪುನರುತ್ಥಾನ ರಾಷ್ಟ್ರೀಯತಾವಾದ ಮುಂತಾದ ವಿವಿಧ ಚಿಂತನೆ ಸಿದ್ಧಾಂತಗಳಡಿಯಲ್ಲಿ ಭಾರತೀಯ ಹೆಣ್ಣು ಚರ್ಚೆಯ ವಿಷಯವಾದಳು.

ನಾವು "ಮಹಿಳಾ ಸಾಹಿತ್ಯದ ಶೋಧನೆಯನ್ನು ಮಾಡ ಹೊರಟರೆ, ಮೊದಲು ಎದುರಾಗುವವರು ಜಾನಪದ ಕವಯತ್ರಿಯರು. ರಾಗಿ ಬೀಸುವಾಗ, ಭತ್ತ ಕುಟ್ಟುವಾಗ, ಸಸಿ ನೆಡುವಾಗ, ತೊಟ್ಟಿಲು ತೂಗುವಾಗ, ಇವರು ಹಾಡಿನ ಮೂಲಕ ತಮ್ಮ ನೋವುನಲಿವು, ಬಂಜೆತನ, ಬಡತನ ಮೊದಲಾದವುಗಳಿಗೆ ರೂಪಕೊಟ್ಟರು. ಹೆಸರಿಲ್ಲದ, ಹೆಸರೊಲ್ಲದ ಈ ಜನ ಹಾಡಿದ ಸಾಹಿತ್ಯವು ತಲೆಯಿಂದ ತಲೆಗೆ ಇಳಿದು ಬಂದು ತೀರಾ ಇತ್ತೀಚೆಗೆ ಲಿಪಿರೂಪ ತಾಳಿ ಕ್ಯಾಸೆಟ್ಟುಗಳಲ್ಲಿ ಹುದುಗಿ, ವೈಜ್ಞಾನಿಕ ಅಧ್ಯಯನಕ್ಕೆ ದಾರಿ ಮಾಡಿ ಕೊಟ್ಟಿತು. ಈ ಜನಪದ ಸಾಹಿತ್ಯವನ್ನು ಸ್ತ್ರೀವಾದಿ ಅಧ್ಯಯನದ ಹಿನ್ನೆಲೆಯಲ್ಲಿ ಅಭ್ಯಸಿಸುವ ಪ್ರಮೇಯವು ನಡೆದಿದೆ ಮತ್ತು ಉತ್ತಮ ಫಲಕೊಟ್ಟಿದೆ.

ನಾವು ಹೆಣ್ಣಿನ ಬಗ್ಗೆ ಅತಿ ಹೆಚ್ಚಿನದನ್ನು ಕೇಳಬೇಕಾದರೆ "ಹದಿನೇಳನೇ ಶತಮಾನಕ್ಕೆ ಬರಬೇಕು. ಸಾಹಿತ್ಯ, ಸಂಗೀತ ವಿದ್ವತ್, ಸೇವೆಗಳಿಗೆ ಸಮಾನ ಪ್ರಾಶಸ್ತ್ಯ ನೀಡಿದ ಮೈಸೂರು ಒಡೆಯರ ಕಾಲದಲ್ಲಿ ಅನೇಕ ಆಸ್ಥಾನ ಕವಿಗಳ, ಕವಿಯಿತ್ರಿಯರ ಗುಂಪೇ ಕಾಣಿಸಿಕೊಳ್ಳುತ್ತದೆ. ನಮ್ಮ ದೇಶದ ಇತಿಹಾಸಗಳೆಂದೂ, ಮಹಾಕಾವ್ಯ ಗಳೆಂದೂ, ಪರಿಗಣಿತವಾದ ರಾಮಾಯಣ, ಮಹಾಭಾರತಗಳನ್ನು ಮತ್ತು ಭಾಗವತವನ್ನು ಅಸಂಖ್ಯಾತರು ಆಗಲೇ ಕನ್ನಡಕ್ಕೆ ಅನುವಾದಿಸಿದ್ದರೂ ತಂದೆಯ ಹೆಸರಿನಲ್ಲಿ "ಕೃಷ್ಣರಾಜ ವಾಣೀ ವಿಲಾಸ ಭಾರತ" ಮತ್ತು 'ಭಾಗವತ'ವೆಂದೂ ತಮ್ಮ ಹೆಸರಿನಲ್ಲಿ "ಚಾಮ ರಾಜೋಕ್ತಿ ವಿಲಾಸ"ವೆಂಬ ರಾಮಾಯಣವನ್ನೂ ಅನುವಾದಿಸಿ ಪ್ರಕಟಿಸಿದ ಮೈಸೂರು ಒಡೆಯರ ಸಾಂಪ್ರದಾಯಿಕ ಮನೋಭಾವದಡಿಯಲ್ಲಿ ಕಾವ್ಯ ರಚಿಸಿದ ಹೊನ್ನಮ್ಮನಾಗಲೀ, ಶೃಂಗಾರಮ್ಮನಾಗಲೀ, ಗಿರಿಯಮ್ಮನಾಗಲೀ, ಅಕ್ಕಮಹಾದೇವಿಯಂತೆ ಕ್ರಾಂತಿಕಾರಕ ವಾದುದೇನನ್ನೂ ಹೇಳುವ ಸ್ಥಿತಿಯಲ್ಲಿರಲಿಲ್ಲ. ಪುರುಷ ಪ್ರಧಾನ ಸಮಾಜದ ಮೌಲ್ಯಗಳನ್ನೇ ಒಪ್ಪಿ ಮುನ್ನಡೆಯುವ ಅನಿವಾರ್ಯತೆ ಅವರಿಗಿತ್ತು. ಆದರೂ ಸ್ತ್ರೀಯರಿದ್ದರೂ ಸಹ ಸ್ತ್ರೀಸಮಾನತೆಯನ್ನು ಹದಿನೇಳನೇ ಶತಮಾನದಲ್ಲಿ ವಿರಳವಾಗಿ ಕಾಣಬಹುದಾಗಿದೆ."[೪೭]

ಸ್ತ್ರೀಸಮಾನತೆಯ ಬಗ್ಗೆ ವಿಚಾರ ಮಾಡಿ ನೋಡಿದಾಗ ಮೊದಲು ಹೆಣ್ಣು ಮತ್ತು ಗಂಡು ಎಂಬ ತಾರತಮ್ಯ ಎಲ್ಲಾ ಕ್ಷೇತ್ರಗಳಲ್ಲೂ ಎದ್ದು ಕಾಣುವುದನ್ನು ನೋಡುತ್ತೇವೆ. ಹೆಣ್ಣು ಮಕ್ಕಳ ಜನನದಲ್ಲಿ ಪುರುಷರ ಭಾವನೆಗಳು ಇತ್ತೀಚಿನ ದಿನಗಳಲ್ಲಿ ಬದಲಾಗಿರುವುದನ್ನು ಕಾಣಬಹುದು. ವಂಶಕ್ಕೊಬ್ಬ ಗಂಡು ಮಗ ಬೇಕೆ ಬೇಕು ಎಂಬ ನಿರ್ಧಾರದಲ್ಲಿ ಬದಲಾವಣೆಯಾಗಿ ಕುಟುಂಬ ಯೋಜನೆಯನ್ನು ಪಾಲಿಸುವುದನ್ನು ಈಗಾಗಲೇ ಕಾಣುತ್ತಿದ್ದೇವೆ.

ಉದಾ. ಹುಟ್ಟುಹಬ್ಬ ಆಚರಿಸುವುದರಲ್ಲಿ ಗಂಡು ಮಗುವಿಗೆ ಕೊಟ್ಟ ಪ್ರಾಶಸ್ತ್ಯವನ್ನು ಹೆಣ್ಣು ಮಕ್ಕಳಿಗೆ ಸಮಾನವಾಗಿ ಆಚರಣೆಯ ರೂಪದಲ್ಲಿ ಸಮಾನತೆಯಾಗಿ ಆಚರಿಸುತ್ತಿರುವುದನ್ನು ಕಾಣುತ್ತೇವೆ. ಶಿಕ್ಷಣದ ಪ್ರಭಾವದಿಂದ ಶಿಶುವಿಹಾರದ ಹಂತದಿಂದ ಸ್ನಾತಕೋತ್ತರದವರೆಗೂ ಯಾವುದೇ ರೀತಿಯ ಪ್ರತ್ಯೇಕತೆ ಕಾಣುವುದಿಲ್ಲ. ಸಭೆ, ಸಮಾರಂಭಗಳಲ್ಲಿಯೂ ಅದರಲ್ಲೂ ವಿಶೇಷವಾಗಿ ವಿವಾಹ ಸಮಾರಂಭಗಳಲ್ಲಿ ಯಾವುದೇ ಅಸಮಾನತೆ ಕಂಡುಬರುವುದಿಲ್ಲ. ಉದ್ಯೋಗ ಕ್ಷೇತ್ರಗಳಲ್ಲಿಯೂ ಸಹ ಮಹಿಳೆಯರು ಪುರುಷರಿಗೆ ಸಮಾನವಾಗಿ ದುಡಿಯುತ್ತಿರುವುದನ್ನು ಕಾಣಬಹುದು. ಸಾರಿಗೆ ವ್ಯವಸ್ಥೆಯಲ್ಲಿ ಪ್ರತ್ಯೇಕತೆ ಕಡಿಮೆ ಯಾಗಿರುವುದನ್ನು ಕಾಣುತ್ತೇವೆ. ಹೋಟೆಲ್ಲು, ಸಿನಿಮಾಗಳಲ್ಲಿ ಪ್ರತ್ಯೇಕತೆ ಇಲ್ಲದಿರುವುದು ಕಂಡುಬರುತ್ತದೆ. ಸಾಹಿತ್ಯ, ಕಲೆ, ವಿಜ್ಞಾನ, ಸಂಶೋಧನೆ, ರಾಜಕೀಯ, ರಾಜ್ಯಾಂಗ, ಕಾರ್ಯಾಂಗ, ನ್ಯಾಯಾಂಗ ಸೇವೆ ವಿಮಾನಯಾನ, ರಕ್ಷಣಾ ಇಲಾಖೆ, ಆರೋಗ್ಯ ಸಂಸ್ಥೆ ಎಲ್ಲಾ ಕ್ಷೇತ್ರಗಳಲ್ಲಿಯೂ ಮಹಿಳೆಯರು ಸಮಾನವಾಗಿ ಕಾರ್ಯ ಪ್ರವೃತ್ತರಾಗಿರುವುದನ್ನು ಕಾಣಬಹುದು. ವಿಶೇಷವಾಗಿ ರಾಜಕೀಯದಲ್ಲಿ ಹೇಳುವುದಾದರೆ ಸಂಘ ಸಂಸ್ಥೆಗಳಿಂದ ಹಿಡಿದು ಪಂಚಾಯತಿ, ತಾಲ್ಲೂಕು, ಜಿಲ್ಲಾ, ರಾಜ್ಯ, ದೇಶ ಇವುಗಳ ಮಟ್ಟದಲ್ಲಿ ಸ್ಪರ್ಧೇಗಿಳಿದಿರುವುದು ಕಂಡುಬರುತ್ತದೆ. ಮಹಿಳೆಯು ಪುರುಷರಿಗೆ ಸಮಾನಳಾಗಿ ಚಂದ್ರಲೋಕಕ್ಕೂ ಸಹ ಹೋಗಿ ಬಂದಿರುವುದನ್ನು ಕಾಣಬಹುದು. ದೇಶದ ಪ್ರಧಾನಿಯಾಗಿ, ಅಧ್ಯಕ್ಷೆಯಾಗಿ, ಸಚಿವೆಯಾಗಿ, ಶಿಕ್ಷಕಿಯಾಗಿ, ಆಡಳಿತಾಧಿಕಾರಯ, ನಟಿಯಾಗಿ, ಸಾಹಿತಿಯಾಗಿ, ಮನೆಯ ಒಡತಿಯಾಗಿ, ಸೂತ್ರಧಾರಿಯಾಗಿ, ತಾಯಿಯಾಗಿ, ಮಗಳಾಗಿ, ತಂಗಿಯಾಗಿ, ಅಜ್ಜಿಯಾಗಿ, ಸಹಧರ್ಮಿಣಿಯಾಗಿ, ಮಾರ್ಗದರ್ಶಕಳಾಗಿ ತನ್ನ ಜವಾಬ್ದಾರಿಯನ್ನು ಎಲ್ಲಾ ಕ್ಷೇತ್ರಗಳಲ್ಲೂ ವಿಸ್ತರಿಸಿಕೊಂಡು ಹೋಗುತ್ತಿರುವುದನ್ನು ಕಾಣುತ್ತೇವೆ.

ನಮ್ಮ ಗ್ರಾಮೀಣ ಸಂಸ್ಕೃತಿಯ ಸಂದರ್ಭದಲ್ಲಿ "ಹಿಂದೆ ಮನೆಯ ಕೆಲಸದೊಂದಿಗೆ ತಮ್ಮದೇ ಹೊಲಗಳಲ್ಲಿ ದುಡಿಯುತ್ತಿದ್ದ ಹೆಣ್ಣುಗಳನ್ನು ಕಾಣಬಹುದು. ಈಗಲೂ ಅಂತಹವರ ಸಂಖ್ಯೆ ವಿಫುಲವಾಗಿದೆ. ಅವರ ದುಡಿಮೆಗೆ ನಿರ್ದಿಷ್ಟ ಬೆಲೆಯಿದೆಯೆಂದು ಹೇಳಲಾಗದಿದ್ದರೂ, ಅಂತಹ ದುಡಿಮೆಯಿಂದ ಹೆಣ್ಣಿನ ಸ್ಥಾನಮಾನ ಉತ್ತಮವಾಗಿತ್ತು ಎಂದು ಊಹಿಸಬಹುದು. ಆದರೆ ಕೈಗಾರಿಕೀಕರಣ ನಂತರ, ವಿಶೇಷವಾಗಿ ಕೈಗಾರಿಕೀಕರಣದ ಸಂದರ್ಭದಲ್ಲಿ, ಕೂಲಿ ಕೆಲಸ ಮತ್ತು ಮನೆಗೆಲಸದ ನಡುವಿನ ವಿಭಜನೆ ಹೆಚ್ಚು ಸ್ಪಷ್ಟವಾಗಿ ಕಂಡುಬರುತ್ತದೆ. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಲಿಂಗಬೇಧ ಹೆಚ್ಚು ಉಗ್ರವಾಯಿತು. ಕೂಲಿ ಕೆಲಸದಿಂದ ಮಹಿಳೆಯರನ್ನು ಹೊರತುಪಡಿಸಿದ್ದರಿಂದ ಅವಳ ಶೋಷಣೆ ಹೆಚ್ಚಾಯಿತು.

ವೇತನ ಸಹಿತ ಕಾರ್ಮಿಕ ಶಕ್ತಿಯಿಂದ ಮಹಿಳೆಯನ್ನು ವಿವಾಹಿತಳಲ್ಲದಿದ್ದರೆ ಅವಳು ಎಲ್ಲಿ ಇರಬೇಕು? ಕುಟುಂಬದ ಹೊರಗೆ ಹೇಗೆ ಬದುಕುತ್ತಾಳೆ? ನಾಳೆ ಮದುವೆಗೆ ಅಡ್ಡಿ ಉಂಟುಮಾಡಿ ಬಿಟ್ಟರೆ? ವಿವಾಹಿತಳಾಗಿದ್ದರೆ ಅವಳ ಆದ್ಯತೆ, ಮನೆ, ಗಂಡ ಮತ್ತು ಮಕ್ಕಳಿಗಾಗಿರುತ್ತದೆ. ಎರಡನೆಯದಾಗಿ, ಬಡ್ತಿಯಲ್ಲಿ ವರ್ಗಾವಣೆ ಇಲ್ಲದಿದ್ದರೂ ಕುಟುಂಬದ ಮೇಲೆ ಅದು ಬೀರಬಹುದಾದ ಪರಿಣಾಮವನ್ನು ಅವಳು ಚಿಂತಿಸಬೇಕಾಗಿದೆ. ಒಟ್ಟಿನಲ್ಲಿ ಕುಟುಂಬ ಮಹಿಳೆಯ ವೇತನಕ್ಕೆ ಹೆಚ್ಚು ಒತ್ತು ಕೊಡುತ್ತದೆಯಷ್ಟೇ ಅಲ್ಲದೆ ಅವಳ ಹುದ್ದೆ ಅಥವಾ ಉದ್ಯೋಗದ ಬಗೆಗೆ ಅದು ಕಿಂಚಿತ್ತೂ ಚಿಂತಿಸುವುದಿಲ್ಲ. ಮಹಿಳೆ ಸ್ವತಃ ತಾನೂ ಸಹ ಹಾಗೆಯೇ ಯೋಚಿಸುವುದು ಒಂದು ದುರಂತವೇ ಆಗಿದೆ."[೪೮]

ಗಾಯತ್ರಿ ಎನ್. ಇವರ ಲೇಖನದಲ್ಲಿ ಗ್ರಾಮೀಣ ಸಂಸ್ಕೃತಿಯ ವಿಚಾರದಲ್ಲಿ ಮಹಿಳೆಯರು ಹೆಚ್ಚಾಗಿ ಗ್ರಾಮೀಣ ಪ್ರದೇಶಗಳಲ್ಲಿ ಮನೆ ಕೆಲಸಗಳ ಜೊತೆಗೆ ಹೊಲದ ಕೆಲಸಗಳಲ್ಲಿ ದುಡಿಯುತ್ತಿರುವುದು ತುಂಬಾ ಹೆಚ್ಚಿನ ಸಂಖ್ಯೆಯಲ್ಲಿರುತ್ತದೆ. ಅಲ್ಲಿಂದ ಮುಂದೆ ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿರುವುದನ್ನು ಕಾಣಬಹುದು. ಕೈಗಾರಿಕಾಕ್ಷೇತ್ರ, ಸರ್ಕಾರಿ ನೌಕರಿ, ಸಂಘ ಸಂಸ್ಥೆಗಳು ಮುಂತಾದ ಹೆಚ್ಚಿನದಾಗಿ ಕೂಲಿ ಕೆಲಸಗಳಲ್ಲಿ ನಿರತರಾಗಿರುವುದನ್ನು ಗಮನಿಸಬಹುದು. ಈ ಲೇಖಕರು ಮಹಿಳೆ ಅವಲಂಬಿತಳು ಎಂಬ ಅಂಶಕ್ಕೆ ಹೆಚ್ಚು ಒತ್ತು ಕೊಟ್ಟಿರುತ್ತಾರೆ. ಸಾಮಾನ್ಯವಾಗಿ ಮಹಿಳೆ, ಗಂಡ, ಮಕ್ಕಳು, ಮನೆ ಇವುಗಳಿಗೆ ಆದ್ಯತೆ ಕೊಡಲೇ ಬೇಕಾಗುತ್ತದೆ. ಇದರ ಜೊತೆಗೆ ಮಹಿಳೆಯ ಅರ್ಹತೆಗೆ ತಕ್ಕಂತೆ ವಿವಿಧ ಕ್ಷೇತ್ರಗಳಲ್ಲಿ ದುಡಿಯುವುದನ್ನು ಕಾಣಬಹುದು. ಈಗಾಗಲೇ ಎಲ್ಲರಿಗೂ ತಿಳಿದಿರುವಂತೆ ಸ್ವಾತಂತ್ರ್ಯಪೂರ್ವಕ್ಕಿಂತ ಸ್ವಾತಂತ್ರ್ಯಾನಂತರ ಹೆಣ್ಣಿನ ಸಮಾನತೆಯಲ್ಲಿ ಹೆಚ್ಚು ಸಮಾನತೆಗಳನ್ನು ಸಮಾನತೆಯಲ್ಲಿ ಉಂಟಾದ ಬದಲಾವಣೆಗಳನ್ನು ಕಾಣಬಹುದು.

ಭಾರತೀಯ ಮಹಿಳೆಯರನ್ನು ದೌರ್ಜನ್ಯದ ಕೂಪದಿಂದ ಸಾಕಷ್ಟು ಮುಕ್ತವನ್ನಾಗಿಸಿದವರಲ್ಲಿ ಇಂಗ್ಲಿಷ್ ಶಿಕ್ಷಣ ಪಡೆದ ಭಾರತೀಯ ಮಹಾನೀಯರುಗಳಾದ ರಾಮಮೋಹನರಾಯ, ವಿವೇಕಾನಂದ, ಗಾಂಧೀಜಿ, ಅಂಬೇಡ್ಕರ್ ಮುಂತಾದವರು ಸ್ತ್ರೀ ಬದುಕಿನ ನಿರ್ಬಂಧಕ್ಕೆ ಒಂದು ಸ್ಪಷ್ಟ ಇತಿಹಾಸವೇ ಇದೆ.

ನಮ್ಮ "ಕ್ರಿ.ಪೂ.೧೨೦೦ ರಿಂದ ಕ್ರಿ.ಪೂ ೭೦೦ ರವರೆಗೆ ಬ್ರಾಹ್ಮಣ, ಉಪನಿಷತ್ತುಗಳ ಕಾಲವೆಂದು ಗುರುತಿಸಬಹುದು. ಬ್ರಾಹ್ಮಣರ ಪ್ರಾಬಲ್ಯ ಹೆಚ್ಚಿದ ಕಾಲವಿದು. ದೈಹಿಕ ಶ್ರಮ ಕೀಳೆನಿಸಿ, ಬೌದ್ಧಿಕ ಶ್ರಮ ಹೆಚ್ಚು ಪ್ರಾಮುಖ್ಯತೆ ಪಡೆದ ಕಾಲವಿದು. ವಿದ್ಯೆಯೆಂದರೆ ಪರಬ್ರಹ್ಮ ಜ್ಞಾನವೆಂದು ಅಮೂರ್ತಗೊಳಿಸಿ ಆಧ್ಯಾತ್ಮಿಕತೆಯ ಆಕಾಶಗಂಗೆಯನ್ನು ಸ್ತ್ರೀಯರಿಂದಲೂ, ಕೆಳಜಾತಿಯವರಿಂದಲೂ ದೂರವಿಡಲಾಯಿತು. ಎಲ್ಲೊ ಗಾರ್ಗಿ, ಮೈತ್ರೇಯಿಯರಂತಹ ಒಂದೆರಡು ಮೇಲ್ಜಾತಿಯ ವಿದ್ಯಾವಂತ ಮಹಿಳೆಯರು ಉದಾಹರಣೆಗೆ ಸಿಕ್ಕುವರಾದರೂ ಸಾಮಾನ್ಯವಾಗಿ ಮಹಿಳೆಯರಿಗೆ ವಿದ್ಯೆಯು ದೊರಕುವುದು ಅಸಾಧ್ಯವಾಗಿತ್ತು. ಹೀಗೆ ಉದಾಹರಿಸಲು ಸಿಕ್ಕುವ ವಿದ್ಯಾವಂತ ಮಹಿಳೆಯರು ಕೆಲವೇ ಕೆಲವರು. ಈ ಕಾಲದ ಬ್ರಾಹ್ಮಣ ಮತ್ತು ಉಪನಿಷತ್ತುಗಳಲ್ಲಿ ಹೆಣ್ಣನ್ನು ಕುರಿತು ವ್ಯಕ್ತವಾಗುವ ಅಭಿಪ್ರಾಯಗಳು ಸಮಾಜದಲ್ಲಿ ಹೆಣ್ಣಿಗಿರುವ ಸ್ಥಾನಮಾನವನ್ನು ತೋರಿಸುತ್ತವೆ."[೪೯]

"ಸುಮಾರು ಕ್ರಿ.ಪೂ. ಆರನೆಯ ಶತಮಾನದ ವೇಳೆಗೆ ಬುದ್ಧ ಮತ್ತು ಮಹಾವೀರರ ಕಾಲದಲ್ಲಿ ಭಾರತದಲ್ಲಿ ಅಸಮ ಬೆಳವಣಿಗೆ ಕಂಡುಬರುತ್ತಿತ್ತು. ಕೆಲವು ಭಾಗಗಳಲ್ಲಿ ರಾಜಪ್ರಭುತ್ವ ಶಕ್ತಿಯ ಬೆಳವಣಿಗೆ ಕಂಡುಬಂದರೆ ಇನ್ನುಳಿದ ಭಾಗಗಳು ಇನ್ನೂ ಬುಡಕಟ್ಟು ವ್ಯವಸ್ಥೆಯನ್ನೇ ಹೊಂದಿದ್ದವು. ಅಷ್ಟೇ ಹಿಂದಿನ ವ್ಯವಸ್ಥೆಗೂ ವ್ಯತ್ಯಾಸವಿರುವುದು ಸಹಜ. ಆ ಸಂದರ್ಭದಲ್ಲಿ ಹಲವಾರು ಕಾರಣಗಳಿಗಾಗಿ ಕೃಷಿ ಕ್ಷೇತ್ರದಲ್ಲಿ ಸ್ತ್ರೀಯರ ಪ್ರಾಮುಖ್ಯತೆ ಕಡಿಮೆಯಾದದ್ದು ಕಂಡುಬರುತ್ತದೆ.

ಸುಧಾರಿತ ಕೃಷಿ ಸಲಕರಣೆಗಳ ಮೇಲೆ ತನ್ನ ಪ್ರಭುತ್ವವನ್ನು ಸಾಧಿಸಲು ಪುರುಷ ಬಯಸಿದ. ಅದರ ಪರಿಣಾಮವಾಗಿ ನೇಗಿಲಿನಿಂದ ಹೊಲ ಉಳುವುದು, ಸ್ತ್ರೀಯರಿಗೆ ತಕ್ಕ ಕಾರ್ಯವಲ್ಲವೆಂದು ಅಮಂಗಳಕರ ವಾದದ್ದೆಂದೂ, ನಿಷಿದ್ಧವೆಂದೂ ಸೂಚಿಸುವ ಕಲ್ಪನೆಯನ್ನು ಒಟ್ಟು ಜನಪದದ ನಂಬಿಕೆಯನ್ನಾಗಿಸುವುದರಲ್ಲಿ

ಪುರುಷ ಯಶಸ್ವಿಯಾದ. ಸಾಮಾನ್ಯವಾಗಿ ಈ ರೀತಿಯ ಜಾನಪದ ನಂಬಿಕೆಗಳು ಚರಿತ್ರೆಯಲ್ಲಿ ಬದಲಾದ ವ್ಯವಸ್ಥೆಯ ಅಗತ್ಯವನ್ನು ಸಮರ್ಥಿಸಿಕೊಳ್ಳಲು ಹುಟ್ಟಿಕೊಂಡಂತಹವು ಎಂಬುದನ್ನು ಗಮನಿಸಬೇಕು. ಇಷ್ಟಾದರೂ ಭಾರತದಲ್ಲಿ ಅಷ್ಟೇ ಏಕೆ ವಿಶ್ವದ ಹಲವಾರು ಕಡೆಗಳಲ್ಲಿ ಇಂದಿಗೂ ಕೃಷಿಯ ಹಲವಾರು ಕೆಲಸಗಳನ್ನು ಮಹಿಳೆಯರೇ ಮಾಡುತ್ತಿದ್ದರೆಂಬುದು ವಾಸ್ತವ ಸತ್ಯ."[೪೯] ಇದರಲ್ಲಿಯೂ ನಾವು ಸ್ತ್ರೀ ಸಮಾನತೆಯನ್ನು ಕಾಣಲು ಸಾಧ್ಯವಿಲ್ಲ. ನಮ್ಮ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀಯರಿಗೆ ಕೆಳಮಟ್ಟದ ಸ್ಥಾನವನ್ನು ಕೊಡಲಾಗಿದೆ.

ಮಹಿಳಾ ಸ್ವಾತಂತ್ರ್ಯವೆನ್ನುವುದು ಅಮೂರ್ತವೂ ಅಲ್ಲ; ಸನ್ನಿವೇಶಗಳಿಂದ ಅಬಾಧಿತವೂ ಅಲ್ಲ. ಹಾಗೆಯೇ ಸ್ವಾತಂತ್ರ್ಯದ ನಿಯಂತ್ರಣ ವೈಯಕ್ತಿಕವಾದದ್ದಾಗಲೀ, ಸನ್ನಿವೇಶದ ನಿಯಂತ್ರಣವಾಗಲೀ ಆಗಬಹುದು. ಆದ್ದರಿಂದ ಹೆಣ್ಣು ತನ್ನ ಸ್ವಾತಂತ್ರ್ಯವನ್ನು ಪಡೆಯಬೇಕಾದರೆ ಅದರ ಬಗೆಗಿನ ತಿಳುವಳಿಕೆಯನ್ನು ಪಡೆಯಲು ಪ್ರಯತ್ನ ನಡೆಸಬೇಕು.

ನಮ್ಮ "ಪ್ರಾಚೀನ ಕಾಲದಲ್ಲಿ ಮಹಿಳೆಯರ ಸ್ಥಿತಿ ಉತ್ತಮವಾಗಿತ್ತು. ಎಲ್ಲರಿಗೂ ವಿದ್ಯಾಭ್ಯಾಸ ಮತ್ತು ಉಪನಯನದ ಹಕ್ಕಿತ್ತು ಎಂಬುದನ್ನು ಉತ್ಪ್ರೇಕ್ಷಿಸಿ ಹೇಳುವ ನಮ್ಮ ಧಾರ್ಮಿಕ ಪುನರುದ್ಧಾರಕರು ಇಪ್ಪತ್ತನೆಯ ಶತಮಾನದಲ್ಲಿ ಅಂದಿನ ಜೀವನವನ್ನು ಮರಳಿ ತರಲು ಹೋಗಿ ಅಪಹಾಸ್ಯಕ್ಕೆ ಈಡಾಗುತ್ತಾರೆ ಎಂಬುದಕ್ಕೆ ಉತ್ತಮ ನಿದರ್ಶನ ಬೆಂಗಳೂರಿನಲ್ಲಿ ಇತ್ತೀಚೆಗೆ ನಡೆದ ಒಂದು ಹುಡುಗಿಯ ಉಪನಯನದ ಘಟನೆ. ಮೂರೆಳೆಯ ದಾರದಿಂದ ಹೆಣ್ಣಿಗೆ ಪುರುಷನೊಂದಿಗೆ ಸಮಾನತೆ ದೊರಕಬಹುದೆಂದು ಆ ಹುಡುಗಿಯ ತಂದೆ ತಿಳಿದಿದ್ದರೆ ಅದಕ್ಕಿಂತ ಮೂರ್ಖತನದ ವಿಷಯ ಮತ್ತೊಂದಿಲ್ಲ. ಸ್ತ್ರೀ ಪುರುಷರ ಸಮಾನತೆಯ ಪರಿಕಲ್ಪನೆಯೂ ಎಷ್ಟೊಂದು ವಿಶಾಲವೆಂದರೆ ಯಾವುದೋ ನಿರ್ದಿಷ್ಟ ಜಾತಿಯ ಒಂದು ಸಣ್ಣ ಗುಂಪಿನ ಆಚರಣೆಯಿಂದ ಸ್ತ್ರೀ ಸಮಾನತೆ ಸಾಧ್ಯವಾಗಲಾರದು. ಪ್ರಾಚೀನ ಸಂಸ್ಕೃತಿಯ ಹೆಸರಿನಲ್ಲಿ ಹೆಣ್ಣಿನ ಕೊಲೆಯೂ ಸಂಪ್ರದಾಯವಾಗುವಂತಹ ದುರವಸ್ಥೆ ಭಾರತದಲ್ಲಿದೆ. ಸತಿಪದ್ಧತಿಯನ್ನು ಬೆಂಬಲಿಸಿ ವೈಭವೀಕರಿಸಿದ ಜನರ ಕೃತ್ಯ ಪ್ರಾಚೀನ ಜನ ಜೀವನವನ್ನು ಮರುಕಳಿಸಲು ನಡೆಸಿದ ಪ್ರಯತ್ನವಷ್ಟೇ ಆಗುತ್ತದೆ."[೫೦]

ಶ್ರುತಿಗಳನ್ನು ಮುಖ್ಯವಾಗಿ ಮತ್ತೆ ಪುನರುತ್ಥಾನಗೊಳಿಸಲು ಪ್ರಯತ್ನಿಸಿದ ಶಂಕರಾಚಾರ್ಯ, ರಾಮಾನುಜಾಚಾರ್ಯ, ಮಧ್ವಾಚಾರ್ಯ ಮತ್ತು ಕುಮಾರಿಲ ಭಟ್ಟರುಗಳ ವೈಚಾರಿಕ ವೈಶಿಷ್ಟ್ಯ ಅವರೊಂದಿಗೆ ಮುಗಿದು ಹೋಯಿತು. ನಂತರ ಉಳಿದು ಆಗಿರುವುದೆಲ್ಲ ಕೇವಲ ಸಾಂಪ್ರದಾಯಿಕ ಅನುಸರಣೆಯಷ್ಟೆ. ಅವರ ಕಾಲದಲ್ಲೇ ಸ್ತ್ರೀಯರಿಗೆ ಸಮಾನಸ್ಥಾನ ಲಭ್ಯವಾಗಲಿಲ್ಲ. ಇನ್ನು ವೈದಿಕ ಸಾಹಿತ್ಯದ ಬಗ್ಗೆಯೇ ಪೂರ್ಣ ಅಪನಂಬಿಕೆ ಇರುವಂಥ ಈ ಕಾಲದಲ್ಲಿ ಇಂಥ ಪ್ರಯತ್ನಗಳು ಸಾಂಕೇತಿಕವಷ್ಟೇ ವಿನಾ ಸಾಂಸ್ಕೃತಿಕ ಪರಿವರ್ತನೆಗೆ ಕಾರಣವಾಗುವುದಿಲ್ಲ ಎಂಬುದನ್ನು ಸ್ಪಷ್ಟವಾಗಿ ತಿಳಿಯಬೇಕಾದ್ದು ಅಗತ್ಯ.

ನಮ್ಮ "ಈ ಶತಮಾನದ ಕೊನೆಯಲ್ಲಿ ಭಾರತೀಯ ಮಹಿಳೆ ಎಲ್ಲ ಕ್ಷೇತ್ರಗಳಲ್ಲಿ ಗಂಡಸರಿಗೆ ಸರಿಸಮಾನ ಶಿಕ್ಷಣ ಪಡೆದು ವಿವಿಧ ರಂಗಗಳಲ್ಲಿ ಮುಂದುವರಿಯುತ್ತಿರುವುದು ನಿಜವಾದರೂ ಅಖಂಡ ದೇಶದ ಪ್ರಗತಿಯನ್ನು ಗಮನಿಸಿದರೆ ಈ ಪ್ರಗತಿಪರ ಮಹಿಳೆಯರ ಸಂಖ್ಯೆ ಅತ್ಯಲ್ಪವೆಂದೇ ಹೇಳಬೇಕು. ಶಿಕ್ಷಣದೊಂದಿಗೆ

ಶ್ರಮ ಗೌರವದ ಕಲ್ಪನೆ ಸೇರ್ಪಡೆಯಾಗದೇ ದೈಹಿಕ ಶ್ರಮದಿಂದ ಜೀವಿಸುವ ವರ್ಗದ, ಪುರುಷರಂತೆ ಸ್ತ್ರೀಯರೂ ಅಕ್ಷರಾಭ್ಯಾಸ ದೊರೆತೊಡನೆ, ಕೌಟುಂಬಿಕ ವೃತ್ತಿಗಳನ್ನು ಕೈಗೊಳ್ಳುವುದನ್ನು ಕೀಳಾಗಿ ಭಾವಿಸುತ್ತಾರೆ. ಸಾಲದ್ದಕ್ಕೆ ನಗರ ಮತ್ತು ಗ್ರಾಮಗಳ ಜನಜೀವನದಲ್ಲಿ ಮಹದಂತರವಿದ್ದು, ಈಗಲೂ ಆ ಅಂತರ ಹೆಚ್ಚುತ್ತಲೇ ಇದೆ. ನಗರದ ಹೆಂಗಳೆಯರಿಗಿದ್ದ ವೃತ್ತಿ, ಉಪವೃತ್ತಿಗಳ ಅವಕಾಶವೊಂದೊ ಗ್ರಾಮರ್ಥ ಮಹಿಳೆಯರಿಗೆ ಇಲ್ಲ. ಮಹಿಳೆಯರ ಮುನ್ನಡೆ ಎಂಬುದು ಪಟ್ಟಣಗಳ ಮಹಿಳೆಯರ ಮುನ್ನಡೆ ಮಾತ್ರವೇ ಆಗಿದ್ದು ದೇಶದ ಕೋಟಿಗಟ್ಟಲೆ ಗ್ರಾಮೀಣ ಹೆಂಗಳೆಯರ ಸ್ಥಾನಮಾನ ಮತ್ತು ಶೈಕ್ಷಣಿಕ ಪ್ರಗತಿಗಳು ಅತ್ಯಂತ ನಿರಾಶಾದಾಯಕವಾಗಿಯೇ ಉಳಿದಿವೆ. ವಾತ್ಸ್ಯಾಯನನು ಉದಾಹರಿಸಿದ ಆಪತ್ಕಾಲಕ್ಕೆ, ಹೆಣ್ಣು ಕೈಗೊಂಡು ತನ್ನ ಕಾಲಮೇಲೆ ನಿಲ್ಲಬಹುದಾಗಿದ್ದ ಹಲವಾರು ವೃತ್ತಿಗಳು ಇಂದು ಮಣ್ಣುಮುಕ್ಕಿವೆ. ಹೊಸವುಗಳು ಸೃಷ್ಟಿಯಾಗಲಿಲ್ಲ. ಶಾಲಾ ಶಿಕ್ಷಣಕ್ಕೂ ನೌಕರಿಗೂ ಅರ್ಥಾತ್ ಸಂಬಂಧವಿಲ್ಲದ ಪರಿಸರದಲ್ಲಿ, ಗ್ರಾಮಗಳ ನಾರೀ ಸಮೂಹ ತತ್ತರಿಸಿ ಹೋಗಿರುವ ಸ್ಥಿತಿಯಲ್ಲಿ ಶಿಕ್ಷಣ ಕ್ರಮದ ಆಮೂಲಾಗ್ರ ಬದಲಾವಣೆಯಾಗದೇ ಸ್ತ್ರೀಯರ ನಿಜವಾದ ಪ್ರಗತಿ ಸಾಧ್ಯವಿಲ್ಲ."[೫೧]

ಈ ಮೇಲೆ ಹೇಳಿರುವ ಜೋತ್ಸ್ನಾ ಕಾಮತ್ ಅವರ ಲೇಖನದಲ್ಲಿ ಸ್ತ್ರೀಯ ಸಮಾನತೆಯನ್ನು ವಿವರಿಸಿರುವುದರಲ್ಲಿ ಉತ್ತಮ ಶ್ರೇಯಾಂಕವಿದೆ. ಮಹಿಳೆಯು ಶಿಕ್ಷಣ ಪಡೆದು ವಿವಿಧ ಕಾರ್ಯಕ್ಷೇತ್ರಗಳಲ್ಲಿ ಮುಂದುವರಿಯುತ್ತಿರುವುದು ಸತ್ಯವಾದರೂ ಭಾರತ ದೇಶದ ಮಟ್ಟಿಗೆ ಹೇಳುವುದಾದರೆ ನಗರ ಪ್ರದೇಶಗಳಲ್ಲಿ ಮಾತ್ರ ಮಹಿಳೆಯು ಎಲ್ಲಾ ಕ್ಷೇತ್ರಗಳಲ್ಲೂ ಸಮಾನತೆ ಸಾಧಿಸುತ್ತಿರುವುದು ಅಕ್ಷರಶಃ ನಿಜ. ಇವರ ಪ್ರತಿಪಾದನೆಯಂತೆ ಗ್ರಾಮೀಣ ಪ್ರದೇಶಗಳಲ್ಲಿ ಅಷ್ಟೇನೂ ಸಮಾನತೆಯು ಕಾಣಸಿಗುವುದಿಲ್ಲ. ಆದ್ದರಿಂದ ಈ ವಿಷಯದಲ್ಲಿ ಲೇಖಕರ ಅಭಿಪ್ರಾಯಕ್ಕೆ ಹೆಚ್ಚು ಒತ್ತು ನೀಡಬಹುದಾಗಿದೆ.

ನಮ್ಮ "ಎಲ್ಲ ವರ್ಗದಲ್ಲಿ ಸ್ತ್ರೀಯರು ಒಂದಲ್ಲ ಒಂದು ರೀತಿಯಲ್ಲಿ ಶೋಷಣೆಯಿಂದ ನರಳುತ್ತಿದ್ದಾರೆ. ಹೆಣ್ಣು ಸ್ವಾತಂತ್ರ್ಯವನ್ನು ಬಯಸುವಳೆಂಬುದು ಹಲವರಿಗೆ ಸ್ವೇಚ್ಛೆ ಲಂಪಟತನ ಎಂದು ಅರ್ಥವಾಗಿದೆ. ಆದರೆ ಇದು ತಪ್ಪು ತಿಳುವಳಿಕೆ. ಸ್ವಾತಂತ್ರ್ಯವೆಂದರೆ ಸ್ವೇಚ್ಛೆಯಲ್ಲ. ನಿರ್ಭೀತಿಯಿಂದ ತಮ್ಮ ಅಸ್ತಿತ್ವವನ್ನು ರೂಪಿಸಿಕೊಂಡು ಮಾನವೀಯ ನೆಲೆಗಳಲ್ಲಿ ಬದುಕುವುದೇ ಆಗಿದೆ. ಈ ರೀತಿಯಾದ ತಪ್ಪುಗ್ರಹಿಕೆಯಿಂದ ಪುರುಷರು ಹುಬ್ಬುಗಂಟಿಕ್ಕಿದರೆ ಸ್ತ್ರೀಯರೆ ಗುಮಾನಿಯಿಂದ ನೋಡುವಂತಾಗುವುದು. ಆದುದರಿಂದ ಮೊದಲು ಸ್ವಾತಂತ್ರ್ಯ, ವಿಮೋಚನೆ ಮತ್ತು ಸ್ವೇಚ್ಛೆಯ ಅರ್ಥವನ್ನು ಪುರುಷ ಮತ್ತು ಸ್ತ್ರೀಯರು ತಿಳಿದುಕೊಂಡರೆ ಈ ಗೊಂದಲಗಳು ಇರುವುದಿಲ್ಲ. ಆಕೆ ಪ್ರತಿಭಟಿಸಿದ್ದು ನಿರಂತರವಾಗಿ ನಡೆದ ಅನ್ಯಾಯ, ದಬ್ಬಾಳಿಕೆಯ ವಿರುದ್ಧವೇ ಹೊರತು ಲಂಪಟತನವನ್ನು ಕೇಳಲಿಲ್ಲ.

ಆಕೆಗೂ ಒಂದು ಸ್ವತಂತ್ರ ಅಸ್ತಿತ್ವವಿದೆ. ಅದನ್ನು ರೂಪಿಸಿಕೊಳ್ಳಲು ಹಕ್ಕೂ ಇದೆ ಎಂಬುದು ಸ್ತ್ರೀವಾದದ ಒಂದು ಆಶಯ. ಮಹಿಳೆಯರು ತಮ್ಮಲ್ಲಿದ್ದ ಕೀಳರಿಮೆಯನ್ನು ತೊರೆದು ಮನೆಯಿಂದ ಹೊರಬಂದು ಪ್ರತ್ಯೇಕ "ಐಡೆಂಟಿಟಿ"ಯನ್ನು ಗಳಿಸುವುದರತ್ತ ಒಲವು ತೋರಬೇಕು. ಯಾರ ಮಗಳು? ಯಾರ ಹೆಂಡತಿ? ಯಾರ ಸೊಸೆ? ಎಂಬುದಕ್ಕಿಂತ ತನ್ನ ಅಸ್ತಿತ್ವದಿಂದಲೇ ಗುರುತಿಸಲ್ಪಡಬೇಕು. ಇದು ಪುರುಷ ಕೇಂದ್ರೀಕೃತದಡಿಯಲ್ಲಿ ಅಷ್ಟು ಸುಲಭದ ಮಾತೇನೂ ಅಲ್ಲ."[೫೨]

ಈ ಮೇಲೆ ಹೇಳಿರುವ ಮುಕ್ತಾಯಕ್ಕನವರ ಅಭಿಪ್ರಾಯಕ್ಕೆ ನನ್ನ ಸಹಮತವಿದೆ. ಮಹಿಳೆಗೆ ಸ್ವಾತಂತ್ರ್ಯ ಇದೆ. ಅದನ್ನು ರೂಪಿಸಿಕೊಳ್ಳಲು ಹಕ್ಕು ಇದೆ. ಹಾಗೂ ಮಹಿಳೆ ತನ್ನ ಕೀಳರಿಮೆಯನ್ನು ತೊರೆದು ಹೊರಬಂದು ತನ್ನ ಅಸ್ತಿತ್ವವನ್ನು ಗಳಿಸುವುದು ಅತ್ಯಾವಶ್ಯಕ. ಈಗಿನ ಪುರುಷ ಪ್ರಧಾನ ಸಮಾಜದಲ್ಲಿ ಇದಕ್ಕೆ ಪುಷ್ಟಿ ದೊರೆಯುವುದು ಕಡಿಮೆಯಾದರೂ ಮಹಿಳೆಯರ ಪ್ರಯತ್ನ, ಸಮಾಜದ ಸಹಕಾರ ತುಂಬಾ ಅವಶ್ಯ ಎಂಬುದನ್ನು ಮನಗಾಣಬಹುದು.

ನಿದರ್ಶನವಾಗಿ ಪಿ.ಲಂಕೇಶ್‌ರ ದಾಹ ಕತೆಯನ್ನು ಅವಲೋಕಿಸಿದಾಗ ಕಛೇರಿಯ ಕೆಲಸದಲ್ಲಿ ನಿರ್ವಹಿಸುತ್ತಿದ್ದ ಪದ್ಮ ತನ್ನ ಸಹೋದ್ಯೋಗಿ ಮಿತ್ರರೊಬ್ಬರ ಪತ್ನಿ ಆಕಸ್ಮಿಕವಾಗಿ ನಿಧನಳಾದಾಗ ಅವರ ಮನೆಗೆ ಸಂತಾಪ ಸೋಚಿಸಲು ಹೋಗುತ್ತಾಳೆ. ಆಗ ಪದ್ಮಳು ತನ್ನ ಸಹಪಾಠಿ ಮಿತ್ರನಿಗೆ ಸಾಂತ್ವನ ಹೇಳಲು ಹೋದ ಸಂದರ್ಭದಲ್ಲಿ ಆ ಸಹಪಾಠಿ ಮಿತ್ರ ತನ್ನ ಹೆಂಡತಿಯ ಸಾವನ್ನು ಇವಳ ಆಗಮನದಿಂದ ತನ್ನ ನೋವನ್ನು ಕಡಿಮೆಮಾಡಿಕೊಳ್ಳುತ್ತಾನೆ. ದಿನಕಳೆದಂತೆ ಇವರಿಬ್ಬರ ಭೇಟಿಯನ್ನು ಆ ಸಹಪಾಠಿಮಿತ್ರ ಬೇರೆಯದೇ ರೀತಿಯಲ್ಲಿ ನೋಡುತ್ತಾನೆ. ಆದರೆ ಪದ್ಮ ಇದ್ಯಾವುದಕ್ಕೂ ಗಮನ ನೀಡಿರುವುದಿಲ್ಲ. ಇದರೊಂದಿಗೆ ಇವನ ಇನ್ನೊಬ್ಬ ಸಹಪಾಠಿ ಸೆಲ್ವಿಯೊಂದಿಗೆ ಸಂಬಂಧ ಇಟ್ಟುಕೊಂಡಿರುತ್ತಾನೆ. ಆದರೆ ಇದ್ಯಾವುದೇ ವಿಷಯ ಆ ಪುರುಷ ಉದ್ಯೋಗಿಯ ಗತಿಸಿದ ಹೆಂಡತಿಗೆ ತಿಳಿಯದು. ಇವೆಲ್ಲವನ್ನೂ ಗಮನಿಸಿ ನೋಡಿದಾಗ ಆತನ ಹೆಂಡತಿಯ ಸಾವು ಆಗಿದ್ದರೂ ಸಹ ಅವನು ಇತರೆ ಹೆಣ್ಣುಗಳ ಸಹವಾಸಕ್ಕೆ ಹಾತೊರೆಯುತ್ತಿದ್ದುದು ಕಂಡುಬರುತ್ತದೆ. ಇಲ್ಲಿ ಲೇಖಕರ ಧ್ವನಿಯನ್ನು ಗಮನಿಸಿದಾಗ, ಮಹಿಳೆಯರ ಸ್ಥಾನ ಈ ಮೂರು ಹೆಂಗಸರಲ್ಲಿ ವಿವಿಧ ರೀತಿಯದ್ದಾಗಿರುತ್ತದೆ. ಒಬ್ಬಳು ಉದ್ಯೋಗಸ್ಥನ ಪತ್ನಿ, ಇನ್ನೊಬ್ಬಳು ಉದ್ಯೋಗಸ್ಥೆ, ಮತ್ತೊಬ್ಬಳು ಉದ್ಯೋಗಸ್ಥೆ. ಆದರೆ ಸೆಲ್ವಿ ಉದ್ಯೋಗದಲ್ಲಿದ್ದರೂ ಸಹ ಅವಳ ಚಂಚಲತೆಯನ್ನು ಇಲ್ಲಿ ಕಾಣಬಹುದು. ಪದ್ಮಳ ವಿಷಯ ತೆಗೆದುಕೊಂಡಾಗ ಅವಳ ಚಾರಿತ್ರ್ಯ ಭಾವನೆಯಲ್ಲಿ ಶುದ್ಧವಾಗಿರುವುದು ಕಂಡುಬರುತ್ತದೆ. ಅದೇ ಪುರುಷ ಉದ್ಯೋಗಿಯ ಹೆಂಡತಿ ತನ್ನ ಗಂಡನ ಆಶ್ರಯದಲ್ಲಿ ಜೀವನ ನಡೆಸಬಹುದಾಗಿದ್ದು ಗಂಡನ ಕಾಮಾಂಧತೆಯ ವಿಷಯ ತಿಳಿದೂ ಪ್ರತಿಭಟಿಸಲಾರದ ಅಸಹಾಯಕ ಸ್ಥಿತಿಯಿಂದ ಸಾವಿನ ಮೊರೆ ಹೋಗಿರಬಹುದೆಂದು ಊಹಿಸಲಾಗಿದೆ. ಒಟ್ಟಾರೆ ಈ ಮೂರು ಜನ ಸ್ತ್ರೀಯರನ್ನು ಗಮನಿಸಿದಾಗ ಸಮಾನತೆ ಮತ್ತು ಅಸಮಾನತೆಗಳೆರಡನ್ನೂ ನೋಡಿ ಸ್ತ್ರೀಯರ ಸ್ಥಾನಮಾನಗಳನ್ನು ಅಳೆಯಬಹುದಾಗಿರುತ್ತದೆ.

ಅಲ್ಲದೆ, ವಸ್ತುವಿನ ಹಿನ್ನೆಲೆಯಲ್ಲಿ ವಿವೇಚಿಸಿ ಹೇಳುವುದಾದರೆ, "ಉದ್ಯೋಗಸ್ಥ ಹೆಣ್ಣಿನ ಬದುಕು ಸಾಹಿತ್ಯಕ್ಕೆ ವಸ್ತುವಾಗಿ ಒದಗಿ ಬರುವ ಸಾಧ್ಯತೆಗಳು ಊಹಾತೀತವೆನಿಸಬೇಕಿತ್ತು. ನಮ್ಮ ಅಸಂಖ್ಯ ಕತೆ, ಕಾದಂಬರಿಗಳಲ್ಲಿ ಮೇಲಿನ ಎಲ್ಲ ಸ್ತರಗಳಲ್ಲಿನ ಉದ್ಯೋಗಿ ಹೆಣ್ಣುಗಳನ್ನು ಹೇರಳವಾಗಿ ಚಿತ್ರಿಸಲಾಗಿದೆ ಎಂಬುದೇನೋ ನಿಜ. ಆದರೆ ಚಿತ್ರಣದ ಮಾದರಿ ಮಾತ್ರ ಸೀಮಿತ ಚೌಕಟ್ಟಿನಲ್ಲೇ, ಪುರುಷ ಚಿಂತನೆಯ ಪರವಾಗಿ ಮಾತ್ರ ನಿಲ್ಲುವಂಥದಾಗಿದೆ. ಹೆಣ್ಣು ಈವರೆಗೆ ನಿಭಾಯಿಸುತ್ತಾ ಬಂದ ಹೊಣೆಗಾರಿಕೆಗಳಲ್ಲಿ ಹೆಣ್ಣಿನ ಉದ್ಯೋಗ ತರುವ ಪಲ್ಲಟಗಳೇನು ಎಂಬುದೇ ಇದರ ಮುಖ್ಯ ಚಿಂತೆ ಎನಿಸಿಬಿಟ್ಟಿದೆ. ಅವಳ ಬದುಕಿನ ಕತೆ ಇಲ್ಲಿ ಅಮುಖ್ಯವೆನಿಸುತ್ತದೆ.

ಅವಳು ಉದ್ಯೋಗಸ್ಥಳಾದರೂ ಅವನ ಬಳಕೆಗೆ ಸಿಗದೆ ತಪ್ಪಿಸಿಕೊಳ್ಳಬಾರದು ಎಂಬುದೇ ನಮ್ಮ ಸಮಾಜದ ನಿರೀಕ್ಷೆ, ಒತ್ತಾಯ, ಆದ್ದರಿಂದನೇ ಮಹಿಳೆಯ ಉದ್ಯೋಗವನ್ನು ವಿವಾಹ, ಕುಟುಂಬ, ಸಂಸಾರ, ತಾಯ್ತನ ನೈತಿಕತೆ, ಆರ್ಥಿಕತೆ ಇವುಗಳೊಂದಿಗೆ ಇಟ್ಟು ನೋಡಲಾಗುತ್ತದೆಯೇ ಮಹಿಳೆಯ ಸ್ಥಾನಮಾನ, ಅವಳ ಸಂತೋಷ, ವ್ಯಕ್ತಿತ್ವ, ಸ್ವಂತಿಕೆ, ಆತ್ಮಬಲ, ಸ್ವಾವಲಂಬನೆ, ಸಾಧನೆ ಎಂಬ ನೆಲೆಗಳಲ್ಲಿ ನೋಡುವುದಿಲ್ಲ. ಈ ಚಿಂತನೆ ನಮ್ಮ ಪುರುಷರ ಸಾಹಿತ್ಯದಲ್ಲಿ ಮಾತ್ರವೆ ಅಲ್ಲದೆ ಮಹಿಳೆಯರ ಸಾಹಿತ್ಯದಲ್ಲೂ ಪುಷ್ಟಿಪಡೆದು ಬಿಡುತ್ತದೆ."[೫೩]

ಎಚ್.ಎಸ್. ಶ್ರೀಮತಿಯವರ ಈ ಅಭಿಪ್ರಾಯವನ್ನು ಅವಲೋಕಿಸಿದಾಗ ಉದ್ಯೋಗಸ್ಥ ಮಹಿಳೆಯರ ಬಗ್ಗೆ ಸಾಹಿತ್ಯಕ್ಕೆ ವಸ್ತುಗಳು ದೊರೆಯಬಹುದು ನಮ್ಮ ಅಸಂಖ್ಯಾತ ಕತೆ ಕಾದಂಬರಿಗಳಲ್ಲಿ ಅನೇಕ ಮಹಿಳೆಯರು ಉದ್ಯೋಗಸ್ಥರಾಗಿರುವುದನ್ನು ಕಾಣಬಹುದು. ಆದರೆ ಎಲ್ಲಾ ಉದ್ಯೋಗಸ್ಥ ಮಹಿಳೆಯರು ಪುರುಷ ಉದ್ಯೋಗಿಯ ಅಧೀನದಲ್ಲಿ ಕೆಲಸ ಮಾಡುವ ಸಂದರ್ಭವೇ ಹೆಚ್ಚು. ಇದರ ಜೊತೆಗೆ ಬಹುತೇಕ ಮಹಿಳೆಯರಿಗೆ ತಾವು ನಿರ್ವಹಿಸುವ ಕಛೇರಿ, ಕಾರ್ಖಾನೆ ಮತ್ತಿತರ ಉದ್ಯೋಗ ಸ್ಥಳಗಳಲ್ಲಿ ಸಿಗುವ ಪ್ರೋತ್ಸಾಹಕ್ಕಿಂತ ಕಿರುಕುಳಗಳೇ ಹೆಚ್ಚಾಗಿರುವುದನ್ನು ಕಾಣಬಹುದು. ಒಟ್ಟಾರೆ ಪುರುಷನಿಗಿಂತ ಮಹಿಳೆಯ ಉದ್ಯೋಗ ಪರಿಸ್ಥಿತಿ ಮತ್ತು ಸಂಸಾರ ನಿರ್ವಹಣೆ ಇವುಗಳು ಅವಳಿಗೆ ತೃಪ್ತಿದಾಯಕವಾಗಿರುವುದಿಲ್ಲ ಎನ್ನುವುದನ್ನು ಗಮನಿಸಬಹುದು. ಈ ವಿಷಯಗಳನ್ನೆಲ್ಲ ಲೇಖಕರು ಮನಗಂಡು ಸ್ತ್ರೀಯ ಶೋಷಣೆ, ಸ್ಥಾನಮಾನ ಮುಂತಾದವುಗಳನ್ನು ಚಿತ್ರಿಸಿರುವುದನ್ನು ಕಾಣಬಹುದು.

ಗಾಂಧೀಜಿಯವರು ತಮ್ಮ ಅಹಿಂಸೆ ಹಾಗೂ ಸತ್ಯದ ವಿಚಾರಗಳು ಆದರ್ಶೀಕೃತ ಸ್ತರದಲ್ಲಿ ಮಂಡಿಸುವಲ್ಲಿ ಸ್ತ್ರೀಯನ್ನು ಮೂಲ ಮಾದರಿಯಾಗಿ ಸ್ವೀಕರಿಸಿರುತ್ತದೆ. ಗಾಂಧಿಯವರ ಪ್ರಕಾರ ಮಹಿಳೆ ಅಹಿಂಸೆಯ ಮೂರ್ತಿವೆತ್ತ ಸ್ವರೂಪ. ಅಹಿಂಸೆ ಎಂದರೆ ಅಪರಿಮಿತ ಪ್ರೇಮ; ಅಪರಿಮಿತ ಸಹನಾಶಕ್ತಿ, ಈ ಗುಣಗಳು ಅವಳ ತಾಯ್ತನದ ಸಹಜ ಸತ್ವದಿಂದಾಗಿ ಮತ್ತೂ ಉಜ್ವಲವಾಗಿ ಅವಳಲ್ಲಿ ಬೆಳಗುತ್ತಿರುವುವಾಗಿವೆ. ಮಹಿಳೆಯರು ಆತ್ಮತ್ಯಾಗದ ಮೂರ್ತರೂಪ. ಆದುದರಿಂದ ಸಹಜ ಸ್ವಭಾವವಾಗಿ ಕೌಟುಂಬಿಕ ವಲಯದಲ್ಲಿ ಪ್ರಕಟಗೊಳ್ಳುವ ಮಹಿಳೆಯ ಈ ಗುಣಗಳು ದೇಶಸೇವೆಗೆ, ಆ ಮೂಲಕ ಮಾನವತೆಯ ಸೇವೆಗೆ ವಿನಿಯೋಗವಾಗಬೇಕೆಂಬ ಆದರ್ಶವನ್ನು ಗಾಂಧಿ ರೂಪಿಸುತ್ತಾರೆ. ಏಕೆಂದರೆ ಗಾಂಧಿಯ ಪ್ರಕಾರ ಸ್ತ್ರೀ ಪುರುಷರಲ್ಲಿ ಸ್ತ್ರೀಯೇ ಹೆಚ್ಚು ಘನತೆವೆತ್ತವಳು. ತ್ಯಾಗ, ಮೌನ, ವೇದನಾನುಭವ, ನಂಬಿಕೆ, ಜ್ಞಾನ, ಸಹನೆಗಳ ಸಾಕಾರ ರೂಪ ಆಕೆ. ಮಹಿಳೆಯ ಈ ಗುಣಗಳು ಅಹಿಂಸೆಯ ಮೂಲಕ ನಡೆಸುವ ಸತ್ಯಾಗ್ರಹ ಹೋರಾಟಕ್ಕೆ ಅತ್ಯಗತ್ಯವಾಗಿರಲೇಬೇಕಾದ ಅರ್ಹತೆಗಳು. ಹೀಗಾಗಿ ಪುರುಷನಿಗೆ ಮಹಿಳೆ ಸರಿಸಮಾನಳೆನ್ನುವುದಕ್ಕಿಂತ ಆತನಿಗೆ ಆದರ್ಶದ ಕ್ರೇಂದ್ರವೂ ಆಗಿದ್ದಾಳೆ.

ನಮ್ಮ "ಆಧುನಿಕ ಸಣ್ಣ ಕಥೆಯ ಮೊದಲ ಘಟ್ಟದಲ್ಲಿ ಕಂಡುಬರುವ ಸ್ತ್ರೀಪಾತ್ರಗಳಿಗೂ ನವೋದಯ ಕಥೆಗಾರರಲ್ಲಿ ಕಂಡುಬರುವ ಸ್ತ್ರೀಪಾತ್ರಗಳಿಗೂ ನಡುವೆ ಇರುವ ಅಂತರ ಕನ್ನಡ ಕಥಾ ಪ್ರಪಂಚದಲ್ಲಿ ಸ್ತ್ರೀ ಪ್ರಜ್ಞೆಯ ವಿಕಾಸದ ಮೊದಲ ಪ್ರಕ್ರಿಯೆಗೆ ಸಾಕ್ಷಿಯಾಗಿದೆ. ಪಂಜೆ, ಕೆರೂರರ ಕಥೆಗಳಲ್ಲಿ ಹೆಣ್ಣುಗಳು ಭಾರತೀಯ

ಸಂಸ್ಕೃತಿಯ ವೈಭವೀಕರಣದ ನೆಲೆಯ ದಾಖಲೆಯಾಗಿ ಬಂದರೆ, ನವೋದಯದ ಕಥೆಗಾರರ ಕಥೆಗಳ ವೇಳೆಗೆ ಚಾರಿತ್ರಿಕ ನೆಲೆಯಿಂದ ವರ್ತಮಾನದ ನೆಲೆಗೆ ಬರುವುದರ ನಡುವಿನ ಸಂಕ್ರಮಣಾವಸ್ಥೆಯನ್ನು ಬಿಂಬಿಸುತ್ತಾರೆ. ಹಾಗಾಗಿಯೇ ಇಲ್ಲಿನ ಕಥೆಗಳು ಸ್ತ್ರೀಯರನ್ನು ಚಿತ್ರಿಸುವಾಗ ಭೂತ ಮತ್ತು ವರ್ತಮಾನಗಳ ಕಲ್ಪನೆಗಳ ನಡುವೆ ಲಾಳಿಯಾಡುತ್ತವೆ.

ಕನ್ನಡ ಕಥಾ ಸಾಹಿತ್ಯದಲ್ಲಿ ವಸ್ತುವಿನ ವೈವಿಧ್ಯತೆಯಲ್ಲಿ ಆದ ವಿಸ್ತಾರ ಪ್ರಗತಿಶೀಲರ ಸಾಧನೆ ಎಂದು ಗುರುತಿಸಬಹುದು. ವೇಶ್ಯೆಯರು, ವಿಧವೆಯರು, ಭಿಕ್ಷುಕಿಯರು, ಹೆಣ್ಣು ಜೀತದಾಳುಗಳು, ಸ್ತ್ರೀ ಕಾರ್ಮಿಕರು, ವೈವಾಹಿಕ ಚೌಕಟ್ಟಿನಾಚೆಗೆ ಬರಲೆತ್ನಿಸುವ ಅತೃಪ್ತ ಗೃಹಿಣಿಯರು ಹೀಗೆ ಹತ್ತು ಹಲವು ವೈವಿಧ್ಯತೆಯನ್ನು ಪ್ರಗತಿಶೀಲ ಕಥಾವಸ್ತುವು ಒಳಗೊಂಡಿದೆ."[೫೪]

ಗಿರಿಜಾಶಾಸ್ತ್ರಿಯವರ ಈ ಅಭಿಪ್ರಾಯದಂತೆ ಗಾಂಧೀಜಿಯವರಿಗೆ ಮಹಿಳೆಯರ ಬಗ್ಗೆ ಬಹಳ ಗೌರವ ಮತ್ತು ಮಹಿಳೆಯರಲ್ಲಿ ಕಂಡುಕೊಂಡಿರುವ ಅಪರಿಮಿತ ಪ್ರೇಮ, ಸಹನಾಶಕ್ತಿ ಮಹಿಳೆಯರು ತ್ಯಾಗದ ಮೂರ್ತರೂಪ, ಮಹಿಳೆಯರ ಗುಣಗಳು ಮಾನವತೆಗೆ ಮತ್ತು ಆದರ್ಶಕ್ಕೆ ತುಂಬಾ ನಿಕಟವಾಗಿರುತ್ತವೆ. ಸ್ತ್ರೀಯು ಪುರುಷರಿಗಿಂತ ಹೆಚ್ಚು ಘನತೆಯುಳ್ಳವಳು. ತ್ಯಾಗಿ, ಮೌನಿ, ಜ್ಞಾನ ಸಹನೆಗಳು, ನಂಬಿಕೆ, ಸಾಕಾರರೂಪ ಅಹಿಂಸೆಯ ಮೂಲಕ ಮಾಡುವ ಹೋರಾಟಗಳಿಗೆ ಸ್ತ್ರೀಯ ಸಹಭಾಗಿತ್ವ ತುಂಬಾ ಸಹಕಾರಿ. ದೇಶ ಸೇವೆಗೂ ಸಹ ಹೇಳಿ ಮಾಡಿಸಿದ ಸಹನೆಯುಳ್ಳ ಸಹಕಾರಿಯಾಗುವ ಗುಣ ಉಳ್ಳವರೆಂದು ಮಹಾತ್ಮಗಾಂಧಿಯವರ ಮೆಚ್ಚಿಗೆ ಮತ್ತು ಹೇಳಿಕೆಗಳನ್ನು ಅರ್ಥವತ್ತಾಗಿ ನಿರೂಪಿಸಿರುವುದನ್ನು ಕಾಣಬಹುದು.

ಲಂಕೇಶರಿಗೆ ಹೋಲಿಸಿದರೆ ತೇಜಸ್ವಿಯವರ ಮೊದಲಿನ ಕಥೆಗಳು ವಿಭಿನ್ನ. ಅನಂತರ ಬಂದ ಅವರ 'ಕಿರಿಗೂರಿನ ಗಯ್ಯಾಳಿಗಳು' ಕಥೆಯಲ್ಲಿ ಮಾತ್ರ ಸಂಪೂರ್ಣವಾಗಿ ಗ್ರಾಮೀಣ ಪರಿಸರದಲ್ಲಿ ಜೀವಚೈತನ್ಯವನ್ನು ತುಂಬಿಕೊಂಡ ಹೆಣ್ಣುಗಳ ಲೋಕವೊಂದು ಅನನ್ಯವಾಗಿ ವ್ಯಕ್ತವಾಗಿದೆ. ಈ ಕಥೆಯ ಹೆಸರೇ ಸೂಚಿಸುವಂತೆ ಇಲ್ಲಿನ ಪ್ರಧಾನ ಪಾತ್ರಗಳಾದ ಮಹಿಳೆಯರು ಗಯ್ಯಾಳಿಗಳಾಗಿ ತಮ್ಮ ಷಂಡ ಮತ್ತು ಸೋಮಾರಿ ಗಂಡಂದಿರ ವಿರುದ್ಧ ಸಿಡಿದೆದ್ದು ಸಾಮಾಜಿಕವಾಗಿ ತಮ್ಮ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳುವ ಪರಿ ಅಪರೂಪದ್ದು. ದುಡಿಮೆ ತಂದುಕೊಡುವ ಆತ್ಮವಿಶ್ವಾಸ, ಆ ಮೂಲಕ ಸಂಘಟನೆಗೆ ಕಾರಣವಾಗುವುದು ಇದರ ಮುಖ್ಯ ನೆಲೆಯಾಗಿದೆ. "ಸೊಂಟ ಇಲ್ಲದ ಗಂಡನಿಗೆ ಆಗುವುದೇನು? ಸಂತೆಯಲ್ಲಿ ಸೀರೆ ಬಿಚ್ಚಿ ಬಸಿರಾಗಬೇಕೆ" ಎಂದು ದಾನಮ್ಮ ಹಾಕುವ ದಿಟ್ಟ ಸವಾಲು ಓದುಗರಲ್ಲಿ ನಿಬ್ಬೆರಗು ಹುಟ್ಟಿಸುವಂತಹುದು. ಹಾಗೆಯೇ ಪಂಚಾಯಿತಿ ಕೂಡಿಸಿ ಅಸಹಾಯಕ ಹೆಣ್ಣಿನ ಮೇಲೆ ದೌರ್ಜನ್ಯವೆಸಗಲು ನೋಡಿದ ಗಂಡಸರ ವಿರುದ್ಧ ಅವರ ಹೆಂಡತಿಯರೇ ತಿರುಗಿ ಬೀಳುವುದು ಮತ್ತೆ ಇನ್ನೆಂದೂ ಅವರು ತಮ್ಮ ತಂಟೆಗೆ ಬಾರದಂತೆ ಬುದ್ಧಿ ಕಲಿಸುವುದು ತೇಜಸ್ವಿಯವರ ಸ್ತ್ರೀಪರವಾದ ಕಾಳಜಿಯನ್ನು ಅಚ್ಚರಿಯಾಗುವಂತೆ ದಾಖಲಿಸುತ್ತದೆ.

ನಿದರ್ಶನವಾಗಿ ಪಿ. ಲಂಕೇಶ್‌ರವರ ಅನೇಕ ಕತೆಗಳನ್ನು ಮತ್ತು ಸಣ್ಣ ಕತೆಗಳನ್ನು ತೆಗೆದುಕೊಳ್ಳಬಹುದು. ಅವುಗಳಲ್ಲಿ ಹೆಣ್ಣು ಮಕ್ಕಳು ತಮ್ಮ ಕ್ರಿಯಾಶೀಲತೆಯಿಂದ ವಿದ್ಯಾಭ್ಯಾಸದ ಮೂಲಕ ಅನೇಕ ಕ್ಷೇತ್ರಗಳಿಗೆ ಪ್ರವೇಶಿಸಿ ತಮ್ಮ ಇರುವಿಕೆ, ಸ್ಥಾನಮಾನಗಳನ್ನು ಈಗಾಗಲೇ ಪ್ರದರ್ಶಿಸುತ್ತಿರುವುದನ್ನು ಕಾಣುತ್ತೇವೆ. ಹಾಗೆಯೇ

ಇವರ ಕತೆಗಳಾದ ದೇವಿ, ಅವ್ವೆ, ಉಮಾಪತಿಯ ಸ್ಕಾಲರ್‌ಶಿಪ್‌ಯಾತ್ರೆ ಇವುಗಳನ್ನು ಗಮನಿಸಿದಾಗ ಇವುಗಳಲ್ಲಿ ಬರುವ ಹೆಣ್ಣುಗಳು ಮುಕ್ಕಾಲುಪಾಲು ಅನಕ್ಷರಸ್ಥರು, ಗ್ರಾಮೀಣ ಪ್ರದೇಶದವರು ಆಗಿದ್ದಾರೆ. ಇವರಲ್ಲಿ ಅನೇಕರು ತಮ್ಮ ತಮ್ಮ ಜವಾಬ್ದಾರಿ ಹಾಗೂ ವ್ಯಕ್ತಿತ್ವಗಳ ಮೂಲಕ ತಮ್ಮ ಸ್ಥಾನಮಾನಗಳನ್ನು ಜೊತೆಗೆ ವಿವಿಧ ಪ್ರಕಾರಗಳಲ್ಲಿ ಸಮಾನತೆಯನ್ನು ಪ್ರದರ್ಶಿಸಿರುವುದು ಕಂಡುಬರುತ್ತದೆ.

ಇಲ್ಲಿಯವರೆಗೆ ಘೋಷಾದಲ್ಲಿ ಬಂಧಿತಳಾಗಿ ಅವುಗಳ ತೆರೆಯನ್ನು ಸರಿಸಿ ಈಗಷ್ಟೇ ಹೊರಗೆ ದಿಟ್ಟಿಸುತ್ತಿರುವ ತಮ್ಮ ಅಳಲನ್ನು ತೋಡಿಕೊಳ್ಳುವುದರ ಮೂಲಕ ತಮ್ಮ ಧರ್ಮ ವಿಧಿಸಿದ ಅನೇಕ ನಿಷೇಧಗಳನ್ನು ಪ್ರಶ್ನಿಸುವ ಮುಸ್ಲಿಂ ಹೆಣ್ಣುಗಳ ಅನುಭವ ಲೋಕವೊಂದನ್ನು ಸಮರ್ಥವಾಗಿ ಕನ್ನಡ ಸಾಹಿತ್ಯದೊಳಗೆ ಹರಿಯಬಿಟ್ಟಿರುವ ಯಶಸ್ಸು, ಸಾರಾ ಅಬೂಬಕ್ಕರ್, ಬೊಳುವಾರು ಮಹಮದ್ ಕುಂಞ, ಬಾನುಮುಷ್ತಾಕ್, ಫಕೀರ್ ಮಹಮದ್ ಕಟ್ಪಾಡಿ ಇವರಿಗೆ ಸೇರುತ್ತದೆ. ಇದರಿಂದಾಗಿ ತೆರೆಯ ಹಿಂದಿದ್ದ ಸಮಾಜವೊಂದು ಸಾಹಿತ್ಯಲೋಕದಲ್ಲಿ ಇದ್ದಕಿದ್ದಂತೆ ಪ್ರವೇಶಿಸಿದಂತಾಗಿದೆ. ಇವರ ಕಥೆಗಳಲ್ಲಿ ಅಪರೂಪಕ್ಕೆ ಬರುವ ಮೇಲುವರ್ಗದ ಮುಸ್ಲಿಂ ಮಹಿಳೆಯರ ಶ್ರೀಮಂತಲೋಕ ಒಂದು ಕಡೆಗಾದರೆ, ಇನ್ನೊಂದು ಕಡೆಗೆ ಕೆಮ್ಮುತ್ತಾ ಬೀಡಿ ಕಟ್ಟುತ್ತಾ ಬಂದ ಹಣವನ್ನು ಕುಡುಕು ಗಂಡಂದಿರಿಗೆ ಸುರಿಯುವ ಮಧ್ಯವಯಸ್ಕ ಹೆಣ್ಣುಗಳು, ಕೊಲ್ಲಿಗೆ ಹೋದ ಗಂಡನ ಪ್ರತೀಕ್ಷೆಯಲ್ಲಿ, ಖಾಲಿ ಬಸಿರಿನಲ್ಲಿ ಆಸೆ ಹೊತ್ತ ಅವಿದ್ಯಾವಂತ ಯುವತಿಯರು, ಗಂಡನಿಂದ ತಲಾಖ್‌ಗೆ ಒಳಗಾದ ಬಹಿಷ್ಕೃತೆಯರು, ಮುದುಕ ಗಂಡನನ್ನು ಕಟ್ಟಿಕೊಂಡು ಅವನು ಸತ್ತಾಗ ಯುವಕರ ಕಡೆಗೆ ಆಸೆಯ ಕಣ್ಣಿಂದ ನೋಡುವ ಆತಂಕ ತುಂಬಿಕೊಂಡ ಹೆಣ್ಣುಗಳು, ಬಾಲ್ಯದಲ್ಲಿಯೇ ಶಾಲೆಗೆ ಶರಣು ಹೊಡೆದು ತಮ್ಮ ತಾಯಂದಿರು ಪ್ರತಿವರ್ಷ ಬಿಡದೇ ಹೆತ್ತುಕೊಡುವ ಮಕ್ಕಳನ್ನು ಪಾಲಿಸುವ ಬಾಲಕಿಯರು- ಇವರೆಲ್ಲರೂ ತಮ್ಮ ಅನೇಕ ಸಮಸ್ಯಾಪೂರ್ಣ ಬದುಕಿನ ವಿವಿಧ ಮುಖಹೊತ್ತು ಇವರ ಕಥೆಗಳಲ್ಲಿ ಕಾಣಿಸಿಕೊಂಡಿದ್ದಾರೆ.

ಕನ್ನಡದ ಪ್ರಸಿದ್ಧ ಕಥೆಗಳಾದ ಸಾರಾ ಅವರ 'ಚಪ್ಪಲಿಗಳು', ಬೊಳುವಾರು ಅವರ 'ಇದ್ದತ್', ಫಕೀರ್ ಮಹಮದ್ ಕಟ್ಪಾಡಿಯವರ 'ನೋಂಬು' ಬಾನುಮುಷ್ತಾಕ್‌ರವರ 'ರಾಹಿಲ ಎಂಬ ಕನ್ಯೆಯ ಕಥೆ' ಈ ನಾಲ್ಕೂ ಕಥೆಗಳು ಮುಸ್ಲಿಂ ಜನಾಂಗದ ವಿಭಿನ್ನ ಆವರಣದಲ್ಲಿ ಸಮಾನವಾದ ಕಾಳಜಿಯನ್ನು ಎತ್ತಿಹಿಡಿಯುತ್ತವೆ. ಈ ಎಲ್ಲ ಕಥೆಗಳು ಒಂದಲ್ಲ ಒಂದು ರೀತಿಯಲ್ಲಿ ಪಿತೃಪ್ರಧಾನ ವ್ಯವಸ್ಥೆ ಹೇರಿರುವ ಜಡಮೌಲ್ಯಗಳ ಭಾರದಿಂದ ಕುಸಿಯುತ್ತವೆ. ನಿಟ್ಟುಸಿರು ಬಿಡುತ್ತವೆ.

ಮುಸ್ಲಿಂ ಲೇಖಕ ಮತ್ತು ಲೇಖಕಿಯರು ಬರೆದಿರುವ ಕಥೆಗಳಲ್ಲಿ ಕೆಲವು ಸಾಮಾನ್ಯ ಲಕ್ಷಣಗಳಿದ್ದರೂ ಕಾಳಜಿಗಳ ದೃಷ್ಟಿಯಿಂದ ನೋಡಿದರೆ ಅವರ ಕಥೆಗಳಲ್ಲಿ ವ್ಯತ್ಯಾಸವನ್ನು ಗುರುತಿಸಬಹುದಾಗಿದೆ. ಲೇಖಕಿಯರ ಕಥೆಗಳ ಪ್ರಧಾನ ಕಾಳಜಿ ಸಾಮಾನ್ಯವಾಗಿ ಕೆಳವರ್ಗದ ಹೆಣ್ಣು ಮಕ್ಕಳ ಒಳತೋಟಿಗಳು ಮತ್ತು ಅದಕ್ಕೆ ಕಾರಣವಾದ ಸಮಾಜೋಧಾರ್ಮಿಕ ವ್ಯವಸ್ಥೆ. ಈ ದೃಷ್ಟಿಯಿಂದ ಅವರ ಬಹುತೇಕ ಕಥೆಗಳ ಪ್ರಧಾನ ಪಾತ್ರಗಳು ಕೆಳವರ್ಗದ ಸ್ತ್ರೀಯರೇ ಆಗಿರುವುದು ಗಮನಾರ್ಹ ಸಂಗತಿಯಾಗಿದೆ. ಆದ್ದರಿಂದಲೇ ಅವುಗಳನ್ನು ಮುಸ್ಲಿಂ ಹೆಣ್ಣುಗಳ ಅಂತರಂಗದ ಅಧಿಕೃತ ಧ್ವನಿಗಳೆಂದು ಪರಿಗಣಿಸಲಾಗಿದೆ. ಲೇಖಕರ ಕಥೆಗಳಲ್ಲಿ ಪ್ರಧಾನಧಾರೆಯಾಗಿ

ಧಾರ್ಮಿಕ ಮತ್ತು ಸಾಮಾಜಿಕ ವಿಷಮತೆ ಮತ್ತು ಅಸಮಾನತೆಗಳು ಆತ್ಮವಿಮರ್ಶೆಯ ಧಾಟಿಯನ್ನು ಪಡೆದುಕೊಳ್ಳುತ್ತವೆ. ಅವುಗಳ ಅಂಗವಾಗಿಯೇ ಮುಸ್ಲಿಂ ಹೆಣ್ಣುಗಳ ನೋವುಗಳು ಆಸೆ ಆಕಾಂಕ್ಷೆ ಗಳು ದಾಖಲಾಗುತ್ತವೆ.

ನಾವು ಈವರೆಗೆ ಗಮನಿಸಿದ ಮಹಿಳೆಯರನ್ನು ಕುರಿತ ಲೇಖನಗಳು ವಿಶಿಷ್ಟವಾದವು. ಅದರಲ್ಲೂ ಸಾರಾ ಅಬೂಬಕರ್, ಭಾನುಮುಷ್ತಾಕ್, ಬೊಳುವಾರು ಮಹಮ್ಮದ್ ಕುಂಞ, ಪಕೀರ್ ಮಹಮ್ಮದ್ ಕಟ್ಪಾಡಿ ಇವರುಗಳ ಕತೆಗಳಲ್ಲಿ ಮುಸ್ಲಿಂ ವ್ಯವಸ್ಥೆ ಹಿಂದಿನಿಂದಲೂ ಮುಂದುವರೆದು ಬಂದಿರುವುದನ್ನು ಕಂಡಿದ್ದೇವೆ. ಆದರೆ ಇತ್ತೀಚಿನ ದಿನಗಳಲ್ಲಿ ಮುಸ್ಲಿಂ ಮಹಿಳೆಯರು ತೆರೆಮರೆಯಲ್ಲಿದ್ದ ತಮ್ಮ ಘೋಶಾವನ್ನು ಪಕ್ಕಕ್ಕೆ ಸರಿಸಿ ಸ್ವತಂತ್ರವಾಗಿ, ಸಾಮಾಜಿಕವಾಗಿ ಎಲ್ಲಾ ಕ್ಷೇತ್ರಗಳಲ್ಲಿಯೂ ತಮ್ಮನ್ನು ತಾವು ಪಳಗಿಸಿಕೊಳ್ಳುವ ವಿಚಾರವನ್ನು ತೆರೆದಿಟ್ಟಿದ್ದಾರೆ. ಇದರೊಂದಿಗೆ ಹೆಣ್ಣನ್ನು ತನಗೆ ಬೇಕಾದ ಹಾಗೆ ಉಪಯೋಗಿಸಿಕೊಂಡು, ಸಾಕಾದಾಗ ಕಸದಂತೆ ನೂಕುತ್ತಿದ್ದ ಕಾಲ ಬದಲಾಗುತ್ತಿರುವುದನ್ನು ಕಾಣಬಹುದು. ಮುಸ್ಲಿಂ ಮಹಿಳೆಯರು ಹೆಚ್ಚಾಗಿ ಈಗ ತಮ್ಮ ಗಂಡಂದಿರು ಮಾಡಿಕೊಳ್ಳಬಹುದಾದ ಹಲವು ನಿಖಾಗಳನ್ನು ಪ್ರತಿಭಟಿಸುವ ಹಂತಕ್ಕೆ ಬಂದಿದ್ದೇವೆ. ಉತ್ತಮವಾಗಿ ಬಾಳಲು ತಮಗೂ ಹಕ್ಕಿದೆ ಎಂಬುದನ್ನು ಪ್ರತಿಪಾದಿಸುವ ಉತ್ತಮ ಕತೆಗಳನ್ನು ನೀಡಿರುವುದನ್ನು ಕಾಣುತ್ತಿದ್ದೇವೆ. ಇಲ್ಲಿ ಬಹುಮುಖ್ಯವಾಗಿ ಹೇಳಬೇಕೆಂದಿರುವ ಅಂಶವೆಂದರೆ ಸ್ವಾತಂತ್ರ್ಯಾನಂತರದ ದಿನಗಳಲ್ಲಿಯೂ ಮುಸ್ಲಿಂ ಸಂಪ್ರದಾಯದಲ್ಲಿ ನಡೆದು ಬಂದಿರುವ ಈ ಕುರುಡು ಪದ್ಧತಿಯು ಇದೇ ಸಮಾಜದ ಹೆಣ್ಣುಗಳು ತಮ್ಮ ಹಕ್ಕುಗಳನ್ನು ಪ್ರತಿಪಾದಿಸುವುದರಲ್ಲಿ ಮುಂದೆ ಬಂದಿರುವುದನ್ನು ಸ್ತ್ರೀ ಸಮಾನತೆಯ ದ್ಯೋತಕವಾಗಿ ನೋಡಬಹುದು.

ಅನಂತಮೂರ್ತಿಯವರ ಕತೆಗಳಲ್ಲಿ ಸ್ತ್ರೀಪಾತ್ರಕ್ಕೆ ಹೆಚ್ಚಿನ ಮಹತ್ವ ಕೊಡಲಾಗಿದೆ. ಇಲ್ಲಿ ಸ್ತ್ರೀ ಸಮಾನತೆಯನ್ನು ಕಾಣಬಹುದು. ಪಾಶ್ಚಾತ್ಯ ದೇಶದ ಸ್ತ್ರೀಯರ ಸಂಸ್ಕೃತಿಗೆ ಹೋಲಿಸಿದಾಗ ನಮ್ಮ ಹಿಂದೂ ಸಮಾಜದ ಹೆಣ್ಣು ಮಕ್ಕಳಿಗೆ ಹೆಚ್ಚಿನ ಮಹತ್ವ ಗುರುತಿಸಬಹುದು. ಹೀಗೊಂದು ಉದಾಹರಣೆ ಹೀಗಿದೆ. "ತನ್ನ ಯೌವ್ವನದ ದಿನಗಳಲ್ಲಿ ಶ್ರೀನಿವಾಸನಿಗೆ ತನ್ನ ಅಕ್ಕ ತನ್ನ ಹಿರಿಯರ ಮತಶ್ರದ್ಧೆ, ಮತಿದಾಸ್ಯಗಳ ಬಲಿಪಶುವಾಗಿ ಕಂಡಿರುತ್ತಾಳೆ. ತನ್ಮೂಲಕ ಪರೋಕ್ಷವಾಗಿ ಶ್ರೀನಿವಾಸನಲ್ಲಿ ಕ್ರಾಂತಿಯ ಹಂಬಲದ ಕಿಚ್ಚು ಹತ್ತಿಸಿರುತ್ತಾಳೆ. ಹಿಂದೂ ಸಂಸ್ಕೃತಿಯ ಗೊಡ್ಡು ನಂಬಿಕೆಗಳ ಬಗ್ಗೆ ಅವನಲ್ಲಿ ಸಿಟ್ಟು, ತಿರಸ್ಕಾರ ಹುಟ್ಟಿ ತನ್ನ ಜೀವನ ಕ್ರಮವನ್ನೇ ಬದಲಿಸಿಕೊಳ್ಳುವಲ್ಲಿ ಪ್ರಾಯಶಃ ತನ್ನ ಬಾಲ್ಯದ ಕಟುಅನುಭವಗಳನ್ನು ದಾಟುವ ಪ್ರಯತ್ನವಿದೆ.

ಅಂದರೆ ಶ್ರೀನಿವಾಸನಿಗೆ ತನ್ನ ಅಕ್ಕ ಸಾಂಕೇತಿಕವಾಗಿ ತನ್ನೆಲ್ಲ ಚಿಂತನೆ, ಸಂಕಲ್ಪ ಕ್ರಿಯೆಗಳಿಗೆ ಒಂದು reference point ಆದರೆ, ಹಿಂದೂ ಸಂಸ್ಕೃತಿಯ ದುಷ್ಫಲಗಳಿಗೆ ಕೇವಲ ಒಂದು ಉದಾಹರಣೆಯಂತೆ ಕರುಣಾಜನಕಳಾಗಿ ಮಾತ್ರ ಅಂದು ಕಂಡುಬಂದಿದ್ದ ಸೀತಕ್ಕ ತನ್ನದೇ ಆದ ಜೀವನ ಕ್ರಮವೊಂದನ್ನು ರೂಪಿಸಿಕೊಂಡಿದ್ದಾಳೆ ಎಂದು ಕ್ರಮೇಣ ಶ್ರೀನಿವಾಸನಿಗೆ ತನ್ನ ಮುಂದಿನ ಜೀವನದ ಅನುಭವದಲ್ಲಿ ಅರಿವಿಗೆ ಬರಲಾರಂಭಿಸುತ್ತದೆ.

ಈ ಹೊಸ ಅರಿವಿನಲ್ಲಿ ಅವನಿಗೆ ತನ್ನ ಅಕ್ಕನ ಬದುಕು ಈಗ ಬೇರೆಯಾಗಿ ತೋರುತ್ತದೆ. ಸೀತಕ್ಕನ ಜನ್ಮಾಂತರದ ಕಲ್ಪನೆಗಳು, ಅವಳ ಮತ್ತು ಕೌಲಿಯ ಸಂಬಂಧ, ಪಿಳ್ಳ ಸೀತಕ್ಕರ ಸಂಬಂಧ, ಯಮಧರ್ಮರಾಯ ನನ್ನು ಸೀತಕ್ಕ ಎದುರಿಸಿದ ಪ್ರಸಂಗ ಇವುಗಳನ್ನು ಶ್ರೀನಿವಾಸ ತನ್ನ ಗೆಳೆಯನಿಗೆ ನಿರೂಪಿಸುವ ಕ್ರಮದಲ್ಲಿ ಒಂದು ಬಗೆಯ ನಾಲ್ಕನೆಯ ಆಯಾಮ ಸೂಚಿತವಾಗುತ್ತದೆ. ಸೀತಕ್ಕ ಕೇವಲ ಚರಿತ್ರೆಯ ಕಾಲದಲ್ಲಿ ಬದುಕುವವಳಲ್ಲ ಎನಿಸುತ್ತದೆ. ಅವಳ ದೃಷ್ಟಿಯಿಂದ ಪ್ರಾಯಶಃ ಚರಿತ್ರೆ ಕೂಡ ಪ್ರಕೃತವಲ್ಲ. ಸ್ಮೃತಿ-ವಿಸ್ಮೃತಿಗಳ ಭಾವುಕಲೋಕ ಅದು. ಅಂದರೆ ಆಧುನಿಕರ ಕಲ್ಪನೆಯ ಕಾಲ ದೇಶಗಳಿಂದ ತುಂಬ ಭಿನ್ನವಾದ ಅವಸ್ಥೆ ಅದು. ಸಮಕಾಲೀನರ ನಡುವೆ ಬದುಕಿಯೂ ಅವಳು ಇನ್ನೊಂದು ಆಯಾಮದಲ್ಲಿ ಬದುಕುತ್ತಿದ್ದಾಳೆ.

"ಸಾಂಸ್ಕೃತಿಕವಾಗಿ ಸ್ಥಿತ್ಯಂತರವನ್ನು ಹೊಂದುವ ಸಮಾಜದಲ್ಲಿ ಮೌಲ್ಯ ವಿಘಟನೆಗಳು ಜರುಗುತ್ತಲೇ ಇರುತ್ತವೆ. ಅಂಥ ವ್ಯವಸ್ಥೆಯೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವುದು, ಬಂಧನವನ್ನು ಮೀರಿ ನಡೆಸುವ ಕ್ರಿಯಾಶೀಲ ಪ್ರಯತ್ನಗಳು ಮಹಿಳೆ ತನ್ನ ವ್ಯಕ್ತಿತ್ವ ಗುರುತಿಸಿಕೊಳ್ಳುವಾಗಿನ ಅಡೆತಡೆಗಳು, ಎದುರಿಸುತ್ತಿರುವ ಸಮಸ್ಯೆಗಳು ಇಂಥಾ ಹೋರಾಟದ ಮಹತ್ವದ ಹೆಜ್ಜೆಗಳನ್ನು ನಮ್ಮ ಸಂಸ್ಕೃತಿ ಚಿಂತಕರು ಅರ್ಥಮಾಡಿ ಕೊಳ್ಳಬೇಕಾಗಿದೆ. ಭಾರತೀಯ ಸ್ತ್ರೀ ಸಂಸ್ಕೃತಿಯ ಅಳಿವು ಉಳಿವು ಎಂಬ ಚರ್ಚೆಯಲ್ಲಿ ಮಹಿಳೆಯತ್ತಲೇ ತಿರುಗುವ ಅವರು ಸ್ತ್ರೀ ಪುರುಷ ಸಮಾನತೆಯ ವಿಶ್ಲೇಷಣೆಯತ್ತ ಹೆಚ್ಚಿನ ಗಮನವಿಟ್ಟು ಈ ಹಿನ್ನೆಲೆಯಲ್ಲಿ ಮಹಿಳಾ ಮಾದರಿಗಳನ್ನು ಗ್ರಹಿಸುವುದು ಮುಂದಿನ ದಿನಗಳಲ್ಲಿ ಸಾಧ್ಯವಾಗಬೇಕಾಗಿದೆ."[೨೩]

ಅನಂತಮೂರ್ತಿಯವರ ಅಕ್ಕಯ್ಯ ಕತೆಯನ್ನು ಗಮನಿಸಿದಾಗ ಇದರಲ್ಲಿ ಬರುವ ಶ್ರೀನಿವಾಸನು ತನ್ನ ಅಕ್ಕಯ್ಯನ ಬಗ್ಗೆ ಬಹಳ ಮರುಕ ಪಡುತ್ತಿರುತ್ತಾನೆ. ಆತ ವಿದೇಶಕ್ಕೆ ಹೋಗಿ ವಿದ್ಯಾಭ್ಯಾಸ ಮಾಡಿ ಬಂದು, ಪಂಜಾಬಿನ ವೈದ್ಯೆ ಹುಡುಗಿಯನ್ನು ಮದುವೆಯಾಗುತ್ತಾನೆ. ನಂತರ ಗಂಡ ಹೆಂಡತಿ ವಿದೇಶದಲ್ಲಿ ವಾಸಿಸುತ್ತಾರೆ. ಒಂದು ಸಾರಿ ಸಂಸಾರ ಸಮೇತ ತನ್ನ ಮಗಳೊಡನೆ ಬರುತ್ತಾರೆ. ಬಂದರೂ ಸಹ ತನ್ನ ಹೆಂಡತಿಯನ್ನು ಸಂಪ್ರದಾಯಸ್ಥ ಕುಟುಂಬವಾದ ತಮ್ಮ ಮನೆಗೆ ಹೊರತುಪಡಿಸಿ ಮಗಳ ಸಮೇತ ಬಂದು ತನ್ನ ಅಕ್ಕಯ್ಯನ ಭಾವನೆಗಳಿಗೆ ಸ್ಪಂದಿಸುವುದನ್ನು ಗಮನಿಸಬಹುದು. ಅಕ್ಕಯ್ಯನು ಮದುವೆಯಾದ ಸ್ವಲ್ಪ ದಿನಗಳಲ್ಲೇ ಗಂಡನ ಹಣದ ದಾಹಕ್ಕೆ ಬಲಿಯಾಗಿ ಪ್ರಸ್ತವನ್ನೂ ಮಾಡಿಸಿಕೊಳ್ಳದೆ ತೌರು ಮನೆ ಸೇರಿ, ತನ್ನ ಆಸೆ ಆಕಾಂಕ್ಷೆಗಳನ್ನೆಲ್ಲಾ ಬದಿಗಿಟ್ಟು ತನ್ನ ತಮ್ಮನಾದ ಶ್ರೀನಿವಾಸನ ಏಳಿಗೆಗೆ ಟೊಂಕಕಟ್ಟಿ ಮನೆಯ ಪೂರ್ಣ ಜವಾಬ್ದಾರಿಯನ್ನು ತೆಗೆದುಕೊಂಡಿರುವುದನ್ನು ಕಾಣಬಹುದು. ವಿದ್ಯಾಭ್ಯಾಸದ ಪ್ರಾರಂಭದಲ್ಲಿ ಪೋಲಿ, ತುಂಟ, ಕಳ್ಳ ಹುಡುಗನಾಗಿದ್ದ ತನ್ನ ರಕ್ಷಣೆಗೆ ನಿಂತು ತಾನು ಓದಿ ವಿದ್ಯಾವಂತನಾಗಿ ಉನ್ನತ ಹುದ್ದೆಗೆ ಸೇರಿ ವಿದೇಶದಲ್ಲಿ ನೆಲೆಸಲು ಕಾರಣಳಾದ ಅಕ್ಕಯ್ಯನ ಬಗ್ಗೆ ವಿದೇಶ ತತ್ವಗಳಿಗೆ ಹೊಂದಿಕೊಂಡಿದ್ದರೂ ಸಹ ತನ್ನನ್ನು ಪರಿವರ್ತನೆ ಮಾಡಿದಂತಹ ತನ್ನ ಅಕ್ಕಯ್ಯನ ಬಗ್ಗೆ ಪ್ರತಿಯೊಂದು ಹಂತದಲ್ಲಿಯೂ ತನ್ನ ಗೆಳೆಯನಾದ ಈ ಲೇಖಕರೊಡನೆ ಚರ್ಚೆ ಮಾಡಿರುವುದು ವಿಶೇಷವಾಗಿದೆ. ಎಲ್ಲಕ್ಕಿಂತ ಮುಖ್ಯವಾಗಿ ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಮದುವೆಯಾಗಿಯೂ ಸಹ ತನ್ನ ಆಸೆ ಆಕಾಂಕ್ಷೆಗಳನ್ನು ಕಡೆಗಣಿಸಿ ತನ್ನ ಸ್ಥಾನ ಎಂತಹುದು ಎಂಬುದನ್ನು ಅರಿತು ಇಡೀ ಕುಟುಂಬದ ಆಗು ಹೋಗುಗಳಿಗೆ ಟೊಂಕಕಟ್ಟಿ ನಿಲ್ಲುವ ಘಟನೆಗಳನ್ನು ನಾವು ಕಾಣಬಹುದು.

ಇಂತಹ ಅಕ್ಕನ ಋಣವನ್ನು ತೀರಿಸಲು ಅಕ್ಕನಿಗೆ ಗಂಡ ಬಿಟ್ಟವಳು ಎನ್ನುವ ಪಟ್ಟವನ್ನು ಹೋಗಲಾಡಿಸಲು ಅಕ್ಕಯ್ಯನ ಗಂಡನನ್ನು ಪುನಃ ಒಂದುಗೂಡಿಸಿ ಅವರ ಇಳಿವಯಸ್ಸಿನಲ್ಲಿ ಪ್ರಸ್ತ ಮಾಡುವ ವರ್ಣನೆ ತುಂಬಾ ಮನ ಕಲಕುವಂತಾಗಿದೆ. ಈ ಕತೆಯಲ್ಲಿ ಮುಖ್ಯವಾಗಿ ೩ ಅಂಶಗಳನ್ನು ನಾವು ಗಮನಿಸಬಹುದು.

ಮೊದಲನೆಯದಾಗಿ ಅಕ್ಕಯ್ಯ ತನ್ನ ಹಕ್ಕುಗಳನ್ನು ಪ್ರತಿಪಾದಿಸದೆ ಇರುವುದು, ಎರಡನೆಯದಾಗಿ ಅಂತರ್ಜಾತಿಯ ವಿವಾಹ ಕಂಡುಬರುವುದು. ವಿದೇಶದಲ್ಲಿ ಹುಟ್ಟಿ ಬೆಳೆದ ಶ್ರೀನಿವಾಸನ ಮಗಳ ಚಿತ್ರಣ. ಈ ಮೂರು ಸ್ತ್ರೀ ಪಾತ್ರಗಳಲ್ಲಿ ವಿವಿಧ ರೀತಿಯ ಸಮಾನತೆಗಳನ್ನು ಗುರುತಿಸಬಹುದು.

ನಮ್ಮ ಗ್ರಾಮೀಣ ಬದುಕಿನ ವಿವಿಧ ಸ್ತರಗಳನ್ನು ಮನ ಮುಟ್ಟುವಂತೆ ಹೇಳುವ ಈ ಜನಪದ ಸಾಹಿತ್ಯ ಜನ್ಮಪಡೆದದ್ದು ತನ್ನ ಸಂತೋಷಕ್ಕಾಗಿ. ತನ್ನಂತೆ ಇರುವ ಇತರರ ಸಂತೋಷಕ್ಕಾಗಿ, ದಿನದ ನೋವು ನಲಿವು, ಹಬ್ಬ ಹರಿದಿನಗಳು ವಿನೋದದ ಸಂದರ್ಭಗಳು, ನಂಬಿಕೆ ಆಚರಣೆಗಳು ಮತ್ತು ಬದುಕಿನ ವಿವಿಧ ಘಟ್ಟಗಳ ದಟ್ಟ ಪರಿಚಯ ಮಾಡಿದೆ. ನಮ್ಮ ಜನಪದ ಸಾಹಿತ್ಯ ಹೆಣ್ಣಿನ ನೋವು, ನಲಿವುಗಳಿಗೆ ಸ್ಪಂದಿಸಿದ ಮಟ್ಟಕ್ಕೆ ಯಾವ ಶಿಷ್ಟ ಸಾಹಿತ್ಯವೂ ತಲುಪಲಿಲ್ಲವೆನ್ನುವುದೇ ವಿಷಾದ ನೀಯವಾದದ್ದು. ಅವಳ ನೋವು ಹೆಪ್ಪುಗಟ್ಟಿದ ಭಾವನೆಗಳು ನೋವಿನಲ್ಲಿಯ ನಲಿವು, ಅಪರೂಪದ ವಾತ್ಸಲ್ಯ, ಹಿತನುಡಿ ವ್ಯವಸ್ಥೆಗೆ ಅನಿವಾರ್ಯವಾಗಿ ಹೊಂದಿಕೊಂಡ ಅವಳ ಸ್ವಭಾವ ಇವುಗಳನ್ನು ನಾವು ಜನಪದ ಸಾಹಿತ್ಯದಲ್ಲಿ ಅವಳದೇ ಆದ ಭಾವಗಳಲ್ಲಿ ಕಾಣಲು ಸಾಧ್ಯ.

ಕಾಳೇಗೌಡ ನಾಗವಾರರು ಹೆಣ್ಣಿನ ಬಗ್ಗೆ ವಿವಿಧ ಆಕಾರಗಳಲ್ಲಿ ಬರೆದಿರುವುದನ್ನು ಕಾಣಬಹುದು. ಅದರಲ್ಲೂ ಕೂಡಿಕೆ ಕತೆಯಲ್ಲಿ ಈ ನಾಯಕಿ ಗ್ರಾಮೀಣ ಹೆಣ್ಣು ಮಗಳು ಅತ್ತೆ ಮನೆಯಲ್ಲಿ ಕೊಡುವ ಚಿತ್ರಹಿಂಸೆಯನ್ನು ತಡೆಯಲಾರದೆ ತೌರಿಗೆ ಹಿಂತಿರುಗಿ ಇನ್ನೊಬ್ಬ ಪುರುಷನೊಡನೆ ತನ್ನ ಬದುಕನ್ನು ಕಂಡುಕೊಳ್ಳುವುದಕ್ಕೆ ಹೋರಾಟ ನಡೆಯುವುದನ್ನು ಈ ಕತೆಯಲ್ಲಿ ಕಾಣಬಹುದು. ಇಲ್ಲಿ ಸ್ತ್ರೀ ತನ್ನ ಇಷ್ಟಬಂದ ಹಾಗೆ ಜೀವನವನ್ನು ರೂಪಿಸಿಕೊಳ್ಳುವ ಚಿತ್ರಣವನ್ನು ಕಾಣಬಹುದು.

ನಮ್ಮ "ಬದುಕಿನ ಅನುಭವಗಳಿಗೆ ಅತ್ಯಂತ ನಿಷ್ಠುರವಾಗಿ ತೆರೆದುಕೊಳ್ಳುವ ಲೇಖಕರಲ್ಲಿ ಲಂಕೇಶ್ ಮೊದಲಿಗರು. ಆವರಣವು ಕಲ್ಪಿಸಿಕೊಡುವ ಸೌಲಭ್ಯ ಮತ್ತು ವಿರೋಧಿಸುವ ಸಾಧ್ಯತೆಗಳ ನಡುವೆ ಇರುವ ಸೂಕ್ಷ್ಮವಾದ ಅಂತರವನ್ನು ಅವರು ಧೈರ್ಯದಿಂದ ದುಡಿಸಿಕೊಳ್ಳುತ್ತಾರೆ. ನಿಷ್ಪ್ರಯೋಜಕರಂತೆ ಕಾಣುವ ವ್ಯಕ್ತಿಗಳಲ್ಲಿ ಹುದುಗಿರುವ ಪ್ರೀತಿಯನ್ನು ಇನ್ನಿಲ್ಲ ಅನ್ನುವ ಹಾಗೆ ಸೆರೆ ಹಿಡಿಯುತ್ತಾರೆ. ಸಾವಂತ್ರಿ, ರಂಗವ್ವ, ದೇವೀರಿ ಮುಂತಾದ ಸ್ತ್ರೀ ಪಾತ್ರಗಳನ್ನು ಲಂಕೇಶರು ಮಾತ್ರ ಸೃಷ್ಟಿಸಲು ಸಾಧ್ಯ. ಸಮಕಾಲೀನರು ಹೆಣ್ಣನ್ನು ಪುರುಷನಿಗೆ ಪೂರಕವಾಗಿ ಮಾತ್ರ ಬಳಸಿಕೊಳ್ಳುತ್ತಿದ್ದ ಸಂದರ್ಭದಲ್ಲಿ ಇವರು ಅವಳನ್ನು ಸ್ವತಂತ್ರ ಘಟಕವಾಗಿ ಧಾರಣೆಮಾಡಿಸಿದ್ದು ಗಮನಾರ್ಹ. ಶಿಕ್ಷಣವಿಲ್ಲದ ಆಕೆ ಪುರುಷನ ದೌರ್ಜನ್ಯಗಳನ್ನು ಅರಿತು ಅದಕ್ಕೆ ಬದಲಿ ವ್ಯೂಹ ರಚಿಸುವ ಅಥವಾ ಅಂಥ ಗಂಡಿನ ಆಸಕ್ತಿಯನ್ನು ತಿರಸ್ಕರಿಸಿ ತನ್ನ ಬದುಕನ್ನು ಕಟ್ಟಿಕೊಳ್ಳುವ ಸವಾಲಿನಲ್ಲಿ ಮುನ್ನಡೆಯುತ್ತಾಳೆ.

'ಮುಸ್ಸಂಜೆಯ ಕಥಾಪ್ರಸಂಗ'ದ ರಂಗವ್ವ ವಿಧವೆಯಾಗಿದ್ದೂ ಪರಗಂಡಿನೊಡನೆ ಮಲಗುವುದು ಯಾಕೆ. ಅವಳ ಬದುಕಿನ ಕೇಂದ್ರವಾಗುವುದಿಲ್ಲವೆಂದರೆ, ಅವಳ ಬದುಕಿದ ತಲ್ಲಣದ ಸಂದರ್ಭದಲ್ಲಿ ಸ್ವತಂತ್ರವಾಗಿ ಆಲೋಚಿಸುತ್ತಾಳೆ ಎಂಬುದೇ ಆಗಿದೆ. ಹಾಗೆಯೇ 'ಅಕ್ಕ'ದ ದೇವೀರಿ ವೇಶ್ಯೆಯಂತೆ ಬದುಕುತ್ತಿದ್ದರೂ ಬದುಕು ನಿಷ್ಠುರ ಸ್ಥಿತಿಯಲ್ಲೇ ಹೆಚ್ಚು ಸ್ಪಂದಿಸುತ್ತದೆ ಎಂಬ ಕಾರಣಕ್ಕಾಗಿ ಸ್ವೀಕಾರ ಯೋಗ್ಯಳಾಗುತ್ತಾಳೆ. ಜೀವನದ ಬಗೆಗೆ ಲಂಕೇಶರು ತಾಳುವ ಈ ಬಗೆಯ ಪೂರ್ಣ ಮಾನವೀಕೃತ ಗ್ರಹಿಕೆಗಳು ಎದುರಾಗುವ ಎಲ್ಲಾ ಸ್ಥಿತಿಗಳನ್ನು ಅದರ ಮೂಲಾರ್ಥದಲ್ಲಿ ಗೆದ್ದುಕೊಂಡು ಬಿಡುತ್ತದೆ. ಆದ್ದರಿಂದ ಅವರ ಬರವಣಿಗೆ ಜೀವನ ಪ್ರೀತಿಯನ್ನೇ ಉಕ್ಕಿಸುವ ಮದುವಾಗುತ್ತದೆ."[೫೬]

ಹೀಗೆ ಸ್ತ್ರೀಸಮಾನತೆ ಎಂಬುದಕ್ಕೆ ನಾವು ಖಚಿತವಾಗಿ ಸ್ತ್ರೀಗೆ ಸಮಾನತೆ ಇದೆ ಇಲ್ಲ ಎಂಬ ನಿರ್ಧಾರಕ್ಕೆ ಬರಲು ಸಾಧ್ಯವಿಲ್ಲ. ಹೆಣ್ಣು ಬೆಳೆಯುವ ವಾತಾವರಣ, ಅವಳು ಬದುಕುವ ರೀತಿ ಮತ್ತು ಅನುಭವಗಳಿಗೆ ಸಂಬಂಧಿಸಿದ್ದು. ಕೆಲವೊಂದು ಕಡೆಗಳಲ್ಲಿ ಹೆಣ್ಣಿಗೆ ಸಮಾನತೆ ಇದೆ. ಕೆಲವೊಂದು ಕ್ಷೇತ್ರಗಳಲ್ಲಿ ಸಮಾನತೆ ಇಲ್ಲವೆಂದು ಹೇಳಬಹುದು. ಅಂತೆಯೇ ಅನಿವಾರ್ಯವಾಗಿ ಸ್ತ್ರೀವಾದಿಗಳು ಚಳುವಳಿಗೆ ಇಳಿಯಲೇ ಬೇಕಾಯಿತು. ಇಲ್ಲಿ ಗಂಡು ಮನಸ್ಸುಗಳು ಕೂಡ ಬದಲಾಗುವುದು ಅವಶ್ಯವಿದೆ. ಹೆಣ್ಣನ್ನು ಗುಲಾಮಳೆಂದು, ಭೋಗದ ವಸ್ತುವೆಂದು ತಿಳಿಯದೆ ಸಂಗಾತಿಯೆಂದು ತಿಳಿಯಬೇಕು. ತಮ್ಮ ಎಲ್ಲಾ ಅಹಂ ಬಿಟ್ಟು ವಚನಕಾರರಂತೆ, ವಿಶಾಲ, ವೈಚಾರಿಕ ದೃಷ್ಟಿಯನ್ನು ಬೆಳೆಸಿಕೊಳ್ಳಬೇಕು ಅಂದಾಗ ಮಾತ್ರ ಸ್ತ್ರೀವಿಮೋಚನೆಗೆ ಹೊಸ ಅರ್ಥ ಬರುತ್ತದೆ. ಪುರುಷನ ದೃಷ್ಟಿಕೋನದಿಂದಲೇ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವ ಅಪಾಯಕಾರಿ ನಿಲುವನ್ನು ತಾಳಬಾರದು.

ಹೆಣ್ಣು ಎಲ್ಲಾ ಕ್ಷೇತ್ರಗಳಲ್ಲೂ ವೈಚಾರಿಕವಾಗಿ ಕೆಲಸಮಾಡಬೇಕಾಗಿದೆ. ಕೈಗಾರಿಕೆ, ತಂತ್ರಜ್ಞಾನ, ವಿಜ್ಞಾನ ಮುಂತಾದವುಗಳಲ್ಲಿ ವ್ಯಾಪಕವಾಗಿ ಬೆರೆಯಬೇಕಾಗಿದೆ. ಮಹಿಳಾ ಸಾಹಿತಿಗಳು ಪುರುಷನ ಸಾಹಿತ್ಯವನ್ನು ದೃಷ್ಟಿಯಲ್ಲಿಟ್ಟುಕೊಂಡು ಅವನಿಗನುಗುಣವಾಗಿ ಬರೆದು ಮತ್ತೆ ಅಪಾಯದಲ್ಲಿ ಸಿಲುಕುವ ಪ್ರಕ್ರಿಯೆಗೆ ಚಿಂತನೆಗೆ ಒಂದು ಮಹತ್ವದ ತಿರುವು ಬರುವುದು ಆಳುವ ಪ್ರಭುತ್ವ ಯಾವಾಗಲೂ ಹಿಂದಿನದನ್ನು ವೈಭವೀಕರಿಸಿ ಇಂದಿನ ಸ್ತ್ರೀಯರು ಶ್ರೇಷ್ಠರೆಂದು ಹೇಳುತ್ತ ಊಳಿಗಮಾನ್ಯ ಸಂಸ್ಕೃತಿಯತ್ತ ಒಯ್ಯುತ್ತಿದೆ.

ನಮ್ಮ "ಜನಪದ ಕತೆಗಳಲ್ಲಿ ಹೆಣ್ಣನ್ನು "ವಿಧೇಯತೆ ಸಚ್ಚಾರಿತ್ರ್ಯ ಸದ್ಗುಣಗಳ ಪ್ರತೀಕವಾಗಿ ಚಿತ್ರಿಸಿದಂತೆಯೇ ಅಸೂಯೆ ಕಾರ್ಯ ಜಿಪುಣತನ ಮೊದಲಾದ ದುರ್ಗುಣಗಳ ಪ್ರತೀಕವಾಗಿಯೂ ಚಿತ್ರಿಸಲಾಗಿದೆ. ಸಾಮಾನ್ಯವಾಗಿ ಹೆಣ್ಣಿಗೆ ಒದಗುವ ಕಷ್ಟಗಳಿಗೆಲ್ಲ ಮತ್ತೊಬ್ಬ ಹೆಣ್ಣೇ ಕಾರಣಳಾಗಿರುತ್ತಾಳೆ. ಒಂದೇ ಕುಟುಂಬಕ್ಕೆ ಸೇರಿದ ಇಬ್ಬರು ಹೆಣ್ಣುಗಳಲ್ಲಿ ಒಬ್ಬ ಹೆಣ್ಣು ಇನ್ನೊಬ್ಬ ಹೆಣ್ಣಿನ ಸಂಕಷ್ಟಕ್ಕೆ ಕಾರಣವಾಗುವ ದುಷ್ಟ ಪಾತ್ರವಾಗಿ ಚಿತ್ರಿತವಾಗಿರುವುದು ಕುತೂಹಲಕರ.

ಕಥೆಗಳಲ್ಲಿ ಒಂದು ಕಡೆ ಹೆಣ್ಣುಗಳು ಎಂತಹ ಘೋರ ಸಂಕಟದ ಸಂದರ್ಭದಲ್ಲಿಯೂ ತಮ್ಮ ಸದ್ಗುಣಗಳನ್ನು ಬಿಟ್ಟುಕೊಡದ ಪಾತ್ರಗಳಾಗಿ ಕಂಡರೆ ಇನ್ನೊಂದು ಕಡೆ ಊಹಿಸುವುದಕ್ಕೂ ಅಸಾಧ್ಯವಾದ

ಕ್ರೂರಿಗಳಾಗಿ ಕಂಡುಬರುತ್ತಿರುವುದು, ಸ್ವಲ್ಪ ವಿವರವಾಗಿ ಪರಿಶೀಲಿಸಿ ನೋಡಬೇಕಾದ ಸಂಗತಿಯಾಗಿದೆ. ವಿಶೇಷವಾಗಿ ಮಲತಾಯಿ, ಅತ್ತೆ, ಹಾಗೂ ಹಿರಿಯ ಸವತಿಯರಲ್ಲಿ ಮೈನಡುಗಿಸುವಷ್ಟು ಕ್ರೌರ್ಯ ಕಂಡುಬರುತ್ತದೆ. ಆದರೆ ಈ ಎರಡೂ ವೈರುಧ್ಯಗಳು ಸಹ ಹೆಣ್ಣಿನಲ್ಲಿರಬೇಕಾದ ಸದ್ಗುಣಗಳನ್ನೇ ಅಂತಿಮವಾಗಿ ಪ್ರತಿಪಾದಿಸುತ್ತವೆ. ಸ್ತ್ರೀಯರ ಗುಣ, ಕರುಣೆ, ವಾತ್ಸಲ್ಯ ಎನ್ನುವುದು ಒಂದೇ. ಕ್ರೌರ್ಯ ಹಿಂಸೆ, ವಂಚನೆ ಇವು ಸ್ತ್ರೀಯರ ಗುಣಗಳಲ್ಲ. ಒಂದು ವೇಳೆ ಹಾಗಿದ್ದರೆ ಅವರಿಗೆ ಎಂದೂ ಈ ಸಮಾಜದಲ್ಲಿ ಸ್ಥಾನವಿಲ್ಲ. ತಮ್ಮ ತಪ್ಪಿಗೆ ಅವರು ಶಿಕ್ಷೆ ಅನುಭವಿಸಲೇಬೇಕಾಗುತ್ತದೆ ಎಂದು ಹೇಳುವುದೂ ಒಂದೇ. ಹೀಗೆ ವೈರುಧ್ಯಗಳ ಮೂಲಕವೇ ಸ್ತ್ರೀಯರಲ್ಲಿರಬೇಕಾದ ಆದರ್ಶ ಗುಣಗಳನ್ನು ನಮ್ಮ ಜನಪದ ಕಥೆಗಳು ಪ್ರತಿಪಾದಿಸುತ್ತವೆ."[೫೭]

ಸ್ತ್ರೀ ಸಮಾನತೆಯ ಬಗ್ಗೆ ಅಧ್ಯಯನ ಮಾಡಿದಾಗ ಲಂಕೇಶರ ಕತೆಗಳು ತುಂಬಾ ಸಹಕಾರಿಯಾಗಿರುತ್ತವೆ. ಲಂಕೇಶರು ಸ್ತ್ರೀಯರ ಆಗು ಹೋಗುಗಳ ರೀತಿಯನ್ನು ಗಮನಿಸಿದಾಗ ಸ್ತ್ರೀಯರಲ್ಲಿ ಕಾಣುವ ಅಸಹಾಯಕತೆ, ಆಸಕ್ತಿ, ಪ್ರೀತಿ, ಪ್ರೇಮ, ಹೋರಾಟ ಮುಂತಾದ ಸ್ತ್ರೀ ಸಮಾನತೆಯನ್ನು ಅಧಿಕವಾಗಿ ಕಾಣಬಹುದು. ಉದಾ ಮುಸ್ಸಂಜೆಯ ಕಥಾ ಪ್ರಸಂಗದ ರಂಗವ್ವ ವಿಧವೆಯಾಗಿದ್ದರೂ ಸಹ ತನ್ನ ಆಸೆ ಆಕಾಂಕ್ಷೆಗಳನ್ನು ಪರ ಪುರುಷನೊಂದಿಗೆ ಹಂಚಿಕೊಳ್ಳುವ ರೀತಿ, ಅದರಂತೆಯೇ ಅಕ್ಕ ಕತೆಯ ದೇವಿರಿ ವೇಶ್ಯೆಯಂತೆ ಜೀವನ ನಡೆಸುತ್ತಿದ್ದರೂ ಅವಳ ಬದುಕು ಸಂದಿಗ್ಧ ಸ್ಥಿತಿಯಲ್ಲೇ ಇರುತ್ತದೆ. ಇಂತಹ ಉದಾಹರಣೆಗಳಲ್ಲಿ ಮಹಿಳೆಯು ತನ್ನ ಸಮಾನತೆಗಾಗಿ ತನಗೆ ಬೇಕಾದ ರೀತಿಯಲ್ಲಿ ಬೇಕಾದ ದಾರಿಯಲ್ಲಿ ನಡೆಯುವ ಸರ್ವತಂತ್ರ ಸ್ವತಂತ್ರವನ್ನು ಹೇಗೆ ಪಡೆಯಬಹುದು ಹಾಗೂ ಹೇಗೆ ಪಡೆಯುತ್ತಿದ್ದಾರೆ ಎಂಬುದನ್ನು ಉತ್ತಮವಾಗಿ ಬಿಡಿಸಿ ಹೇಳುತ್ತಾರೆ. ಬಹುಮುಖ್ಯವಾಗಿ ಇವರ ಕತೆಗಳಲ್ಲಿ ಸ್ತ್ರೀಯು ಪ್ರತಿಯೊಂದು ರಂಗದಲ್ಲಿಯೂ ತನ್ನದೇ ಆದ ವಿಶಿಷ್ಟ ಛಾಪು ಮೂಡಿಸಿರುವುದನ್ನು ಕಾಣಬಹುದಾಗಿದೆ.

ನಮ್ಮ "ಜನಪದ ಸಾಹಿತ್ಯ ಹೆಣ್ಣನ್ನು ಕುರಿತ ಪರಂಪರಾಗತ ನಿಲುವನ್ನು ನೇರವಾಗಿಯೋ ಪರೋಕ್ಷ ವಾಗಿಯೋ ಪ್ರತಿಪಾದಿಸಿಕೊಂಡು ಬರುವಲ್ಲಿ ಮಹತ್ತರ ಪಾತ್ರವಹಿಸುತ್ತದೆ. ಕೌಟುಂಬಿಕ ಮೌಲ್ಯಗಳಿರಲಿ, ಸಾಮಾಜಿಕ, ಧಾರ್ಮಿಕ ಮೌಲ್ಯಗಳಿರಲಿ ಈ ಮೌಲ್ಯಗಳ ಪಾಲನೆಯೇ ಸ್ತ್ರೀಯರ ಮುಖ್ಯ ಧ್ಯೇಯ. ಇದಕ್ಕೆ ಹೊರತಾದ ಪಾತ್ರಗಳು ಜನಪದ ಸಾಹಿತ್ಯದಲ್ಲಿ ಸಿಕ್ಕುವುದಿಲ್ಲ. ಜನಪದ ಸಾಹಿತ್ಯದಲ್ಲಿ ಹೆಣ್ಣು ಸಾಂಪ್ರದಾಯಿಕ ಚೌಕಟ್ಟಿನ ಮಿತಿಯಲ್ಲಿರುವ ಮತ್ತು ಮಿತಿಯಿಂದುಂಟಾಗುವ ಎಲ್ಲ ಕಷ್ಟಗಳನ್ನು ಅನುಭವಿಸುವ ಮತ್ತು ಹಾಗೆ ಅನುಭವಿಸಿದರೂ ಕೂಡ ಅದನ್ನು ಆದರ್ಶಗಳ ಭ್ರಮೆಯಲ್ಲಿ ಮರೆಯುವ ವ್ಯಕ್ತಿಯಾಗಿ ಕಾಣುತ್ತಾಳೆ. ಒಟ್ಟಿನಲ್ಲಿ ಜನಪದ ಹೆಣ್ಣು ಕೌಟುಂಬಿಕ ಸಾಮಾಜಿಕ ಹಾಗೂ ಧಾರ್ಮಿಕವಾದ ಕಟ್ಟುಪಾಡುಗಳ ಮಿತಿಯಲ್ಲಿ ಜೀವಿಸಬೇಕಾದಂಥವಳು."[೫೮] ಹೀಗೆ ಜನಪದ ಸಾಹಿತ್ಯದಲ್ಲಿ ಸ್ತ್ರೀಸಮಾನತೆಯು ಸಹಜವಾಗಿರುವುದನ್ನು ಕಾಣಬಹುದು.

ಈ ಮೇಲಿನ ವಿಮರ್ಶಕರ ವಿಚಾರಧಾರೆಗಳನ್ನು ಗಮನಿಸಿದಾಗ ಸ್ತ್ರೀಯರಿಗೆ ಪ್ರತಿಯೊಂದು ಹಂತದಲ್ಲಿಯೂ ಸ್ತ್ರೀಸಮಾನತೆ ಇರಬಹುದು ಅಥವಾ ಇಲ್ಲದೆ ಇರಬಹುದು. ಇರುವ ವಿಚಾರವನ್ನು ಕೆಲವ ಕಡೆ ಒಪ್ಪಿಕೊಳ್ಳುತ್ತೇವೆ. ಹಾಗೂ ಇಲ್ಲದೆ ಇರುವ ವಿಚಾರವನ್ನು ಸಹ ಒಪ್ಪಿಕೊಳ್ಳಲೇಬೇಕಾಗಿದೆ. ಇಲ್ಲದೆ ಇರುವ

ಸಂದರ್ಭದಲ್ಲಿ ಪ್ರೋತ್ಸಾಹ ನೀಡುವುದು ಇಂದಿನ ಸಮಾಜದ ನಮ್ಮೆಲ್ಲರ ಕರ್ತವ್ಯ ಎಂಬುದನ್ನು ಈ ವಿಮರ್ಶಾಕಾರರ ಲೇಖನದಲ್ಲಿ ಕಾಣಬಹುದು.

ಉದಾ. ಇಂದಿನ ಸಮಾಜದಲ್ಲಿ ಶಿಕ್ಷಣಕ್ಕೆ ಪ್ರತಿಯೊಂದು ಹಂತದಲ್ಲಿಯೂ ಸ್ತ್ರೀಯರಿಗೆ ಮೊದಲ ಆದ್ಯತೆ ನೀಡುತ್ತಿರುವುದು ಕಂಡುಬರುತ್ತದೆ. ಶಿಕ್ಷಣ, ಕೈಗಾರಿಕೆ, ವಿಜ್ಞಾನ, ಸಾಹಿತ್ಯ ಈ ಕ್ಷೇತ್ರಗಳಲ್ಲಿ ಮಹಿಳೆಯರಲ್ಲಿ ಸಮಾನತೆಯನ್ನು ಕಾಣಬಹುದಾಗಿದೆ. ಮೇಲಿನ ಅಭಿಪ್ರಾಯದಲ್ಲಿ ಚಿಂತಿಸಬೇಕಾದ ವಿಷಯ ಈ ರೀತಿ ಇದೆ. ಸಮಾನತೆ ಹೊಂದಿರಬೇಕಾದ ಹೆಣ್ಣೇ ಅತ್ತೆಯಾಗಿ, ನಾದಿನಿಯಾಗಿ ಮತ್ತೊಂದು ಹೆಣ್ಣಿಗೆ ಅಸಮಾನತೆಯನ್ನು ಉಂಟುಮಾಡುವ ಅನೇಕ ಉದಾಹರಣೆಗಳು ನಮ್ಮ ಕಣ್ಣ ಮುಂದಿವೆ. ಅಸೂಯೆಪಡುವ ಹೆಣ್ಣು ಮಕ್ಕಳನ್ನು ಕಾಣಬಹುದು. ಮಲತಾಯಿಯಾಗಿ ಕ್ರೌರ್ಯ ಹಿಂಸೆ ನೀಡುವುದನ್ನು ಕಾಣಬಹುದು. ಚಿಕ್ಕ ವಯಸ್ಸಿನಲ್ಲೆ ಮಕ್ಕಳ ಮೇಲೆ ಗಂಡು, ಹೆಣ್ಣು ಎಂಬ ಭೇದಭಾವವನ್ನು ಅಸಮಾನತೆಯನ್ನು ಬೆಳೆಸುವುದು ಕಂಡುಬರುತ್ತದೆ. ನೆರೆಹೊರೆಯವರ ಬಗ್ಗೆ ಇದ್ದಂತಹ ಕೀಳುಭಾವನೆ ಅಸೂಯೆ, ಕ್ರೌರ್ಯ ಮುಂತಾದ ಭಾವನೆಗಳಲ್ಲಿ ಬದಲಾವಣೆಯಾಗಿ ತಮ್ಮತಮ್ಮಲ್ಲೇ ಸಮಾನತೆಯನ್ನು ಕಾಣಬೇಕೆಂಬ ಪ್ರಯತ್ನಗಳನ್ನು ಲೇಖಕರ ಜನಪದ ಸಾಹಿತ್ಯದಲ್ಲಿ ಕಾಣುತ್ತೇವೆ ಎಂಬ ವಿಷಯಕ್ಕೆ ಲೇಖಕರು ಹೆಚ್ಚು ಸ್ಪಂದಿಸಿರುವುದನ್ನು ಕಾಣಬಹುದು.

"ಇಂದಿನ ಗ್ರಾಮೀಣ ಸ್ತ್ರೀ ತನ್ನ ಸಾಮಾಜಿಕ, ಆರ್ಥಿಕ, ಧಾರ್ಮಿಕ ಮತ್ತು ರಾಜಕೀಯ ಸ್ಥಾನಮಾನಗಳನ್ನು ಕಳೆದುಕೊಂಡು ಪುರುಷನ ನೆರಳಾಗಿ ತನ್ನ ಜೀವನವನ್ನು ಸಾಗಿಸುತ್ತಿದ್ದಾಳೆ. ಪುರುಷನ ಆಶ್ರಯವಿಲ್ಲದೆ ತನಗೆ ಬದುಕಲು ಸಾಧ್ಯವೇ ಇಲ್ಲ ಎಂಬ ಭಾವನೆ ಅವಳಲ್ಲಿ ಆಳವಾಗಿ ಬೇರೂರಿ ಬಿಟ್ಟಿದೆ. ಆದ್ದರಿಂದ ಅವಳು ತನ್ನ ಅಸ್ತಿತ್ವವನ್ನು, ಸ್ಥಾನಮಾನವನ್ನು ಶೂನ್ಯಕ್ಕೆ ಹೋಲಿಸಿಕೊಂಡಿದ್ದಾಳೆ. ಒಬ್ಬ ಮಾನವಳಾಗಿ ಅವಳು ಅನುಭವಿಸಬೇಕಾದ ಎಲ್ಲಾ ಹಕ್ಕು, ಸ್ಥಾನಮಾನಗಳನ್ನು ತ್ಯಾಗ ಮಾಡಿದ್ದಾಳೆ. ವಿವಾಹವೇ ಅವಳ ಜೀವನದ ಅಂತಿಮ ಗುರಿ. ವಿದ್ಯೆಯಿಂದ ವಂಚಿತಳಾಗಿರುವ ಗ್ರಾಮೀಣ ಸ್ತ್ರೀ ತನ್ನ ಸ್ವಂತ ನಿರ್ಧಾರಗಳನ್ನು ತೆಗೆದುಕೊಳ್ಳುವಲ್ಲಿ ಅಸಮರ್ಥಳಾಗಿದ್ದಾಳೆ. ಯಾವುದೇ ಕೆಲಸ ಮಾಡಬೇಕಾದರೂ ಗಂಡನ ಅಥವಾ ಮನೆಯ ಹಿರಿಯ ಪುರುಷನ ಅಪ್ಪಣೆ ಇಲ್ಲದೆ ಮಾಡುವುದೇ ಇಲ್ಲ. ಗ್ರಾಮೀಣ ಸಮಾಜದಲ್ಲಿ ಸ್ತ್ರೀಯ ಆರ್ಥಿಕ ಸ್ಥಾನಮಾನ ಶೂನ್ಯಕ್ಕೆ ಸಮ."[೫೯]

ಲೇಖನದಲ್ಲಿ ವ್ಯಕ್ತವಾಗಿರುವ ಅಭಿಪ್ರಾಯದಂತೆ ಇಂದಿನ ಗ್ರಾಮೀಣ ಸ್ತ್ರೀಯರು ಪುರುಷನ ಹೊರತು ತಮ್ಮ ಜೀವನವನ್ನು ಜೀವಿಸಲು ಸಾಧ್ಯವೇ ಇಲ್ಲ ಎಂದಿದ್ದಾರೆ. ಸ್ತ್ರೀಯರ ಸ್ಥಾನಮಾನವನ್ನು ಇಲ್ಲಿ ಶೂನ್ಯಕ್ಕೆ ಹೋಲಿಸಲಾಗಿದೆ. ಅವಳು ಅನುಭವಿಸಬೇಕಾದ ಎಲ್ಲಾ ಹಕ್ಕು ಸ್ಥಾನಮಾನಗಳನ್ನು ತ್ಯಾಗ ಮಾಡುತ್ತಾಳೆ ಎಂಬುದಾಗಿ ಹೇಳಲಾಗಿದೆ. ವಿವಾಹವೇ ಅವಳ ಜೀವನದ ಅಂತಿಮಗುರಿ ವಿದ್ಯೆಯಿಂದ ವಂಚಿತಳಾಗಿರುವ ಗ್ರಾಮೀಣ ಸ್ತ್ರೀ ತನ್ನ ಸ್ವಂತ ನಿರ್ಧಾರಗಳನ್ನು ತೆಗೆದುಕೊಳ್ಳುವಲ್ಲಿ ಅಸಮರ್ಥಳಾಗಿದ್ದಾಳೆ ಎಂಬುದು ಇವರ ವಾದ. ಈ ಮೇಲಿನ ಎಲ್ಲಾ ವಿಷಯಗಳು ಒಪ್ಪತಕ್ಕ ವಿಚಾರವೇ ಆದರೂ ಹೆಣ್ಣಿನ ಪ್ರಯತ್ನ, ಆಸಕ್ತಿ ಮುಖ್ಯವೆನ್ನಬಹುದಾಗಿದೆ. ಮಾನವನ ಜೀವನದಲ್ಲಿ ವಿವಾಹ ಬಹುಮುಖ್ಯವಾದ ಘಟ್ಟ. ಇದನ್ನು ವಿರೋದಿಸುವುದಕ್ಕೆ ಕಾರಣವಿಲ್ಲ. ಮದುವೆಯೇ ಅವಳ ಅಂತಿಮ ಗುರಿಯಲ್ಲ. ನಾವಾಗಿಯೇ ಮಹಿಳೆಯ

ಜೀವನ ಶೂನ್ಯಕ್ಕೆ ಸಮ ಎಂದುಕೊಳ್ಳುವುದರಲ್ಲಿ ಯಾವುದೇ ಅರ್ಥವಿಲ್ಲ. ಮಹಿಳೆಯು ಪ್ರತಿಯೊಂದು ಹಂತದಲ್ಲಿಯೂ ತನ್ನ ಸ್ಥಾನಮಾನಗಳನ್ನು ತನ್ನ ಸಮಾನತೆಯನ್ನು ಉಳಿಸಿ, ಗಳಿಸಿ ಬೆಳೆಸಿಕೊಳ್ಳುವ ಪ್ರಯತ್ನ ಮಾಡುತ್ತಿರುವುದನ್ನು ಪ್ರತಿಯೊಂದು ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಕಾಣುತ್ತೇವೆ.

ನಮ್ಮ ಗ್ರಾಮೀಣ ಸ್ತ್ರೀಯರ ಸಾಮಾಜಿಕ ಶೋಷಣೆಗೆ ಕೊನೆಯೇ ಇಲ್ಲ. 'ಅಯ್ಯೋಹೆಣ್ಣೆ' ಎಂಬ ಉದ್ಗಾರವನ್ನು ಕೇಳಿಸಿಕೊಂಡು ಕಣ್ತೆರೆಯುವ ಗ್ರಾಮೀಣ ಹೆಣ್ಣುಮಗು ತನ್ನ ಸುತ್ತಮುತ್ತ ಸಂಕೋಲೆಗಳಲ್ಲಿ ಬಂಧಿತಳಾಗಿ ಬೆಳೆಯುತ್ತಾಳೆ. ಸಮಾಜದ ಎಲ್ಲಾ ಬಗೆಯ ಒಡೆತನ ಪುರುಷನ ಸೊತ್ತಾದುದರಿಂದ ಸ್ತ್ರೀಯರು ಅವನ ಶೋಷಣೆಗೆ ಸುಲಭದಲ್ಲಿ ಬಲಿಯಾಗುತ್ತಾರೆ.

ನಮ್ಮ ಗ್ರಾಮೀಣ ಸಮಾಜದಲ್ಲಿ ಹೆಣ್ಣುಮಕ್ಕಳ ಶಿಕ್ಷಣಕ್ಕೆ ಹೆಚ್ಚು ಪ್ರಾಮುಖ್ಯತೆ ಇರುವುದಿಲ್ಲ. ಅವರು ಮನೆಯಲ್ಲಿಯೇ ಕೆಲಸ ಮಾಡಿಕೊಂಡು ಇರಬೇಕಾಗುತ್ತದೆ. ಆದರೆ ಇತ್ತೀಚಿನ ನಗರದ ಪ್ರವೇಶದಿಂದ ನಮ್ಮ ಗ್ರಾಮೀಣ ಹೆಣ್ಣು ಮಕ್ಕಳು ಅಧಿಕ ಸಂಖ್ಯೆಯಲ್ಲಿ ಉನ್ನತ ಶಿಕ್ಷಣವನ್ನು ಪಡೆಯಲು ಮುಂದೆ ಬರುತ್ತಿದ್ದಾರೆ.

ಇತ್ತೀಚಿನ ದಿನಗಳಲ್ಲಿ ನಮ್ಮ ಮಹಿಳೆಯರ ಸಮಸ್ಯೆಗಳಿಗೆ ಅನೇಕ ಪರಿಹಾರಗಳನ್ನು ನಮ್ಮ ಸರ್ಕಾರ ಕೈಗೊಂಡಿದೆ. ಅನೇಕ ಸಂಘ ಸಂಸ್ಥೆಗಳು ಸ್ತ್ರೀಯರ ಸಮಗ್ರ ಅಭಿವೃದ್ಧಿಗಾಗಿ ದುಡಿಯುತ್ತಿವೆ. ಇವುಗಳ ಪ್ರಯತ್ನದಿಂದ ಇಂದು ಗ್ರಾಮೀಣ ಸ್ತ್ರೀಯರಲ್ಲಿ ಅನೇಕ ಪರಿವರ್ತನೆಗಳಾಗಿವೆ.

"ಮಹಿಳೆ ಹಾಗು ಕತೆ ಸಂಬಂಧ ಇಂದು ನಿನ್ನೆಯದಲ್ಲ. ಭಾರತೀಯ ಪರಂಪರೆಯಲ್ಲಿ ಕತೆಗೆ ನಾಟಕಕ್ಕಿದ್ದಂತೆ ದೈವೀ ನೆಲೆಯನ್ನು ಕಲ್ಪಿಸಲಾಗಿದೆ. ವಸುಬಾಗ ಹೇಳುವಂತೆ ಗುಣಾಢ್ಯನ ಬೃಹಕ್ಕಥೆಯ ಮೂಲ ಶಿವನಿಂದ ಕಥೆ ಕೇಳಬೇಕೆನ್ನುವ ಪಾರ್ವತಿಯ ಇಚ್ಛೆಯಲ್ಲಿದೆ. ಅಂತಿರ್ದ ಪರಮೇಶ್ವರಂಗೆ ಗಿರಿರಾಜ ತನುಜೆ ಕರಕಮಲಂಗಳಂ ಮುಗಿದು ದೇವಾ ನೀವೆನಗ ಪೂರ್ವಮಪ್ಪ ಕಥೆಯಂ ಪೇಳಲೇಳ್ಬುದೆನೆಹರಂ ದರಹಸಿತವದ ನಾರವಿಂದನಾಗಿ ಪಾರ್ವತಿ ಪೂರ್ವಮಪ್ಪ ಕಥೆಗಳಂ ಪೇಳುತ್ತಿರಲು ಈ ಕಥೆಗಳನ್ನು ಕೇಳಿದ ಗಣ ಪ್ರಧಾನ ಪುಷ್ಪದಂತನೆಂಬುವನು ಗುಣಾಢ್ಯನಾಗಿ ಮಾನವಲೋಕದಲ್ಲಿ ಹುಟ್ಟಿ ಬೃಹತ್ಕಥೆಗಳನ್ನು ಮಾಡಿದನಂತೆ ಕತೆ ಹೇಳುವುದರಲ್ಲಿಯೂ ಮಹಿಳೆಯದೇ ಮೇಲುಗೈಯಾಗಿತ್ತೆನ್ನುವುದಕ್ಕೆ ಪಂಚತಂತ್ರದ ದೇವದತ್ತನೂ ಕುಂಟಣಿಯೂ ಕತೆಯಲ್ಲಿ ಬರುವ ಡಾವರ ಡಾಕಿಣಿ ಸಾಕ್ಷಿಯಾಗಿದ್ದಾಳೆ. ನಾನಾ ರೀತಿಯ ಕತೆಗಳನ್ನು ಅತಿಶಯವಾಗಿ ಹೇಳುವ ವಿದ್ಯೆ ಹೊಂದಿದ ಇವಳು ಕತೆ ಹೇಳುವುದಕ್ಕೆ ಒಂದು ಸಾವಿರ ಗದ್ಯಾಣದ ದಕ್ಷಿಣೆ ಕೇಳುತ್ತಿದ್ದಳಂತೆ. ಇಂದಿನ ವಿನಿಮಯ ದರದಲ್ಲಿ ಇದು ಯಾವ ಕತೆಗಾರ್ತಿಯೂ ಹೆಮ್ಮೆ ಪಡಬಹುದಾದ ಮೊತ್ತವಾಗಿದೆ."[೬೦]

ಈ ಮೇಲಿನ ವಿಷಯದಲ್ಲಿ ಸ್ತ್ರೀ ಸಮಾನತೆ ಬಗ್ಗೆ ಕತೆಗಳ ಮೂಲಕ ಕೂಲಂಕುಷವಾಗಿ ಅಧ್ಯಯನ ಮಾಡಿದಾಗ ಸಮಾನತೆಯನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು. ಮೊದಲನೆಯದಾಗಿ ಗ್ರಾಮೀಣ ಪ್ರದೇಶದಲ್ಲಿ ಬರುವ ಸ್ತ್ರೀಪಾತ್ರ ಎರಡನೆಯದಾಗಿ ನಗರ ಪ್ರದೇಶಗಳಲ್ಲಿ ಬರುವ ಸ್ತ್ರೀಪಾತ್ರಗಳು ಗ್ರಾಮೀಣ ಕತೆಗಳಲ್ಲಿ ಬರುವ ವಿಷಯಗಳನ್ನು ಅಧ್ಯಯನ ಮಾಡಿ ನೋಡಿದಾಗ ಸ್ತ್ರೀಯರಲ್ಲಿ ಅಸಮಾನ್ಯ ಬದಲಾವಣೆ ಗಳನ್ನು ಕಾಣುತ್ತಿದ್ದೇವೆ. ಉದಾ. ಹೇಳಬೇಕೆಂದರೆ ಗ್ರಾಮೀಣ ಪ್ರದೇಶದಲ್ಲಿ ಶಾಲೆಗಳಲ್ಲಿ ಹಾಜರಿ ಹೆಣ್ಣು

ಮಕ್ಕಳ ಹಾಜರಿಯಲ್ಲಿ ಹೆಚ್ಚಾಗಿರುವುದನ್ನು ಹಾಗೂ ಫಲಿತಾಂಶಗಳಲ್ಲಿ ಹೆಣ್ಣು ಮಕ್ಕಳ ಕೈಮೇಲಾಗುತ್ತಿರುವುದನ್ನು ಗಮನಿಸಬಹುದು. ಗ್ರಾಮಗಳಿಂದ ಉನ್ನತ ವಿದ್ಯಾಭ್ಯಾಸಕ್ಕಾಗಿ ನಗರಗಳಿಗೆ ಹೋಗುತ್ತಿರುವ ಸಂಖ್ಯೆಯು ಹೆಣ್ಣು ಮಕ್ಕಳಲ್ಲಿ ಗಣನೀಯವಾಗಿ ಹೆಚ್ಚುತ್ತಿರುವುದನ್ನು ಗಮನಿಸಬಹುದು. ಉದ್ಯೋಗ, ಸಂಘ ಸಂಸ್ಥೆಗಳಲ್ಲಿ, ಕೈಗಾರಿಕೆಗಳಲ್ಲಿ, ಸಾಹಿತ್ಯ, ಕಲೆ, ರಾಜ್ಯಾಂಗ, ಕಾರ್ಯಾಂಗ, ನ್ಯಾಯಾಂಗಗಳಲ್ಲಿ ಸಮಾನತೆ ಸಾಧಿಸುತ್ತಿರುವುದನ್ನು ಕಾಣುತ್ತಿದ್ದೇವೆ.

ನಗರ ಪ್ರದೇಶಗಳಲ್ಲಿ ಬರುವ ಸ್ತ್ರೀ ಪಾತ್ರಗಳನ್ನು ಗುರುತಿಸಿದಾಗ ಹೆಣ್ಣು ಮಕ್ಕಳ ಶಿಕ್ಷಣ ಗಂಡು ಮಕ್ಕಳಿಗೆ ಸವಾಲಾಗಿದೆ. ಪ್ರತಿಯೊಂದು ಕಾರ್ಯಕ್ಷೇತ್ರದಲ್ಲಿಯೂ ಅಂದರೆ ವಿದ್ಯಾಭ್ಯಾಸ, ಕೈಗಾರಿಕೆ, ಕಲೆ, ಸಾಹಿತ್ಯ, ರಾಜಕೀಯ, ವಿಜ್ಞಾನ ಮುಂತಾದ ಎಲ್ಲ ಕ್ಷೇತ್ರಗಳಲ್ಲಿಯೂ ಪುರುಷರಿಗೆ ಸರಿಸಮನಾಗಿ ಕೆಲಸ ಮಾಡುತ್ತಿರುವುದು ತನ್ನ ಸ್ಥಾನವನ್ನು ಗಟ್ಟಿಗೊಳಿಸಿಕೊಳ್ಳುತ್ತಿರುವುದು ಕಣ್ಣಿಗೆ ಕಂಡಷ್ಟೇ ಸತ್ಯವಾಗಿರುತ್ತದೆ. ಈ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿ ನೋಡಿದಾಗ ಪ್ರತಿಯೊಂದು ಕಾರ್ಯಕ್ಷೇತ್ರಗಳಲ್ಲಿಯೂ ಮಹಿಳೆಯು ಸಮಾನತೆ ಸಾಧಿಸಿದ್ದಾಳೆ ಎಂಬುದನ್ನು ಗಂಟಾಘೋಷವಾಗಿ ಹೇಳಬಹುದು.

ಕಳೆದ ಆರುದಶಕಗಳಲ್ಲಿ ಮಹಿಳಾ ಕಥಾ ಸಾಹಿತ್ಯದಲ್ಲಿ ಒಂದು ಪರಂಪರೆ ನಿರ್ಮಿತವಾಗಿದೆ. ಈ ಪರಂಪರೆಯ ನಾಲ್ಕು ಪೀಳಿಗೆಗಳನ್ನು ಸ್ಪಷ್ಟವಾಗಿ ಗುರುತಿಸಬಹುದು. ಶ್ಯಾಮಲ ಬೆಳಗಾಂವಕರ ಮೊದಲಾದ ಮೊದಲನೆಯ ಪೀಳಿಗೆಯ ಲೇಖಕಿಯರು ಎದುರಿಸಿದ ಮುಖ್ಯ ಪ್ರಶ್ನೆಯ ಸ್ವರೂಪ ಸಾಮಾಜಿಕವಾದದ್ದು. ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀ ಒಬ್ಬ ವ್ಯಕ್ತಿಯಾಗಿ ಗುರುತಿಸಲ್ಪಡದೆ ಪತ್ನಿ, ವಿಧವೆ, ವೇಶ್ಯೆ ಹೀಗೆ ಪುರುಷನ ಸಂಬಂಧದಲ್ಲಿಯೇ ಗುರುತಿಸಲ್ಪಟ್ಟಿದ್ದರಿಂದ ಅವಳಿಗೆ ಸ್ವತಂತ್ರವಾದ ಅಸ್ತಿತ್ವವಾಗಲಿ ಅದರ ಕಲ್ಪನೆಯಾಗಲಿ ಇರಲಿಲ್ಲ.

ಎರಡನೆಯ ಪೀಳಿಗೆಯ ಲೇಖಕಿಯರು ಕಂಡ ಮಹಿಳೆಯರಲ್ಲಿಯೂ ಕ್ರಾಂತಿಕಾರಕ ಬದಲಾವಣೆಗಳು ಇರದೇ ಹೋದರೂ ಅವರಲ್ಲಿ ತಮ್ಮ ಅಸ್ಮಿತೆಯ ಅರಿವು ಜಾಗೃತವಾಗಿದ್ದುದರಿಂದ ವ್ಯವಸ್ಥೆಯ ವಿರುದ್ಧ ಧ್ವನಿ ಎತ್ತುವುದು ಪ್ರತಿಭಟನೆಯನ್ನು ಕೃತಿಗಿಳಿಸುವುದು ಅವಶ್ಯವೆನಿಸಿತು. ಈ ಪೀಳಿಗೆಯ ಪ್ರಮುಖ ಲೇಖಕಿಯರಾದ ಅನುಪಮ ನಿರಂಜನ ಹಾಗು ತ್ರಿವೇಣಿಯವರಂಥ ಕತೆಗಾರ್ತಿಯರಲ್ಲಿ ಈ ಬೆಳವಣಿಗೆಯನ್ನು ಕಾಣಬಹುದು.

ಸ್ವಾತಂತ್ರ್ಯೋತ್ತರ ಕಾಲಖಂಡದಲ್ಲಿ ಬರೆಯತೊಡಗಿದ ಲೇಖಕಿಯರು ಬಲವಾದ ತಾತ್ವಿಕ ಆಸ್ಥೆಗಳನ್ನು ಬೆಳೆಸಿಕೊಂಡುದರಿಂದ ಅವರು ಬದುಕಿನ ಸಂಕೀರ್ಣತೆಯನ್ನು ತಮ್ಮ ಕತೆಗಳಲ್ಲಿ ಮೂಡಿಸುವಲ್ಲಿ ಆಸಕ್ತಿ ತೋರಿಸಿದರು. ಈ ತಲೆಮಾರಿನ ಲೇಖಕಿಯರಲ್ಲಿ ಪ್ರಮುಖರಾದ ರಾಜಲಕ್ಷ್ಮಿ ಎನ್. ರಾವ್ ಹಾಗು ವೀಣಾರ ಕತೆಗಳಲ್ಲಿ ನಾವು ನೋಡುವ ಅಂತರ್ಮುಖತೆ, ಆತ್ಮಪ್ರಜ್ಞೆ, ದ್ವಂದ್ವಗಳ ಅರಿವು ನವ್ಯ ಮನೋಧರ್ಮದ ಆವಿಷ್ಕಾರಗಳು. ಕತೆಯನ್ನು ಕೇವಲ ಮನೋರಂಜನೆಗಾಗಲಿ ಸಾಮಾಜಿಕ ಜಾಗೃತಿಗಾಗಲಿ ಬಳಸದೇ ಇವರು ಅದನ್ನು ಸತ್ಯದ ಶೋಧದಂಥ ಗಂಭೀರ ಪ್ರಯತ್ನಗಳಲ್ಲಿ ತೊಡಗಿಸಿದರು ಹಾಗು ಅದನ್ನು ಒಂದು ಪ್ರಬುದ್ಧ ಸಾಹಿತ್ಯ ಮಾಧ್ಯಮವನ್ನಾಗಿ ಬಳಸಿಕೊಂಡರು.

೧೯೭೦ರ ನಂತರ ಬರೆಯತೊಡಗಿದ ಲೇಖಕಿಯರು ಒಂದಿಲ್ಲೊಂದು ರೀತಿಯಿಂದ ಜಾಗತಿಕ ಸ್ವರೂಪದ ಸ್ತ್ರೀಮುಕ್ತಿ ಚಳುವಳಿಗಳಿಂದ ಪ್ರಭಾವಿತರಾದರು. ಇವರು ಬರೆಯುತ್ತಿರುವ ವೇಳೆಗೆ ಸಮಾಜದಲ್ಲಿಯೂ ಸಾಕಷ್ಟು ಸ್ಥಿತ್ಯಂತರಗಳಾಗಿದ್ದವು. ಮಹಿಳೆಗೆ ಇಂದು ಎಲ್ಲಾ ಕಾರ್ಯಕ್ಷೇತ್ರಗಳೂ ಮುಕ್ತವಾಗಿವೆಯಲ್ಲದೆ ಶಿಕ್ಷಣದ ಎಲ್ಲಾ ಪ್ರಕಾರಗಳೂ ಲಭ್ಯವಿವೆ. ಹೀಗಾಗಿ ಅವಳ ಅನುಭವದ ಹಿಂದೆ ಎಂದೂ ಇಲ್ಲದ ವ್ಯಾಪ್ತಿ ವೈವಿಧ್ಯಗಳು ಬಂದಿವೆ. ಅದರ ಜೊತೆಗೆಯೆ ಸಮಾನತೆ ಸ್ವಾತಂತ್ರ್ಯಗಳು ಹೊಸ ಸಮಸ್ಯೆಗಳನ್ನು ಹುಟ್ಟುಹಾಕಿವೆ. ಗಂಡು ಹೆಣ್ಣಿನ ಸಂಬಂಧಗಳಲ್ಲಿಯೂ ಬಿಕ್ಕಟ್ಟು ತಲೆದೋರಿದೆ. ಪುರುಷ ಕೇಂದ್ರಿತ ವ್ಯವಸ್ಥೆಯ ಅಂಗಗಳಾದ ಅವಿಭಕ್ತ ಕುಟುಂಬ ಹಾಗು ವಿವಾಹಗಳಂಥ ಸಂಸ್ಥೆಗಳು ತಮ್ಮ ಶಕ್ತಿಯನ್ನು ಕಳೆದುಕೊಳ್ಳುತ್ತಿವೆ.

ಆದರೆ ಸಾಮಾಜಿಕ ಧೋರಣೆಗಳಲ್ಲಿ ಬದಲಾವಣೆಯಾಗಿದ್ದರೂ ಮನೋಧರ್ಮಗಳಲ್ಲಿ ಸಾಂಪ್ರದಾಯಿಕ ಜಾಡ್ಯ ಇನ್ನೂ ಉಳಿದುಕೊಂಡಿರುವುದರಿಂದ ಅವರು ಬರೆಯುತ್ತಿರುವ ಕತೆಗಳು ಮೊದಲಿನವರ ಕತೆಗಳಿಗಿಂತ ಭಿನ್ನವಾಗಿವೆ. ಸಮಾಜದ ಎಲ್ಲಾ ಸ್ತರಗಳಿಂದಲೂ ಲೇಖಕಿಯರು ಎದ್ದು ಬರುತ್ತಿರುವುದರಿಂದ ಸಂಸ್ಕೃತಿಯ ಬೇರೆ ಬೇರೆ ಮುಖಗಳು ಭಾಷೆಯಲ್ಲಿ ಒಡಮೂಡುತ್ತಿವೆ. ಕನ್ನಡದ ಸಣ್ಣಕತೆಗಳ ಭವಿಷ್ಯದ ದೃಷ್ಟಿಯಿಂದ ಇವೆಲ್ಲಾ ಒಳ್ಳೆಯ ಚಿಹ್ನೆಗಳು ಎಂದು ಬೇರೆಯಾಗಿ ಹೇಳಬೇಕಾಗಿಲ್ಲ.

ನಮ್ಮ ಗ್ರಾಮೀಣ ಪರಿಸರದಂತೆ ಹಲವಾರು ಉಪಸಂಸ್ಕೃತಿಗಳೂ ಮಹಿಳೆಯರ ಸಣ್ಣಕತೆಗಳನ್ನು ಸಮೃದ್ಧಗೊಳಿಸಿವೆ. ಈ ಸಂದರ್ಭದಲ್ಲಿ ನಾವು ಹೆಸರಿಸಲೇ ಬೇಕಾದ ಲೇಖಕಿಯರೆಂದರೆ ಮುಸ್ಲಿಂ ಸಮಾಜದಿಂದ ಬಂದ ಮುಮ್ತಾಜ್ ಬೇಗಂ, ಸಾರಾ ಅಬೂಬಕ್ಕರ್ ಹಾಗೂ ಬಾನುಮುಷ್ತಾಕ್ ಮತ್ತು ಲಂಬಾಣಿ ಸಮಾಜದಲ್ಲಿ ಹುಟ್ಟಿದ ಬಿ.ಟಿ. ಲಲತಾನಾಯಕ್ ಇವರೆಲ್ಲರೂ ಒಳ್ಳೆಯ ಲೇಖಕಿಯರಾದುದರಿಂದ ಅವರ ಕೃತಿಗಳಿಗೆ ಅವರ ವಿಶಿಷ್ಟ ಸಮಾಜಗಳನ್ನು ಮೀರಿದ ಪ್ರಸ್ತುತತೆ ಇದೆ.

ಸಾರಾ ಅವರ ಕಾದಂಬರಿ "ಚಂದ್ರಗಿರಿಯ ತೀರದಲ್ಲಿ" ಮುಸ್ಲಿಂ ಮಹಿಳೆಯ ಅಸಹಾಯಕತೆಯನ್ನು ಚಿತ್ರಿಸಿದರೆ (ಚಪ್ಪಲಿಗಳು ಮೊದಲಾದ ಕತೆಗಳಲ್ಲಿಯೂ ಇಂಥ ಚಿತ್ರಣವಿದೆ.) 'ಧರ್ಮಬಲೆ ಬೀಸಿದಾಗ' (ಅಬೂಬಕ್ಕರ್ ೧೯೮೯) ಅವಳನ್ನು ಶಕ್ತಿಯ ಕೇಂದ್ರವಾಗಿ ನಮ್ಮೆದುರಿಗೆ ತರುತ್ತದೆ. ಈ ಕತೆಯ ನಾಯಕಿ ಖತೀಜಾ ಜಮಾಅತ್‌ನ್ನೇ ತನ್ನ ಕೈಯಲ್ಲಿಟ್ಟುಕೊಂಡ ಇಬ್ರಾಹಿಂ ಹಾಜಿಯನ್ನು ಏಕಾಂಗಿಯಾಗಿ ಎದುರಿಸುತ್ತಾಳೆ. ಬಹಿಷ್ಕಾರದ ಮೂಲಕ ಅವಳನ್ನು ಮಣಿಸಬೇಕೆಂಬ ಅವನ ಹೊಂಚನ್ನು ವಿಫಲಗೊಳಿಸುತ್ತಾಳೆ. ಈ ಕಾರ್ಯದಲ್ಲಿ ಮೊದಮೊದಲು ಹಿಂಜರಿದರೂ ಅವಳ ಗಂಡ ಕರೀಂಸಾಬ್ ಅವಳಿಗೆ ಜೊತೆಯಾಗಿ ನಿಲ್ಲುತ್ತಾನೆ.

ಈ ಕತೆಯ ಆಶಾವಾದ ಅದನ್ನೊಂದು ಅಪವಾದ ಎಂದು ಭಾವಿಸಿದರೂ, ಮೆಚ್ಚುವಂಥದು. ಸಾರಾರ ಕತೆ ಸರಳವೆನಿಸಿದರೂ ಖತೀಜಾಳ ಕರ್ತೃತ್ವ ಶಕ್ತಿಯನ್ನು ಮೆರೆಯುವ ಮೂಲಕ ಅರ್ಥಪೂರ್ಣವಾಗುತ್ತದೆ. ಸ್ತ್ರೀಯನ್ನು ಬಲಿಪಶು ಎಂದು ತೋರಿಸುವ ಸಂದರ್ಭಗಳೇ ಹೆಚ್ಚು. ಅವಳೂ ಒಬ್ಬ ಕ್ರಿಯಾಶೀಲ ವ್ಯಕ್ತಿಯಾಗಬಲ್ಲಳು ಎನ್ನುವ ನಂಬಿಕೆಯಿಂದ ರಚಿತವಾಗುವ ಕೃತಿಗಳು ವಿರಳ. ಆದರೂ ಈ ಕತೆಯನ್ನು ಸಾರಾ ಅವರ ಒಟ್ಟು ಸಾಹಿತ್ಯದ ಸಂದರ್ಭದಲ್ಲಿಯೇ ಗ್ರಹಿಸಬೇಕಾಗುತ್ತದೆ.

**ಅಡಿಟಿಪ್ಪಣಿಗಳು**

೧. ಬಿ.ಆರ್.ಕೃಷ್ಣ, ಭಾರತೀಯ ಸಾಮಾಜಿಕ ಅಧ್ಯಯನ, ೧೯೯೪, ಪುಟ ೯೧

೨. ಜಿ.ಎಸ್.ಆಮೂರ, ಅವಳ ಕತೆಗಳು, ಪ್ರಸ್ತಾವನೆ, ೧೯೯೯, ಪುಟ ೧೪

೩. ಎನ್.ಕೆ.ಕೋದಂಡರಾಮ, ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ, ೧೯೯೬, ಪುಟ ೪೩೦

೪. ಆರ್.ಇಂದಿರಾ, ಮಹಿಳೆ ಸಮಾಜ ಮತ್ತು ಸಂಸ್ಕೃತಿ, ೨೦೦೨, ಪುಟ ೧೪೩-೧೪೪

೫. ಅದೇ, ಪುಟ ೧೪೮

೬. ಜಿ.ರಾಮಕೃಷ್ಣ (ಪ್ರ.ಸಂ), ಲೇಖಕರು ಎನ್.ಗಾಯತ್ರಿ, ಮಹಿಳಾ ಚಳುವಳಿಯ ಮಜಲುಗಳು, ೧೯೯೮, ಪುಟ ೧೩

೭. ಎಚ್.ಎಸ್.ಮುಕ್ತಾಯಕ್ಕ, ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ, ಮೊದಲ ಮುದ್ರಣ ೧೯೯೭, ಪುಟ ೭

೮. ಅದೇ, ಪುಟ ೯೨

೯. ಅದೇ, ಪುಟ ೯೬

೧೦. ಅದೇ, ಪುಟ ೯೮

೧೧. ಅದೇ, ಪುಟ ೯೯

೧೨. ಬಿ.ಆರ್.ಕೃಷ್ಣ, ಗ್ರಾಮೀಣ ಮತ್ತು ನಗರ ಸಮಾಜಶಾಸ್ತ್ರ, ೧೯೯೭ ೯೮, ಪುಟ ೩೯

೧೩. ಅದೇ, ಪುಟ ೪೦

೧೪. ಅದೇ, ಪುಟ ೪೧

೧೫. ಅದೇ, ಪುಟ ೪೩

೧೬. ಶ್ರೀಮತಿ ನಾಜ್‌ನೀನ್ ಬೇಗಂ, ಗ್ರಾಮೀಣ ಬದುಕು ಮತ್ತು ಮಹಿಳೆ, ೨೦೦೦, ಪುಟ ೪೩

೧೭. ವೀಣಾ ಶಾಂತೇಶ್ವರ, ಸಣ್ಣ ಕತೆಗಳ ಸಂಕಲನ, ೨೦೦೧, ಪುಟ ೭

೧೮. ಎಂ.ಜಿ. ಹೆಗಡೆ (ಸಂ), ಸಾಹಿತ್ಯ ವಿಮರ್ಶೆ ೧೯೯೮, ೧೯೯೯, ಪುಟ ೧೬೮

೧೯. ಅದೇ, ಪುಟ ೧೭೧

೨೦. ಜಿ.ಎಸ್.ಆಮೂರ (ಸಂ), ಅವಳ ಕತೆಗಳು, ೧೯೯೯, ಪುಟ xi

೨೧. ಅದೇ, ಪುಟ xxv

೨೨. ಎಚ್.ಎಸ್.ಶ್ರೀಮತಿ, (ಕನ್ನಡಕ್ಕೆ) ಆಧುನಿಕ ಭಾರತದಲ್ಲಿ ಮಹಿಳೆ, ೨೦೦೧, ಪುಟ ೩೩೭

೨೩. ಅದೇ, ಪುಟ ೩೩೮

೨೪. ಅದೇ, ಪುಟ ೩೩೯

೨೫. ಅದೇ, ಪುಟ ೩೪೧

೨೬. ಅದೇ, ಪುಟ ೩೪೩

೨೭. ಎನ್.ಕೆ.ಕೋದಂಡರಾಮ, ಕನ್ನಡ ಕಥಾಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ, ೧೯೯೬, ಪುಟ ೪೩೦

೨೮. ಅದೇ, ಪುಟ ೪೩೧

೨೯. ಅದೇ, ಪುಟ ೪೩೨

೩೦. ಅದೇ, ಪುಟ ೪೩೩

೩೧. ಅದೇ, ಪುಟ ೪೩೪

೩೨. ಅದೇ, ಪುಟ ೪೩೯

೩೩. ಶ್ರೀಮತಿ ನಾಜ್‌ನೀನ್ ಬೇಗಂ, ಗ್ರಾಮೀಣ ಬದುಕು ಮತ್ತು ಮಹಿಳೆ, ೨೦೦೦, ಪುಟ ೧

೩೪. ಅದೇ, ಪುಟ ೧೪೪

೩೫. ಅದೇ, ಪುಟ ೧೪೫

೩೬. ಅದೇ, ಪುಟ ೧೪೬

೩೭. ಅದೇ, ಪುಟ ೧೧

೩೮. ವಿಠಲರಾವ್ ಗಾಯಕ್ವಾಡ್ (ಕನ್ನಡಕ್ಕೆ), ಸ್ತ್ರೀವಾದಿ ವಿಮರ್ಶೆ ಸ್ವರೂಪ ಮತ್ತು ಪರಿಕಲ್ಪನೆಗಳು, ೨೦೦೧, ಪುಟ ೪೬

೩೯. ಅದೇ, ಪುಟ ೨೬೪

೪೦. ಅದೇ, ಪುಟ ೩೦೦

೪೧. ಅದೇ, ಪುಟ ೧೨೪

೪೨. ಅದೇ, ಪುಟ ೧೨೫

೪೩. ಅದೇ, ಪುಟ ೧೨೬

೪೪. ಅದೇ, ಪುಟ ೧೨೮

೪೫. ಅದೇ, ಪುಟ ೧೧೬

೪೬. ಅದೇ, ಪುಟ ೧೧೯

೪೭. ಅದೇ, ಪುಟ ೧೪೮

೪೮. ಎಸ್.ವಿ. ಪ್ರಭಾವತಿ, ಸ್ತ್ರೀವಾದದ ಪ್ರಸ್ತುತತೆ, ೨೦೦೦೨, ಪುಟ ೪೧

೪೯. ಗಾಯತ್ರಿ ಎನ್.ಮಹಿಳೆ ಬಿಡುಗಡೆಯ ಹಾದಿಯಲ್ಲಿ, ೧೯೯೬, ಪುಟ ೧೩೯

೫೦. ಜ್ಯೋಸ್ನಾ ಕಾಮತ್, ಮಹಿಳೆ ಒಂದು ಅಧ್ಯಯನ, ೧೯೯೯, ಪುಟ ೫೮

೫೧. ಎಚ್.ಎಸ್.ಮುಕ್ತಾಯಕ್ಕ, ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ, ೧೯೯೭, ಪುಟ ೬

೫೨. ಎಚ್.ಎಸ್.ಶ್ರೀಮತಿ (ಸಂ), ಮಹಿಳಾ ಅಧ್ಯಯನ ದಕ್ಷಿಣಾಯನ ಸಂಚಿಕೆ, ೨೦೦೦, ಪುಟ ೭೯

೫೩. ಗಿರಿಜಾ ಶಾಸ್ತ್ರಿ, ಆಧುನಿಕ ಕನ್ನಡ ಸಣ್ಣಕತೆಗಳು ಒಂದು ಸ್ತ್ರೀವಾದಿ ಅಧ್ಯಯನ, ೨೦೦೦, ಪುಟ ೧೩

೫೪. ಎಚ್.ಎಸ್.ಶ್ರೀಮತಿ (ಸಂ), ಮಹಿಳಾ ಅಧ್ಯಯನ ವಿಶೇಷ ಸಂಚಿಕೆ, ೨೦೦೧, ಪುಟ ೧೯೩

೫೫. ಎನ್.ಕೆ.ಕೋದಂಡರಾಮ, ಕನ್ನಡ ಕಥಾಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ, ೧೯೯೬, ಪುಟ ೨೨೭

೫೬. ಆರ್.ಸಂಧ್ಯಾರೆಡ್ಡಿ, ಜನಪದ ಸಾಹಿತ್ಯದಲ್ಲಿ ಮಹಿಳೆ, ೧೯೯೫, ಪುಟ ೮

೫೭. ಅದೇ, ಪುಟ ೧೯

೫೮. ಶ್ರೀಮತಿ ನಾಜ್‌ನೀನ್ ಬೇಗಂ, ಗ್ರಾಮೀಣ ಬದುಕು ಮತ್ತು ಮಹಿಳೆ, ೨೦೦೦, ಪುಟ ೧

೫೯. ಜಿ.ಎಸ್.ಆಮೂರ, ಅವಳ ಕಥೆಗಳು, ಪ್ರಸ್ತಾವನೆ x ೧೯೯೯,

೬೦. ಅದೇ, ಪುಟ xi

## ಅಧ್ಯಾಯ ೬

# ಅಧ್ಯಯನದ ಫಲಿತಗಳು

ಪ್ರಸ್ತುತ ಅಧ್ಯಯನಕ್ಕೆ ಸ್ವಾತಂತ್ರ್ಯೋತ್ತರ ಕಾಲದ ಕನ್ನಡ ಸಣ್ಣಕತೆಗಳನ್ನು ಪ್ರಧಾನ ಆಕರವಾಗಿ ಸ್ವೀಕರಿಸಲಾಗಿದೆ. ಆ ಮೂಲಕವೇ ಒಟ್ಟಾರೆ ಗ್ರಾಮೀಣ ಸಂಸ್ಕೃತಿಯನ್ನು ಬೇರೆ ಬೇರೆ ಗ್ರಾಮೀಣ ಕಥೆಗಾರರ ಕತೆಗಳ ಹಿನ್ನಲೆಯಲ್ಲಿ ಕಂಡುಕೊಳ್ಳುವ ಪ್ರಯತ್ನ ಮಾಡಿದ್ದೇನೆ. ಸ್ವಾತಂತ್ರ್ಯಾನಂತರದ ದಿನಗಳಲ್ಲಿ ನಮ್ಮ ಗ್ರಾಮೀಣ ಸಮಾಜದಲ್ಲಿ ಆದ ವಿಶೇಷ ಬದಲಾವಣೆಗಳು ಬಹಳ ಮುಖ್ಯವಾದುವು. ಅದನ್ನು ಸೂಕ್ಷ್ಮವಾಗಿ ಇಟ್ಟುಕೊಂಡು ರಚಿತವಾದ ಸಣ್ಣಕತೆಗಳನ್ನು ಪ್ರಧಾನ ಆಕರವನ್ನಾಗಿ ಇಟ್ಟುಕೊಂಡು ಗ್ರಾಮೀಣ ಸಂಸ್ಕೃತಿಯ ಅಧ್ಯಯನ ಮಾಡುವುದು ಬಹಳ ಅಗತ್ಯವಾದುದು.

ವಸಾಹತುಶಾಹಿ ಆವರಣದಲ್ಲಿ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಮೂಲದ ಅನುಭವಗಳಿಗೆ ನಮ್ಮ ಶ್ರೇಣೀಕರಣ ಸಮಾಜದಲ್ಲಿ ಬರಹಗಾರರು ಪ್ರತಿಕ್ರಿಯಿಸಿದ ರೀತಿಯನ್ನು ಕಂಡುಕೊಳ್ಳುವುದರ ಭಾಗವಾಗಿ ಅನೇಕ ಅಧ್ಯಯನಗಳು ಇಂದು ನಡೆದಿವೆ, ನಡೆಯುತ್ತಿವೆ. ಪ್ರಾಚೀನ ಸಾಹಿತ್ಯದ ಸತ್ವದೊಡನೆ ಪಾಶ್ಚಾತ್ಯ ವಿದ್ಯಾಭ್ಯಾಸದಿಂದ ಬಂದ ನೂತನ ಭಾವನೆಗಳನ್ನು ಅಳವಡಿಸಿಕೊಂಡು ಹೊಸತು-ಹಳತು ಎಲ್ಲವನ್ನು ಸಮನ್ವಯಗೊಳಿಸಿಕೊಂಡು ನಮ್ಮ ಆಧುನಿಕ ಸಣ್ಣಕಥಾ ಸಾಹಿತ್ಯ ಶ್ರೀಮಂತವಾಗಿದೆ. ಹಾಗೆಯೇ ಅದನ್ನು ಶ್ರೀಮಂತಗೊಳಿಸಿದ ಕತೆಗಾರರು ಮೂಲತಃ ಗ್ರಾಮೀಣ ಪರಿಸರದವರಾಗಿದ್ದು ಗ್ರಾಮೀಣ ಪರಿಸರಕ್ಕೆ ಅವರು ಪ್ರತಿಕ್ರಿಯಿಸಿದ ರೀತಿ ಕೂಡ ಕುತೂಹಲಕರವಾಗಿದೆ. ಒಂದು ತಲೆಮಾರಿನ ಸಾಂಸ್ಕೃತಿಕ ಚಟುವಟಿಕೆಗಳು ಎಷ್ಟು ಮುಖ್ಯವೋ ಆಧುನಿಕ ಕನ್ನಡ ಸಣ್ಣಕತೆಗಳು ಚಿತ್ರಿಸಿದ ಗ್ರಾಮೀಣ ಸಂಸ್ಕೃತಿಯ ಅಧ್ಯಯನ ಅಷ್ಟೇ ಮುಖ್ಯವಾಗುತ್ತದೆ.

ಗ್ರಾಮವೆಂಬ ಚಿಕ್ಕ ಘಟಕದಲ್ಲಿನ ಅನೇಕ ಒಳ ಸಂಸ್ಕೃತಿಗಳ ಹುಡುಕಾಟವನ್ನು ಕಸುಬು, ಜಾತಿ, ಸಂಸ್ಥೆ ಧರ್ಮ, ಸಹಬಾಳ್ವೆ ಇತ್ಯಾದಿಗಳ ಗ್ರಹಿಕೆಯ ನೆಲೆಯಲ್ಲಿ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಸ್ಥಿತಿಗತಿಗಳನ್ನು ವಿವರವಾಗಿ ಅಧ್ಯಯನ ಮಾಡಲಾಗಿದೆ. ನಮ್ಮ ಗ್ರಾಮೀಣ ಜನರ ಜೀವನಾಡಿಯೇ ವ್ಯವಸಾಯ. ಅದೇ ಅವರ ಜೀವನ. ನಮ್ಮ ಸಮಾಜದಲ್ಲಿ ನೈಸರ್ಗಿಕವಾಗಿಯೇ ವರ್ಗಭೇದವಿರುವುದನ್ನು ಕಾಣಬಹುದು. ಈ

ಸಮಾಜದಲ್ಲಿ ವಿವಿಧ ನೆಲೆಗಳಲ್ಲಿ ವರ್ಗ ಸಂಘರ್ಷವಿದೆ. ಪುರಾತನ ಕಾಲದಲ್ಲಿಯೇ ಜಾತಿಯ ರೂಪದಿಂದ ಇದು ರೂಢಿಗೆ ಬಂದುದ್ದಾಗಿದ್ದು, ವಸಾಹತುಶಾಹಿ ಪ್ರಭಾವದಿಂದ ಅದು ವರ್ಗ ಸ್ವರೂಪವನ್ನು ಪಡೆದು ಇನ್ನೂ ಹೆಚ್ಚಿನ ಮಟ್ಟಿಗೆ ಮನುಷ್ಯ ಮನುಷ್ಯನಲ್ಲಿ ತಾರತಮ್ಯ ಭಾವನೆ ಬೆಳೆಯಲು ಇಂಬು ಮಾಡಿಕೊಟ್ಟಿದೆ. ಮೇಲು-ಕೀಳು, ಬಡವ-ಬಲ್ಲಿದ, ಭೂಮಾಲೀಕ-ಜೀತಗಾರ ಎಂಬ ತಾರತಮ್ಯವಿದೆ. ವರ್ಗ-ವರ್ಣಗಳ, ಜೀವನ ನೋಟ, ಭೂಮಾಲೀಕರ ಬಗ್ಗೆ ಆಕ್ರೋಶ, ಜೀತಗಾರರ ಬಗ್ಗೆ ಕರುಣೆ ವ್ಯಕ್ತವಾಗಿರುವುದನ್ನು ಕಾಣಬಹುದು. ಸಣ್ಣಕಥೆಗಳು ಇಂತಹ ವಾತಾವರಣವನ್ನು ಹಿಡಿದಿರಿಸಿದ ರೀತಿಯನ್ನು ಕುರಿತಂತೆ ಹಲವು ವಿಷಯಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

ನಮ್ಮ ಸಮಾಜದಲ್ಲಿ ನಗರಗಳಿಗಿಂತ ಹೆಚ್ಚಾಗಿ ಗ್ರಾಮಗಳಲ್ಲಿ ಸಾಮಾಜಿಕ ಸ್ಥಿತಿಗತಿ ವಿಭಿನ್ನವಾಗಿರುತ್ತದೆ. ನಗರಕ್ಕಿಂತ ಹೆಚ್ಚಾಗಿ ಗ್ರಾಮಗಳಲ್ಲಿ ವರ್ಣ-ವರ್ಗ ಸಂಘರ್ಷವಿರುವುದನ್ನು ಕಾಣಬಹುದು. ಮನುಷ್ಯನ ಅಸಹಾಯಕತೆಯನ್ನು ದುರುಪಯೋಗಪಡಿಸಿಕೊಳ್ಳುವ ಭೂಮಾಲೀಕರು, ಬೇರೆಯವರ ಬಗ್ಗೆ ಕಿಂಚಿತ್ತೂ ಅನುಕಂಪವಿಲ್ಲದೆ ನಾನಾ ಬಗೆಯಲ್ಲಿ ಶೋಷಿಸುತ್ತಾ ಬಂದಿರುವುದನ್ನು ಅನೇಕ ಸಣ್ಣಕತೆಗಾರರು ಅಭಿವ್ಯಕ್ತಿಸಿದ್ದಾರೆ. ಇಂತಹ ಅಮಾನವೀಯ ವರ್ತನೆಗಳ ನಡುವೆ ಬದುಕುವ ಅಮಾಯಕರ ಸಾಮಾಜಿಕ ಬದುಕನ್ನು ಕತೆಗಳು ಚಿತ್ರಿಸಿದ ರೀತಿಯನ್ನು ವಿಶ್ಲೇಷಣೆ ಮಾಡಲಾಗಿದೆ. ಸಾಮಾನ್ಯವಾಗಿ ರಾಜಕೀಯ ಧುರೀಣರು ನಡೆಸುವ ರಾಜಕೀಯಕ್ಕಿಂತ ನಮ್ಮ ಗ್ರಾಮಗಳಲ್ಲಿ ನಡೆಯುವ ರಾಜಕೀಯ ಕ್ರಿಯಾಶೀಲವೂ ಕೆಲವೊಮ್ಮೆ ಹಾಸ್ಯಾಸ್ಪದವೂ, ಕೆಲವೊಮ್ಮೆ ಟೀಕಾತ್ಮಕವೂ ಆಗಿರುವುದನ್ನು ಕಾಣಬಹುದು. ಇಂತಹ ವಿಭಿನ್ನ ರಾಜಕೀಯಗಳಿಂದಾಗಿ ನಮ್ಮ ಗ್ರಾಮೀಣ ಬದುಕು ಗಂಭೀರವಾಗಿ ಹದಗೆಟ್ಟಿರುವುದನ್ನು ಕತೆಗಳು ದಾಖಲಿಸಿವೆ. ಇವುಗಳ ಅಧ್ಯಯನದ ಮೂಲಕ ಗ್ರಾಮಗಳ ರಾಜಕೀಯ ಸ್ವರೂಪದ ವಿವಿಧ ಮಗ್ಗಲುಗಳನ್ನು ಚರ್ಚಿಸಲಾಗಿದೆ.

ನಮ್ಮ ಗ್ರಾಮಗಳಲ್ಲಿ ಆಚರಿಸುವ ಹಬ್ಬಹರಿದಿನಗಳು ವಿಶಿಷ್ಟವಾಗಿದ್ದು ಇಂದಿಗೂ ತನ್ನದೇ ಆದ ವಿಶಿಷ್ಟತೆಯನ್ನು ಉಳಿಸಿಕೊಂಡಿದೆ. ಜಾತ್ರೆ, ಉತ್ಸವಗಳಲ್ಲಿ ಭಾಗವಹಿಸುವಾಗ ಹೆಚ್ಚು ಉತ್ಸುಕರಾಗಿ ನಾವೆಲ್ಲರೂ ಒಂದೇ ಎಂಬ ಭಾವನೆಯಿಂದ ಬೆರೆಯುವುದನ್ನು ಕಾಣಬಹುದು. ಇಲ್ಲಿ ಮನರಂಜನೆಗೆ ಹೆಚ್ಚು ಮಹತ್ವವಿದೆ. ನಮ್ಮ ಜನಪದ ನಂಬಿಕೆಗಳು, ಸಂಪ್ರದಾಯಗಳು, ಆಚರಣೆಗಳ ಜೀವಸತ್ವವಾಗಿರುವುದನ್ನು ಸ್ಪಷ್ಟವಾಗಿ ಗುರುತಿಸಬಹುದು. ಈ ಎಲ್ಲಾ ಸಾಂಸ್ಕೃತಿಕ ವಿವರಗಳು ಸಾಹಿತ್ಯ ಪ್ರಕಾರದಲ್ಲಿ ಮೂಡಿಬಂದಿರುವ ಬಗೆಯನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

ನಮ್ಮ ಸಣ್ಣಕತೆಗಳಲ್ಲಿ ವ್ಯಕ್ತವಾಗಿರುವ ಗ್ರಾಮೀಣ ಸಂಸ್ಕೃತಿಯ ಸಮಗ್ರ ಸ್ವರೂಪದ ಹುಡುಕಾಟವೇ ಈ ಅಧ್ಯಯನದ ಪ್ರಮುಖ ಉದ್ದೇಶ. ಆ ಮೂಲಕ ಸಣ್ಣಕತೆ ಮತ್ತು ಗ್ರಾಮೀಣ ಪರಿಸರಗಳು ಹೇಗೆ ಪೂರಕವಾಗಿ ಒಂದು ಸಾಂಸ್ಕೃತಿಕ ಸಂಕಥನವನ್ನು ರೂಪಿಸುವಲ್ಲಿ ಶಕ್ತವಾಗಿರುವ ಬಗೆಯನ್ನೂ ಸಹ ಈ ಮೂಲಕ ಗುರುತಿಸುವ ಪ್ರಯತ್ನ ಮಾಡಲಾಗಿದೆ.

ನಮ್ಮ ಭಾರತ ದೇಶವು ಪ್ರಧಾನವಾಗಿ ಒಂದು ಗ್ರಾಮ ಪ್ರಪಂಚ. ನಮ್ಮ ಇಂದಿನ ಎಲ್ಲ ಭಾಷೆ, ಸಾಹಿತ್ಯ, ಸಂಸ್ಕೃತಿ, ಇತಿಹಾಸಗಳ ಮುಖ್ಯ ಬೇರುಗಳೆಲ್ಲ ಬಹುತೇಕ ಗ್ರಾಮ ಪ್ರತಿಭೆಯೇ. ಗ್ರಾಮ ಚಿಂತನೆ ಮತ್ತು

ಗ್ರಾಮ ತಂತ್ರಜ್ಞಾನಗಳ ಮೂಲ ಬೇರುಗಳಿಂದಲೇ ಇವೆಲ್ಲವೂ ಚಿಗುರೊಡೆದಿದೆ ಎಂಬುದನ್ನು ಮರೆಯುವಂತಿಲ್ಲ. ದುರಾಸೆಗಳಿಗೆ ಒಳಗಾಗದೆ ಸೀಮಿತ ಚೌಕಟ್ಟಿನಲ್ಲಿ ತಮ್ಮ ದೈನಂದಿನ ಬದುಕು ಹಸನಾಗಬೇಕು. ಅನ್ಯದ್ವೇಷ ದೂರವಾಗಬೇಕು. ಶ್ರಮ, ಸಹನೆ, ಸಹಕಾರ, ಪ್ರೀತಿ, ವಿಶ್ವಾಸಗಳ ತಳಹದಿಯ ಆಲೋಚನೆಯ ಮೇಲೆ ನಮ್ಮ ಗ್ರಾಮ ಸಮಾಜ ಬೆಳೆಯಬೇಕು, ಎಂಬ ಮೂಲ ಆಶಯಗಳು ಈ ಗ್ರಾಮ ಸಮಾಜದ ತಳಹದಿಯಾಗಿವೆ. ಆದ್ದರಿಂದಲೇ ದ್ವೇಷಕ್ಕಿಂತ ಪ್ರೇಮ, ಆಲಸ್ಯಕ್ಕಿಂತ ಅವಿರತ ಕರ್ಮಯೋಗ, ಸಂಕುಚಿತ ದೃಷ್ಟಿಕೋನಕ್ಕಿಂತ ಲೋಕ ಮಂಗಳಕರವಾದ ವಿಶಾಲವಾದ ಜೀವನದೃಷ್ಟಿ ಇವು ನಮ್ಮ ಗ್ರಾಮೀಣ ಜನರ ಮುಖ್ಯ ಮೌಲ್ಯಗಳಾಗಿವೆ. ಈ ಕಾರಣದಿಂದಾಗಿಯೇ ಗ್ರಾಮದ ಒಬ್ಬ ವ್ಯಕ್ತಿ ಕುಟುಂಬದ ವ್ಯಕ್ತಿಯಂತೆಯೇ ಗ್ರಾಮದ ಸಮಗ್ರ ಕರುಳ ಕುಡಿಯಾಗಿದ್ದು, ಅವನ ನೋವು ನಲಿವುಗಳಲ್ಲಿ ಇಡೀ ಗ್ರಾಮಸಮಾಜ ಭಾಗಿಯಾಗಿ ಸ್ಪಂದಿಸುತ್ತಿತ್ತು.

ತಮ್ಮ ಪರಿಸರವನ್ನು ಆರೋಗ್ಯಪೂರ್ಣವಾಗಿ, ಚೊಕ್ಕಟವಾಗಿ ಅನ್ಯರಿಗೆ ಅಸಹ್ಯ ಉಂಟಾಗದ ರೀತಿಯಲ್ಲಿ ಮತ್ತು ನೋಡಿದವರಿಗೆ ಮನಸ್ಸು ಅರಳುವ ವಿನ್ಯಾಸದಲ್ಲಿ ಗ್ರಾಮ ಸಮಾಜವನ್ನು ರೂಪಿಸಿಕೊಳ್ಳುತ್ತಿದ್ದರು. ಕೌಟುಂಬಿಕ ಪರಿಸರವೆಂತೋ ಇಡೀ ಗ್ರಾಮದ ಮತ್ತು ಸಮಾಜದ ಪರಿಸರವೆಲ್ಲ ನ್ಯಾಯ ನಿಷ್ಠುರತೆ, ಆಳವಾದ ಪ್ರೀತಿಪೂರ್ವ ಚಿಂತನೆ ಮತ್ತು ಸಹಕಾರ ಪ್ರಜ್ಞೆಗಳ ಆಧಾರದ ಮೇಲೆ ಬೆಳೆದು ನಳನಳಿಸುತ್ತಿತ್ತು. ಕುಟುಂಬದ ಮತ್ತು ಸಮಾಜದ ಸರ್ವರೂ ಪ್ರೀತಿ, ವಾತ್ಸಲ್ಯ ಮತ್ತು ಸಹಕಾರಗಳಿಂದ ಬಾಳುವುದಕ್ಕೆ ಅನುಕೂಲವಾದ ಸರಳವೂ ನೈತಿಕವೂ ಆದ ಜೀವನ ನಿಯಮಗಳು ರೂಪುಗೊಂಡಿದ್ದವು. ದೊಡ್ಡವರಿರಲಿ, ಚಿಕ್ಕವರಿರಲಿ ಈ ನ್ಯಾಯ ನಿಷ್ಠುರದ ಸತ್ಯಪ್ರಿಯತೆ ಹಾಗೂ ದೈವ ಪ್ರೀತಿಯ ಚೌಕಟ್ಟಿನಲ್ಲಿ ಅನ್ಯ ಸ್ವಾತಂತ್ರ್ಯವನ್ನು ಧಿಕ್ಕರಿಸದೆ ಎಲ್ಲರೂ ತಮ್ಮ ಸ್ವಾತಂತ್ರ್ಯವನ್ನು ಮೆರೆಯಬಹುದಾಗಿತ್ತು. ಬರಬರುತ್ತ ಮನುಷ್ಯನಲ್ಲಿ ಸ್ವಾರ್ಥ ಮನೋಧರ್ಮಗಳು ಬೆಳೆದು ವಿಕೃತ ರೂಪಗಳನ್ನು ಪಡೆಯುತ್ತಾ ಹೋದಂತೆಲ್ಲ ಸಹಕಾರದ ಸೌಧ ಕುಸಿದು ನೀತಿಯ ನೆಲೆಗಟ್ಟು ನೆಲಸಮವಾಗಿ ಪ್ರೀತಿ, ವಿಶ್ವಾಸ ಪರಾನುಕಂಪಗಳ ಸಮಾಧಿಯಾಗತೊಡಗಿದಾಗ ಜೀವನದ ಸುಖ, ಸಂತೋಷಗಳು ಆವಿಯಾಗಿ ಹೋದವು. ಪ್ರಾಕೃತಿಕ ಮಾತ್ರವಲ್ಲದೆ ಸ್ವಯಂಕೃತ ಅಪರಾಧದ ಸಂಕಷ್ಟಗಳ ಮುಳ್ಳುಗಾಡಿನಲ್ಲಿ ಗ್ರಾಮೀಣ ಜನ ಸಿಕ್ಕಿಕೊಂಡರು. ಅವರು ಕಲಿಯುವ ವಿದ್ಯೆ, ಮಾಡುವ ಕ್ರಿಯೆ, ನಡೆಸುವ ಚಿಂತನೆಗಳ ವಿನ್ಯಾಸ ಮತ್ತು ವಲಯಗಳು ಮಾರ್ಪಾಟಾಗುತ್ತಾ ಬಂದವು. ಮನುಷ್ಯ ಜೀವನದ ಕಲ್ಯಾಣಕ್ಕೆ ಕಾರಕವಾಗಬಹುದಾಗಿದ್ದ ಆಧುನಿಕ ನಾಗರಿಕತೆ ಮತ್ತು ಅದರ ಸೌಲಭ್ಯಗಳು ಮನಸ್ಸಿನ ಮತ್ತು ಜೀವನದ ಭೂಮಿಕೆಗಳಲ್ಲಿ ಬಿರುಕುಂಟಾಗುವಂತೆ ಮಾಡತೊಡಗಿದವು. ಸಮಾಜ ಸುಧಾರಕರು ಏನೆಲ್ಲ ತತ್ತ್ವ ಸಿದ್ಧಾಂತಗಳನ್ನು ಹೇಳಿದರೂ, ಕುಟುಂಬ, ಸಮಾಜ, ಸಮೃದ್ಧಿ, ವಾತ್ಸಲ್ಯದ ತಳಹದಿಯ ಜೀವನ ದೃಷ್ಟಿಗಳು ಯಾವುದೇ ರೀತಿಯ ಪ್ರಯೋಜನ ಕಾಣಲಿಲ್ಲ. ಸ್ವತಂತ್ರ ಕರ್ಮಜೀವಿಗಳೂ ಹಾಗೂ ಧರ್ಮ ದೃಷ್ಟಿಯುಳ್ಳವರೂ ಆಗಿದ್ದ ಗ್ರಾಮೀಣ ಜನ ಪ್ರತಿಯೊಂದಕ್ಕೂ ಸರ್ಕಾರದ, ಸಂಸ್ಥೆಗಳ ಮತ್ತು ಅನ್ಯರ ಸಹಾಯವನ್ನು ಬೇಡುತ್ತಾ ಪರಾವಲಂಬಿಗಳಾಗ ತೊಡಗಿದರು. ಈ ಪರಿಣಾಮವಾಗಿ ಶ್ರಮಜೀವನ ಮತ್ತು ಸಂಘಜೀವನಗಳು ಮಣ್ಣು ಮುಕ್ಕತೊಡಗಿದವು. ಇದು ನಾಗರಿಕತೆ ಮತ್ತು ಬೌದ್ಧಿಕತೆ ತಂದುಕೊಟ್ಟ ವಿಷಮಫಲ ಎಂಬುದು ಕ್ರೂರ ವ್ಯಂಗ್ಯವೇ ಹೌದು. ಮೇಲಿನ ಹಿನ್ನೆಲೆಯಲ್ಲಿ ಪ್ರಾಚೀನ ಗ್ರಾಮ ಜೀವನಕ್ಕೂ ವರ್ತಮಾನದ ಗ್ರಾಮ ಜೀವನಕ್ಕೂ

ಇರುವ ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು, ಅವುಗಳ ಸ್ವರೂಪ ಮತ್ತು ಉದ್ದೇಶವನ್ನು ದೃಷ್ಟಿ, ಧ್ಯೇಯಗಳನ್ನು ತೌಲನಿಕವಾಗಿ ಅಭ್ಯಾಸ ಮಾಡಿದರೆ ನಾವು ಕಳೆದುಕೊಂಡಿರುವ ಜೀವನ ಶಾಂತಿ ಯಾವುದು ಎಂಬುದು ಮನದಟ್ಟಾಗುತ್ತದೆ.

ಭಾರತಕ್ಕೆ ಸ್ವಾತಂತ್ರ್ಯ ದೊರೆತ ನಂತರ ಭಾರತೀಯರ, ಮುಖ್ಯವಾಗಿ ಗ್ರಾಮೀಣ ಪ್ರದೇಶಗಳ ಉದ್ಧಾರಕೆಂದು ನಮ್ಮ ಪ್ರಜಾಪ್ರಭುತ್ವ ಮಾದರಿಯ ಸರ್ಕಾರವು ಪಂಚವಾರ್ಷಿಕ ಯೋಜನೆಗಳನ್ನು ಕೈಗೊಂಡಿತು. ಪ್ರಾರಂಭದಲ್ಲಿ ಸರ್ಕಾರದ ಈ ಯೋಜನೆಗಳು ನಮ್ಮ ಗ್ರಾಮೀಣ ಜನರ ಬದುಕಿನಲ್ಲಿ ಕ್ರಾಂತಿಯನ್ನು ಸಾಧಿಸುವುದಕ್ಕೆ ಬರುತ್ತದೆ ಎಂದು ತಿಳಿಯಲಾಗಿತ್ತು. ಒಂದನೇ ಪಂಚವಾರ್ಷಿಕ ಯೋಜನೆಯಲ್ಲಿ ಈ ಬಗೆಯಲ್ಲಿ ಪ್ರಗತಿ ಕಂಡಿತ್ತಾದರೂ ನಂತರ ಅದರ ಪ್ರಗತಿ ಸ್ಥಗಿತಗೊಂಡಿತು. ಇಂದು ಹತ್ತನೆಯ ಪಂಚವಾರ್ಷಿಕ ಯೋಜನೆಗಳು ಪ್ರಗತಿಯಲ್ಲಿದ್ದರೂ ಸಹ ನಮ್ಮ ಗ್ರಾಮಗಳ ಸ್ಥಿತಿಗತಿ ಹೇಳತೀರದಾಗಿದೆ. ಪ್ರತಿಯೊಬ್ಬ ಮನುಷ್ಯಗೂ ಪ್ರಾಥಮಿಕವಾಗಿ ಬೇಕಾಗುವ ಸೌಕರ್ಯಗಳಂತೆ ಪ್ರತಿಯೊಂದು ಗ್ರಾಮಕ್ಕೂ ಪ್ರಾಥಮಿಕವಾಗಿ ಬೇಕಾಗಿರುವ ರಸ್ತೆ ಸೌಕರ್ಯ, ಬಸ್ಸಿನ ವ್ಯವಸ್ಥೆ, ವಿದ್ಯುತ್ ಸಂಪರ್ಕ, ಪ್ರಾಥಮಿಕ ಶಿಕ್ಷಣದ ಕೊರತೆ, ಕುಡಿಯುವ ನೀರಿನ ತೊಂದರೆ, ಪ್ರಾಥಮಿಕ ಆರೋಗ್ಯದ ಸಮಸ್ಯೆ ಹೇಳತೀರದಾಗಿದೆ.

ಜಾಗತೀಕರಣ ಹಾಗೂ ಖಾಸಗೀಕರಣದಿಂದಾಗಿ ಗ್ರಾಮೀಣ ಜನರ ಮುಖ್ಯ ಕಸುಬುಗಳು ಮಾಯವಾಗಿ ಅವರ ಬದುಕು ನೀರಿನಿಂದ ಮೇಲೆ ತೆಗೆದ ಮೀನಿನಂತಾಗಿದೆ. ಭಾರತದ ಗ್ರಾಮೀಣ ಜನರು ಜಗತ್ತಿನ ಇತರೆ ಗ್ರಾಮೀಣರಂತೆಯೇ ಸಂಪ್ರದಾಯ ಶೀಲರಾಗಿದ್ದಾರೆ. ಆದರೂ ಇವರು ಪ್ರಗತಿಯ ಜೊತೆಜೊತೆಗೆಯೇ ನಡೆಯುವವರಾಗಿದ್ದಾರೆನ್ನಬಹುದು. ಅವರ ಕೃಷಿ ಚಟುವಟಿಕೆಗಳು ಹಾಗೂ ಆರ್ಥಿಕ ವ್ಯವಸ್ಥೆಗಳು ಅವರು ಬೆಳೆದು ಬಂದಿರುವ ಸಾಮಾಜಿಕ ಕಟ್ಟುನಿಟ್ಟುಗಳಿಗೆ ಒಳಗಾಗಿವೆ. ಪರಂಪರಾಗತವಾಗಿ ಬಂದ ಈ ಪದ್ಧತಿ ಅವರಿಗಿರುವ ದುಃಸ್ಥಿತಿಯಲ್ಲಿ ರಕ್ಷಣೆಯನ್ನು, ಬದುಕುವ ಆಸೆಯನ್ನು ನೀಡಿದೆ. ಹತ್ತಿರದ ಪಟ್ಟಣದ ಯಾಂತ್ರೀಕೃತ ಉದ್ಯಮಗಳು ಅವರ ಅವಿಭಕ್ತ ಕುಟುಂಬ ರಚನೆಯಲ್ಲಿ ತುಡಿತಗಳನ್ನುಂಟು ಮಾಡಿ, ಮನೆಯ, ಹಾಗೂ ಗ್ರಾಮಗಳ ಯುವಕ, ಯುವತಿಯರು ಮೆಲ್ಲಮೆಲ್ಲನೆ ನಗರಗಳಿಗೆ ಸಾಗಿರುವುದನ್ನು, ಸಾಗುತ್ತಿರುವುದನ್ನು ಗ್ರಾಮದ ಹಿರಿಯರು-ಅಸಹಾಯಕರಾಗಿ ನೋಡುತ್ತಿದ್ದಾರೆ. ಬೃಹತ್ ಕೈಗಾರಿಕೆಗಳು, ಜಾಗತೀಕರಣ, ಖಾಸಗೀಕರಣ ಮುಂತಾದವುಗಳು ಗ್ರಾಮದ ಬಡವರನ್ನು ಹಾಗೂ ಅಸ್ಪೃಶ್ಯರನ್ನು ಇದ್ದ ಹಾಗೆಯೇ ಉಳಿಸಿಕೊಂಡಿವೆ.

ಆದರೆ ಶ್ರೀಮಂತರನ್ನು ಇನ್ನೂ ಶ್ರೀಮಂತರನ್ನಾಗಿ ಮಾಡಿ ಅವರ ನಡುವಿನ ನಾಳೆಯ ಸಂಬಂಧಕ್ಕೆ ವ್ಯತ್ಯಯ ತಂದುದನ್ನು ಅವರು ಅನುಭವಿಸುತ್ತಿದ್ದಾರೆ. ಇಂದಿನ ಸಾರಿಗೆ ಸಂಪರ್ಕದ ಸೌಕರ್ಯದಿಂದಾಗಿ ಬ್ರಾಹ್ಮಣ ಶೂದ್ರರೆನ್ನದೆ ಎಲ್ಲರೂ ಸರಿಸಮನಾಗಿ ಕುಳಿತು ಪ್ರವಾಸ ಮಾಡುವ ಸಂದರ್ಭವನ್ನು ಮನಗಂಡಿದ್ದಾರೆ. ಮಾರುಕಟ್ಟೆಯ ಸಲುವಾಗಿ ಕೃಷಿಯ ಉತ್ಪಾದನೆಯಲ್ಲಿ ತೊಡಗಿದ ರೈತರು ಮಧ್ಯವರ್ತಿಗಳ ಸಂಬಂಧ ಕುಂಠಿತವಾಗುವುದನ್ನು ನಿರೀಕ್ಷಿಸಿದ್ದಾರೆ. ಇವೆಲ್ಲವೂ ಹಳ್ಳಿಯ ನಾಳೆಯ ಜೀವನಕ್ಕೆ ಧಕ್ಕೆಯನ್ನುಂಟುಮಾಡಿ

ಇದ್ದ ಶಾಂತಿಯನ್ನು ಕದಡಿದುದನ್ನು ಮನಗಂಡು ಯಾಂತ್ರಿಕ ಜೀವನವನ್ನು, ನಗರೀಕರಣವನ್ನು, ಜಾಗತೀಕರಣವನ್ನು ವಿರೋಧಿಸುವ ದಿಕ್ಕಿನಲ್ಲಿಯೇ ನಮ್ಮ ಗ್ರಾಮಗಳನ್ನು ರಕ್ಷಿಸಿಕೊಳ್ಳಬೇಕಾಗಿದೆ.

ಜಾತಿ ಶ್ರೇಣಿಯಲ್ಲಿ ಕೆಳಗಿನ ಹಂತದಲ್ಲಿರುವ ಜನರು, ಮುಖ್ಯವಾಗಿ ಹೊಲೆಯರು, ಮಾದಿಗರು, ಜಾಡಮಾಲಿಗಳು ಇಂದಿನ ಶಿಕ್ಷಣದ ಯೋಜನೆಗಳ ಫಲಾನುಭವದ ಲಾಭವನ್ನು ಪಡೆದು ಶೈಕ್ಷಣಿಕವಾಗಿ ಮುಂದೆ ಬರುತ್ತಿದ್ದಾರೆ. ಪಟ್ಟಣದ ರಸ್ತೆಗಳನ್ನು ತಮ್ಮ ಹಳ್ಳಿಯ ಎಡಬಲ್ಲದಲ್ಲಿಯೇ ಕಾಣದ ಜನತೆ ಈಗ ತಮ್ಮ ಗ್ರಾಮಗಳಿಗೆ ಬರುವ ಬಸ್ಸುಗಳಲ್ಲಿ ಕುಳಿತು ಪಟ್ಟಣ ಸಂಪರ್ಕವನ್ನು ಹೆಚ್ಚು ಹೆಚ್ಚಾಗಿ ಪಡೆದು ಜಾಗತಿಕ ಗ್ರಾಮಗಳನ್ನಾಗಿ ಪರಿವರ್ತಿಸಿಕೊಳ್ಳುತ್ತಿದ್ದಾರೆ.

ನಮ್ಮ ನಗರ ಸಂಸ್ಕೃತಿ ಗ್ರಾಮೀಣ ಸಂಸ್ಕೃತಿಯನ್ನು ಎಂದಿನಂತೆ ಮುಂದುವರೆಯುವುದಕ್ಕೆ ಬಿಡುತ್ತಿಲ್ಲ. ಗ್ರಾಮಗಳಲ್ಲಿ ನಗರದ ಪ್ರಭಾವ ಹೆಚ್ಚಾಗಿದೆ. ಸಿನಿಮಾ, ಹೋಟೆಲು ಇತ್ಯಾದಿ ಆಧುನಿಕ ಆಕರ್ಷಣೆಗಳು ಗ್ರಾಮೀಣ ಸಂಸ್ಕೃತಿಯನ್ನು ಮರೆಯುವಂತೆ ಮಾಡುತ್ತಿದೆ. ನಮ್ಮ ಗ್ರಾಮೀಣ ಜನರು ಅವರಿಗೆ ಅನುಕೂಲವಾಗುವಂತಹ ಕೆಲಸಗಳನ್ನು ಹುಡುಕಿಕೊಂಡು ನಗರಗಳಿಗೆ ವಲಸೆ ಹೋಗುತ್ತಿದ್ದಾರೆ. ಅವಿಭಕ್ತ ಕುಟುಂಬಗಳಲ್ಲಿ ಬಿರುಕು ಉಂಟಾಗಿ ಹಲವು ಮನಸ್ತಾಪ, ಸೋಮಾರಿತನದ ಬದುಕಿಗೆ ನಮ್ಮ ನಗರಗಳು ಗ್ರಾಮೀಣ ಜನರ ಮೇಲೆ ಹೆಚ್ಚು ಒತ್ತಡವನ್ನು ಹೇರುತ್ತಿದ್ದಾರೆ. ರಾಜಕಾರಣದ ಪ್ರಭಾವದಿಂದ ನಮ್ಮ ಗ್ರಾಮಗಳಲ್ಲಿ ಅನೇಕ ಪಂಗಡಗಳು ವಿಭಜನೆಗಳಾಗಿವೆ. ಇದರ ಪರಿಣಾಮವಾಗಿ ನಮ್ಮ ಹೆಚ್ಚು ಗ್ರಾಮಗಳು ಹಿಂದಿನ ಸ್ಥಿತಿಯಲ್ಲೇ ಇವೆ, ಮುಂದುವರಿಯುತ್ತಿಲ್ಲ. ಈ ಎಲ್ಲದರ ಪರಿಣಾಮವಾಗಿ ನಮ್ಮ ಗ್ರಾಮೀಣ ಸಂಸ್ಕೃತಿ ನಡೆ ವಿಚಿತ್ರವಾಗಿ ಸಾಗುತ್ತಿದೆ.

ನಮ್ಮ ಗ್ರಾಮಗಳ ಇಂದಿನ ಸ್ಥಿತಿಯಂತೂ ತುಂಬಾ ಚಿಂತಾಜನಕವಾಗಿದೆ. ಶತಶತಮಾನಗಳಿಂದ ತಾವೇ ಭ್ರಮಿಸಿಕೊಂಡಿದ್ದಂತಹ ಸಮಾಜದ ಶ್ರೇಷ್ಠತೆ ಹಾಗೂ ಸಂಸ್ಕೃತಿಯ ಸಂರಕ್ಷಕರೆಂದು ತಿಳಿದು ಸಾಮಾಜಿಕವಾಗಿ ಹಾಗೂ ಮಿಕ್ಕ ಕ್ಷೇತ್ರಗಳಲ್ಲಿಯೂ ಸುರಕ್ಷಿತವಾಗಿಯೇ ಬಾಳಿದಂತಹ ಬ್ರಾಹ್ಮಣರು, ಇಂದು ತಮ್ಮ ಜವಾಬ್ದಾರಿಯುತವಾದಂತಹ ಪ್ರಮುಖ ಸ್ಥಾನಗಳನ್ನು ಕಳೆದುಕೊಂಡು, ಗ್ರಾಮದ ತಮ್ಮ ಒಡನಾಡಿಗಳಿಂದ ಬೇರೆಯಾಗುತ್ತಿದ್ದಾರೆ. ಕ್ಷತ್ರಿಯರು, ವೈಶ್ಯರು ಹಾಗೂ ಶೂದ್ರರೂ ಕೂಡ ತಮ್ಮ ತಮ್ಮ ಮುಖ್ಯ ವೃತ್ತಿಯನ್ನು ಸಂಪೂರ್ಣವಾಗಿ ಕೈಬಿಟ್ಟು ಸರ್ಕಾರದ ಸೇವಾ ವೃತ್ತಿಯಲ್ಲಿ ತೊಡಗಿಕೊಂಡು ಸ್ವಪ್ರತಿಷ್ಠೆಯಿಂದ ಜೀವನ ನಡೆಸಲು ಪ್ರಾರಂಭಿಸಿದ ನಂತರ ಸಮಾಜದ, ಗ್ರಾಮ ಸ್ವರಾಜ್ಯದ, ರಾಷ್ಟ್ರದ ಹಿತದಿಂದ ದುಡಿಯುವುದನ್ನು ಬಿಟ್ಟರೆನ್ನಬಹುದು. ಹಾಗಾಗಿ ನಮ್ಮ ಗ್ರಾಮಗಳ ಈಗಿನ ಸ್ಥಿತಿ ತುಂಬಾ ಶೋಚನೀಯವಾಗಿದೆ. ಪ್ರತಿಯೊಂದು ಗ್ರಾಮವು ಬಡತನಕ್ಕೆ ತೌರುಮನೆ. ಜನರಲ್ಲಿ ನಿರುತ್ಸಾಹ, ಅಸೂಯೆ, ನಿರುದ್ಯೋಗ, ಕೊಲೆ, ಸುಲಿಗೆ, ದರೋಡೆ, ಅನೈತಿಕ ವ್ಯವಸ್ಥೆ ತಾಂಡವವಾಡುತ್ತಿದೆ. ಹಾಗೆಯೇ ಹಿರಿಯರ ಬಗ್ಗೆ ಅಗೌರವವುಂಟಾದ ಕಾರಣ ನಮ್ಮ ಊರು, ನಮ್ಮ ಜನ, ನಮ್ಮ ಸಂಸ್ಕೃತಿ, ನಮ್ಮ ನಾಡು, ಎಂಬುವಂತಹ ಮಾತಿನಿಂದ ತುಂಬ ದೂರ ಸರಿಯುತ್ತಿದ್ದಾರೆ.

ಇತ್ತೀಚಿನ ಸಮೀಕ್ಷೆಯ ಪ್ರಕಾರ ಸಾಮಾಜಿಕವಾಗಿ ಉತ್ತಮರೆಂದು ಶತಮಾನದಿಂದ ಕರೆದುಕೊಂಡು ಬಂದವರೆಲ್ಲರೂ, ತಮ್ಮ ಊರುಗಳನ್ನು ತೊರೆದು ಪಟ್ಟಣದ ಖಾಯಂ ವಾಸಿಗಳಾಗಿ ಪರಿವರ್ತನೆಗೊಂಡಿದ್ದಾರೆ. ಹಾಗಾಗಿ ಇಂದು ಗ್ರಾಮಗಳಲ್ಲಿ ಉಳಿದಿರುವ ಕೆಳವರ್ಗದ ಜನರೇ ಹೆಚ್ಚು. ಗ್ರಾಮೀಣ ಪ್ರದೇಶದ ವಿದ್ಯಾವಂತರು, ದೃಢಕಾಯ ಯುವಕರು, ಸುಸಂಸ್ಕೃತರು ಎನಿಸಿಕೊಂಡಿರುವ ಹಳ್ಳಿಯ ಯುವಕರು ಹಳ್ಳಿಯನ್ನು ಬಿಟ್ಟು ಪಟ್ಟಣ ಸೇರುತ್ತಿದ್ದಾರೆ. ಇಂದಿನ ಆಧುನಿಕತೆಯ ಭರಾಟೆಯಲ್ಲಿ ಸಿಲುಕಿಕೊಂಡು ತಾವು ಹುಟ್ಟಿದೂರಿನ ಸಂಪ್ರದಾಯಗಳನ್ನು ಸಂಪೂರ್ಣವಾಗಿ ಮರೆಯುತ್ತಿದ್ದಾರೆ. ಅವರಲ್ಲಿ ಉತ್ಸಾಹ, ಶಕ್ತಿ ಎಲ್ಲವೂ ಕುಗ್ಗುತ್ತಿವೆ. ಇವುಗಳ ಜೊತೆಗೆ ನಗರೀಕರಣದಿಂದ ಹಾಗೂ ಆಧುನೀಕರಣದಿಂದ ಏನೆಲ್ಲಾ ಮುಂದೆ ಬರುತ್ತಿದ್ದರೂ ಬಿಡೆನೆಂದು ಅವರ ಜೊತೆಗೇ ಅಂಟು ಜಾಡ್ಯವಾಗಿ ಅಂಟಿಕೊಂಡಿರುವಂತಹ ಅವಿದ್ಯೆ, ಅಜ್ಞಾನ, ಬಡತನಗಳು, ಆವರಿಸಿಕೊಂಡಿವೆ.

ಇಂದಿನ ನಮ್ಮ ಗ್ರಾಮಗಳ ದುಃಸ್ಥಿತಿಗೆ ಅನೇಕ ಕಾರಣಗಳುಂಟು. ಈ ಹಂತದಲ್ಲಿ ನಾವು ಗಮನಿಸಬಹುದಾದಂತಹ ಮೊದಲನೆ ಕಾರಣ ಬ್ರಿಟಿಷರ ಆಳ್ವಿಕೆಯ ಕಾಲ. ಈ ಬ್ರಿಟಿಷರ ಆಳ್ವಿಕೆಯ ಕಾಲದಿಂದ ನಮ್ಮ ಗ್ರಾಮಗಳ ಇಳಿಮೆ ಪ್ರಾರಂಭವಾಯಿತು. ಏಕೆಂದರೆ ಅವರು ನಗರಗಳನ್ನು ಆಧುನಿಕ ಮಾದರಿಯಲ್ಲಿ ಅಭಿವೃದ್ಧಿಪಡಿಸಿದಂತೆಲ್ಲಾ ಶತಶತಮಾನಗಳಿಂದ ಹಳ್ಳಿಯನ್ನೇ ಡೆಲ್ಲಿ ಎಂದು ನಂಬಿದ್ದಂತಹ ನಮ್ಮವರು ಪಟ್ಟಣಗಳ ಮೋಹಕ್ಕೆ ಬಿದ್ದು ತಮ್ಮ ಗ್ರಾಮಗಳನ್ನು ತ್ಯಜಿಸಲಾರಂಭಿಸಿದರು. ಅದರಲ್ಲಿಯೂ ಮುಖ್ಯವಾಗಿ ಇಂಗ್ಲಿಷ್ ಶಿಕ್ಷಣದ ಪ್ರಭಾವ, ಇಂಗ್ಲಿಷ್ ವಿದ್ಯಾಭ್ಯಾಸ ಮಾಡಿದಂತಹ ಯುವಕ, ಯುವತಿಯರು ತಮ್ಮ ಹಿಂದಿನ ಸಂಸ್ಕೃತಿ, ಆಚಾರ, ವಿಚಾರಗಳನ್ನು ಉಪೇಕ್ಷೆ ಮಾಡಿ, ತಮ್ಮ ತವರು ಗ್ರಾಮವನ್ನು, ಅಲ್ಲಿ ತಾವು ಕಳೆದ ಬಾಲ್ಯದ ಸುವರ್ಣದಂತಹ ಸಮಯವನ್ನು, ಸಂಪೂರ್ಣವಾಗಿ ಮರೆತು ಅಲಕ್ಷಿಸುತ್ತಿದ್ದಾರೆ. ಗೃಹ ಕೈಗಾರಿಕೆಯ ಸ್ಥಳಕ್ಕೆ ಯಂತ್ರಗಳು ಬಂದು, ತಮ್ಮ ಜೀವನಾಧಾರವನ್ನಾಗಿ ನಂಬಿಕೊಂಡಿದ್ದಂತಹ, ಗೃಹಕೈಗಾರಿಕಾ ಕಸಬುದಾರರ ಸ್ಥಿತಿ ಶೋಚನೀಯವಾಯಿತು. ಅವರೂ ಸಹ ತಮ್ಮ ಜೀವನಕ್ಕಾಗಿ ಗ್ರಾಮಗಳನ್ನು ತ್ಯಜಿಸುವ ಸ್ಥಿತಿ ಬಂದೊದಗಿತು. ಅವುಗಳನ್ನು ಈ ಕೆಳಗಿನ ಅಂಶಗಳಿಂದ ವಿವರಿಸಬಹುದು.

೧. ಇಂದು ನಮ್ಮ ಪ್ರಾಚೀನ ಸಂಸ್ಕೃತಿಯ ಅಂಶಗಳೊಂದಿಗೆ ಆಧುನಿಕ ಅಂಶಗಳು ಸೇರಿಕೊಳ್ಳುತ್ತಿವೆ. ಹಾಗಾಗಿ ಎರಡೂ ಒಟ್ಟೊಟ್ಟಿಗೆ ಇರುವುದನ್ನು ಕಾಣಬಹುದು. ನಮ್ಮ ನಗರಗಳಲ್ಲಿಯೂ ಸಹ ಪ್ರಾಚೀನ ಸಂಸ್ಕೃತಿಯ ಅಂಶಗಳನ್ನು ಕಾಣಬಹುದು. ಉದಾ: ನಾವು ಆಚರಿಸುವ ಹಬ್ಬ ಹರಿದಿನಗಳು ನಮ್ಮ ಪ್ರಾಚೀನ ಸಂಸ್ಕೃತಿಯ ಕೊಡುಗೆಗಳಾಗಿವೆ. ಅದನ್ನು ನಮ್ಮ ನಗರ ಸಂಸ್ಕೃತಿಯಲ್ಲಿ ಇಂದಿಗೂ ಸಹ ಕಾಣಬಹುದಾಗಿದೆ. ನಮ್ಮ ಗ್ರಾಮಗಳಲ್ಲಿ ಗ್ರಾಮದೇವತೆಯನ್ನು ಪೂಜಿಸುತ್ತಾರೆ ಮತ್ತು ಬೇರೆ ದೇವರುಗಳನ್ನೂ ಸಹ ಪೂಜಿಸುತ್ತಾರೆ.

೨. ನಮ್ಮ ಗ್ರಾಮೀಣ ಜನರ ಬದುಕು ಮೊದಲಿಗಿಂತಲೂ ಈಗ ಸುಧಾರಿಸುತ್ತಿದೆ. ಆದರೂ ಸಹ ನಮ್ಮ ಗ್ರಾಮೀಣ ಜನರ ನಿತ್ಯದ ದುಡಿಮೆ ಹಾಗೆಯೇ ಸಾಗುತ್ತಿದೆ. ಎಷ್ಟೇ ಕಷ್ಟಪಟ್ಟರೂ ಸಹ ನಮ್ಮ ಗ್ರಾಮೀಣ ಜನರು ಇದ್ದ ಸ್ಥಿತಿಯಲ್ಲಿಯೇ ಇರಬೇಕಾದ ಪರಿಸ್ಥಿತಿ ಬಂದಿದೆ. ಬಡತನದ ಬಾಳನ್ನು ನಮ್ಮ ಗ್ರಾಮೀಣ ಸಂಸ್ಕೃತಿಯಲ್ಲಿ ಕಾಣಬಹುದಾಗಿದೆ. ಜನರು ಅಂದರೆ ಕಷ್ಟ ಪಡುವ ಜನರು ಮುಂದುವರೆಯುವುದಕ್ಕೆ ಆಗುತ್ತಿಲ್ಲ.

೩. ವಿದ್ಯಾಭ್ಯಾಸ ನಮ್ಮ ಗ್ರಾಮೀಣ ಜನರ ಬದುಕಿನಲ್ಲಿ, ಒಂದು ಗಂಭೀರ ತಿಳುವಳಿಕೆಯನ್ನು ಮೂಡಿಸಿರುವುದನ್ನು ಕಾಣಬಹುದು. ಎಂತಹ ಬಡಕುಟುಂಬದಲ್ಲಿ ಇರುವವನಿಗೂ ಸಹ ಉತ್ತಮ ಮಟ್ಟದ ಶಿಕ್ಷಣ ದೊರೆಯುತ್ತಿದೆ. ಜೀತಗಾರರೂ ಸಹ ತಮ್ಮ ಮಕ್ಕಳಿಗೆ ಉತ್ತಮ ಶಿಕ್ಷಣವನ್ನು ಕೊಡಿಸಲು ಮುಂದೆ ಬರುತ್ತಿದ್ದಾರೆ. ಗಂಡು ಹೆಣ್ಣು ಎಂಬ ಭೇದ ಭಾವವಿಲ್ಲದೆ ಎಲ್ಲರೂ ಸಹ ಶಿಕ್ಷಣ ಪಡೆಯುವಲ್ಲಿ ಮುಂದಾಗುತ್ತಿದ್ದಾರೆ.

೪. ಇಂದು ಗ್ರಾಮೀಣ ಪರಿಸರದಲ್ಲಿ ಅವಲಂಬನೆಯ ಬದುಕಿನ ನಡುವೆಯೂ ಸ್ವಾವಲಂಬನೆ ಇರುವುದನ್ನು ಕಾಣಬಹುದು. ವೈದ್ಯಕೀಯ ವ್ಯವಸ್ಥೆಯಿಂದ ನಮ್ಮ ಗ್ರಾಮೀಣ ಜನರು ಹಲವಾರು ಖಾಯಿಲೆ ಕಸಾಲೆಗಳಿಂದ ಪಾರಾಗುತ್ತಿದ್ದಾರೆ. ಸಂಪರ್ಕ ಸಾಧನಗಳು ನಮ್ಮ ಗ್ರಾಮಗಳಿಗೆ ಬೇಗ ತಲುಪುತ್ತಿವೆ. ವೈಜ್ಞಾನಿಕ ಜಗತ್ತು ಮತ್ತು ಮೂಢನಂಬಿಕೆಯ ಜಗತ್ತು ಇವೆರಡನ್ನೂ ಸಹ ನಾವು ನಮ್ಮ ಗ್ರಾಮೀಣ ಸಂಸ್ಕೃತಿಯಲ್ಲಿ ಕಾಣುತ್ತಿದ್ದೇವೆ.

೫. ಇಂದಿನ ಯುವ ಜನಾಂಗದಲ್ಲಿ (ಗಂಡು-ಹೆಣ್ಣು) ಸಾಮರಸ್ಯ ಮತ್ತು ಸಾಂಘಿಕ ಕಾರ್ಯದ ಒಲವು ಹೆಚ್ಚಾಗುತ್ತಿದೆ. ಗಂಡು ಹೆಣ್ಣು ಎಂಬ ಭೇದ ಭಾವವಿಲ್ಲದೆ ಎಲ್ಲಾ ಕ್ಷೇತ್ರಗಳಲ್ಲಿಯೂ ಕಷ್ಟಪಟ್ಟು ದುಡಿಯುತ್ತಿದ್ದಾರೆ. ಮತ್ತು ನಾವೆಲ್ಲ ಒಂದೇ ಎನ್ನುವ ಬಗ್ಗೆ ಗೌರವವಿದೆ. ಭೇದ ಭಾವವಿಲ್ಲದೆ, ಒಬ್ಬರನ್ನೊಬ್ಬರು ಗೌರವಿಸುವ ಮನಸ್ಥಿತಿ ಇದೆ. ಯುವಕ ಮತ್ತು ಯುವತಿಯರ ಮಂಡಳಿಗಳು ಬಹುತೇಕ ಎಲ್ಲ ಗ್ರಾಮಗಳಲ್ಲಿಯೂ ಹುಟ್ಟಿಕೊಂಡು ತಂತಮ್ಮ ಗ್ರಾಮೀಣ ಅಭಿವೃದ್ಧಿಗೆ ಶ್ರಮಿಸುತ್ತಿವೆ.

೬. ಸ್ತ್ರೀಯ ಸ್ಥಾನಮಾನ ಸುಧಾರಣೆಯಾಗಿದೆ. ಸ್ತ್ರೀಯ ದುಡಿಮೆಯ ಮಹತ್ವ ನಮ್ಮ ಗ್ರಾಮೀಣ ಸಂಸ್ಕೃತಿಯಲ್ಲಿ ಹೆಚ್ಚು ಪರಿಗಣಿತವಾಗುತ್ತಿದೆ. ಅವಳೂ ಸಹ ನಮ್ಮ ಕಷ್ಟ ಸುಖಗಳನ್ನು ಅರ್ಥಮಾಡಿಕೊಂಡು ದುಡಿಯುತ್ತಿದ್ದಾಳೆ. ಹಾಗಾಗಿ ಸ್ತ್ರೀಯರ ದುಡಿಮೆಯ ಶ್ರಮವನ್ನು ನಮ್ಮ ಗ್ರಾಮೀಣ ಜನರು ಅರ್ಥ ಮಾಡಿಕೊಳ್ಳುತ್ತಿದ್ದಾರೆ.

೭. ರಾಜಕೀಯ ತಿಳುವಳಿಕೆ ಮತ್ತು ಚಳುವಳಿಗಳ ಪ್ರಭಾವಗಳು ಗ್ರಾಮೀಣ ಜನರ ಬದುಕನ್ನು ಹೆಚ್ಚು ಗಂಭೀರಗೊಳಿಸಿದೆ. ಹಲವು ರಾಜಕೀಯ ಪ್ರಭಾವಗಳು ನಮ್ಮ ಗ್ರಾಮಗಳಲ್ಲಿ ಹುಟ್ಟಿಕೊಂಡು ಜನರಲ್ಲಿ ಒಂದು ರೀತಿಯ ಗಂಭೀರ ಚಿಂತನೆಗೆ ಗುರಿಮಾಡಿದೆ.

ಒಟ್ಟಿನಲ್ಲಿ ಹೇಳುವುದಾದರೆ ನಮ್ಮ ಗ್ರಾಮೀಣ ಸಂಸ್ಕೃತಿಯ ಸಮಗ್ರ ಸ್ವರೂಪದ ಹುಡುಕಾಟ ಅಧ್ಯಯನದ ಮುಖ್ಯ ಉದ್ದೇಶವಾಗಿದ್ದು, ಆ ಮೂಲಕ ಸಣ್ಣಕತೆ ಮತ್ತು ಗ್ರಾಮೀಣ ಪರಿಸರಗಳು ಹೇಗೆ ಪೂರಕವಾಗಿ ಒಂದು ಸಾಂಸ್ಕೃತಿಕ, ಕಥನವನ್ನು ನಿರ್ದೇಶಿಸುವಲ್ಲಿ ಶಕ್ತವಾಗಿದೆ ಎಂಬುದನ್ನು, ಈ ಮೂಲಕ ಗುರುತಿಸುವ ಪ್ರಯತ್ನ ಮಾಡಲಾಗಿದೆ. ಸಣ್ಣಕತೆಗಳಲ್ಲಿನ ಸೂಕ್ಷ್ಮತೆಯೇ ನಮ್ಮ ಗ್ರಾಮೀಣ ಬದುಕಿನ ಸ್ಥಿತಿಗತಿಯು ಬಹಳ ಗಂಭೀರವಾಗಿರುವುದನ್ನು ಹೇಳುತ್ತಿವೆ. ಗ್ರಾಮ ಮತ್ತು ನಗರಗಳ ನಡುವಣ ಅಂತರ, ವ್ಯಾಪಾರೀಕರಣ-ಕೈಗಾರಿಕೀಕರಣ ಪ್ರಕ್ರಿಯೆಯಿಂದಾಗಿ ಹೆಚ್ಚಾಗುತ್ತಿರುವುದೂ ಇಲ್ಲಿ ಗಮನಾರ್ಹ. ಏನೇ ಸಂಪರ್ಕ ಸಾಧನಗಳು ಸಾಧ್ಯವಾಗಿರುವುದಾದರೂ ಗ್ರಾಮಗಳು ತಮ್ಮ ಪೂರ್ಣ ಸ್ವಾವಲಂಬನೆಗಿಂತ ನಗರಗಳಿಗೆ ಹೆಚ್ಚಾಗಿ ಅವಲಂಬನೆಗೊಂಡಿವೆ ಎಂಬುದಂತೂ ನಿಜ. ಎಂತಲೇ ನಮ್ಮ ರಾಜ್ಯದಲ್ಲಿ ಗ್ರಾಮೀಣಾಭಿವೃದ್ಧಿ, ಗ್ರಾಮೀಣ

ವಿದ್ಯಾರ್ಥಿಗಳಿಗೆ ವಿಶೇಷ ಸೌಲಭ್ಯ ಕಲ್ಪಿಸಿರುವುದು, ಆದರೆ ಅದು ಕೇವಲ ರಾಜಕೀಯ ಸವಲತ್ತಾಗಿ ಪಕ್ಷರಾಜಕಾರಣ ಮತ್ತು ಮತಗಳಿಕೆಯ ಮಟ್ಟದಲ್ಲಿಯೇ ವ್ಯವಹರಿಸಲ್ಪಡುತ್ತಿರುವುದು ಮಾತ್ರ ದುರಂತವೇ ಸರಿ. ಇಷ್ಟೆಲ್ಲ ಅಂತರಗಳ ನಡುವೆಯೂ ಮಾನವೀಯತೆಯಂಥ ಸಾಂಸ್ಕೃತಿಕ ಮೌಲ್ಯವು ಗ್ರಾಮೀಣ ಬದುಕಿನಲ್ಲಿ ಇಂದಿಗೂ ಉಳಿದುಕೊಂಡಿದೆ ಎಂಬುದನ್ನು ಗಮನಿಸಬೇಕು. ಈ ಮೌಲ್ಯವೇ ಗ್ರಾಮಗಳನ್ನು ನಿರಂತರವಾಗಿ ಉಳಿಸುವ ಸಂಜೀವಿನಿ. ನಗರಗಳ ಬದುಕು ವ್ಯಾವಹಾರಿಕ ಮತ್ತು ಜಟಿಲವಾದುದು. ಗ್ರಾಮಗಳ ಬದುಕು ಮಾನವೀಯ ಮತ್ತು ಸರಳವಾದುದು. ಹಾಗಾಗಿ ಭಾರತ ಗ್ರಾಮ ಸ್ವರಾಜ್ಯ ವ್ಯವಸ್ಥೆಯಿಂದಷ್ಟೆ ಪ್ರಪಂಚದಲ್ಲಿ ಉನ್ನತಾವಸ್ಥೆ ಪಡೆಯುವುದಕ್ಕೆ ಸಾಧ್ಯ. ಮಹಾತ್ಮ ಗಾಂಧೀಜಿಯವರೇ ಮೊದಲಾಗಿ ಅನೇಕರು ಗ್ರಾಮೀಣ ಅಭಿವೃದ್ಧಿಯೇ ಭಾರತದ ಒಟ್ಟು ಅಭಿವೃದ್ಧಿ ಎಂದು ಮತ್ತೆಮತ್ತೆ ಹೇಳುತ್ತಿದ್ದುದು ಈ ಹಿನ್ನೆಲೆಯಲ್ಲಿಯೇ. ಗ್ರಾಮೀಣ ಸಂಸ್ಕೃತಿ ನಾಶವಾದಂದು ಸಮಗ್ರ ಭಾರತವೇ ಸಾಂಸ್ಕೃತಿಕ ಶೂನ್ಯತೆಯಿಂದ ನರಳಬೇಕಾಗುತ್ತದೆ ಎಂಬುದನ್ನು ಅನೇಕ ಕತೆಗಳಲ್ಲಿ ವ್ಯಕ್ತವಾಗಿರುವುದನ್ನು ಈ ಹಿಂದೆಯೇ ಉಲ್ಲೇಖಿಸಿ ಚರ್ಚಿಸಲಾಗಿದೆ. ನಗರಗಳು ಮನುಷ್ಯನಿಗೆ ಅನಾಥತೆಯನ್ನು ಉಂಟುಮಾಡುವಂತೆ ಗ್ರಾಮಗಳು ಮಾಡಲಾರವು. ಈ ಕೂಡು ಬದುಕು ನಿತ್ಯ ಜೀವಂತಿಕೆಗೆ ಮುಖ್ಯ ಸ್ತ್ರೋತ್ರವೆಂಬುದು ನನ್ನ ಅಧ್ಯಯನದ ಒಟ್ಟು ಫಲಿತದ ಧ್ವನಿಯಾಗಿದೆ.

# ಅಧ್ಯಯನಕ್ಕೆ ಬಳಸಿಕೊಂಡ ಪರಾಮರ್ಶನ ಗ್ರಂಥಗಳು


ಅನಂತಮೂರ್ತಿ. ಯು.ಆರ್. : ಅನಂತಮೂರ್ತಿ ಅವರ ಆಯ್ದ ಲೇಖನಗಳು, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೧೯೯೫

ಅನಂತಮೂರ್ತಿ. ಯು.ಆರ್. : ಸೂರ್ಯನ ಕುದುರೆ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೧೯೯೫

ಅನಂತಮೂರ್ತಿ. ಯು.ಆರ್. : ಅನಂತಮೂರ್ತಿ ಅವರ ಆಯ್ದ ಲೇಖನಗಳು, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೧೯೯೫

ಅನಂತಮೂರ್ತಿ. ಯು.ಆರ್. : ಪೂರ್ವಾಪರ (ವಿಮರ್ಶಾ ಬರಹಗಳು), ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೧೯೯೬

ಅನಂತಮೂರ್ತಿ. ಯು.ಆರ್. : ಅನಂತಮೂರ್ತಿ ಕಥಾ ವಾಚಿಕೆ (ಆಯ್ದ ಹತ್ತು ಕಥೆಗಳ ಸಂಕಲನ) ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ ೨೦೦೨

ಅಬ್ದುಲ್ ರಶೀದ್ (ಸಂ) : ಸಣ್ಣ ಕತೆ ೧೯೯೫, ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು, ೧೯೯೬

ಅಮರೇಶ ನುಗಡೋಣಿ : ಶ್ರೀಕೃಷ್ಣ ಆಲನಹಳ್ಳಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫

ಅರವಿಂದ ಮಾಲಗತ್ತಿ (ಪ್ರ.ಸಂ.) : ಜಾನಪದ ತತ್ತ್ವಗಳು, ಪ್ರಸಾರಾಂಗ, ಮೈಸೂರು ವಿ.ವಿ. ಮೈಸೂರು, ೧೯೯೯

ಅಶೋಕ. ಟಿ.ಪಿ. : ಅನಂತಮೂರ್ತಿ ಒಂದು ಅಧ್ಯಯನ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೨೦೦೧

ಆಮೂರ. ಜಿ.ಎಸ್. (ಸಂ) : ಅವಳ ಕತೆಗಳು, ಪ್ರಕಾಶಕರು, ಪ್ರಿಸಂ ಬುಕ್ಸ್ ಪ್ರೈ.ಲಿ. ಬೆಂಗಳೂರು, ೧೯೯೯

ಆಮೂರ. ಜಿ.ಎಸ್. : ಸಮಕಾಲೀನ ಕಥೆ, ಕಾದಂಬರಿ ಹೊಸ ಪ್ರಯೋಗಗಳು, ಪ್ರಕಾಶಕರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೯

| | | |
|---|---|---|
| ಆಮೂರ. ಜಿ.ಎಸ್. | : | ಅಮೃತವಾಹಿನಿ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೦೦ |
| ಆಮೂರ. ಜಿ.ಎಸ್. | : | ಕಥನ ಶಾಸ್ತ್ರ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೧ |
| ಆಮೂರ. ಜಿ.ಎಸ್. | : | ಕನ್ನಡ ಕಥನ ಸಾಹಿತ್ಯ : ಸಣ್ಣ ಕತೆ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೦೩ |
| ಆಶಾದೇವಿ. ಎಂ.ಎಸ್. (ಅನು) | : | ಉರಿ ಚಮ್ಮಾಳಿಗೆ(ದಲಿತ ಚಳುವಳಿಯ ಅಧ್ಯಯನ), ವಸಂತ ಪ್ರಕಾಶನ, ಬೆಂಗಳೂರು, ೨೦೦೨ |
| ಇಂದಿರಾ. ಆರ್. | : | ಮಹಿಳೆ ಸಮಾಜ ಮತ್ತು ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ, ೨೦೦೨ |
| ಉಷಾ. ಎಂ. (ಸಂ) | : | ಮಹಿಳಾ ಅಧ್ಯಯನ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೪ |
| ಕರೀಗೌಡ ಬೀಚನಹಳ್ಳಿ | : | ವ್ಯಷ್ಟಿ ಮತ್ತು ಸಮಷ್ಟಿ, ಅಜಂತ ಪ್ರಕಾಶನ, ಬೆಂಗಳೂರು, ೧೯೯೧ |
| ಕರೀಗೌಡ ಬೀಚನಹಳ್ಳಿ, (ಸಂ) | : | ಕನ್ನಡ ಅಧ್ಯಯನ (ಭವಿಷ್ಯದ ಕರ್ನಾಟಕ) ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ ೧೯೯೫ |
| ಕರೀಗೌಡ ಬೀಚನಹಳ್ಳಿ, (ಸಂ) | : | ಕನ್ನಡ ವಾರ್ಷಿಕ-೧೯೯೩, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೧೯೯೫ |
| ಕರೀಗೌಡ ಬೀಚನಹಳ್ಳಿ | : | ಹೊತ್ತಿನ ಕಣ್ಣಿನ ಮಿಂಚು, ನೆಲಮನೆ ಪ್ರಕಾಶನ, ಮೈಸೂರು, ೧೯೯೬ |
| ಕರೀಗೌಡ ಬೀಚನಹಳ್ಳಿ | : | ತೇಜಸ್ವಿ ಕಥೆಗಳ ಕುರಿತು, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೧೯೯೮ |
| ಕರೀಗೌಡ ಬೀಚನಹಳ್ಳಿ, (ಸಂ) | : | ಸಣ್ಣ ಕಥೆ-೧೯೯೮, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೯ |
| ಕರೀಗೌಡ ಬೀಚನಹಳ್ಳಿ, (ಅನು) | : | ಕಥೆ ಮತ್ತು ಹಾಡು, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ ೨೦೦೩ |

ಕಾಳೇಗೌಡ ನಾಗವಾರ : ಜನಪದ ಸಾಹಿತ್ಯ, ಯುಗಾದಿ ಪ್ರಕಾಶನ, ಬೆಂಗಳೂರು, ೧೯೯೬

ಕಾಳೇಗೌಡ ನಾಗವಾರ : ನಾಗವಾರರ ಕಥೆಗಳು, ಅರುಂದತಿ ಪ್ರಕಾಶನ, ಬೆಂಗಳೂರು, ೧೯೯೮

ಕೀರ್ತಿನಾಥ ಕುರ್ತಕೋಟಿ : ಕನ್ನಡ ಸಾಹಿತ್ಯ ಸಂಗಾತಿ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೧೯೯೭ ಎರಡನೇ ಮುದ್ರಣ

ಕೀರ್ತಿನಾಥ ಕುರ್ತಕೋಟಿ : ನೂರು ಮರ ನೂರು ಸ್ವರ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೧೯೯೮

ಕುವೆಂಪು : ಸನ್ಯಾಸಿ ಮತ್ತು ಇತರ ಕಥೆಗಳು, ಉದಯರವಿ ಪ್ರಕಾಶನ, ಮೈಸೂರು, (ಐದನೇ ಮುದ್ರಣ), ೧೯೯೬

ಕುವೆಂಪು : ನನ್ನ ದೇವರು ಮತ್ತು ಇತರ ಕಥೆಗಳು, ಉದಯರವಿ ಪ್ರಕಾಶನ, ಮೈಸೂರು, (ಹನ್ನೊಂದನೇ ಮುದ್ರಣ), ೧೯೯೭

ಕುಸುಮ : ಪ್ರಕೃತಿ, ಅಜಂತ ಪ್ರಕಾಶನ, ಬೆಂಗಳೂರು, ೧೯೯೯

ಕೃಷ್ಣ. ಬಿ.ಆರ್. : ಸಮಾಜ ಶಾಸ್ತ್ರ, ವಿದ್ಯಾನಿಧಿ ಪ್ರಕಾಶನ, ಗದಗ, ೧೯೯೫-೯೬

ಕೃಷ್ಣ. ಬಿ.ಆರ್. : ಗ್ರಾಮೀಣ ಮತ್ತು ನಗರ ಸಮಾಜ ಶಾಸ್ತ್ರ ವಿದ್ಯಾನಿಧಿ ಪ್ರಕಾಶನ, ಗದಗ, ೧೯೯೭ ೯೮

ಕೃಷ್ಣ. ಬಿ.ಆರ್. : ಭಾರತೀಯ ಸಾಮಾಜಿಕ ಅಧ್ಯಯನ, ವಿದ್ಯಾನಿಧಿ ಪ್ರಕಾಶನ, ಗದಗ, ೧೯೯೪

ಕೃಷ್ಣಕುಮಾರ. ಸಿ.ಪಿ. : ಜನಪದ ಸಾಹಿತ್ಯ ಪ್ರವೇಶಿಕೆ, ಭಾರತೀ ಪ್ರಕಾಶನ, ಮೈಸೂರು ೧೯೮೯

ಕೇಶವ ಶರ್ಮ. ಕೆ. : ಸಾಹಿತ್ಯ ವಿಮರ್ಶೆ ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೭

ಕೇಶವ ಶರ್ಮ. ಕೆ. : ಸ್ತ್ರೀವಾದಿ ವಿಮರ್ಶೆ, ಚಿಂತನಕೂಟ, ವಿಜಯನಗರ, ಬೆಂಗಳೂರು, ೧೯೯೮

ಕೇಶವ ಶರ್ಮ. ಕೆ. : ಸ್ತ್ರೀ ಮತ್ತು ರಾಜಕಾರಣ, ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ, ೨೦೦೦

ಕೋದಂಡರಾಮ. ಎನ್.ಕೆ. : ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ, ಗಾಯತ್ರಿ ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೯೬

ಗಂಗಾ ಪಾದೇಕಲ್ (ಸಂ) : ಸಣ್ಣ ಕಥೆ ೧೯೯೪, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬

ಗಂಗಾಧರ ಕುಷ್ಟಗಿ (ಸಂ) : ತಲೆಮಾರಿನ ತಳಮಳ, ಕವಿತಾ ಪ್ರಕಾಶನ, ರಾಯಚೂರು, ೧೯೯೭

ಗಾಯತ್ರಿ. ಎನ್. : ಮಹಿಳಾ ಚಳುವಳಿಯ ಮಜಲುಗಳು, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೮

ಗಾಯತ್ರಿ ನಾವಡ : ಭಾರತೀಯ ಸ್ತ್ರೀವಾದ ಒಂದು ಸಂಕಥನ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೦

ಗಿರಡ್ಡಿ ಗೋವಿಂದರಾಜ : ಸಮಗ್ರ ವಿಮರ್ಶೆ ಸಂಪುಟ ೨, ಸಪ್ನಾ ಬುಕ್ ಹೌಸ್, ಬೆಂಗಳೂರು, ೨೦೦೧

ಗಿರಡ್ಡಿ ಗೋವಿಂದರಾಜ : ಸಮಗ್ರ ಸೃಜನ, ಸಪ್ನಾ ಬುಕ್ ಹೌಸ್, ಬೆಂಗಳೂರು, ೨೦೦೧

ಗಿರಿಜಾ ಶಾಸ್ತ್ರಿ : ಆಧುನಿಕ ಕನ್ನಡ ಸಣ್ಣ ಕಥೆಗಳು : ಒಂದು ಸ್ತ್ರೀವಾದಿ ಅಧ್ಯಯನ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೦

ಗಿರಿಜಾ ಶಾಸ್ತ್ರಿ : ಕಥಾಮಾನಸ ಆಧುನಿಕ ಕನ್ನಡ ಸಣ್ಣ ಕಥೆಗಳು : ಒಂದು ಸ್ತ್ರೀವಾದಿ ಅಧ್ಯಯನ, ಸಾಹಿತ್ಯ ಪ್ರಕಾಶನ, ಮುಂಬಯಿ ೨೦೦೦

ಗೀತಾ ಕೃಷ್ಣಮೂರ್ತಿ : ಮಹಿಳೆ ಕಾನೂನು ಮತ್ತು ರಾಜಕಾರಣ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೧

ಗುಂಡಪ್ಪ. ಡಿ.ವಿ.(ಡಿ.ವಿ.ಜಿ) : ಸಂಸ್ಕೃತಿ, ಕಾವ್ಯಾಲಯ, ಪ್ರಕಾಶಕರು, ಮೈಸೂರು, (ಮೂರನೇ ಮುದ್ರಣ), ೧೯೬೯

ಗೌರೀಶ ಕಾಯ್ಕಿಣಿ : ಸ್ವಾತಂತ್ರ್ಯೋತ್ತರ ವಿಚಾರ ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, (ಎರಡನೇ ಮುದ್ರಣ), ೧೯೯೯

ಚಂದ್ರಶೇಖರ. ಟಿ.ಆರ್. : ಮಹಿಳೆ ಆರ್ಥಿಕತೆ ಮತ್ತು ಅಭಿವೃದ್ಧಿ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೧

ಚಂದ್ರಶೇಖರ ನಂಗಲಿ ಮತ್ತು ಲಕ್ಷ್ಮೀಪತಿ ಕೋಲಾರ (ಸಂ) : ಅನಿಕೇತನ ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೨

ಚಂದ್ರಶೇಖರ ನಂಗಲಿ ಮತ್ತು ಲಕ್ಷ್ಮೀಪತಿ ಕೋಲಾರ (ಸಂ) : ಅನಿಕೇತನ ಕರ್ನಾಟಕ ಸಾಹಿತ್ಯ ಅಕಾಡೆಮಿ, ತ್ರೈಮಾಸಿಕ, ಬೆಂಗಳೂರು, ೨೦೦೨

ಚಂದ್ರಿಕಾ ಪ್ರಿಯ : ಯಾರ ಜಪ್ತಿಗೂ ಸಿಗದ ನವಿಲುಗಳು, ದೇವನೂರು ಮಹಾದೇವರ ಸಾಹಿತ್ಯ ಕುರಿತು, ಅಭಿನವ ಪ್ರಕಾಶನ, ಬೆಂಗಳೂರು, ೧೯೯೯

ಚದುರಂಗ : ಚದುರಂಗರ ಸಮಗ್ರ ಕಥೆಗಳು, ಅಭಿರುಚಿ ಪ್ರಕಾಶನ, ಮೈಸೂರು, ೧೯೯೯

ಚಂದ್ರಮೋಹನ್. ಎನ್.ಬಿ. ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ದ್ವಿತೀಯ ಮುದ್ರಣ ೨೦೦೨

ಚಿನ್ನಸ್ವಾಮಿ ಸೋಸಲೆ. ಎನ್. : ನಮ್ಮ ಗ್ರಾಮಗಳು : ಅಂದು-ಇಂದು, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೪

ಜನಾರ್ಧನ ಭಟ್. ಬಿ. (ಸಂ) : ಸಾಹಿತ್ಯ ವಿಮರ್ಶೆ-೨೦೦೧, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಗಳೂರು, ೨೦೦೨

ಜನಾರ್ಧನ ಭಟ್. ಬಿ. : (ಸಂ) ದಕ್ಷಿಣ ಕನ್ನಡದ ಶತಮಾನದ ಕತೆಗಳು, ಕರ್ನಾಟಕ ಸಂಘ, ಪುತ್ತೂರು, ದ.ಕ. ೨೦೦೩

ಜವರೇಗೌಡ. ದೇ. : ಜಾನಪದ ಅಧ್ಯಯನ, ಚೇತನ ಬುಕ್ ಹೌಸ್, ಮೈಸೂರು, ೧೯೯೧

ಜ್ಯೋತ್ಸ್ನಾ ಕಾಮತ್ : ಮಹಿಳೆ ಒಂದು ಅಧ್ಯಯನ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೯

ತಂಬಂಡ ವಿಜಯ ಪೂಣಚ್ಚ : ರೈತ ಚಳುವಳಿಗಳು, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೧೯೯೯

ತೇಜಸ್ವಿನಿ ನಿರಂಜನ ಮತ್ತು ಸೀಮಂತಿನಿ ನಿರಂಜನ (ಸಂ) : ಸ್ತ್ರೀವಾದಿ ಸಾಹಿತ್ಯ ವಿಮರ್ಶೆ ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೯೪

ದಿವಾಕರ್. ಎಸ್. (ಸಂ) : ಶತಮಾನದ ಸಣ್ಣ ಕತೆಗಳು ಪ್ರಿಸಂ ಬುಕ್ಸ್ ಪ್ರೈ. ಲಿ. ಬೆಂಗಳೂರು, ೧೯೯೭

ದುರ್ಗಾದಾಸ್ ಮತ್ತು ಆನಂದಮೂರ್ತಿ (ದಾಖಲಿಸಿದವರು) : ಮೂರು ದಲಿತ ಕಮ್ಮಟಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬

ದೇವನೂರು ಮಹಾದೇವ : ದೇವನೂರು ಮಹಾದೇವ ಅವರ ಕೃತಿಗಳು, 'ಪತ್ರಿಕೆ' ಪ್ರಕಾಶನ, ಬೆಂಗಳೂರು, ೧೯೯೨

ದೊಡ್ಡರಂಗೇಗೌಡ ಮತ್ತು ನಲ್ಲೂರು ಪ್ರಸಾದ್ (ಸಂ) : ಅನಿಕೇತನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೦

ಧರಣೀದೇವಿ ಮಾಲಗತ್ತಿ : ಸ್ತ್ರೀವಾದಿ ಮತ್ತು ಭಾರತೀಯತೆ, ಚೇತನ ಬುಕ್ ಹೌಸ್ ಮೈಸೂರು, ೧೯೯೮

ನರಹಳ್ಳಿ, ಬಾಲಸುಬ್ರಮಣ್ಯ : ನವ್ಯತೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ೧೯೯೯

ನರಸಿಂಹಮೂರ್ತಿ. ಕೆ. (ಸಂ) : ಅತ್ಯುತ್ತಮ ಸಣ್ಣ ಕತೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೭

ನರಸಿಂಹಮೂರ್ತಿ. ಕೆ. (ಸಂ) : ಅತ್ಯುತ್ತಮ ಸಣ್ಣ ಕತೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨

ನರೇಂದ್ರರೈ ದೇರ್ಲ : ತೇಜಸ್ವಿಯೊಳಗೊಬ್ಬ ಕಲಾವಿದ, ಕರ್ನಾಟಕ ಸಂಘ, ಪುತ್ತೂರು, ೧೯೯೯

ನರೇಂದ್ರರೈ ದೇರ್ಲ (ಸಂ) : (ಸಂ) ಲಂಕೇಶ್ ನೆನಪು, ಕರ್ನಾಟಕ ಸಂಘ, ಪುತ್ತೂರು, ೨೦೦೦

ನಾಗಣ್ಣ. ಸಿ. (ಅನು) : ದಕ್ಷಿಣ ಭಾರತ ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೦

ನಾವಡ. ಎ.ವಿ. : ಜಾನಪದ ಸಮಾಲೋಚನ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೩

ನಾವಡ. ಎ.ವಿ. (ಸಂ) : ಕನ್ನಡ ಅಧ್ಯಯನ (ಮಳೆ ಸಂಚಿಕೆ), ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೩

ನಾಗವೇಣಿ. ಎಚ್. : ನಾಕನೇ ನೀರು, ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೯೭

ನಾಗರಾಜ್. ಡಿ.ಆರ್. : ಸಾಹಿತ್ಯ ಕಥನ, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೬

ನಾಗರಾಜ್. ಡಿ.ಆರ್. : ಅಮೃತ ಮತ್ತು ಗರುಡ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, (ಮೂರನೇ ಮುದ್ರಣ) ೧೯೯೮

ನಾಗಭೂಷಣ. ಡಿ.ಎಸ್. ಮತ್ತು ಉಷಾ. ಸ. : ಮಾಸ್ತಿ ಸಾಹಿತ್ಯ ಸಮಗ್ರ ದರ್ಶನ, ಸಂವಾದ ಪ್ರಕಾಶನ

ನಾರಾಯಣಸ್ವಾಮಿ. ಕೆ.ಎಸ್. (ಸಂಕಲನ ಮತ್ತು ಅನುವಾದ) : ನನ್ನ ಆದರ್ಶ ಗ್ರಾಮ (ಮಹಾತ್ಮ ಗಾಂಧಿ) ಪ್ರಕಾಶಕರು, ಶ್ರೀಮತಿ ಕೆ.ಎಸ್.ಜಯಮ್ಮ, ವಿಜಯನಗರ, ಬೆಂಗಳೂರು, ೨೦೦೦

ನಾರಾಯಣ. ಕೆ.ವಿ. : ಬೇರು ಕಾಂಡ ಚಿಗುರು, ವಿವೇಕ ಪ್ರಕಾಶನ, ಬೆಂಗಳೂರು, ೧೯೯೭

ನಾಗೇಶ್. ಎಚ್.ವಿ. : ಗ್ರಾಮಾಂತರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೦

ನಾಯಕ್. ಜಿ.ಎಚ್. (ಸಂ) : ಕನ್ನಡ ಸಣ್ಣ ಕತೆಗಳು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ, ಹೊಸದೆಹಲಿ, ಐದನೇ ಮುದ್ರಣ ೨೦೦೧

ನಾಯಕ. ಹಾ.ಮಾ. : ಜಾನಪದ ಸ್ವರೂಪ, ಪ್ರಕಾಶಕರು, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ಹತ್ತನೇ ಮುದ್ರಣ ೧೯೯೯

ನಿಸಾರ್ ಅಹಮದ್. ಕೆ.ಎಸ್. (ಪ್ರ.ಸಂ.) : ದಶವಾರ್ಷಿಕ ಸಣ್ಣಕತೆಗಳು ೧೯೭೪-೮೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೮೭

ಪಂಡಿತಾರಾಧ್ಯ (ಸಂ) : ಸಾಹಿತ್ಯ ವಿಮರ್ಶೆ-೧೯೯೯, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೧

ಪಂಜೆ ರಾಮರಾಯ : ಪಂಜೆಯವರ ಕೃತಿಗಳು, ಪ್ರಕಾಶಕರು, ಓರಿಯಂಟ್ ಲಾಂಗ್‌ಮನ್ ಲಿಮಿಟೆಡ್, ಮದರಾಸು, ೧೯೭೩

ಪರಮಶಿವಯ್ಯ. ಜೀ.ಶಂ. : ಜಾನಪದ ಕೆಲವು ಮುಖಗಳು, ಚೇತನ ಬುಕ್ ಹೌಸ್, ಮೈಸೂರು, ೧೯೯೬

ಪರಮಶಿವಯ್ಯ. ಜೀ.ಶಂ. : ದಕ್ಷಿಣ ಕರ್ನಾಟಕದ ಜನಪದ ಕಥೆಗಳು, ಸಾಹಿತ್ಯ ಅಕಾಡೆಮಿ, ನವದೆಹಲಿ, ೧೯೯೬

ಪರಮಶಿವಯ್ಯ. ಜೀ.ಶಂ. (ಸಂ) : ಕನ್ನಡ ಜನಪದ ಕಥೆಗಳು, ಚೇತನಾ ಬುಕ್ ಹೌಸ್, ಮೈಸೂರು, ೧೯೯೮

ಪರಮಶಿವಯ್ಯ. ಜೀ.ಶಂ. : ಜಾನಪದ (ಕೆಲವು ವಿಚಾರಗಳು) ಚೇತನಾ ಬುಕ್ ಹೌಸ್, ಮೈಸೂರು, ೧೯೯೮

ಪುರುಷೋತ್ತಮ ಬಿಳಿಮಲೆ : ಬಂಡಾಯ-ದಲಿತ ಸಾಹಿತ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೯

ಪೂರ್ಣಚಂದ್ರ ತೇಜಸ್ವಿ. ಕೆ.ಪಿ. : ಹುಲಿಯೂರಿನ ಸರಹದ್ದು, ಸ್ವರೂಪ, ನಿಗೂಢ ಮನುಷ್ಯರು, ಪುಸ್ತಕ ಪ್ರಕಾಶನ, ಮೈಸೂರು, (ಮೂರನೇ ಮುದ್ರಣ), ೧೯೯೭

ಪೂರ್ಣಚಂದ್ರ ತೇಜಸ್ವಿ. ಕೆ.ಪಿ. : ಅಬಚೂರಿನ ಪೋಸ್ಟಾಫೀಸು, ಪುಸ್ತಕ ಪ್ರಕಾಶನ, ಮೈಸೂರು, (ಮೂರನೇ ಮುದ್ರಣ), ೧೯೯೯

ಮಹೇಶ್ವರಯ್ಯ. ಎಚ್.ಎಂ. : ಪೂರ್ಣಚಂದ್ರ ತೇಜಸ್ವಿ ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೨

ಶಂಕರನಾರಾಯಣ. ಎನ್.ಪಿ. : ದೇವನೂರ ಮಹಾದೇವ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೨

ಸಿದ್ದಲಿಂಗಯ್ಯ. ಜಿ.ಎಸ್. : ಶ್ರೀನಿವಾಸ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೨

ಪ್ರಭುಶಂಕರ : ಸಾಹಿತ್ಯ ಮತ್ತು ಆಧುನಿಕತೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೯

ಪ್ರಭಾವತಿ. ಎಸ್.ವಿ. : ಸ್ತ್ರೀವಾದದ ಪ್ರಸ್ತುತತೆ, ಭಾರತೀಯ ಸಂಸ್ಕೃತಿ ವಿದ್ಯಾಪೀಠ, ವಿಜಯನಗರ, ಬೆಂಗಳೂರು, ೨೦೦೦

ಬಂಜಗೆರೆ ಜಯಪ್ರಕಾಶ : ಕನ್ನಡ ರಾಷ್ಟ್ರೀಯತೆ, ಕ್ರಾಂತಿ ಸಿರಿ ಪ್ರಕಾಶನ, ಬೆಂಗಳೂರು, ೨೦೦೧

ಬರಗೂರು ರಾಮಚಂದ್ರಪ್ಪ : ಒಂದು ಊರಿನ ಕತೆಗಳು, ಅಂಕಿತ ಪುಸ್ತಕ, ಬೆಂಗಳೂರು, ೧೯೯೯

ಬರಗೂರು ರಾಮಚಂದ್ರಪ್ಪ : ಸಂಸ್ಕೃತಿ, ಶ್ರಮ ಮತ್ತು ಸೃಜನಶೀಲತೆ, ಅಂಕಿತ ಪುಸ್ತಕ, ಬೆಂಗಳೂರು, ೨೦೦೧

ಬರಗೂರು ರಾಮಚಂದ್ರಪ್ಪ : ಪರಂಪರೆಯೊಂದಿಗೆ ಪಿಸು ಮಾತು, ಅಂಕಿತ ಪುಸ್ತಕ, ಬೆಂಗಳೂರು, ೨೦೦೧

ಬಸವರಾಜ ಕಲ್ಗುಡಿ (ಸಂ) : ಕನ್ನಡ ವಾರ್ಷಿಕ-೧೯೯೧, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೧೯೯೨

ಬಸವರಾಜ ಸಬರದ (ಸಂ) : ಬಂಡಾಯ ಸಾಹಿತ್ಯದ ತಾತ್ವಿಕ ನೆಲೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೨

ಬಸವರಾಜ ಸಬರದ : ಬಂಡಾಯ ಸಾಹಿತ್ಯ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೧

ಬಾನುಮುಷ್ತಾಕ್ : ಬೆಂಕಿ ಮಳೆ, ನೆಲಮನೆ ಪ್ರಕಾಶನ, ರಂಗನಾಥನಗರ ಶ್ರೀರಂಗಪಟ್ಟಣ, ಮಂಡ್ಯ, ೧೯೯೯

ಬಾಳಾಸಾಹೇಬ ಲೋಕಾಪುರ (ಸಂ) : ಸಣ್ಣಕತೆ ೨೦೦೧, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೨

ಬೆಸಗರಹಳ್ಳಿ ರಾಮಣ್ಣ : ಕನ್ನಂಬಾಡಿ, ಪಲ್ಲವಿ ಪ್ರಕಾಶನ, ಮಂಡ್ಯ, ೧೯೮೬

ಬೇರೆ ಬೇರೆ ಲೇಖಕರು : ನವಿಲುಗರಿ, ಮನೋಹರ ಗ್ರಂಥಮಾಲೆ, ಧಾರವಾಡ, ೨೦೦೦

ಬೋಳುವಾರು ಮಹಮದ್ ಕುಂಞ (ಸಂ) : ಶತಮಾನದ ಸಣ್ಣ ಕಥೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೧

ಭಾಗ್ಯಲಕ್ಷ್ಮಿ. ಎಸ್.ವಿ. : ಮಹಿಳಾ ಸ್ವಾತಂತ್ರ್ಯ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨

ಭೈರಪ್ಪ. ಕೆ. : ಸಮಗ್ರ ಗ್ರಾಮೀಣ ಸಮಾಜ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೨

ಮಂಜುನಾಥ ಬೇವಿನಕಟ್ಟಿ : ಜನ ಜನಪದ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ ೨೦೦೩

ಮನು ಚಕ್ರವರ್ತಿ. ಎನ್. (ಸಂ) : ಭಾರತೀಯ ಸ್ತ್ರೀವಾದ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೧೯೯೩

ಮಲ್ಲೇಪುರಂ ಜಿ. ವೆಂಕಟೇಶ : ಕನ್ನಡ ವಾರ್ಷಿಕ-೧೯೯೨, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೧೯೯೩

ಮಲ್ಲೇಪುರಂ ಜಿ. ವೆಂಕಟೇಶ : ಸಾಹಿತ್ಯ ವಿಮರ್ಶೆ-೧೯೯೭, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೮

ಮಹಾಬಲೇಶ್ವರ ರಾವ್ (ಅನು) : ಭಾರತೀಯ ಜನಪದ ಕತೆಗಳು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ, ಹೊಸದೆಹಲಿ, ೨೦೦೦

ಮಹಾಬಲೇಶ್ವರ ರಾವ್ : ಸಂಶೋಧನ ಮಾರ್ಗ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ಎರಡನೇ ಮುದ್ರಣ ೨೦೦೦

ಮಹಾಬಲೇಶ್ವರ ರಾವ್ (ಅನು) : (ಅನು) ಭಾರತೀಯ ಜನಪದ ಕತೆಗಳು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ, ಹೊಸದೆಹಲಿ, ೨೦೦೦

ಮಾಧವ ಕುಲಕರ್ಣಿ : ಅನಂತಮೂರ್ತಿಯವರ ಸಾಹಿತ್ಯದ ಒಲವು ನಿಲುವುಗಳು, ತನುಮನ ಪ್ರಕಾಶನ, ಮೈಸೂರು, ೨೦೦೨

ಮಾವಿನಕೆರೆ ರಂಗನಾಥನ್ (ಸಂ) : ಶ್ರೀನಿವಾಸ, ಪ್ರಕಾಶಕರು, ಪುರೋಗಾಮಿ ಸಾಹಿತ್ಯ ಸಂಘ, ಬೆಂಗಳೂರು, ೧೯೯೨

ಮಾಲತಿ. ಎಸ್. : ದಲಿತ ಲೋಕ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೦

ಮಾಸ್ತಿ ವೆಂಕಟೇಶ ಅಯ್ಯಂಗಾರ್ : ವಿಮರ್ಶೆ ಸಮಗ್ರ ಸಂಪುಟ ಪ್ರಕಾಶಕರು, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಜೀವನ ಕಾರ್ಯಾಲಯ ಟ್ರಸ್ಟ್, ಬೆಂಗಳೂರು, ೨೦೦೦

ಮುಗಳಿ. ರಂ.ಶ್ರೀ. : ಕನ್ನಡ ಸಾಹಿತ್ಯ ಚರಿತ್ರೆ, ಗೀತಾ ಬುಕ್ ಹೌಸ್, ಮೈಸೂರು (ಹತ್ತನೆಯ ಪರಿಷ್ಕೃತ ಸಂಸ್ಕರಣ) ೧೯೯೩

ಮುಗಳಿ. ರಂ.ಶ್ರೀ. : ಕನ್ನಡ ಸಾಹಿತ್ಯ ಚರಿತ್ರೆ, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೭೧

ಮುರಳೀಧರ ಉಪಾಧ್ಯ ಹಿರಿಯಡ್ಕ (ಸಂ) : ಯು.ಆರ್.ಅನಂತಮೂರ್ತಿ, ಕರ್ನಾಟಕ ಸಂಘ, ಪುತ್ತೂರು (ದ.ಕ.) ೨೦೦೦

ಮುರಳೀಧರ ಉಪಾಧ್ಯ ಹಿರಿಯಡ್ಕ : ಡಾ.ಯು.ಆರ್.ಅನಂತಮೂರ್ತಿ (ಚೈತನ್ಯಶೀಲ ಬದುಕು) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨

ಮೂರ್ತಿರಾವ್. ಎ.ಎನ್. : ಮಾಸ್ತಿಯವರ ಕಥೆಗಳು, (ವಿಮರ್ಶೆ) ಪ್ರಕಾಶಕರು, ಕಾವ್ಯಾಲಯ, ಮೈಸೂರು, ೧೯೯೯

ಮೊಗಳ್ಳಿ ಗಣೇಶ್ : ಬುಗುರಿ, 'ಪತ್ರಿಕೆ', ಪ್ರಕಾಶನ, ಬೆಂಗಳೂರು, ೧೯೯೨

ಮೊಗಳ್ಳಿ ಗಣೇಶ್ : ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೧೯೯೯

ಮೊಗಳ್ಳಿ ಗಣೇಶ್ (ಸಂ) : ದಲಿತ ಚಿಂತನೆ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೧೯೯೯

ಮೋಹನ ಕೃಷ್ಣರೈ. ಕೆ. : ನಗರೀಕರಣ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೧೯೯೭

ಯೆರವಿನತೆಲಿಮಠ : ಪಾಶ್ಚಾತ್ಯ ತತ್ತ್ವಗಳು, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೧೯೯೯

ರಂಜಾನ್ ದರ್ಗಾ ಮತ್ತು ಚಂದ್ರಶೇಖರ ಆಲೂರು (ಸಂ) : ಬಂಡಾಯ ಕತೆಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

ರವಿಕಾಂತೇಗೌಡ. ಬಿ.ಆರ್. (ಸಂ) : ಬೆಸಗರಹಳ್ಳಿ ರಾಮಣ್ಣನವರ ಆಯ್ದ ಕಥೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, (ನಾಲ್ಕನೇ ಮುದ್ರಣ) ೨೦೦೨

ರವಿಕುಮಾರ. ನ. (ಸಂ) : ದೇಶಿ ದರ್ಶನಗಳು, ಅಭಿನವ ಪ್ರಕಾಶನ, ಬೆಂಗಳೂರು, ೧೯೯೯

ರಮೇಶ. ಸ.ಚಿ. : ಡಾ.ಬೆಸಗರಹಳ್ಳಿ ರಾಮಣ್ಣ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೧೯೯೫

ರಹಮತ್ ತರೀಕೆರೆ (ಸಂ) : ಸಾಹಿತ್ಯ ವಿಮರ್ಶೆ-೧೯೯೨, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

ರಹಮತ್ ತರೀಕೆರೆ : ಪ್ರತಿ ಸಂಸ್ಕೃತಿ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೯೩

ರಹಮತ್ ತರೀಕೆರೆ (ಸಂ) : ಕನ್ನಡ ವಾರ್ಷಿಕ-೧೯೯೪, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೧೯೯೫

ರಹಮತ್ ತರೀಕೆರೆ : ಬಹುಭಾಷಿಕ ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೧೯೯೫

ರಹಮತ್ ತರೀಕೆರೆ (ಸಂ) : ಕನ್ನಡ ಸಾಹಿತ್ಯ ಮೀಮಾಂಸೆ ಸಂಪುಟ-೧, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೧

ರಹಮತ್ ತರೀಕೆರೆ (ಸಂ) : ಕನ್ನಡ ಅಧ್ಯಯನ (ಮಳೆ ಸಂಚಿಕೆ) ಪ್ರಸಾರಾಂಗ, ಕನ್ನಡ ವಿ.ವಿ.ಹಂಪಿ, ೨೦೦೧

ರಹಮತ್ ತರೀಕೆರೆ (ಸಂ) : ಕನ್ನಡ ಅಧ್ಯಯನ (ಗಾಳಿ ಸಂಚಿಕೆ) ಪ್ರಸಾರಾಂಗ, ಕನ್ನಡ ವಿ.ವಿ.ಹಂಪಿ, ೨೦೦೧

ರಹಮತ್ ತರೀಕೆರೆ (ಸಂ) : ಕನ್ನಡ ಅಧ್ಯಯನ (ಚಳಿ-ಗಾಳಿ ಸಂಯುಕ್ತ ಸಂಚಿಕೆ) ಪ್ರಸಾರಾಂಗ, ಕನ್ನಡ ವಿ.ವಿ.ಹಂಪಿ, ೨೦೦೧

ರಹಮತ್ ತರೀಕೆರೆ (ಸಂ) : ಕನ್ನಡ ಅಧ್ಯಯನ (ಚಳಿ ಸಂಚಿಕೆ) ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೨

ರಹಮತ್ ತರೀಕೆರೆ (ಸಂ) : ಕನ್ನಡ ಅಧ್ಯಯನ (ಮಳೆ ಸಂಚಿಕೆ) ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೨

ರಹಮತ್ ತರೀಕೆರೆ : ಮರದೊಳಗಣ ಬೆಳ್ಳಿ ಚುಕ್ಕಿ ಬುಕ್ ಟ್ರಸ್ಟ್, ಮೈಸೂರು, ೨೦೦೨

ರಹಮತ್ ತರೀಕೆರೆ (ಸಂ) : ಕನ್ನಡ ಅಧ್ಯಯನ (ಬಿಸಿಲು ಸಂಚಿಕೆ) ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೧

ರಾಘವೇಂದ್ರ ಪಾಟೀಲ್ : ಮಲ್ಲಾಡಿಹಳ್ಳಿ ಪಾಟೀಲ್, ೧೯೯೨

ರಾಘವೇಂದ್ರರಾವ್. ಹೆಚ್.ಎಸ್. : ಪ್ರಗತಿಶೀಲತೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೯

ರಾಘವೇಂದ್ರರಾವ್. ಹೆಚ್.ಎಸ್. : ಶತಮಾನದ ಸಾಹಿತ್ಯ ವಿಮರ್ಶೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೧

ರಾಘವೇಂದ್ರ ಪಾಟೀಲ್ : ವಾಗ್ವಾದ, ಸಂವಾದ ಪ್ರಕಾಶನ, ಮಲ್ಲಾಡಿಹಳ್ಳಿ, ಚಿತ್ರದುರ್ಗ ಜಿಲ್ಲೆ, ೧೯೯೩

ರಾಘವೇಂದ್ರ ಪಾಟೀಲ್ (ಸಂ) : ಸಾಹಿತ್ಯ ಸಂವಾದ ೫೪-೫೫, ಸಂವಾದ ಪ್ರಕಾಶನ, ಮಲ್ಲಾಡಿಹಳ್ಳಿ, ಚಿತ್ರದುರ್ಗ ಜಿಲ್ಲೆ, ೨೦೦೦

ರಾಘವೇಂದ್ರ ಪಾಟೀಲ್ (ಸಂ) : ಸಾಹಿತ್ಯ ಸಂವಾದ ೫೪-೫೫, (ಲಂಕೇಶ್ ನೆನಪಿನ ಸಂಚಿಕೆ) ಸಂವಾದ ಪ್ರಕಾಶನ, ಮಲ್ಲಾಡಿಹಳ್ಳಿ, ಚಿತ್ರದುರ್ಗ ಜಿಲ್ಲೆ, ೨೦೦೦

ರಾಜಪ್ಪ ದಳವಾಯಿ (ಸಂ) : ಕನ್ನಡ ಸಾಹಿತ್ಯಕೋಶ, ಪ್ರಕಾಶನ ಅವಿಶಂ(ರಿ) ಅನುವನಹಳ್ಳಿ, ತರಿಕೆರೆ, ಚಿಕ್ಕಮಗಳೂರು, ೧೯೯೮

ರಾಜೇಂದ್ರ ಚೆನ್ನಿ : ದೇಶೀವಾದ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೯

ರಾಜೇಂದ್ರ. ಡಿ.ಕೆ. (ಸಂ) : ಬೆದರುಗೊಂಬೆ ಮತ್ತು ಇತರ ಜನಪದ ಕಥೆಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೩

ರಾಮಚಂದ್ರೇಗೌಡ. ಹಿ.ಶಿ. : ಜಾನಪದ : ಸಾಂಸ್ಕೃತಿಕ ಆಯಾಮಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೮

ರಾಮಚಂದ್ರೇಗೌಡ. ಹಿ.ಶಿ. (ಸಂ) : ವಿಚಾರ ಸಾಹಿತ್ಯ ೧೯೯೪, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬

ರಾಮಚಂದ್ರಶರ್ಮ (ಸಂ) : ಸಮಕಾಲೀನ ಕನ್ನಡ ಸಣ್ಣ ಕಥೆಗಳು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ ನವದೆಹಲಿ, ೧೯೯೯

ರಾಮಚಂದ್ರನ್. ಸಿ.ಎನ್. : ವಸಾಹತೋತ್ತರ ಚಿಂತನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೦

ರಾಮಚಂದ್ರನ್. ಸಿ.ಎನ್. : ಸಾಹಿತ್ಯ ವಿಮರ್ಶೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೦

ಲಂಕೇಶ್. ಪಿ. : ಸಮಗ್ರ ಕಥೆಗಳು, 'ಪತ್ರಿಕೆ' ಪ್ರಕಾಶನ, ಬೆಂಗಳೂರು, ೧೯೯೨

ಲಂಕೇಶ್. ಪಿ. : ಅಕ್ಷರ ಹೊಸ ಕಾವ್ಯ, 'ಪತ್ರಿಕೆ' ಪ್ರಕಾಶನ, ಬೆಂಗಳೂರು, (ಎರಡನೇ ಪರಿಷ್ಕೃತ ಮುದ್ರಣ) ೧೯೯೩

ಲಂಕೇಶ್. ಪಿ. : ಕಲ್ಲು ಕರಗುವ ಸಮಯ ಮತ್ತು ಇತರ ಕತೆಗಳು, 'ಪತ್ರಿಕೆ' ಪ್ರಕಾಶನ, ಬೆಂಗಳೂರು, (ಮೂರನೇ ಪರಿಷ್ಕೃತ ಮುದ್ರಣ ೧೯೯೩)

ಲಂಕೇಶ್. ಪಿ. : ಉಲ್ಲಂಘನೆ ಮತ್ತು ಕತೆಗಳು, 'ಪತ್ರಿಕೆ' ಪ್ರಕಾಶನ, ಬೆಂಗಳೂರು, ೧೯೯೬

ಲಂಕೇಶ್. ಪಿ. : ಟೀಕೆ ಟಿಪ್ಪಣಿ ಸಂಪುಟ-೧, 'ಪತ್ರಿಕೆ' ಪ್ರಕಾಶನ, ಬೆಂಗಳೂರು, (ದ್ವಿತೀಯ ಮುದ್ರಣ) ೧೯೯೬

ಲಂಕೇಶ್. ಪಿ. : ಹುಳಿ ಮಾವಿನಮರ : ಒಂದು ಆತ್ಮಕಥನ, 'ಪತ್ರಿಕೆ' ಪ್ರಕಾಶನ, ಬೆಂಗಳೂರು, ೧೯೯೭

ಲಂಕೇಶ್. ಪಿ. : ಟೀಕೆ:ಟಿಪ್ಪಣಿ ಸಂಪುಟ-೨, 'ಪತ್ರಿಕೆ' ಪ್ರಕಾಶನ, ಬೆಂಗಳೂರು, ೧೯೯೮

ಲಂಕೇಶ್. ಪಿ. : ಕಂಡದ್ದು ಕಂಡ ಹಾಗೆ, 'ಪತ್ರಿಕೆ' ಪ್ರಕಾಶನ, ಬೆಂಗಳೂರು, ೨೦೦೪

ಲಕ್ಷ್ಮಣ ತೆಲಗಾವಿ : ಹಿಂದುಳಿದ ವರ್ಗಗಳ ಮತ್ತು ದಲಿತ ಚಳುವಳಿಗಳು, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೧೯೯೯

ಲಕ್ಕಪ್ಪಗೌಡ. ಎಚ್.ಜೆ. : ಹೊನ್ನಾರು, ಲಕ್ಷ್ಮೀ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಮೈಸೂರು, ೧೯೯೯

ಲೀಲಾವತಿ. ಎಸ್. ರಾವ್ : ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಮಹಿಳೆ, ಸಂವಹನ ಪ್ರಕಾಶನ, ಮೈಸೂರು, ೨೦೦೦

ವಿಜಯಾ : ಸಣ್ಣಕತೆಯ ಸೊಗಸು, ದಿ. ಬೆಂಗಳೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಕಂಪನಿ, ಬೆಂಗಳೂರು, ೧೯೭೫

ವಿಜಯಶ್ರೀ ಸಬರದ : ವಿಚಾರ ಸಾಹಿತ್ಯ-೧೯೯೯, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೦

ವಿಠಲರಾವ್ ಗಾಯಕ್ವಾಡ್ (ಅನು) : ಸ್ತ್ರೀವಾದಿ ವಿಮರ್ಶೆ ಸ್ವರೂಪ ಮತ್ತು ಪರಿಕಲ್ಪನೆಗಳು ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೧

ವಿವಿಧ ಲೇಖಕರು : ಕನ್ನಡ ಸಾಹಿತ್ಯ ಸಮೀಕ್ಷೆ-೧೯೯೨, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

ವಿವಿಧ ಲೇಖಕರು : ಕನ್ನಡ ಸಾಹಿತ್ಯದಲ್ಲಿ ದೇಶಿಯತೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೪

ವಿವಿಧ ಲೇಖಕರು : ಕನ್ನಡ ಸಾಹಿತ್ಯ ಸಮೀಕ್ಷೆ-೧೯೯೨, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

ವಿಷ್ಣು ನಾಯ್ಕ (ಸಂ) : ಸಾಹಿತ್ಯದಲ್ಲಿ ನವ್ಯತೆ, ಶ್ರೀ ರಾಘವೇಂದ್ರ ಪ್ರಕಾಶನ, ಅಂಕೋಲ, ಉ.ಕ. ೧೯೭೯

ವೀಣಾ. ಎಂ.ಪಿ. : ಮನೆ, ಸಮಾಜ ಮತ್ತು ಸಂಸ್ಕೃತಿ, ನೆಲಮನೆ ಪ್ರಕಾಶನ, ಶ್ರೀರಂಗಪಟ್ಟಣ, ಮಂಡ್ಯ, ೨೦೦೦

ವೀರಭದ್ರಪ್ಪ. ಕುಂ.ವೀ. : ಕುಂವೀ ಅವರ ಆಯ್ದ ಕತೆಗಳು, ಸಂವಹನ ಪ್ರಕಾಶನ, ಮೈಸೂರು, ೧೯೯೬-೧೯೯೯

ವೀರಭದ್ರಪ್ಪ. ಕುಂ.ವೀ. : ಕುಂವೀ ಅವರ ಆಯ್ದ ಕತೆಗಳು, ಸಂವಹನ ಪ್ರಕಾಶನ, ಮೈಸೂರು, ೧೯೯೬-೧೯೯೯

ವೆಂಕಟೇಶ್. ಸಿ. : ಲಂಕೇಶರ ಕಥನ ಸಾಹಿತ್ಯದಲ್ಲಿ ಗ್ರಾಮ ಸಮಾಜ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು, ೧೯೯೮

ವೈದೇಹಿ : ವೈದೇಹಿಯವರ ಆಯ್ದ ಕತೆಗಳು, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೦೦

ಶಂಕರನಾರಾಯಣ ರಾವ್. ಎನ್.ಪಿ. : ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೯

ಶಾಂತರಸ (ಸಂ) : ಎಚ್.ಎಸ್.ಮುಕ್ತಾಯಕ್ಕ, ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೭

ಶಾಂತರಸ : ಶಾಂತರಸರ ಸಮಗ್ರ ಕತೆಗಳು, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೧೯೯೭

ಶಾಂತಿನಾಥ ದೇಸಾಯಿ : ನವ್ಯ ಸಾಹಿತ್ಯ ದರ್ಶನ, ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ, ೧೯೯೦

ಶಿವರುದ್ರಪ್ಪ. ಜಿ.ಎಸ್. (ಸಂ) : ಸಾಹಿತ್ಯ ವಾರ್ಷಿಕ-೧೯೭೧, ಪ್ರಸಾರಾಂಗ, ಬೆಂಗಳೂರು ವಿ.ವಿ., ಬೆಂಗಳೂರು, ೧೯೭೩

ಶಿವರುದ್ರಪ್ಪ. ಜಿ.ಎಸ್. (ಸಂ) : ಸಾಹಿತ್ಯ ವಾರ್ಷಿಕ-೧೯೭೨, ಪ್ರಸಾರಾಂಗ, ಬೆಂಗಳೂರು ವಿ.ವಿ., ಬೆಂಗಳೂರು, ೧೯೭೪

ಶಿವರುದ್ರಪ್ಪ. ಜಿ.ಎಸ್. (ಸಂ) : ಸಾಹಿತ್ಯ ವಾರ್ಷಿಕ-೧೯೭೩, ಪ್ರಸಾರಾಂಗ, ಬೆಂಗಳೂರು ವಿ.ವಿ., ಬೆಂಗಳೂರು, ೧೯೭೪

ಶಿವರುದ್ರಪ್ಪ, ಜಿ.ಎಸ್. (ಸಂ) : ಸಾಹಿತ್ಯ ವಾರ್ಷಿಕ-೧೯೭೪, ಪ್ರಸಾರಾಂಗ, ಬೆಂಗಳೂರು, ವಿ.ವಿ. ಬೆಂಗಳೂರು, ೧೯೭೬

ಶಿವರುದ್ರಪ್ಪ. ಜಿ.ಎಸ್. (ಸಂ) : ಸಾಹಿತ್ಯ ವಾರ್ಷಿಕ-೧೯೭೫, ಪ್ರಸಾರಾಂಗ, ಬೆಂಗಳೂರು ವಿ.ವಿ., ಬೆಂಗಳೂರು, ೧೯೭೭

ಶಿವರುದ್ರಪ್ಪ. ಜಿ.ಎಸ್. (ಸಂ) : ಸಾಹಿತ್ಯ ವಾರ್ಷಿಕ-೧೯೭೬, ಪ್ರಸಾರಾಂಗ, ಬೆಂಗಳೂರು ವಿ.ವಿ., ಬೆಂಗಳೂರು, ೧೯೭೮

ಶಿವರುದ್ರಪ್ಪ. ಜಿ.ಎಸ್. (ಸಂ) : ಸಾಹಿತ್ಯ ವಾರ್ಷಿಕ-೧೯೭೭, ಪ್ರಸಾರಾಂಗ, ಬೆಂಗಳೂರು ವಿ.ವಿ., ಬೆಂಗಳೂರು, ೧೯೭೯

ಶಿವರುದ್ರಪ್ಪ. ಜಿ.ಎಸ್. (ಸಂ) : ಸಾಹಿತ್ಯ ವಾರ್ಷಿಕ-೧೯೮೨, ಪ್ರಸಾರಾಂಗ, ಬೆಂಗಳೂರು, ವಿ.ವಿ. ಬೆಂಗಳೂರು, ೧೯೮೬

ಶಿವರುದ್ರಪ್ಪ. ಜಿ.ಎಸ್. (ಸಂ) : ಸಾಹಿತ್ಯ ವಾರ್ಷಿಕ-೧೯೮೩, ಪ್ರಸಾರಾಂಗ, ಬೆಂಗಳೂರು, ವಿ.ವಿ. ಬೆಂಗಳೂರು, ೧೯೮೭

ಶಿವರುದ್ರಪ್ಪ. ಜಿ.ಎಸ್. (ಸಂ) : ಸಾಹಿತ್ಯ ವಾರ್ಷಿಕ-೧೯೭೮, ಪ್ರಸಾರಾಂಗ, ಬೆಂಗಳೂರು ವಿ.ವಿ., ಬೆಂಗಳೂರು, ೧೯೮೦

ಶಿವರುದ್ರಪ್ಪ. ಜಿ.ಎಸ್. (ಸಂ) : ಸಾಹಿತ್ಯ ವಾರ್ಷಿಕ-೧೯೮೦, ಪ್ರಸಾರಾಂಗ, ಬೆಂಗಳೂರು ವಿ.ವಿ., ಬೆಂಗಳೂರು, ೧೯೮೨

ಶಿವರುದ್ರಪ್ಪ. ಜಿ.ಎಸ್. (ಸಂ) : ಸಾಹಿತ್ಯ ವಾರ್ಷಿಕ-೧೯೮೧, ಪ್ರಸಾರಾಂಗ, ಬೆಂಗಳೂರು ವಿ.ವಿ., ಬೆಂಗಳೂರು, ೧೯೮೪

ಶೇಷಗಿರಿರಾವ್. ಎಲ್.ಎಸ್. (ಸಂ) : ಕನ್ನಡ ಸಾಹಿತ್ಯ ಸಮೀಕ್ಷೆ-೧೯೯೦, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೨

ಶೇಷಗಿರಿರಾವ್. ಎಲ್.ಎಸ್. : ಹೊಸಗನ್ನಡ ಸಾಹಿತ್ಯ ಚರಿತ್ರೆ ಅಂಕಿತ ಪುಸ್ತಕ, ಬೆಂಗಳೂರು, ೧೯೯೯

ಶೇಷಗಿರಿರಾವ್. ಎಲ್.ಎಸ್. (ಪ್ರ.ಸಂ.) : ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ ಉದಯಭಾನು ಕಲಾ ಸಂಘ, ಬೆಂಗಳೂರು ೧೯೯೯

ಶಿವರಾಮಯ್ಯ : ಗ್ರಾಮೀಣ ಸಂಸ್ಕೃತಿ ಸಂದರ್ಭ ಕೋಶ, ಕಲಾ ಪ್ರಕಾಶನ, ಬೆಂಗಳೂರು, ೨೦೦೦

ಶ್ಯಾಮಸುಂದರ ಬಿದರಕುಂದಿ : ವಿಚಾರ ಸಾಹಿತ್ಯ-೧೯೯೮, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೯

ಶ್ಯಾಮಸುಂದರ ಬಿದರಕುಂದಿ : ವಿಚಾರ ಸಾಹಿತ್ಯ-೧೯೯೮, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೯

ಶ್ರೀಕೃಷ್ಣ ಆಲನಹಳ್ಳಿ : ಗೋಡೆ, ಪುಸ್ತಕ ಪ್ರಕಾಶನ, ಮೈಸೂರು, ೨೦೦೦

ಶ್ರೀಕೃಷ್ಣ ಆಲನಹಳ್ಳಿ : ಸಮಗ್ರ ಕಥೆಗಳು, ನೆಲಮನೆ ಪ್ರಕಾಶನ, ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ, ೨೦೦೦

ಶ್ರೀನಿವಾಸ : ಸಣ್ಣಕತೆಗಳು, ಸಂಪುಟ ೪, ಪ್ರಕಾಶಕರು, ಎಂ.ವಿ.ಜೆ.ಕೆ. ಟ್ರಸ್ಟ್, ಬೆಂಗಳೂರು, (ದ್ವಿತೀಯ ಮುದ್ರಣ) ೧೯೮೭

ಶ್ರೀನಿವಾಸ : ಸಣ್ಣಕತೆಗಳು, ಸಂಪುಟ-೧, ಪ್ರಕಾಶಕರು, ಎಂ.ವಿ.ಜೆ.ಕೆ. ಟ್ರಸ್ಟ್, ಬೆಂಗಳೂರು, (ಹತ್ತನೇ ಮುದ್ರಣ) ೧೯೯೭

ಶ್ರೀನಿವಾಸ : ಸಣ್ಣಕತೆಗಳು, ಸಂಪುಟ-೪, ಪ್ರಕಾಶಕರು,ಜೀವನ ಕಾರ್ಯಾಲಯ, ಬೆಂಗಳೂರು, (ದ್ವಿತೀಯ ಮುದ್ರಣ) ೧೯೮೭

ಶ್ರೀನಿವಾಸ : ಸಣ್ಣಕತೆಗಳು, ಸಂಪುಟ-೨, ಪ್ರಕಾಶಕರು, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಜೀವನ ಕಾರ್ಯಾಲಯ ಟ್ರಸ್ಟ್, ಬೆಂಗಳೂರು, (ಆರನೇ ಮುದ್ರಣ) ೧೯೯೯

ಶ್ರೀನಿವಾಸ : ಸಣ್ಣ ಕತೆಗಳು, ಸಂಪುಟ-೩, ಪ್ರಕಾಶಕರು, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಜೀವನ ಕಾರ್ಯಾಲಯ ಟ್ರಸ್ಟ್, ಬೆಂಗಳೂರು, (ಆರನೇ ಮುದ್ರಣ) ೧೯೯೯

ಶ್ರೀನಿವಾಸ : ಸಣ್ಣ ಕತೆಗಳು, ಸಂಪುಟ-೩, ಪ್ರಕಾಶಕರು, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಜೀವನ ಕಾರ್ಯಾಲಯ ಟ್ರಸ್ಟ್, ಬೆಂಗಳೂರು,೨೦೦೧

ಶ್ರೀನಿವಾಸರಾಜು. ಚಿ. (ಸಂ) : ಆಧುನಿಕ ಸಾಹಿತ್ಯ ಸಂಚಯ, ಪ್ರಸಾರಾಂಗ,

ಶ್ರೀಮತಿ ಎಚ್.ಎಸ್. (ಸಂ) : ಮಹಿಳಾ ಅಧ್ಯಯನ (ಉತ್ತರಾಯಣ ಸಂಚಿಕೆ) ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ, ೧೯೯೯ (ಜನವರಿ)

ಶ್ರೀಮತಿ ಎಚ್.ಎಸ್. (ಸಂ) : ಮಹಿಳಾ ಅಧ್ಯಯನ (ದಕ್ಷಿಣಾಯನ ಸಂಚಿಕೆ) ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ, ೧೯೯೯

ಶ್ರೀಮತಿ ಎಚ್.ಎಸ್. : ಸ್ತ್ರೀವಾದಿ ಚಿಂತನೆ ಕೆಲವು ಪ್ರಶ್ನೆಗಳು, ಸಂದೇಹಗಳು, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ, ೧೯೯೯

ಶ್ರೀಮತಿ ಎಚ್.ಎಸ್. (ಸಂ) : ಮಹಿಳಾ ಅಧ್ಯಯನ (ದಕ್ಷಿಣಾಯನ ಸಂಚಿಕೆ) ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ, ೨೦೦೦ (ಜುಲೈ)

ಶ್ರೀಮತಿ ಎಚ್.ಎಸ್. (ಸಂ) : ಮಹಿಳಾ ಅಧ್ಯಯನ (ಉತ್ತರಾಯಣ ಸಂಚಿಕೆ) ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ, ೨೦೦೦

ಶ್ರೀಮತಿ ಎಚ್.ಎಸ್. (ಸಂ) : ಮಹಿಳಾ ಅಧ್ಯಯನ ವಿಶೇಷ ಸಂಚಿಕೆ ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ, ೨೦೦೧

ಶ್ರೀಮತಿ ಎಚ್.ಎಸ್. : ಆಧುನಿಕ ಭಾರತದಲ್ಲಿ ಮಹಿಳೆ, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ, ೨೦೦೧

ಶ್ರೀಮತಿ ಎಚ್.ಎಸ್. (ಸಂ) : ಮಹಿಳಾ ಅಧ್ಯಯನ (ದಕ್ಷಿಣಾಯನ ಸಂಚಿಕೆ) ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ, ೨೦೦೨

ಶ್ರೀಮತಿ ನಾಜ್ ನೀನ್ ಬೇಗಂ : ಗ್ರಾಮೀಣ ಬದುಕು ಮತ್ತು ಮಹಿಳೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೦

ಶೈಲಜ ಹಿರೇಮಠ : ಮಾತೃ ಪ್ರಧಾನ ಪರಿಕಲ್ಪನೆ, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ, ೨೦೦೪

ಸಂಧ್ಯಾರೆಡ್ಡಿ. ಕೆ.ಆರ್. : ಜನಪದ ಸಾಹಿತ್ಯದಲ್ಲಿ ಮಹಿಳೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೦

ಸಿಂಪಿ ಲಿಂಗಣ್ಣ : ಉತ್ತರ ಕರ್ನಾಟಕದ ಜನಪದ ಕಥೆಗಳು, ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬ (ಎರಡನೆಯ ಆವೃತ್ತಿ)

ಸದಾಶಿವಯ್ಯ. ಎಚ್.ಎಮ್. : ಸಮಾಜಶಾಸ್ತ್ರ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೯

ಸದಾಶಿವಯ್ಯ. ಎಚ್.ಎಮ್. : ಸಮಾಜಶಾಸ್ತ್ರ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೦

ಸರಸ್ವತಿಬಾಯಿ ರಾಜವಾಡೆ : ಆಯ್ದ ಕಥೆಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೪

ಸಾರಾ ಅಬೂಬಕ್ಕರ್ : ಸುಳಿಯಲ್ಲಿ ಸಿಕ್ಕವರು, ಚಂದ್ರಗಿರಿ ಪ್ರಕಾಶನ, ಮಂಗಳೂರು, ೧೯೯೪

ಸಾರಾ ಅಬೂಬಕ್ಕರ್ : ಖೆಡ್ಡಾ, ಚಂದ್ರಗಿರಿ ಪ್ರಕಾಶನ, ಮಂಗಳೂರು, ೧೯೯೪

ಸಾರಾ ಅಬೂಬಕ್ಕರ್ : ಅನಾವರಣ, ಚಂದ್ರಗಿರಿ ಪ್ರಕಾಶನ, ಮಂಗಳೂರು, ೧೯೯೪

ಸಿದ್ಧಾಶ್ರಮ. ಸಿ.ಪಿ. (ಪ್ರ.ಸಂ) : ಸಣ್ಣಕತೆಗಳು, ಪ್ರಸಾರಾಂಗ, ಮತ್ತು ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೨೦೦೦

ಸುಬ್ರಾಯ ಚೊಕ್ಕಾಡಿ : ಕೃತಿಶೋಧ, ಇಂಚರ ಪ್ರಕಾಶನ, ಬೆಂಗಳೂರು ೨೦೦೦

ಸುಭಾಷಿಣಿ : ಶತಮಾನದ ಮಿಂಚು, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೦

ಸುಮಿತ್ರಾಬಾಯಿ. ಬಿ.ಎನ್. : ಸ್ತ್ರೀವಾದ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೯

ಸುಮಿತ್ರಾಬಾಯಿ. ಬಿ.ಎನ್. : ಪಶ್ಚಿಮದ ಸ್ತ್ರೀವಾದಿ ವಿಮರ್ಶಾ ಪಂಥಗಳು, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ, ೨೦೦೪

ಹನುಮಂತಯ್ಯ (ಸಂ) : ಸುಧಾಕರ ಅವರ ಆಯ್ದ ಕಥೆಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೧

ಹಿರೇಮಠ. ಎಸ್.ಎಸ್. (ಸಂ) : ವಿಚಾರ ಸಾಹಿತ್ಯ ೧೯೯೫, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬

ಹಿರೇಮಠ. ಎಸ್.ಎಸ್. : ದಲಿತ ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ, ೨೦೦೧

ಹೆಗಡೆ. ಎಂ.ಜಿ. (ಸಂ) : ಸಾಹಿತ್ಯ ವಿಮರ್ಶೆ-೧೯೯೪, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬

ಹೆಗಡೆ. ಎಂ.ಜಿ. (ಸಂ) : ಸಾಹಿತ್ಯ ವಿಮರ್ಶೆ-೧೯೯೮, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೯

ಹೇಮಾ ಪಟ್ಟಣಶೆಟ್ಟಿ (ಸಂ) : ಸಣ್ಣಕತೆ-೧೯೯೨, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬

## ನಿಯತಕಾಲಿಕೆಗಳು

೧. ಅನಿಕೇತನ, ಜುಲೈ-ಡಿಸೆಂಬರ್ ೨೦೦೨

೨. ಕನ್ನಡ ಅಧ್ಯಯನ (ಮಳೆ ಸಂಚಿಕೆ), ಸಂಪುಟ-೯ ಸಂಚಿಕೆ-೪, ಏಪ್ರಿಲ್-ಮೇ-ಜೂನ್ ೨೦೦೩

೩. ಕನ್ನಡ ಅಧ್ಯಯನ (ಚಳಿ ಸಂಚಿಕೆ) ೨೦೦೨

೪. ಕನ್ನಡ ನುಡಿ, ಶೋಷಿತರಿಗೆ ಇಂಗ್ಲಿಷ್ ಬೇಡವೇ? ಸಚಿವ ವಿಶ್ವನಾಥ್ ಪ್ರಶ್ನೆ, ಮಾರ್ಚ್ ೨೦೦೨

೫. ಪ್ರಜಾವಾಣಿ, ದೀಪಾವಳಿ ವಿಶೇಷಾಂಕ, ೨೬, ನವೋದಯ, ಸಣ್ಣಕತೆ ೧೯೯೯

೬. ಮಹಿಳಾ ಅಧ್ಯಯನ ಸಂಪುಟ ೪, ಸಂಚಿಕೆ-೩, ಜನವರಿ೨೦೦೩

೭. ವಿಜಯ ಕರ್ನಾಟಕ, ಸಾಪ್ತಾಹಿಕ ವಿಜಯ, ಹಳ್ಳಿಯಾದರೇನು ಶಿವಾ, ೨೦೦೨

೮. ಸ್ಪರ್ಧಾ ಪ್ರಪಂಚ (ಹತ್ತು ವಸಂತಗಳ ವಿಶೇಷ ಸಂಚಿಕೆ), ರೈತ ಮತ್ತು ಭಾರತದ ಇಂದಿನ ಕೃಷಿ ನೀತಿ-೫೮, ೨೦೦೪

೯. ಹೊಸತು (ವಿಶೇಷ ಸಂಚಿಕೆ) ಜನವರಿ ೨೦೦೨

